ಪಂಚರಾತ್ರಾಂತರ್ಗತ

ಅಗ್ನಿಪುರಾಣಾಂತರ್ಗತ

# ಧನುರ್ಮಾಸ ಮಾಹಾತ್ಮ್ಯ

ಸಂಪಾದನೆ-ಅನುವಾದ

ಪಂ. ಶ್ರೀಕರಾಚಾರ್ಯ ಅಡವಿ

ಪ್ರಕಾಶನ - ವಿಶ್ವಮಧ್ವಮಹಾಪರಿಷತ್, ಶ್ರೀಉತ್ತರಾದಿಮಠ

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - 195

# ಪಂಚರಾತ್ರಾಂತರ್ಗತ
# ಅಗ್ನಿಪುರಾಣಾಂರ್ಗತ
# ಧನುರ್ಮಾಸ ಮಾಹಾತ್ಮ್ಯ




... ಸಂಪಾದನೆ-ಅನುವಾದ ...
ಪಂ. ಶ್ರೀಕರಾಚಾರ್ಯ ಅಡವಿ

... ಪ್ರಕಾಶಕರು ...
ವಿಶ್ವಮಧ್ವಮಹಾಪರಿಷತ್
ಉತ್ತರಾದಿಮಠ, ಬಸವನಗುಡಿ, ಬೆಂಗಳೂರು - 4

ಪಂಚರಾತ್ರಾಂತರ್ಗತ,
ಅಗ್ನಿಪುರಾಣಾಂತರ್ಗತ

# ಧನುರ್ಮಾಸಮಾಹಾತ್ಮ್ಯ


| | |
|---|---|
| Edited by | **Pt. Srikaracharya Adavi** |
| Published by | **Vishva Madhwa Maha Parishat**<br>Research Center,<br>Phone : 080 26603692 |

| Edition | Year | Copies | Total |
|---|---|---|---|
| First | 2019 | 1,000 | 1,000 |

| | |
|---|---|
| No.of Pages | 408 |
| © | Reserved |
| Price. | **Rs. 250** |
| Type Setting | V.M.M.P Research wing |
| Cover Design by | Gopala Krishna Davanagere |

**Copies can be had from**

**Vishva Madhwa Maha Parishat**
Research Center, #11, 2nd Floor,
Uttaradi Math Building. Uttaradi Math Road,
Shankarpuram, Basavanagudi
BANGALORE - 4 Phone : 080 26603692

Printed by : **VAGARTHA,**
149, 8th Cross, N.R.Colony, Bangalore-4 Ph.22427677.



ಶ್ರೀಮಜ್ಜಗದ್ಗುರುಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ
ಪೋಷಕರಾದ

**ಶ್ರೀ 1008 ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರ**

**ಅಡಿದಾವರೆಗಳಲಿ ಭಕಿಪೂರ್ವಕ ಸಮರ್ಪಣೆ**

॥ ಶ್ರೀ ದಿಗ್ವಿಜಯರಾಮೋ ವಿಜಯತೇ ॥
ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯತ್ವಾದ್ಯನೇಕ ಗುಣಗಣಾಲಂಕೃತ,
ಶ್ರೀಮನ್ಮೂಲಸೀತಾಸಮೇತಶ್ರೀಮನ್ಮೂಲರಾಮ ಶ್ರೀದಿಗ್ವಿಜಯರಾಮವೇದವ್ಯಾಸದೇವರ
ದಿವ್ಯಪಾದಪದ್ಮಾರಾಧಕರಾದ, ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ ಶ್ರೀಮದುತ್ತರಾದಿಮಠಾಧೀಶರಾದ,
ಶ್ರೀ ೧೦೦೮ ಶ್ರೀ ಸತ್ಯಾಭಿಜ್ಞತೀರ್ಥಕರಕಮಲಸಂಜಾತರಾದ
ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ವರಕುಮಾರರಾದ

# ಶ್ರೀಮತ್ ಸತ್ಯಾತ್ಮತೀರ್ಥಶ್ರೀಪಾದಂಗಳವರ

# ''ಅನುಗ್ರಹಸಂದೇಶ''

ಪುರಾಣೋಕ್ತ ಮಾಸಧರ್ಮಗಳನ್ನು ಅರಿತುಕೊಂಡು, ನಿಷ್ಕಾಮವಾಗಿ ಅನುಷ್ಠಾನಮಾಡಿ ವಿಷ್ಣುಪ್ರೀತಿಯನ್ನು ಸಂಪಾದನೆ ಮಾಡಬೇಕಾದದ್ದು ಸಾಧಕರ ಕರ್ತವ್ಯ. ಈ ದೃಷ್ಟಿಯಲ್ಲಿ ಪಂಚರಾತ್ರಾಂತರ್ಗತ, ಅಗ್ನಿಪುರಾಣಾಂತರ್ಗತ ಧನುರ್ಮಾಸಮಹಾತ್ಮ್ಯ ಎಂಬ ಗ್ರಂಥವನ್ನು ನಮ್ಮ ಪ್ರಿಯ ಶಿಷ್ಯರಾದ ಶ್ರೀಸತ್ಯಧ್ಯಾನ ವಿದ್ಯಾಪೀಠದಲ್ಲಿ ಅಧ್ಯಯನ ಮಾಡಿದ ಶ್ರೀಕರಾಚಾರ್ಯ ಅಡವಿ ಇವರು ಮೂಲಗ್ರಂಥದ ಸಂಶೋಧನೆಯನ್ನು ಮಾಡಿ ಹಾಗೆ ಕನ್ನಡದಲ್ಲಿ ಅನುವಾದವನ್ನು ಮಾಡಿದ್ದಾರೆ. ಅದಲ್ಲದೆ ಕಥೆಗಳಲ್ಲಿ ಬರುವ ಅನೇಕ ಪ್ರಶ್ನೆಗಳಿಗೆ ಶಾಸ್ತ್ರೀಯ ಸಮಾಧಾನ ನೀಡುವ ಪ್ರಯತ್ನವನ್ನು ಮಾಡಿದ್ದಾರೆ. ಈ ಹೊತ್ತಿಗೆ ನಮ್ಮ ವಿಶ್ವಮಧ್ವಮಹಾಪರಿಷತ್ತಿನಿಂದ ಬಿಡುಗಡೆಯಾಗುತ್ತಿರುವುದು ಸಂತೋಷದ ಸಂಗತಿ.

ಇದಲ್ಲದೆ ಪಂ. ಶ್ರೀಕರಾಚಾರ್ಯರು ಶ್ರೀವಿಷ್ಣುತೀರ್ಥರು ರಚಿಸಿದ ಅನೇಕ ಗ್ರಂಥಗಳ ಸಂಪಾದನೆಯನ್ನು ಮಾಡಿದ್ದಾರೆ. ಪಾಠ ಪ್ರವಚನ, ಗ್ರಂಥರಚನೆ ಇವುಗಳು ಇತೋಽಪ್ಯತಿಶಯವಾಗಿ ನಡೆಯಲೆಂದು ನಮ್ಮ ಉಪಾಸ್ಯಮೂರ್ತಿಯಾದ ಶ್ರೀಮನ್ ಮೂಲಸೀತಾ ಶ್ರೀಮನ್ ಮೂಲರಾಮದವೇರು ಶ್ರೀದಿಗ್ವಿಜಯರಾಮದೇವರು ಹಾಗೂ ಶ್ರೀವಂಶರಾಮದೇವರು ಶ್ರೀಪ್ರಸನ್ನವಿಠ್ಠಲ, ಶ್ರೀವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇದರ ಮೂಲ ಪ್ರತಿಯನ್ನು ಒದಗಿಸಿಕೊಟ್ಟು ಶ್ರೀವೇದವ್ಯಾಸದೇವರ ಸೇವೆಯನ್ನು ಮಾಡಿದ ಪಂ ರಘುಕಣ್ಣಾಚಾರ್ಯರಿಗೆ ಭಗವಂತನ ಅನುಗ್ರಹ ಇರಲಿ ಎಂದು ಪ್ರಾರ್ಥಿಸುತ್ತೆವೆ.

ಇತಿ ಶ್ರೀನಾರಾಯಣಸ್ಮರಣಗಳು
[signature]
ಶ್ರೀಸತ್ಯಾತ್ಮತೀರ್ಥರು ಉತ್ತರಾದಿಮಠ

**ಐನಾಪೂರ**
೧೯.೧೦.೨೦೧೯

 

# ಮುನ್ನುಡಿ

''ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ'' ಮನುಷ್ಯನು ತನ್ನ ಜೀವನ ಪೂರ್ತಿ ಕರ್ಮಗಳನ್ನು ಆಚರಿಸುತ್ತಲೇ ಬದುಕಬೇಕು. ಸತ್ಕರ್ಮಗಳಿಂದಲೇ ಪೂರ್ಣವಾದ ಆಯುಷ್ಯ ದೊರಕುವುದು. ಕರ್ಮ ಮಾಡದೇ ಒಂದು ಕ್ಷಣವೂ ಬದುಕಿರಲಾಗದು. ''ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್'' ಎಂಬುದು ಗೀತಾಚಾರ್ಯನಾದ ಕೃಷ್ಣನ ಸಂದೇಶ. ಕರ್ಮಾಚರಣೆ ಅನಿವಾರ್ಯವೆಂದಾದ ಮೇಲೆ ತನಗೆ ಉತ್ತಮಗತಿಯನ್ನೀಯುವ ತನ್ನ ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮಗಳನ್ನೇ ಆಚರಿಸಬೇಕು. ತನಗೆ ವಿಹಿತವಲ್ಲದ್ದನ್ನು ಎಷ್ಟು ಪರಿಪೂರ್ಣವಾಗಿ ಆಚರಿಸಿದರೂ ಪ್ರಯೋಜನವಿಲ್ಲ. ಹೊರತು ಪಾಪಸಾಧನವೇ ಆಗುವುದು. ಆದುದರಿಂದ ತನಗೆ ಕರ್ಮಾಚರಣೆಯಲ್ಲಿ ಕೆಲವು ಲೋಪಗಳಾದರೂ ಸಹ ಸ್ವವಿಹಿತವಾದ ಕರ್ಮಗಳನ್ನೇ ಆಚರಿಸುತ್ತಿರಬೇಕು.

''ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ'' ಇದು ನಮಗೆಲ್ಲ ಶ್ರೀಕೃಷ್ಣಪರಮಾತ್ಮ ನೀಡಿದ ಉಪದೇಶ. ಮಾಡಿದ ಆದೇಶ. ಹೀಗೆ ಅವಶ್ಯವಾದ ಕರ್ತವ್ಯವು ಪ್ರಧಾನವಾಗಿ ಮೂರು ವಿಧವಾಗಿವೆ. ೧. ನಿತ್ಯ , ೨. ನೈಮಿತ್ತಿಕ, ೩. ಕಾಮ್ಯ ಎಂಬುದಾಗಿ. ನಿರಂತರವಾಗಿ ಆಚರಿಸಬೇಕಾದ ಸ್ನಾನ-ಸಂಧ್ಯಾ-ಪೂಜೆ-ಪಂಚಯಜ್ಞಗಳು ಮುಂತಾದವು ನಿತ್ಯಕರ್ಮಗಳು. ಯಾವುದೇ ದೇಶ ಕಾಲ ಮುಂತಾದವುಗಳ ನಿಮಿತ್ತದಿಂದ ಆಚರಿಸುವ ಕರ್ಮಗಳು ನೈಮಿತ್ತಿಕಕರ್ಮಗಳು. ತನ್ನ ಮನೋಕಾಮನೆಗಳ ಪೂರ್ತಿಕೆಯ ಬಯಕೆಗಾಗಿ ಆಚರಿಸುವ ಕರ್ಮಗಳು ಕಾಮ್ಯಕರ್ಮಗಳೆನಿಸುವವು. ಶಾಸ್ತ್ರವು ನಿತ್ಯ-ನೈಮಿತ್ತಿಕ ಕರ್ಮಗಳನ್ನೇ ಫಲಾಪೇಕ್ಷೆ ಇಲ್ಲದೇ, ಭಗವಂತನ ಕರ್ತೃತ್ವ ಕಾರಯಿತೃತ್ವ ಸ್ವಾತಂತ್ರ್ಯಗಳ ಅನುಸಂಧಾನ-ದೊಂದಿಗೆ ಆಚರಿಸಬೇಕೆಂದು ಆದೇಶ ನೀಡಿದೆ.

ಇದನ್ನೇ ನಿವೃತ್ತಕರ್ಮ ಎಂದು ಕರೆಯುತ್ತಾರೆ. ಈ ರೀತಿಯ ನೈಮಿತ್ತಿಕ ಕರ್ಮಗಳಲ್ಲಿ ಧನುರ್ಮಾಸಾಚರಣೆಯೂ ಬಹುಶ್ರೇಷ್ಠವಾದ ವಿಷ್ಣುಪ್ರೀತಿಕರವಾದ ಧರ್ಮವೆನಿಸಿದೆ. ಧನುರ್ಮಾಸಮಹಿಮೆಯು ಪಂಚರಾತ್ರಾಗಮ, ಹಾಗೂ ಆಗ್ನೇಯಪುರಾಣಗಳಲ್ಲಿ ಹೇಳಲ್ಪಟ್ಟಿದ್ದು ಬಹಳ ಶ್ರೇಷ್ಠವಾದ ವೈಷ್ಣವ ಧರ್ಮವೆನಿಸಿದೆ. ಇದು ವನವಾಸದಲ್ಲಿರುವ, ಪಾಂಡವರಿಗೆ ಯುಧಿಷ್ಠಿರನ ದ್ವಾರಾ ಭಗವಂತ ಶ್ರೀಕೃಷ್ಣನು ನೀಡಿದ ಉಪದೇಶವಾಗಿದೆ.

ಇದು ಧನುರ್ಮಾಸದ ಆಚರಣೆಯನ್ನು ಹೇಳುವ ಜೊತೆಗೆ ಅನೇಕ ತತ್ತ್ವಗಳನ್ನು, ಆಹ್ನಿಕಕ್ರಮವನ್ನು, ಸ್ತ್ರೀಧರ್ಮಗಳನ್ನು, ಹೇಳುವುದಲ್ಲದೇ ನೃಮೇಧ ಮತ್ತು ಪರುಚ್ಛೇಪರೆಂಬ ಮುನಿಶ್ರೇಷ್ಠರ ಆಖ್ಯಾನದ ಮೂಲಕ ಭಕ್ತಿಯೇ ಮುಕ್ತಿಸಾಧನವೆಂದು ಹೇಳುವ ಮೂಲಕ ಶ್ರೀಮದಾನಂದತೀರ್ಥಭಗವತ್ಪಾದರು ಹೇಳಿದ ಭಕ್ತಿಸಿದ್ಧಾಂತವು ಸಕಲಪುರಾಣಗಳಲ್ಲೂ ಹೇಳಲ್ಪಟ್ಟಿದೆ ಎಂಬ ತತ್ತ್ವನಿರ್ಣಯವನ್ನು ಮಾಡಿಸುತ್ತದೆ. ಧ್ರುವ, ಅಂಬರೀಷ, ಶಬರಿ ಮುಂತಾದ ವಿಷ್ಣುಭಕ್ತರ ಮಹಿಮೆಯನ್ನು ತಿಳಿಸುವ ಮೂಲಕ ವೈಷ್ಣವರಲ್ಲಿ ಭಕ್ತಿಯನ್ನು ಮೂಡಿಸುತ್ತದೆ. ಸಕಲ ಪಾಪಗಳಿಗೂ ಪ್ರಾಯಶ್ಚಿತ್ತಗಳಿವೆ. ಆದರೇ ವಿಷ್ಣು-ವೈಷ್ಣವ ದ್ವೇಷಿಗಳಿಗೆ ನಿಷ್ಕೃತಿ ಇಲ್ಲ ಎಂದು ಗಂಭೀರವಾಗಿ ಎಚ್ಚರಿಸುತ್ತದೆ. ವಿಷ್ಣುವನ್ನು ತಿರಸ್ಕರಿಸಿ ಬೇರೆ ದೇವತೆಗಳನ್ನು ಪೂಜಿಸಿದರೆ ಆ ದೇವತೆಗಳೂ ಸಹ ಅವನನ್ನು ಉದ್ಧಾರ ಮಾಡುವುದಿಲ್ಲ ಎಂದು ರುದ್ರದೇವರ ಮುಖಾಂತರ ತಿಳಿಸುತ್ತದೆ. ಸಾಮಾನ್ಯವಾಗಿ ಶ್ರಾದ್ಧವನ್ನು ಕುತುಪಕಾಲದಲ್ಲಿ ಮಾಡುವುದು ಪ್ರಮಾಣ ಪ್ರಮಿತವಾಗಿದೆ. ಆದರೆ ಧನುರ್ಮಾಸದ ನಿಮಿತ್ತವಾಗಿ ಆ ನಿಯಮವನ್ನು ಸಡಿಲಗೊಳಿಸಿ ಸೂರ್ಯೋದಯಕ್ಕಿಂತಲೂ ಮೊದಲು ಶ್ರಾದ್ಧವನ್ನು ದ್ವಾದಶಿಯಂತೆ ಮಾಡಬಹುದು ಎಂದು ಧನುರ್ಮಾಸಕ್ಕಾಗಿ ವಿಶೇಷ ನಿಯಮವನ್ನು ತಿಳಿಸುತ್ತದೆ. ನಕ್ಷತ್ರಗಳಿರುವಾಗ ಮಾಡಿದ ಪೂಜೆ ಉತ್ತಮ, ನಕ್ಷತ್ರಗಳು ಕಾಣದಾಗ ಮಾಡಿದ ಪೂಜೆ ಮಧ್ಯಮ. ಸೂರ್ಯೋದಯದ ನಂತರ ಮಾಡಿದ ಪೂಜೆಯು ಅಧಮವೆಂದು ಪೂಜಾಕಾಲದ ವೈಶಿಷ್ಟ್ಯವನ್ನು ತಿಳಿಸುತ್ತದೆ.

ತನ್ನ ಇಚ್ಛೆಯಿಂದಲೇ ಪ್ರಪಂಚದ ಸೃಷ್ಟಿ-ಸ್ಥಿತಿ-ಲಯ ಮುಂತಾದುವನ್ನು ಮಾಡಬಲ್ಲ, ಜಗನ್ನಿಯಾಮಕ ಭಗವಂತನು ದೇವತೆಗಳಿಗೆ ಕಂಟಕರಾಗಿದ್ದ ದೈತ್ಯರನ್ನು ದೊಡ್ಡ ಧನುಸ್ಸಿನಿಂದ ಸಂಹರಿಸಿದನು. ಆದುದರಿಂದ ಭಗವಂತನಿಗೆ ಧನುರ್ಮಾಸವು ಅತ್ಯಂತ ಪ್ರಿಯವಾಗಿದೆ. ಧನುರ್ಮಾಸವೆಂದರೇ ಸೂರ್ಯನು ಧನೂರಾಶಿಯಲ್ಲಿ ಸಂಚರಿಸುವ ಕಾಲ. ನಿದ್ರಾದಿದೋಷದೂರನಾಗಿದ್ದರೂ ದಕ್ಷಿಣಾಯನದಲ್ಲಿ ಯೋಗನಿದ್ರೆಯಲ್ಲಿ ಮಗ್ನನಾಗುವ ಭಗವಂತನಿಗೆ ಇದು ಅರುಣೋದಯಕಾಲವಾಗಿದೆ. ಆದುದರಿಂದಲೇ ಧನುರ್ಮಾಸದಲ್ಲಿ ಮುದ್ಗಾನ್ನ (ಹುಗ್ಗಿಯ) ಸಮರ್ಪಣೆಯು ಬಹಳ ಪುಣ್ಯದಾಯಕವಾಗಿದೆ. ಅಕ್ಕಿಗಿಂತ ಹೆಸರಬೇಳೆಯ ಪ್ರಮಾಣವು ಅಧಿಕವಾಗಿದ್ದರೆ ಉತ್ತಮವೆಂದೂ, ಸಮಾನವಾಗಿದ್ದರೆ ಮಧ್ಯಮವೆಂದೂ, ಕಡಿಮೆಯಾಗಿದ್ದರೆ ಅಧಮವೆಂದೂ ಹೇಳಲ್ಪಟ್ಟಿದೆ. ಈ ರೀತಿ



ಇದೊಂದು ಉತ್ತಮ ಗ್ರಂಥವಾಗಿದ್ದು ಧನುರ್ಮಾಸದ ವಿಶೇಷ ಮಹಿಮೆಯನ್ನು ತಿಳಿಸುವ ಜೊತೆಗೆ, ಧನುರ್ಮಾಸವನ್ನು ಆಚರಿಸುವವರಿಗೆ ಮಾರ್ಗದರ್ಶಿಯೂ ಆಗಿದೆ.

ಈ ಗ್ರಂಥವು ಮೊದಲಾಗಿ ಮುದ್ರಿತವಾಗುತ್ತಿರುವುದು ಶ್ರೀವಿಶ್ವಮಧ್ವ-ಮಹಾಪರಿಷತ್ತಿನಿಂದ. ಶ್ರೀ೧೦೦೮ ಶ್ರೀಮದುತ್ತರಾದಿಮಠಾಧೀಶರಾದ ಶ್ರೀಸತ್ಯಾತ್ಮ ತೀರ್ಥಶ್ರೀಪಾದಂಗಳವರ ಸಂಕಲ್ಪದಂತೆ ಹುಟ್ಟಿದ ಈ ಸಂಸ್ಥೆಯು ಈಗ ತನ್ನ ಕಾರ್ಯಕ್ರಮಗಳಿಂದ ಜಗದ್ವ್ಯಾಪಿಯಾಗಿ ಹೆಮ್ಮರರೂಪವಾಗಿ ಬೆಳೆದಿದೆ. ಇದರ ಪ್ರೇರಕಶಕ್ತಿ ಶ್ರೀಪಾದಂಗಳವರು.

ತಮ್ಮ ಬಳಿಯಲ್ಲಿಯೇ ಅನೇಕ ಸಮರ್ಥ ವಿದ್ವಾಂಸರಿರುವಾಗಲೂ ಕೂಡ ದೂರದ ಹುಬ್ಬಳ್ಳಿಯಲ್ಲಿದ್ದ ನನ್ನನ್ನು ಗಮನಿಸಿ ಈ ಕಾರ್ಯವನ್ನು ಒಪ್ಪಿಸಿ ಮಂತ್ರಾಕ್ಷತೆಯನ್ನಿತ್ತು ಅನುಗ್ರಹಿಸಿ, ಅನುವಾದ ಮಾಡಿಸಿ ಪ್ರಕಟಿಸುತ್ತಿರುವ ಮಹಾಸ್ವಾಮಿಗಳ ಕಾರುಣ್ಯಕ್ಕೆ ಅನಂತ ಶಿರಸಾಷ್ಟಾಂಗ ನಮಸ್ಕಾರಗಳನ್ನಲ್ಲದೇ ಬೇರೇನನ್ನು ನೀಡಬಲ್ಲೆವು?

ಭೇಟಿಯಾದಾಗಲೊಮ್ಮೆ ಅತ್ಯಂತ ಪ್ರೀತಿಯಿಂದ ಮಾತನಾಡಿಸಿ ಎಲ್ಲರ ಮೇಲೂ ಅತ್ಯಂತ ಅಭಿಮಾನ ತೋರುವ ನಿರಂತರ ಪಾಠ-ಪ್ರವಚನನಿರತರಾದ ಸುಧಾ ವಿಶಾರದ ಮೊದಲಾದ ಅನೇಕ ಬಿರುದಗಳಿಂದ ವಿಭೂಷಿತರಾದ ಶ್ರೀಜಯತೀರ್ಥವಿದ್ಯಾಪೀಠದ ಕುಲಪತಿಗಳಾದ ಆಚಾರ್ಯರವರಿಗೆ (ಪೂಜ್ಯ ರಂಗಾಚಾರ್ಯ ಗುತ್ತಲ ಆಚಾರ್ಯರಿಗೆ) ಶಿರಸಾಷ್ಟಾಂಗಪ್ರಣಾಮಗಳು.

ಹನ್ನೊಂದು ವರ್ಷಗಳ ಕಾಲ ಅನ್ನ, ವಸ್ತ್ರ, ವಿದ್ಯೆ , ಆರೋಗ್ಯ ನಿಡಿದುದಲ್ಲದೇ ನನ್ನಂಥ ನೂರಾರು ಜನರಿಗೆ ಅನುಗ್ರಹ ಮಾಡಿದುದಲ್ಲದೇ ಈಗಲೂ ನಿರಂತರವಾಗಿ ನಮ್ಮನ್ನು ಗಮನಿಸುತ್ತ ನಾವು ಮಾಡುವ ಎಲ್ಲ ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳನ್ನು ಪ್ರೋತ್ಸಾಹಿಸುತ್ತಿರುವ ಈ ಶತಮಾನದ ಆದರ್ಶ ಗೃಹಸ್ಥಾಶ್ರಮಿಗಳಾಗಿರುವ ಸ್ವರೂಪೋದ್ಧಾರಕ ಶ್ರೀ ಸತ್ಯಧ್ಯಾನವಿದ್ಯಾಪೀಠದ ಕುಲಪತಿಗಳಾದ ಆಚಾರ್ಯರಿಗೆ (ಪೂಜ್ಯ ವಿದ್ಯಾಸಿಂಹಾಚಾರ್ಯ ಮಾಹುಲಿ) ಶಿರಸಾಷ್ಟಾಂಗ ನತಿತತಿಗಳು.

ಅತ್ಯಂತ ಬಿಡುವಿಲ್ಲದ ಕಾರ್ಯಕ್ರಮಗಳ ಮಧ್ಯೆಯೂ ತಪ್ಪದೇ ಬೇಸರವಿಲ್ಲದೇ ಎಲ್ಲ ಕಾರ್ಯಕ್ರಮಗಳಲ್ಲೂ ತಮ್ಮ ಯೋಗದಾನ ನೀಡುವ ಶ್ರೀಸುಧಾ

ಮಾಸಪತ್ರಿಕೆಯ ಸಂಪಾದಕರೂ, ವಿಶ್ವಮಧ್ವಮಹಾಪರಿಷತ್ತಿನ ನಿರ್ದೇಶಕರೂ ಆದ ಪಂ. ಶ್ರೀ ವಿದ್ಯಾಧೀಶಾಚಾರ್ಯ ಗುತ್ತಲ ಇವರಿಗೆ ಶಿರಸಾಷ್ಟಾಂಗ ಪ್ರಣಾಮಗಳು.

ಈ ಪುಸ್ತಕದ ಕರಡನ್ನು ತಿದ್ದುವಲ್ಲಿ ವಿಶೇಷ ಪರಿಶ್ರಮ ವಹಿಸಿರುವ ಪಂ. ವಾದಿರಾಜಾಚಾರ್ಯ ಕರಣಂ ಪಂ. ಪ್ರಂಭಂಜನಾಚಾರ್ಯ ಕಲ್ಲೂರ್ ಇವರಿಗೆ ನನ್ನ ನಮಸ್ಕಾರಗಳು. ಇದಕ್ಕಾಗಿ ಪರಿಶ್ರಮ ವಹಿಸಿದ ವಿಶ್ವಮಧ್ವಮಹಾಪರಿಷತ್ತಿನ ಎಲ್ಲ ವಿದ್ವಾಂಸರಿಗೂ ನನ್ನ ಕೃತಜ್ಞತಾಪೂರ್ವಕ ನಮಸ್ಕಾರಗಳು.

ಈ ಹೊತ್ತಿಗೆ ಅಚ್ಚುಕಟ್ಟಾಗುವಂತೆ ಜೋಡಣೆ ಮಾಡಿದ ಪಂ. ಮಹಿದಾಸಾಚಾರ್ಯ ಜೋಷಿ ಇವರಿಗೆ, ಧನ್ಯವಾದಗಳು. ಈ ಹೊತ್ತಿಗೆಯನ್ನು ಶಿಸ್ತಾಗಿ ಅಲಂಕರಿಸಿದ ಶ್ರೀ ಗೋಪಾಲಕೃಷ್ಣ ದಾವಣಗೇರಿ ಇವರಿಗೆ ಆದರಪೂರ್ವಕ ಕೃತಜ್ಞತೆಗಳು.

ಈ ಗ್ರಂಥವು ಬಹಳ ಹಿಂದೆಯೇ ಪ್ರಕಾಶನಗೊಳ್ಳಬೇಕಿತ್ತು. ಅನುವಾದ ಮುಗಿದು ಬಹಳ ಸಮಯವಾದರೂ ಅನೇಕ ಕಾರಣಗಳಿಂದ ವಿಲಂಬವಾಗಿ ಬೆಳಕು ಕಾಣುತ್ತಿದೆ. ಇದಕ್ಕಾಗಿ ಕ್ಷಮೆ ಇರಲಿ.

ಈ ಗ್ರಂಥವನ್ನು ಶುದ್ಧವಾಗಿ ಮುದ್ರಿಸಲು ಪ್ರಯತ್ನಿಸಿದ್ದೇವೆ. ಆದರೂ ಮುದ್ರಾರಾಕ್ಷಸನ ಹಾವಳಿ ಇದ್ದೇ ಇರುತ್ತದೆ. ಇದರಲ್ಲಿರುವ ದೋಷಗಳನ್ನು ನನ್ನದೆಂದು, ಗುಣಗಳು ಗುರುಗಳ ಅನುಗ್ರಹವೆಂದು ಭಾವಿಸಿ ಹಂಸಕ್ಷೀರ-ನ್ಯಾಯದಿಂದ ಸ್ವೀಕರಿಸಬೇಕೆಂದು ಪ್ರಾರ್ಥಿಸುತ್ತಾ ಈ ಗ್ರಂಥಪ್ರಕಾಶನವೆಂಬ ಮಹಾಕಾರ್ಯದಲ್ಲಿ ಪರೋಕ್ಷವಾಗಿ ಅಪರೋಕ್ಷವಾಗಿ ಸಹಕರಿಸಿರುವ ಎಲ್ಲರನ್ನು ಸ್ಮರಿಸುತ್ತ ಇದರ ಪುಣ್ಯವನ್ನು ಈ ಸಾಧನ ಶರೀರವನ್ನಿತ್ತು ಬೆಳಿಸಿ ಪೋಷಿಸಿ ನನ್ನ ಅಭಿವೃದ್ಧಿಗೆ ಕಾರಣರಾದ ಪೂಜ್ಯ ತಂದೆ-ತಾಯಿಗಳಿಗೆ (ಶ್ರೀಆನಂದತೀರ್ಥಾ-ಚಾರ್ಯ ಹಾಗೂ ದಿ|| ಇಂದಿರಾಬಾಯಿ ಅಡವಿ) ಇವರಿಗೆ ಸಮರ್ಪಿಸುತ್ತಿದ್ದೇನೆ.

ಶ್ರೀವಿಷ್ಣುತೀರ್ಥರ ಸಮಸ್ತ ವೈಷ್ಣವರ ದಾಸಾನುದಾಸ

**ಶ್ರೀಕರಾಚಾರ್ಯ ಅಡವಿ ಹುಬ್ಬಳ್ಳಿ**



## ಪ್ರಕಾಶಕರ ನುಡಿ

ಶ್ರೀ ೧೦೦೮ ಶ್ರೀಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಮಹದಪೇಕ್ಷೆಯಂತೆ, ಪ್ರಾಚೀನ ಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ ''**ವಿಶ್ವಮಧ್ವಮಹಾಪರಿಷತ್**''

ಸಂಸ್ಥೆಯ ಉದ್ದೇಶದಂತೆಯೇ ವಿಸ್ತೃತ ಗ್ರಂಥಾಲಯದ ಯೋಜನೆ ನಡೆಯುತ್ತಿದ್ದು, ಪ್ರಾಚೀನ ತಾಳೆಗರಿ ಗ್ರಂಥಗಳ, ಹಸ್ತಪ್ರತಿಗಳ ಸಂಗ್ರಹ-ಸಂರಕ್ಷಣಾ ಕಾರ್ಯಗಳು ಪ್ರಗತಿಯಲ್ಲಿವೆ. ಮತ್ತು ಗ್ರಂಥಗಳ ಪ್ರಕಾಶನಕಾರ್ಯವೂ ಹೆಚ್ಚು ಕ್ರಿಯಾಶೀಲವಾಗಿದ್ದು, ಈಗಾಗಲೇ ಸಂಸ್ಕೃತ-ಕನ್ನಡ-ತೆಲುಗು-ಹಿಂದಿ-ಮರಾಠಿ- ತಮಿಳು-ಆಂಗ್ಲ ಭಾಷೆಗಳಲ್ಲಿ ಅನೇಕ ಪುಸ್ತಕಗಳು ಪ್ರಕಾಶನಗೊಂಡಿವೆ.

ಈಗಾಗಲೇ ಶ್ರೀಪಾದಂಗಳವರ ೨೨ಕ್ಕೂ ಹೆಚ್ಚು ಉಪನ್ಯಾಸಗಳ ಕೃತಿಗಳನ್ನು ಪ್ರಕಾಶನಮಾಡಿ ಜನತೆಯಲ್ಲಿ ಧರ್ಮಜಾಗೃತಿ ಮೂಡಿಸಲಾಗಿದೆ.

ಪ್ರಕೃತ ಪಂಚರಾತ್ರಾಂತರ್ಗತ ಹಾಗೂ ಅಗ್ನಿಪುರಾಣಾಂತರ್ಗತ ''**ಧನುರ್ಮಾಸ-ಮಾಹಾತ್ಮ್ಯ**' ಎಂಬ ಕೃತಿಯು ಪ್ರಕಾಶಿಸಲಾಗುತ್ತಿದೆ.

ಈ ಕೃತಿಯನ್ನು ಸಂಪಾದಿಸಿ ಕನ್ನಡದಲ್ಲಿ ಅನುವಾದ ಮಾಡಿಕೊಟ್ಟ ಪಂ. ಶ್ರೀಕರಾಚಾರ್ಯ ಅಡವಿ ಇವರಿಗೆ ಅನೇಕ ವಂದನೆಗಳು.

**ಪ್ರಧಾನ ಕಾರ್ಯದರ್ಶಿಗಳು**

**ವಿಶ್ವಮಧ್ವಮಹಾಪರಿಷತ್ ಬೆಂಗಳೂರು 4**

### ಶ್ರೀಪಂಚರಾತ್ರಾಗಮೇ ಬ್ರಹ್ಮಹಂಸಸಂವಾದೇ

# ಧನುರ್ಮಾಸಮಾಹಾತ್ಮ್ಯಮ್

## ಅಥ ಪ್ರಥಮೋಽಧ್ಯಾಯಃ

ಶೌನಕ ಉವಾಚ-

ಸೂತ ಸೂತ ಮಹಾಭಾಗ ಸರ್ವಶಾಸ್ತ್ರ ವಿಶಾರದ ।
ಪುರಾಣಮಖಿಲಂ ವೇತ್ಸಿ ಪಾರಾಶರ್ಯಪ್ರಸಾದತಃ ॥೧॥

ಸರ್ವೇಷಾಮಪಿ ಮಾಸಾನಾಂ ಮಾಹಾತ್ಮ್ಯಂ ತ್ವನ್ಮುಖಾತ್ ಶ್ರುತಮ್ ।
ಅಧುನೇಹ ಮಹಾಭಾಗ ಧನುರ್ಮಾಹಾತ್ಮ್ಯಮುತ್ತಮಮ್ ॥೨॥

ಮಾಸಾನಾಮುತ್ತಮಂ ಪ್ರೋಕ್ತಂ ಮಾಸಂ ಮಾರ್ಗಶಿರಾಭಿಧಮ್ ।
ತಸ್ಮಿನ್ ಮಾಸೇ ಕಥಂ ಕಾರ್ಯಾ ಹರೇಃ ಪೂಜಾ ಮಹಾಮತೇ ॥೩॥

ಕೈಃ ದ್ರವ್ಯೈಃ ಪೂಜನೀಯೋಽಸೌ ಮಾಧವೋ ಧನುರಾಗಮೇ ।
ಏತದ್ವೇದಿತುಮಿಚ್ಛಾಮೋ ವಕ್ತುಮರ್ಹಸ್ಯಶೇಷತಃ ॥೪॥

---

೧ ಶೌನಕಾದಿ ಋಷಿಗಳು ಸೂತರನ್ನು ಪ್ರಾರ್ಥಿಸುತ್ತಾರೆ. ಮಹಾಭಾಗ್ಯವಂತರಾದ ಸೂತರೇ! ತಾವು ಸರ್ವಶಾಸ್ತ್ರ ವಿಶಾರದರು. ಶ್ರೀ ಭಗವಾನ್ ವೇದವ್ಯಾಸರ ಅನುಗ್ರಹದಿಂದ ಸಕಲ ಶಾಸ್ತ್ರಗಳನ್ನು ಅರಿತವರಾಗಿರುವಿರಿ.

೨ ಇಲ್ಲಿಯವರೆಗೆ ತಮ್ಮ ಮುಖದಿಂದ ಎಲ್ಲ ಮಾಸಗಳ ಮಹಿಮೆಯನ್ನು ಕೇಳಿ ತಿಳಿದಿರುವೆವು. ಇದೀಗ ನಾವು ಧನುರ್ಮಾಸದ ಅತಿ ಉತ್ತಮವಾದ ಮಹಿಮೆಯನ್ನು ಕೇಳಬಯಸಿದ್ದೇವೆ.

೩ ಮಾರ್ಗಶೀರ್ಷ ಮಾಸದಲ್ಲಿ ಬರುವ ಈ ಧನುರ್ಮಾಸವು ಅತಿ ಪುಣ್ಯದಾಯಕವೆಂದು ಕೇಳಿದ್ದೇವೆ. ಜ್ಞಾನಿವರೇಣ್ಯರೇ! ಧನುರ್ಮಾಸದಲ್ಲಿ ಹರಿಯ ಪೂಜೆಯನ್ನು ಮಾಡುವ ಬಗೆ ಹೇಗೆ?

೪ ಧನುರ್ಮಾಸದಲ್ಲಿ ಯಾವ ಯಾವ ಪದಾರ್ಥಗಳಿಂದ ಮಾಧವನನ್ನು ಪೂಜಿಸಬೇಕು ಎಂಬುದನ್ನು ತಿಳಿಯಲು ಉತ್ಸುಕರಾಗಿದ್ದೇವೆ. ಅದೆಲ್ಲವನ್ನು ತಿಳಿಸಿರಿ ಎಂದು ಪ್ರಾರ್ಥಿಸಿದರು.

**ಸೂತ ಉವಾಚ-**

**ಅಹೋ ಧನ್ಯ ಅಹೋ ಧನ್ಯೋ ಜಾತೋ ಅದ್ಯ ತ್ವಯಾऽಧುನಾ ।**
**ಯತ ಅದ್ಯ ಹರೇರ್ಧರ್ಮಾನ್ ಶ್ರೋತುಂ ಪೃಷ್ಟೋ ತ್ವಯಾऽಧುನಾ ॥೫॥**

**ಹರೇರುಚ್ಚಾರಣೇನೈವ ಸರ್ವಪಾಪಕ್ಷಯೋ ಭವೇತ್ ।**
**ಕಿಮು ತದ್ಧರ್ಮಶ್ರವಣೇ ನಶ್ಯೇತ್ ಪಾಪಂ ನ ಸಂಶಯಃ ॥೬॥**

**ನಾಮ್ನೋऽಸ್ತಿ ಯಾವತೀ ಶಕ್ತಿಃ ಪಾಪನಿರ್ಹರಣೇ ಹರೇಃ ।**
**ತಾವತ್ಕರ್ತುಂ ನ ಶಕ್ನೋತಿ ಪಾತಕಂ ಪಾತಕೀ ಜನಃ ॥೭॥**

**ತಸ್ಮಾತ್ಸದಾ ನೃಭಿಃ ಕಾರ್ಯಾ ತತ್ಸೇವಾ ಪುರುಷೈಃ ಸದಾ ।**
**ಚಾಪಸ್ಥೇ ಚ ಯದಾ ಭಾನೌ ಸ್ನಾತುಂ ಗಚ್ಛೇತ್ತದಂ ನರಃ ।**
**ಪದೇ ಪದೇऽಶ್ವಮೇಧಸ್ಯ ಫಲಂ ಪ್ರಾಪ್ನೋತ್ಯಸಂಶಯಃ ॥೮॥**

---

೫ ಅವರ ಪ್ರಾರ್ಥನೆಯನ್ನಾಲಿಸಿದ ಸೂತರು ಹೇಳಲುಪಕ್ರಮಿಸಿದರು. ಋಷಿಗಳೇ! ಇಂದು ನೀವು ನನ್ನಿಂದ ಶ್ರೀಹರಿಪೂಜಾವಿಷಯಕ ಧರ್ಮಗಳನ್ನು ಕೇಳಲು ಬಯಸಿದುದರಿಂದ ನಾನು ಧನ್ಯನಾದೆನು. ನಿಮ್ಮಿಂದ ನನ್ನ ಜನ್ಮವು ಸಾರ್ಥಕವಾಯಿತು.

೬ ಹರಿ ಎಂಬೆರಡು ಅಕ್ಷರಗಳ ಉಚ್ಚಾರಣ ಮಾತ್ರದಿಂದ ಸಕಲ ಪಾಪಗಳು ನಾಶವಾಗುತ್ತವೆ. ಹರಿಯ ಪೂಜಾರೂಪವಾದ ಧರ್ಮಗಳನ್ನು ಕೇಳಿ ತಿಳಿಯುವುದರಿಂದ ಆ ಧರ್ಮಗಳನ್ನು ಆಚರಿಸುವುದರಿಂದ ಪಾಪಗಳು ನಾಶವಾಗುವುದರಲ್ಲಿ ಸಂದೇಹವೇನು? ಇದರಲ್ಲಿ ಯಾವ ಸಂದೇಹವೂ ಇಲ್ಲ.

೭ **ವಿಶೇಷ** : ಈ ಶ್ಲೋಕವು ಮುದ್ರಿತವಾದ ಪುಸ್ತಕದಲ್ಲಿ ಇದೆ. ಆದರೇ ಶ್ರೀಮಠದಲ್ಲಿ ದೊರೆತ ಹಸ್ತಪ್ರತಿಯಲ್ಲಿ ಈ ಶ್ಲೋಕವು ಇಲ್ಲ. (ಕೃಷ್ಣಾಮೃತ ಮಹಾರ್ಣವದಲ್ಲಿ ಶ್ರೀಮದಾಚಾರ್ಯರಿಂದ ಉದ್ಧೃತ ಪುರಾಣವಚನ) ಶ್ರೀಹರಿಯ ನಾಮ ಅತ್ಯಂತ ಸಮರ್ಥ. ಎಷ್ಟು ಪಾಪಗಳನ್ನು ಪರಿಹರಿಸುವ ಸಾಮರ್ಥ್ಯ ಆ ನಾಮಕ್ಕೆ ಇದೆಯೋ ಅಷ್ಟು ಪಾಪಗಳನ್ನು ಯಾವ ಪಾತಕಿಯೂ ಮಾಡಲಾರ.

೮ ಆದುದರಿಂದ ಮಾನವರೆಲ್ಲರೂ ಸದಾ ಕಾಲ ಶ್ರೀಹರಿಯ ಸೇವಾ ಕಾರ್ಯಗಳಲ್ಲಿ ತತ್ಪರರಾಗಿರಬೇಕು. ಸೂರ್ಯನು ಧನುರಾಶಿಯಲ್ಲಿರುವಾಗ ಅಂದರೆ ಧನುರ್ಮಾಸದಲ್ಲಿ ಪ್ರಾತಃಕಾಲ ಬಹಿರ್ಜಲಾಶಯಗಳಲ್ಲಿ ಸ್ನಾನ ಮಾಡುವುದಕ್ಕೆ ನಡೆದುಕೊಂಡು ಹೋಗಬೇಕು. ಈ ಧನುರ್ಮಾಸದಲ್ಲಿ ಸ್ನಾನಕ್ಕಾಗಿ ಇಡುವ ಒಂದೊಂದು ಹೆಜ್ಜೆಗೂ ನಿಸ್ಸಂದೇಹವಾಗಿ ಅಶ್ವಮೇಧ ಯಾಗದ ಫಲವನ್ನು ಪಡೆಯುವನು.

**ಮಾರ್ಗಶೀರ್ಷಾಭಿಧೇ ಮಾಸೇ ಚಾಪಸ್ಥೇ ಚ ದಿವಾಕರೇ**
**ಭಾಗೀರಥ್ಯವಗಾಹಂ ಚ ಸ್ಮೃತಿ(ಸ್ನಾನ)ಮಾತ್ರೇಣ ಲಭ್ಯತೇ**
**ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಸ್ಮರೇತ್ ದೇವಕಿನಂದನಮ್ ॥೯॥**

**ಕೃತ್ವಾ ಬಹಿಃಸ್ಥಲೇ ದೂರೇ ಮಲಮೂತ್ರವಿಸರ್ಜನಮ್ ।**
**ಮೃತ್ತಿಕಾಂ ಚೈವಮಾದಾಯ ಕೃತ್ವಾ ಶೌಚಂ ಯಥಾವಿಧಿ ॥೧೦॥**

**ದಂತಧಾವನಪೂರ್ವಾಣಿ ಕೃತ್ವಾ ಕಾರ್ಯಾಣ್ಯತಂದ್ರಿತಃ ।**
**ಬಹಿರ್ಜಲೇ ತದಾ ಸ್ನಾತ್ವಾ ನಿತ್ಯಕರ್ಮ ಸಮಾಚರೇತ್ ॥೧೧॥**

**ದೇವಪೂಜಾ ತಥಾ ಕಾರ್ಯಾ ಗಂಧಪುಷ್ಪಾಕ್ಷತೈಸ್ತಥಾ ।**
**ನೈವೇದ್ಯಂ ಚೈವ ದಾತವ್ಯಂ ಮುದ್ಗಮಿಶ್ರಂ ತಥೋದನಮ್ ॥೧೨॥**

**ನವನೀತಂ ಚಾರ್ಪಯಿತ್ವಾ ಮಾಷಪಿಷ್ಟೇನ ಪಾಚಿತಮ್ ।**
**ಸೂರಣಂ ಪೇಷಯಿತ್ವಾಥ ಸರ್ವೋಪಸ್ಕರಸಂಯುತಮ್ ॥೧೩॥**

---

೯ ಸೂರ್ಯನು ಧನುರಾಶಿಯಲ್ಲಿ ಸಂಚರಿಸುವ ಈ ಧನುರ್ಮಾಸದಲ್ಲಿ ಭಾಗೀರಥಿಯ ಸ್ಮರಣೆಮಾತ್ರದಿಂದಲೇ ಭಾಗೀರಥಿಯಲ್ಲಿ ಮಿಂದ ಫಲವನ್ನು ಪಡೆವನು. ಧನುರ್ಮಾಸದ ಪ್ರಾತಃಕಾಲದಲ್ಲೆದ್ದು ದೇವಕೀಪುತ್ರನಾದ ಶ್ರೀಕೃಷ್ಣನನ್ನು ಸ್ಮರಿಸಬೇಕು.

೧೦ ನಂತರ ದೂರಪ್ರದೇಶದಲ್ಲಿ ಮಲಮೂತ್ರ ವಿಸರ್ಜನೆಯನ್ನು ಮಾಡಿ ವಿಧಿಗನುಸಾರವಾಗಿ ಮೃತ್ತಿಕಾಶೌಚವನ್ನು ಮಾಡಬೇಕು.

೧೧ ನಂತರ ದಂತಧಾವನವೇ ಮೊದಲಾದ ಕಾರ್ಯಗಳನ್ನು ಶೀಘ್ರದಲ್ಲಿ ಮುಗಿಸಿ ಬಹಿರ್ಜಲದಲ್ಲಿ ಸ್ನಾನ ಮಾಡಿ ನಿತ್ಯಕರ್ಮಗಳನ್ನಾಚರಿಸಬೇಕು. (ಈ ನಿತ್ಯಕರ್ಮಗಳ ವಿಷಯಗಳ ವಿಸ್ತಾರ ಹಾಗೂ ಅವುಗಳ ವಿವರಣೆಗಾಗಿ ಇದೇ ಗ್ರಂಥದ ಆಗ್ನೇಯಪುರಾಣಾಂತರ್ಗತ ಧನುರ್ಮಾಸಮಾಹಾತ್ಮ್ಯೆಯ ಐದನೆಯ ಅಧ್ಯಾಯವನ್ನು ನೋಡಿರಿ)

೧೨ ನಂತರ ಗಂಧಪುಷ್ಪ ಮೊದಲಾದ ಪೂಜಾದ್ರವ್ಯಗಳಿಂದ ಶ್ರೀಹರಿಯನ್ನು ಪೂಜಿಸಿ ಮುದ್ಗಾನ್ನ (ಹುಗ್ಗಿ) ವನ್ನು ನಿವೇದಿಸಬೇಕು. (ಧನುರ್ಮಾಸದ ಪೂಜಾ ವಿವರಗಳಿಗಾಗಿ ಇದೇ ಪುಸ್ತಕದಲ್ಲಿರುವ ಆಗ್ನೇಯಪುರಾಣಾಂತರ್ಗತ ಧನುರ್ಮಾಸಮಾಹಾತ್ಮ್ಯೆಯ ಐದನೆಯ ಅಧ್ಯಾಯದ ೩೬ನೇ ಶ್ಲೋಕ ಸಂಖ್ಯೆಯಿಂದ ಮುಂದೆ ನೋಡಿರಿ)

೧೩ ಇದಲ್ಲದೇ ಬೆಣ್ಣೆ, ಉದ್ದಿನಹಿಟ್ಟು, ಎಲ್ಲ ರೀತಿಯ ವ್ಯಂಜನಗಳು

ನಾನಾಶಾಕಾಂಸ್ತಥಾ ಭಕ್ಷ್ಯಾನ್ ಲೇಹ್ಯಪೇಯಾಂಸ್ತಥೈವ ಚ ।
ದಧಿಖಂಡಂ ಪ್ರದಾತವ್ಯಂ ಫಲಾನಿ ವಿವಿಧಾನಿ ಚ ॥೧೪॥

ತಾಂಬೂಲಂ ದಕ್ಷಿಣಾಂ ಚೈವ ಆರ್ತಿಂ ಕೃತ್ವಾ ಮನೋರಮಾಮ್ ।
ಪೂಜಾಂ ಚ ಷೋಡಶೋಪಚಾರಾನ್ ಭಕ್ತ್ಯಾ ಚೈವ ಪ್ರಕಲ್ಪಯೇತ್ ॥೧೫॥

ರವೇರುದಯವೇಲಾಯಾಂ ಹರೇಃ ಪೂಜಾಂ ಸಮಾಪಯೇತ್ ।
ಬ್ರಾಹ್ಮಣಾನಾಂ ತತೋ ಪೂಜಾಂ ಯಥಾಶಕ್ತ್ಯಾ ಪ್ರಕಲ್ಪಯೇತ್ ॥೧೬॥

ಬ್ರಾಹ್ಮಣೈಸ್ಸಹ ಭೋಕ್ತವ್ಯಂ ತದನ್ನಂ ಯನ್ನಿವೇದಿತಮ್ ।
ದ್ವಿಜಾತಿರಿಕ್ತಂ ಯೋ ಭುಂಕ್ತೇ ತದನ್ನಂ ವಿಷ್ಠಯಾ ಸಮಮ್ ॥೧೭॥

ಜ್ಞಾನಭಕ್ತಿಯುತೋ ವಿಪ್ರಃ ಸರ್ವಾನ್ ಪಾಪಾನ್ ಕ್ಷಿಣೋತಿ ಹಿ ।
ತಸ್ಮಾದ್ದದ್ಯಾದ್ದ್ವಿಜೇಂದ್ರಾಯ ತತ್ತ್ವನಿಷ್ಠಮಹಾತ್ಮನೇ ॥೧೮॥

---

ಮುಂತಾದವುಗಳಿಂದ ಕೂಡಿದ

೧೪ ನಾನಾವಿಧವಾದ ಕಾಯಿಪಲ್ಲೆಗಳು, ವಿವಿಧ ಭಕ್ಷ್ಯಗಳು, ರಸಗಳು, ಪಾನೀಯಗಳು, ಗಟ್ಟಿಯಾದ ಮೊಸರು, ವಿವಿಧ ಫಲಗಳು

೧೫ ತಾಂಬೂಲ, ದಕ್ಷಿಣೆ ಮುಂತಾದವನ್ನು, ಪುರುಷೋತ್ತಮನಾದ ಶ್ರೀಹರಿಗೆ ಸಮರ್ಪಿಸಿ, ಮಂಗಳಾರತಿಯನ್ನು ಮಾಡಬೇಕು. ಈ ರೀತಿ ಷೋಡಶೋಪಚಾರಗಳನ್ನು ಪ್ರತಿದಿನ ಮಾಡಬೇಕು. (ಷೋಡಶೋಪಚಾರದ ವಿವರಗಳಿಗಾಗಿ ಇದೇ ಗ್ರಂಥದಲ್ಲಿರುವ ಆಗ್ನೇಯಪುರಾಣಾಂತರ್ಗತ ಧನುರ್ಮಾಸಮಾಹಾತ್ಮ್ಯೆಯ ಐದನೆಯ ಅಧ್ಯಾಯದ ೪೩ ನೆಯ ಶ್ಲೋಕವನ್ನು ನೋಡಿರಿ)

೧೬ ಸೂರ್ಯೋದಯದ ಸಮಯಕ್ಕೆ ಪೂಜೆಯನ್ನು ಮುಗಿಸಬೇಕು. ದೇವಪೂಜೆಯ ನಂತರದಲ್ಲಿ ಬ್ರಾಹ್ಮಣರ ಪೂಜೆಯನ್ನು ತನ್ನ ಶಕ್ತಿಗೆ ಅನುಸಾರವಾಗಿ ಮಾಡಬೇಕು.

೧೭ ನಂತರ ಶ್ರೀಹರಿಗೆ ನಿವೇದಿಸಿದ ನೈವೇದ್ಯಪದಾರ್ಥಗಳನ್ನು ಬ್ರಾಹ್ಮಣರೊಂದಿಗೆ ಸೇರಿ ಭೋಜನ ಮಾಡಬೇಕು. ಬ್ರಾಹ್ಮಣರಿಲ್ಲದೇ ತಾನೊಬ್ಬನೇ ಯಾವನು ಭೋಜನ ಮಾಡುವನೋ ಅವನು ಉಣ್ಣುವ ಅನ್ನವು ಮಲಕ್ಕೆ ಸಮಾನವೆಂದು ಹೇಳಲ್ಪಟ್ಟಿದೆ.

೧೮ ಜ್ಞಾನ ಹಾಗೂ ಭಕ್ತಿಗಳಿಂದ ಯುತನಾದ ಬ್ರಾಹ್ಮಣನು ಸರ್ವಪಾಪಗಳನ್ನು ನಾಶಗೊಳಿಸುವನು. ಆದುದರಿಂದ ತತ್ವನಿಷ್ಠರಾದ ಬ್ರಾಹ್ಮಣರಿಗೆ ದಾನ ಮಾಡಬೇಕು. ಭೋಜನಗಳನ್ನು ಮಾಡಿಸಬೇಕು.

ಅನ್ನದೇ ಸರ್ವತೀರ್ಥಾನಿ ಹ್ಯನ್ನದೇ ಸರ್ವದೇವತಾಃ ।
ದಾತವ್ಯಂ ಚೈವ ಚಿತ್ರಾನ್ನಂ ವೈಷ್ಣವಾಯ ದ್ವಿಜಾತಯೇ ॥೧೯॥

ಭಕ್ಷ್ಯಭೋಜ್ಯಯುತಂ ಚೈವ ಸಘೃತಂ ನವನೀತಕಮ್ ।
ಬ್ರಾಹ್ಮಣಾನ್ ಭೋಜಯಿತ್ವಾ ತು ಸ್ವಯಂ ಭುಕ್ತ್ವಾ ತತಃ ಪರಮ್ ॥೨೦॥

ತಾಂಬೂಲಂ ದಕ್ಷಿಣಾಂ ದತ್ವಾ ಆಶೀರ್ವಾದಾಂಸ್ತಥೈವ ಚ ।
ಏವಂ ಯಃ ಕುರುತೇ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥೨೧॥

ಏತದ್ ವ್ರತಂ ಪುರಾ ಪ್ರೋಕ್ತಂ ಬ್ರಹ್ಮಣೇ ನಾಭಿಜನ್ಮನೇ ।
ಹಂಸರೂಪೀ ಹರಿಃ ಪ್ರಾಹ ಧನುರ್ಮಾಹಾತ್ಮ್ಯಮಂಜಸಾ ॥೨೨॥

ಏತತ್ ಸಂಶ್ರಾವಯನ್ವಿದ್ವಾನ್ ಸರ್ವಪಾಪೈಃ ಪ್ರಮುಚ್ಯತೇ ॥೨೩॥

॥ ಇತಿ ಶ್ರೀಪಂಚರಾತ್ರಾಗಮೇ ಬ್ರಹ್ಮಹಂಸಸಂವಾದೇ
ಧನುರ್ಮಾಸಮಾಹಾತ್ಮ್ಯೇ ಪ್ರಥಮೋಽಧ್ಯಾಯಃ ॥

---

೧೯ ಅನ್ನದಾನ ಮಾಡುವವನಲ್ಲಿ ಸಕಲತೀರ್ಥಗಳು ಸನ್ನಿಹಿತವಾಗಿರುವವು. ಅವನಲ್ಲಿ ಸಕಲ ದೇವತೆಗಳು ನೆಲೆಸಿರುವರು. ತೀರ್ಥಗಳ ಸನ್ನಿಧಾನವನ್ನು, ದೇವತೆಗಳ ಸನ್ನಿಧಾನವನ್ನು ಬಯಸುವ ಸಾಧಕನು ವಿಷ್ಣುಭಕ್ತನಾದ ಬ್ರಾಹ್ಮಣನಿಗೆ ಧನುರ್ಮಾಸದಲ್ಲಿ ಚಿತ್ರಾನ್ನವನ್ನು ದಾನವಾಗಿ ನೀಡಬೇಕು.

೨೦ ತುಪ್ಪದಿಂದ ಸಹಿತವಾದ ಭಕ್ಷ್ಯಭೋಜ್ಯಗಳನ್ನು, ಬೆಣ್ಣೆಯಿಂದ ಸಹಿತವಾದ ಹುಗ್ಗಿಯನ್ನು ಬ್ರಾಹ್ಮಣರಿಗೆ ಭೋಜನ ಮಾಡಿಸಿ ನಂತರ ತಾನು ಭೋಜನ ಮಾಡಬೇಕು.

೨೧ ಭೋಜನಾನಂತರ ಬ್ರಾಹ್ಮಣರಿಗೆ ತಾಂಬೂಲ ಹಾಗೂ ದಕ್ಷಿಣೆಯನ್ನು ನೀಡಿ ಅವರ ಆಶೀರ್ವಾದಗಳನ್ನು ಪಡೆಯಬೇಕು. ಈ ರೀತಿ ಭಕ್ತಿಯಿಂದ ಆಚರಿಸಿದವನು ಎಲ್ಲ ಪಾಪಗಳಿಂದ ಮುಕ್ತನೆನಿಸುವನು.

೨೨ ಹಿಂದೆ ಹಂಸರೂಪೀ ಪರಮಾತ್ಮನು ತನ್ನ ನಾಭಿಕಮಲದಿಂದ ಜನಿಸಿದ ಚತುರ್ಮುಖಬ್ರಹ್ಮದೇವರಿಗೆ ಈ ಧನುರ್ಮಾಸದ ಮಹಿಮೆಯನ್ನು ಉಪದೇಶ ನೀಡಿದ್ದನು.

೨೩ ಹಂಸರೂಪಿ ಹರಿಯಿಂದ ಹೇಳಲ್ಪಟ್ಟ ಈ ಧನುರ್ಮಾಸಮಹಾತ್ಮೆಯನ್ನು ಭಕ್ತಿಯಿಂದ ಶ್ರವಣ ಮಾಡಿಸಿದವನು ತನ್ನೆಲ್ಲ ಪಾಪಗಳಿಂದ ಮುಕ್ತನೆನಿಸುವನು.

★ ಇಲ್ಲಿಗೆ ಮೊದಲನೇ ಅಧ್ಯಾಯವು ಮುಗಿಯಿತು. ★

# ಅಥ ದ್ವಿತೀಯೋಽಧ್ಯಾಯಃ

ಬ್ರಹ್ಮೋವಾಚ-

ಧನುರ್ಮಾಸೇ ಹರೇಃ ಪೂಜಾ ಕಥಂ ಕಾರ್ಯಾ ಸುರೋತ್ತಮ ।
ಏತದ್ವಿಸ್ತರತೋ ಬ್ರೂಹಿ ಮಯಿ ಚೇದಸ್ತಿ ತೇ ದಯಾ ॥೧॥

ಹಂಸ ಉವಾಚ-

ಚಾಪಸ್ಥೇ ಚ ಯದಾ ಭಾನೌ ಸರ್ವಾನ್ ಕಾಮಾನ್ ವಿಹಾಯ ಚ ।
ಸೂರ್ಯೋದಯೇ ಸಮಾಪ್ಯಾಥ ನಿತ್ಯಕರ್ಮ ಯಥಾವಿಧಿ ॥೨॥

ಬ್ರಾಹ್ಮಣಾನ್ ಭೋಜಯಿತ್ವಾಥ ಸ್ಮರೇತ್ ದೇವಕಿನಂದನಮ್ ।
ಪಶ್ಚಾಜ್ಜಪಾದಿಕಂ ಕಾರ್ಯಂ ನ ದೋಷೋ ಭೋಜನೇ ಕೃತೇ ॥೩॥

ಬ್ರಹ್ಮೋವಾಚ-

ಸೂರ್ಯೋದಯಾತ್ಪೂರ್ವಮೇವ ಕಥಂ ಕಾರ್ಯಂ ತು ಆಹ್ನಿಕಮ್ ।
ಇತಿ ತತ್ಸಂಶಯಂ ಛಿಂದಿ ಸರ್ವಜ್ಞೋಽಸಿ ಮಹಾಮತೇ ॥೪॥

---

೧ ಬ್ರಹ್ಮದೇವರು ಕೇಳಿದರು. ದೇವೋತ್ತಮನೇ! ನನ್ನಲ್ಲಿ ನಿನಗೆ ದಯವಿದ್ದರೇ ಧನುರ್ಮಾಸದಲ್ಲಿ ಹರಿಯನ್ನು ಪೂಜಿಸುವ ಕ್ರಮವನ್ನು ವಿಸ್ತಾರವಾಗಿ ತಿಳಿಸಬೇಕು ಎಂದು ಪ್ರಾರ್ಥಿಸಿದರು.

೨ (ಸರ್ವಕರ್ಮ ಪಾ.ಭೇ) ಬ್ರಹ್ಮದೇವರ ಪ್ರಾರ್ಥನೆಯನ್ನಾಲಿಸಿದ ಹಂಸಪರಮಾತ್ಮನು ಹೇಳಲಾರಂಭಿಸಿದನು. ಸೂರ್ಯನು ಧನುರಾಶಿಯಲ್ಲಿರುವ ಧನುರ್ಮಾಸದಲ್ಲಿ ಫಲೇಚ್ಛಾರಹಿತನಾಗಿ ಪ್ರತಿದಿನದ ಆಹ್ನಿಕ-ಜಪ ಮುಂತಾದ ಕರ್ಮಗಳನ್ನು ಸಂಕ್ಷೇಪವಾಗಿ ಮುಗಿಸಿ ದೇವಪೂಜೆಯನ್ನು ಸೂರ್ಯೋದಯ-ಕ್ಕಿಂತಲೂ ಪೂರ್ವದಲ್ಲಿಯೇ ಸರಿಯಾಗಿ ಮುಗಿಸಬೇಕು.

೩ ನಂತರ ಶ್ರೀಹರಿಯನ್ನು ಸ್ಮರಿಸುತ್ತ ಬ್ರಾಹ್ಮಣರ ಭೋಜನ ಮಾಡಿಸಬೇಕು. ತಾನು ಭೋಜನಾನಂತರದಲ್ಲಿ ಜಪಾದಿಗಳನ್ನು ಮಾಡಬೇಕು. ಈ ಧನುರ್ಮಾಸದಲ್ಲಿ ಭೋಜನಾನಂತರ ಜಪಾದಿಗಳನ್ನು ಮಾಡಿದರೂ ದೋಷವಿಲ್ಲ.

೪ ಹಂಸಪರಮಾತ್ಮನು ಹೀಗೆನ್ನಲು ಬ್ರಹ್ಮದೇವರು ಕೇಳುತ್ತಾರೆ. ಹೇ ಸರ್ವಜ್ಞನಾದ ಶ್ರೀಹರಿಯೇ! ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಆಹ್ನಿಕಗಳನ್ನು ಹೇಗೆ ಮಾಡುವುದು? ಈ ವಿಷಯದಲ್ಲಿ ನನ್ನ ಸಂದೇಹಗಳು ಇವೆ. ನೀನು ಸ್ವಯಂ ಸರ್ವಜ್ಞನಾಗಿರುವಿ. ನಿನ್ನ ಬುದ್ಧಿಯು ಅಮಿತವಾಗಿದೆ. ಹೀಗಾಗಿ ನನ್ನ ಆ

**ಹಂಸ ಉವಾಚ-**

**ಯಥಾ ಸ್ನಾನಂ ಯಥಾ ಸಂಧ್ಯಾ ತಥಾ ಶ್ರಾದ್ಧಾದಿಕಾಃ ಕ್ರಿಯಾಃ ।**
**ತಥೈವ ಚ ಧನುರ್ಮಾಸೇ ಪೂಜಾ ಕಾರ್ಯಾ ಹರೇಸ್ಸದಾ ॥೫॥**

**ಮಾಸಪೂಜಾಮಶಕ್ತಸ್ತು ಕಿಂಚಿತ್ಕಾಲೇ ಚ ಕಂಜಜ ।**
**ಅರ್ಕವಾರೇ ವ್ಯತೀಪಾತೇ ವಿಷ್ಣುಭೇನ ಚ ಸಂಯುತೇ ॥೬॥**

**ತದ್ದಿನೇ ಚ ಹರೇಃ ಪೂಜಾ ಯಥಾವಿತ್ತಾನುಸಾರತಃ ।**
**ಕೃಷ್ಣಪಕ್ಷೇ ಕೃತಾ ಪೂಜಾ ಪಿತ್ರ್ಯಾಣಾಂ ತೃಪ್ತಿದಾ ಭವೇತ್ ॥೭॥**

**ಶುಕ್ಲಪಕ್ಷೇ ಕೃತಾ ಪೂಜಾ ದೇವಾನಾಂ ಹರ್ಷದಾ ಭವೇತ್ ।**
**ಕುಟುಂಬಭೋಜನಂ ಕಾರ್ಯಮುಷಃಕಾಲೇ ಚ ಪದ್ಮಜ ॥೮॥**

**ಕುಟುಂಬಭೋಜನೇऽಶಕ್ತೋ ದಂಪತೀ ಭೋಜಯೇತ್ತತಃ ।**
**ತೇನೈವ ಸರ್ವಪಾಪಾನಿ ವ್ಯಪೋಹಂತಿ ನ ಸಂಶಯಃ ॥೯॥**

---

ಸಂದೇಹಗಳನ್ನು ನೀನೇ ಪರಿಹರಿಸಬೇಕು ಹೀಗೆಂದು ಬ್ರಹ್ಮದೇವರು ಪ್ರಾರ್ಥಿಸಿದರು.

೫ ಹಂಸರೂಪೀ ಪರಮಾತ್ಮನು ಹೇಳಿದನು. ಧನುರ್ಮಾಸದಲ್ಲಿ ಸೂರ್ಯೋದಯಕ್ಕಿಂತ ಮೊದಲು ಸ್ನಾನ, ಸಂಧ್ಯೆ, ಆಚರಿಸುವಂತೆ ಶ್ರಾದ್ಧಾದಿ ಕರ್ಮಗಳನ್ನು ಆಚರಿಸಬೇಕು. ಅದೇ ರೀತಿಯಾಗಿ ಶ್ರೀಹರಿಯನ್ನು ಸೂರ್ಯೋದಯಕ್ಕಿಂತ ಮೊದಲು ಪೂಜಿಸಬೇಕು.

೬ ಧನುರ್ಮಾಸದಲ್ಲಿ ತಿಂಗಳು ಪೂರ್ತಿಯಾಗಿ ಪೂಜೆಯನ್ನು ಮಾಡಲು ಅಶಕ್ತನಾದವನು ಭಾನುವಾರ, ವ್ಯತೀಪಾತ, ವಿಷ್ಣುಸಂಬಂಧಿಯಾದ ಶ್ರವಣ ನಕ್ಷತ್ರ ಮುಂತಾದ ವಿಶಿಷ್ಟ ದಿನಗಳಲ್ಲಿ, ಪ್ರಾತಃಕಾಲದಲ್ಲಿ ಹರಿಯನ್ನು ಪೂಜಿಸಬೇಕು.

೭ ಅಂಥ ದಿನಗಳಲ್ಲಿ ಕೂಡ ತನ್ನ ಸಂಪತ್ತಿಗೆ ಅನುಗುಣವಾಗಿ ಹರಿಯನ್ನು ಪೂಜಿಸಬೇಕು. ಧನುರ್ಮಾಸದ ಕೃಷ್ಣಪಕ್ಷದಲ್ಲಿ ಮಾಡುವ ಪೂಜೆಯು ಪಿತೃಗಳಿಗೆ ತೃಪ್ತಿಯನ್ನುಂಟು ಮಾಡುವುದು.

೮ ಧನುರ್ಮಾಸದ ಶುಕ್ಲಪಕ್ಷದ ಪೂಜೆಯು ದೇವತೆಗಳಿಗೆ ತೃಪ್ತಿದಾಯಕವಾದುದು. ಈ ಮಾಸದ ಪ್ರಾತಃಕಾಲದ ಸಮಯದಲ್ಲಿ ಬ್ರಾಹ್ಮಣ ಕುಟುಂಬ ಭೋಜನ ಮಾಡಿಸಬೇಕು.

೯ ಕುಟುಂಬ ಭೋಜನ ಮಾಡಿಸಲು ಅಶಕ್ತನಾದವನು ಬ್ರಾಹ್ಮಣದಂಪತಿಗಳ ಭೋಜನವನ್ನಾದರೂ ಮಾಡಿಸಬೇಕು. ದಂಪತಿಭೋಜನಮಾತ್ರದಿಂದಲೇ

**ಚಾಪಸ್ಥೇ ಚ ಯದಾ ಭಾನೌ ಬ್ರಾಹ್ಮಣಾನ್ಯೋ ನಿಮಂತ್ರಯೇತ್ ।**
**ತೇನೈವ ಸರ್ವಪಾಪಾನಿ ಹಿಮವದ್ಭಾಸ್ಕರೋದಯೇ ॥೧೦॥**

**ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ ।**
**ಶ್ರೋತೃಣಾಂ ಪರಮಾಶ್ಚರ್ಯಂ ವಕ್ತೃಣಾಮಘನಾಶನಮ್ ॥೧೧॥**

**ರೇವಾತೀರೇ ಪುರಾ ರಾಜಾ ಸತ್ಯಸಂಧ (ಧರ್ಮ) ಇತೀರಿತಃ ( ಇತಿ ಶ್ರುತಃ) ।**
**ಪರಸ್ತ್ರೀಲೋಲುಪೋ ನಿತ್ಯಂ ತದರ್ಥಂ ಬಹುಯತ್ನವಾನ್ ॥೧೨॥**

**ತಸ್ಯೈವ ನಗರೇ ವಿದ್ವಾನ್ ವೇದಶಾಸ್ತ್ರವಿಶಾರದಃ ।**
**ನಾಮ್ನಾ ನಾರಾಯಣ ಇತಿ ನಿತ್ಯಕರ್ಮಸು ಲೋಲುಪಃ ॥೧೩॥**

**ಅಕಸ್ಮಾದ್ಧನುಷೋ ಮಾಸೋ ದೈವೇಚ್ಛಾದಾಗತಸ್ತದಾ ।**
**ಪುಣ್ಯಕಾಲಂ ತದಾ ವೀಕ್ಷ್ಯ ಬ್ರಾಹ್ಮಣೋ ಹರ್ಷಮಾಗತಃ ॥೧೪॥**

**ದೇವಪೂಜಾಂ ತಥಾ ಚಕ್ರೇ ಸ್ವಗೃಹೇ ಚ ನಿರಂತರಮ್ ।**
**ಅರುಣೋದಯವೇಲಾಯಾಂ ಸ್ನಾತ್ವಾ ಚೈವ ಯಥಾವಿಧಿ ॥೧೫॥**

---

ಸರ್ವಪಾಪಗಳು ಸೂರ್ಯೋದಯಕ್ಕೆ ಮಂಜು ಕರಗುವಂತೆ ನಾಶವಾಗುವವು.

೧೦ ಸೂರ್ಯನು ಧನೂರಾಶಿಯಲ್ಲಿ ಪ್ರವೇಶ ಮಾಡಿದಾಗ ಅಂದರೇ ಧನುರ್ಮಾಸದಲ್ಲಿ ಯಾರು ಬ್ರಾಹ್ಮಣರನ್ನು ಭೋಜನಕ್ಕಾಗಿ ಆಮಂತ್ರಿಸುವರೋ ಅವರ ಪಾಪಗಳೆಲ್ಲವೂ ಸೂರ್ಯೋದಯವಾದಾಗ ಮಂಜು ಕರಗುವಂತೆ ನಷ್ಟವಾಗಿ ಹೋಗುತ್ತವೆ.

೧೧ ಈ ವಿಷಯದಲ್ಲಿ ಒಂದು ಇತಿಹಾಸವು ಉದಾಹರಿಸಲ್ಪಡುತ್ತದೆ. ಈ ಇತಿಹಾಸವು ಹೇಳಿದವರ ಸಕಲಪಾಪಗಳನ್ನು ಕಳೆಯುತ್ತದೆ. ಕೇಳುಗರ ಸಕಲ ಕಾಮನೆಗಳನ್ನು ಪೂರೈಸುವುದು.

೧೨ ಹಿಂದೆರೇವಾತೀರದಲ್ಲಿಸತ್ಯಸಂಧನೆಂಬರಾಜನಿದ್ದನು. ಪರಸ್ತ್ರೀಲೋಲುಪನಾದ ಅವನು ಪರಸ್ತ್ರೀಯರನ್ನು ಪಡೆಯಲೋಸುಗ ನಿರಂತರ ಯತ್ನಿಸುತ್ತಿದ್ದನು.

೧೩ ಅದೇ ಊರಿನಲ್ಲಿಯೇ ಶಾಸ್ತ್ರವಿಶಾರದನೂ, ನಿತ್ಯಕರ್ಮಗಳಲ್ಲಿ ಆಸಕ್ತನೂ ಆದ ನಾರಾಯಣನೆಂಬ ಹೆಸರಿನ ಬ್ರಾಹ್ಮಣಶ್ರೇಷ್ಠನಿದ್ದನು.

೧೪ ಹೀಗಿರಲೊಮ್ಮೆ ದೈವೇಚ್ಛೆಯಿಂದ ಪ್ರತಿ ವರುಷದಂತೆ ಧನುರ್ಮಾಸವು ಆಗಮಿಸಿತು. ಪುಣ್ಯಸಾಧನವಾದ ಕಾಲದ ಆಗಮನದಿಂದ ಆ ಬ್ರಾಹ್ಮಣನು ಸಂತುಷ್ಟನಾದನು.

೧೫ ಪ್ರತಿದಿನ ವಿಧಿಪೂರ್ವಕವಾಗಿ ತನ್ನ ಮನೆಯಲ್ಲಿ ಅರುಣೋದಯಕ್ಕೆ ಸರಿಯಾಗಿ

**ಚಿತ್ರಾನ್ನಂ ನವನೀತಂ ಚ ಭಕ್ಷ್ಯೈರ್ನಾನಾವಿಧೈರಪಿ ।**
**ಶಾಕೈಶ್ಚ ವಿವಿಧೈಶ್ಚೈವ ಚೋಷ್ಯೈಃ ಖಾದ್ಯೈಃ ಸಮನ್ವಿತಮ್ ॥೧೬॥**

**ಬ್ರಾಹ್ಮಣಾನ್ ಭೋಜಯಿತ್ವಾಥ ಸ್ವಯಂ ಭುಕ್ತ್ವಾ ತತಃ ಪರಮ್ ।**
**ತಾಂಬೂಲಂ ದಕ್ಷಿಣಾಂ ದತ್ವಾ ಆಶೀರ್ವಾದಾನ್ ಗೃಹೀತವಾನ್ ॥೧೭॥**

**ಏತತ್ ಶುಶ್ರಾವ ರಾಜಾಪಿ ಸ್ವರಾಷ್ಟ್ರೇ ಚ ಮಹೋತ್ಸವಮ್ ।**
**ಸ್ವಯಂ ಕರ್ತುಂ ಮನಶ್ಚಕ್ರೇ ವಿಪ್ರಂ ಕಂ ಚ ನಿಮಂತ್ರಯೇ ॥೧೮॥**

**ವಿಚಾರ್ಯ ಚ ಪುನಃ ಪಶ್ಚಾತ್ ಗ್ರಾಮೇ ನಾರಾಯಣಾಹ್ವಯಮ್ ।**
**ಪೌರಾಣಿಕಂ ಚ ಗ್ರಾಮಸ್ಥಂ ವೇದವೇದಾಂಗಪಾರಗಮ್ ॥೧೯॥**

**ನಿಮಂತ್ರಣಾರ್ಥಂ ವಿಪ್ರರ್ಷೇಃ ಸ್ವಯಂ ಗತ್ವಾ ಮಹಾತ್ಮನಃ ।**
**ಮಂದಿರಂ ಚ ತದಾ ದೃಷ್ಟ್ವಾ ಶಿಷ್ಯೈಃ ಶತಸಮನ್ವಿತಮ್ ॥೨೦॥**

**ಧನುರ್ಮಾಸಸ್ಯ ಮಾಹಾತ್ಮ್ಯಂ ಶ್ರೋತೃಣಾಮಘನಾಶನಮ್ ।**
**ಶುಶ್ರಾವ ಮಾಸಮಾಹಾತ್ಮ್ಯಂ ದಂಪತೀಭೋಜನಾದಿಕಮ್ ॥೨೧॥**

---

ಸ್ನಾನಾದಿಗಳನ್ನು ಮಾಡಿ ದೇವಪೂಜೆಯನ್ನು ಮಾಡಿದನು.

೧೬ ದೇವರಿಗೆ, ಚಿತ್ರಾನ್ನ, ಬೆಣ್ಣೆ, ಹುಗ್ಗಿ, ಅನೇಕ ಭಕ್ಷ್ಯಗಳು, ಅನೇಕ ಶಾಕಗಳು, ವ್ಯಂಜನಗಳನ್ನು ಸಮರ್ಪಿಸಿದನು.

೧೭ ಪೂಜಾ ನಂತರ ಬ್ರಾಹ್ಮಣರ ಭೋಜನ ಮಾಡಿಸಿ ಬ್ರಾಹ್ಮಣರಿಗೆ ತಾಂಬೂಲ ದಕ್ಷಿಣೆಗಳನ್ನು ನೀಡಿ ಆಶೀರ್ವಾದ ಪಡೆದು ನಂತರ ತಾವು ಭೋಜನ ಮಾಡಿದನು.

೧೮ ಧನುರ್ಮಾಸದ ಧರ್ಮಗಳನ್ನು ಆಲಿಸಿದ ರಾಜನು ತನ್ನ ಅರಮನೆಯಲ್ಲಿಯೇ ಧನುರ್ಮಾಸವನ್ನು ಆಚರಿಸಲು ನಿರ್ಧರಿಸಿದನು. ಭೋಜನಕ್ಕೆ ಯಾವ ಬ್ರಾಹ್ಮಣನನ್ನು ಆಮಂತ್ರಿಸಲಿ ಎಂದು ಆಲೋಚಿಸಿದನು.

೧೯ ಹೀಗೆ ಆಲೋಚಿಸಿದ ನಂತರ ತನ್ನ ಗ್ರಾಮದಲ್ಲಿಯೇ ಇರುವ, ಸದಾ ಪುರಾಣ ಗಳ ಪ್ರವಚನ ಮಾಡುವ, ವೇದ-ವೇದಾಂಗಗಳನ್ನು ಅರಿತವನೂ ಆದ ಬ್ರಾಹ್ಮಣೋತ್ತಮನಾದ ನಾರಾಯಣನನ್ನು ಆಹ್ವಾನಿಸಲು ನಿರ್ಧರಿಸಿದನು.

೨೦ ರಾಜನು ಸ್ವತಃ ಆ ಬ್ರಾಹ್ಮಣನ ಮನೆಗೆ ಹೋಗಿ ನೂರಾರು ಶಿಷ್ಯರಿಂದ ಸಮೇತನಾದ ಆ ಬ್ರಾಹ್ಮಣನನ್ನು ಕಂಡನು.

೨೧ ಆ ಸಂದರ್ಭದಲ್ಲಿ ಬ್ರಾಹ್ಮಣನು ಧನುರ್ಮಾಸದ ಮಹಿಮೆಯನ್ನು ಹೇಳುತ್ತಿದ್ದನು. ಆ ಮಹಿಮೆಯು ಶ್ರೋತೃಗಳ ಸರ್ವಪಾಪ ಪರಿಹಾರಕವಾಗಿದೆ.

ವಸ್ತ್ರಾಲಂಕಾರದಾನಂ ಚ ಬ್ರಾಹ್ಮಣಾನಾಂ ಪ್ರದಾಪನಮ್ ।
ವಿಶಾಲಾಕ್ಷೀಂ ಪೃಥುಶ್ರೋಣೀಂ ಗಜಕುಂಭಪಯೋಧರಾಮ್ ॥೨೨॥

ಸಿಂಹಮಧ್ಯಸಮಾಂ ದೃಷ್ಟ್ವಾ ಸದ್ಯೋ ಮೋಹವಶಂ ಗತಃ ।
ಬಹ್ವಾದರಂ ಪುರಸ್ಕೃತ್ಯ ಸಭಾರ್ಯಂ ಭೂಸುರೋತ್ತಮಮ್ ॥೨೩॥

ಭೋ ಬ್ರಹ್ಮನ್ ಮಾಸಪರ್ಯಂತಂ ಸಪತ್ನೀಕ ದ್ವಿಜೋತ್ತಮ ।
ಆಮಂತ್ರಿತಂ ಭೋಜನಾರ್ಥಂ ಯಾವನ್ಮಾಸಂ ಸಮಾಪಯೇತ್ ।
ರಾತ್ರೌಸ್ವಾಪಂ ಮಮ ಗೃಹೇ ಕೃತ್ವಾ ಚೈವ ವಿಧಾನತಃ ॥೨೪॥

ಭೋಜನಂ ತು ಉಷಃಕಾಲೇ ಕೃತ್ವಾ ಗಚ್ಛ ಸ್ವಮಂದಿರಮ್।
ಇತ್ಯುಕ್ತ್ವಾ ಪ್ರಯಯೌ ರಾಜಾ ಹರ್ಷೇಣೈವ ಸಮನ್ವಿತಃ ॥೨೫॥

ಗೃಹಂ ಜಗಾಮ ತಚ್ಚಿತ್ತಃ ಕದಾ ಸಾಯಂ ಭವೇದಿತಿ ।
ಭಾನಾವಸ್ತಮಯೇ ಜಾತೇ ಸಪತ್ನೀಕಂ ದ್ವಿಜೋತ್ತಮಮ್ ।

---

ಧನುರ್ಮಾಸದ ಮಹಿಮೆಯನ್ನು ಹಾಗೂ ದಂಪತೀ ಭೋಜನ ಮುಂತಾದ ಧರ್ಮಗಳನ್ನು ಕೇಳಿದನು.

೨೨ ವಸ್ತ್ರಾಲಂಕಾರ ಮುಂತಾದವುಗಳನ್ನು ಬ್ರಾಹ್ಮಣನಿಗೆ ನೀಡಿದರೆ ಒದಗುವ ಪುಣ್ಯ ವಿಶೇಷವನ್ನು ರಾಜನು ಶ್ರದ್ಧೆಯಿಂದ ಕೇಳಿದನು. ಅಷ್ಟರಲ್ಲಿ ಅಲ್ಲಿಯೇ ಇದ್ದ ವಿಶಾಲವಾದ ಕಣ್ಣುಗಳಿಂದ, ವಿಸ್ತೃತ ನಿತಂಬ, ಉನ್ನತ ಪಯೋಧರಗಳಿಂದ ಕೂಡಿದ,

೨೩ ಸಿಂಹದಂತೆ ಚಿಕ್ಕದಾದ ನಡುವಿನಿಂದ ಶೋಭಿಸುವ ಆ ಬ್ರಾಹ್ಮಣನ ಪತ್ನಿಯನ್ನು ಕಂಡು ಮೋಹವಶನಾದನು. ಆದರಪೂರ್ವಕವಾಗಿ ಪತ್ನೀ ಸಹಿತನಾದ ಆ ನಾರಾಯಣನೆಂಬ ಬ್ರಾಹ್ಮಣನನ್ನು,

೨೪ ಹೇ ಬ್ರಾಹ್ಮಣಶ್ರೇಷ್ಠನೇ! ಈ ಧನುರ್ಮಾಸ ಪೂರ್ತಿ ನಿತ್ಯ ಒಬ್ಬ ಸಪತ್ನೀಕ ಬ್ರಾಹ್ಮಣೋತ್ತಮನನ್ನು ನನ್ನ ಅರಮನೆಯಲ್ಲಿ ಪೂಜಿಸಿ ಭೋಜನ ಮಾಡಿಸಬೇಕೆಂದು ಸಂಕಲ್ಪಿಸಿದ್ದೇನೆ.

೨೫ ಆದುದರಿಂದ ನಾಳೆಗೆ ನೀವು ದಂಪತಿಗಳು ಬರಬೇಕು. ಈ ರಾತ್ರಿ ಅಲ್ಲಿಯೇ ಮಲಗಬೇಕು. ಪ್ರಾತಃಕಾಲದಲ್ಲಿ ಭೋಜನವನ್ನು ಮುಗಿಸಿಕೊಂಡು ಮತ್ತೆ ತಮ್ಮ ಮನೆಗೆ ಹೊರಡಬಹುದು ಎಂದು ಪ್ರಾರ್ಥಿಸಿದನು. ಈ ರೀತಿಯಾಗಿ ಹೇಳಿದ ರಾಜನು ಸಂತೋಷದಿಂದ ಕೂಡಿಕೊಂಡು ಆ ಸ್ತ್ರೀಯ ರೂಪವನ್ನೇ ಚಿಂತಿಸುತ್ತಾ ಮನೆಗೆ ಹೋದನು.

**ಆಹ್ವಯಾಮಾಸ ದೂತೇನ ರಥಂ ದತ್ವಾ ಗೃಹಂ ಪ್ರತಿ ॥೨೬॥**

**ಬ್ರಾಹ್ಮಣಸ್ತು ತದಾ ದೃಷ್ಟ್ವಾ ರಾಜದೂತಂ ಸಮಾಗತಮ್ ।**
**ಜಗಾಮ ತ್ವರಯಾ ಬ್ರಹ್ಮನ್ ಭಾರ್ಯಯಾ ರಾಜಮಂದಿರಮ್ ॥೨೭॥**

**ವಿಪ್ರಂ ದೃಷ್ಟ್ವಾ ಸಪತ್ನೀಕಂ ತದಾ ರಾಜಾಽಬ್ರವೀದಿದಮ್ ।**
**ಪ್ರಾಸಾದೇ ಶಯನಂ ಕಾರ್ಯಂ ಸ್ತ್ರಿಯಾ ಸಹ ಮಹಾಮುನೇ ॥೨೮॥**

**ಇತ್ಯುಕ್ತೇ ಹ್ಯಾರುರೋಹಾಥ ಪ್ರಾಸಾದಂ ಸುಷ್ಠ್ವಲಂಕೃತಮ್ ।**
**ಸುಷ್ವಾಪ ಭಾರ್ಯಯಾ ಸಾಕಂ ಸ್ವೇಚ್ಛಯಾ ವಿಪ್ರಸತ್ತಮಃ ॥೨೯॥**

**ನಿಶಾಯಾಮುತ್ಥಿತೋ ರಾಜಾ ಬ್ರಾಹ್ಮಣ್ಯಾಂ ಕಾಮಕಾತರಃ**
**ಆಜಗಾಮ ಪಥೇ ಪಾದೇ ಸರ್ಪದಷ್ಟೋ ಯದೃಚ್ಛಯಾ ॥೩೦॥**

**ಯಮದೂತಾಸ್ತದಾಜಗ್ಮುಃ ವಿಷ್ಣುದೂತಾಸ್ತಥೈವ ಚ ।**
**ಯಮದೂತಾನ್ನಿರಾಕೃತ್ಯ ವಿಷ್ಣುದೂತಾಸ್ತದಾಽಬ್ರುವನ್ ॥೩೧॥**

---

೨೬ ಯಾವಾಗ ಸಾಯಂಕಾಲವಾದೀತು? ಯಾವಾಗ ಅವರು ಬರುತ್ತಾರೋ ಎಂದು ಚಿಂತಿಸುತ್ತಾ ಕುಳಿತನು. ಸೂರ್ಯಾಸ್ತವಾದ ಕೂಡಲೇ ಪತ್ನೀಸಮೇತ-ರಾದ ನಾರಾಯಣಾಚಾರ್ಯರನ್ನು ಕರೆತರಲು ದೂತನ ಕಡೆಯಿಂದ ರಥವನ್ನು ಆ ಬ್ರಾಹ್ಮಣನ ಮನೆಗೆ ಕಳಿಸಿದನು.

೨೭ ಬಂದಿರುವ ರಾಜದೂತನನ್ನು ಕಂಡು ಬ್ರಾಹ್ಮಣನು ಶೀಘ್ರವಾಗಿ ಭಾರ್ಯಾ-ಸಮೇತನಾಗಿ ರಾಜನ ಮನೆಗೆ ಹೊರಟನು.

೨೮ ತನ್ನ ಪತ್ನಿಯೊಡನೆ ಆಗಮಿಸಿದ ಬ್ರಾಹ್ಮಣನಿಗೆ ರಾಜನು ಹೇಳಿದನು. ಹೇ ಮಹಾಮುನಿಗಳೇ! ನನ್ನ ಈ ಅರಮನೆಯಲ್ಲಿ ತಾವು ಶಯನ ಮಾಡಬೇಕೆಂದು ಹೇಳಿದನು.

೨೯ ರಾಜನು ಹೀಗೆ ಹೇಳಲು ಉಪ್ಪರಿಗೆಯ ಮೇಲೆ ಪ್ರಜ್ವಲಿಸುತ್ತಿರುವ ಕೊಠಡಿಗೆ ನಡೆದನು. ಆ ಕೊಠಡಿಯಲ್ಲಿ ದಂಪತಿಗಳು ಸ್ವೇಚ್ಛೆಯಿಂದ ಮಲಗಿದರು.

೩೦ ರಾಜನು ಮಧ್ಯರಾತ್ರಿಯಲ್ಲಿಯೇ ಎದ್ದನು. ಬ್ರಾಹ್ಮಣಸ್ತ್ರೀಯನ್ನು ಸಂಗಮಿಸುವ ದುರುದ್ದೇಶ ಆ ರಾಜನಿಗೆ ಇತ್ತು . ಮೆಲ್ಲನೆ ಅವರು ಮಲಗಿದ್ದ ಕೊಠಡಿಯತ್ತ ನಡೆದನು. ಆದರೆ ಮಾರ್ಗದಲ್ಲಿ ದೈವೇಚ್ಛೆಯಿಂದ ಸರ್ಪವೊಂದರಿಂದ ಕಚ್ಚಲ್ಪಟ್ಟು ರಾಜನು ಮೃತನಾದನು.

೩೧ ಆಗ ಅವನನ್ನು ಯಮಲೋಕಕ್ಕೆ ಎಳೆದೊಯ್ಯಲು ಯಮದೂತರು ಹಾಗೂ ವಿಷ್ಣುಲೋಕಕ್ಕೆ ಕರೆದೊಯ್ಯಲು ವಿಷ್ಣುದೂತರು ಅಲ್ಲಿಗೆ ಆಗಮಿಸಿದರು.

**ಅನೇನ ಧನುಷೋ ಮಾಸೇ ಬ್ರಾಹ್ಮಣೇ ಚ ನಿಮಂತ್ರಿತೇ।**
**ತೇನ ಪುಣ್ಯಪ್ರಭಾವೇನ ವಿಷ್ಣುಲೋಕಮವಾಪ್ತವಾನ್ ॥೩೨॥**

**ಸಪತ್ನೀಕಂ ಬ್ರಾಹ್ಮಣಂ ತು ಏಕಂ ವಾ ಭೋಜಯೇತ್ತದಾ।**
**ತಸ್ಯ ಪುಣ್ಯಸ್ಯ ವಿಸ್ತಾರಂ ಕಃ ಶಕ್ತೋ ದಿವಿ ವಾ ಭುವಿ ॥೩೩॥**

**ಇತ್ಯುಕ್ತಾಃ ಪ್ರಯಯುರ್ದೂತಾ ವಿಷ್ಣುಲೋಕಮಕಲ್ಮಶಮ್**
**ತಸ್ಮಾಚ್ಚ ಧನುಷೋ ಮಾಸಃ ಸರ್ವಪುಣ್ಯಪ್ರದಾಯಕಃ ॥೩೪॥**

**॥ ಇತಿ ಶ್ರೀಪಂಚರಾತ್ರಾಗಮೇ ಬ್ರಹ್ಮಹಂಸಸಂವಾದೇ ಧನುರ್ಮಾಸಮಾಹಾತ್ಮ್ಯೇ ದ್ವಿತೀಯೋಽಧ್ಯಾಯಃ ॥**

★★★

---

ಯಮದೂತರನ್ನು ನಿವಾರಿಸಿ ವಿಷ್ಣುದೂತರು ಹೇಳಿದರು.

೩೨ ಯಮದೂತರೇ! ಈ ರಾಜನು ಧನುರ್ಮಾಸದಲ್ಲಿ ಭೋಜನಕ್ಕೆಂದು ಬ್ರಾಹ್ಮಣರನ್ನು ಆಮಂತ್ರಿಸಿದ್ದಾನೆ. ಈ ಮೂಲಕ ಬಹುಪುಣ್ಯವನ್ನು ಸಂಪಾದಿಸಿದ್ದಾನೆ. ಆ ಪುಣ್ಯಪ್ರಭಾವದಿಂದ ರಾಜನು ವಿಷ್ಣುಲೋಕವನ್ನು ಹೊಂದಲು ಅರ್ಹನಾಗಿದ್ದಾನೆ.

೩೩ ಯಾವನು ಧನುರ್ಮಾಸದಲ್ಲಿ ಸಪತ್ನೀಕನಾದ ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸುವನೋ, ಅವನ ಪುಣ್ಯದ ಮಿತಿಯನ್ನು ವರ್ಣಿಸಲು ಸ್ವರ್ಗದಲ್ಲಾಗಲೀ ಅಥವಾ ಭೂಲೋಕದಲ್ಲಾಗಲೀ ಯಾರು ಶಕ್ತರು? ಯಾರೂ ಶಕ್ತರಲ್ಲ.

೩೪ ಹೀಗೆಂದು ತಿಳಿಸುತ್ತ ವಿಷ್ಣುದೂತರು ಆ ರಾಜನನ್ನು ಪವಿತ್ರವಾದ ವಿಷ್ಣುಲೋಕಕ್ಕೆ ಕರೆದೊಯ್ದರು. ಆದುದರಿಂದ ಈ ಧನುರ್ಮಾಸವು ಬಹುಪುಣ್ಯಪ್ರದವೆನಿಸಿದೆ.

**॥ ಇಲ್ಲಿಗೆ ಎರಡನೇ ಅಧ್ಯಾಯವು ಮುಗಿಯಿತು ॥**

# ಅಥ ತೃತೀಯೋಽಧ್ಯಾಯಃ

**ಹಂಸ ಉವಾಚ-**

**ಕೋದಂಡಸ್ಥೇ ರವೌ ಬ್ರಹ್ಮನ್ ಪ್ರತ್ಯಬ್ದಂ ಪೂಜಯೇದ್ಧರಿಮ್ ।**
**ದ್ವಾದಶಾಬ್ದಫಲಂ ಚೈವ ದಿನೇನೈಕೇನ ಸಿದ್ಧ್ಯತಿ ॥೧॥**

**ಬ್ರಹ್ಮೋವಾಚ-**

**ಧನುರ್ಮಾಸೇ ಹರೇಃ ಪೂಜಾ ಕಥಂ ಕಾರ್ಯಾ ತು ದುರ್ಬಲೈಃ ।**
**ಏತದ್ವೇದಿತುಮಿಚ್ಛಾಮಿ ತದ್ವದಸ್ವ ಮಮ ಪ್ರಭೋ ॥೨॥**

**ಹಂಸ ಉವಾಚ-**

**ಯಥಾ ಯಥಾಶಕ್ತಿರಸ್ತಿ ತಥಾ ಕಾರ್ಯಾ ಸುರೋತ್ತಮ ।**
**ಆಲಸ್ಯಾದ್ಯದಿ ಲೋಭಾದ್ವಾ ನ ಕರೋತಿ ನರಾಧಮಃ ॥೩॥**

**ರೌರವಂ ನರಕಂ ಯಾತಿ ಯಾವದಿಂದ್ರಾಶ್ಚತುರ್ದಶ ।**
**ಆತ್ಮಹಾ ಸ ತು ವಿಜ್ಞೇಯೋ ದರಿದ್ರೋ ಹಿ ನ ಸಂಶಯಃ ॥೪॥**

**ಲಸಲ್ಲವಣಮಿಶ್ರಂ ಚ ಮರೀಚ್ಯಾದಿಸಮನ್ವಿತಮ್ ।**

---

೧ ಹಂಸನು ಹೇಳಿದನು. ಸೂರ್ಯನು ಧನೂರಾಶಿಯಲ್ಲಿರುವಾಗ ಪ್ರತಿವರ್ಷವೂ ಪ್ರಾತಃಕಾಲದಲ್ಲಿ ಶ್ರೀಹರಿಯ ಪೂಜೆಯನ್ನು ಮಾಡಬೇಕು. ಧನುರ್ಮಾಸದಲ್ಲಿ ವಿಹಿತವಾದ ಕಾಲಕ್ಕೆ ಒಂದು ದಿವಸ ಪೂಜೆ ಮಾಡಿದರೂ ೧೨ ವರ್ಷ ಪೂಜೆ ಮಾಡಿದ ಫಲವು ಲಭ್ಯವಾಗುತ್ತದೆ.

೨ ಬ್ರಹ್ಮದೇವರು ಕೇಳಿದರು. ಹೇ ದೇವೋತ್ತಮನೇ! ಧನುರ್ಮಾಸದಲ್ಲಿ ದುರ್ಬಲರು, ದರಿದ್ರರು ಹರಿಯ ಪೂಜೆಯನ್ನು ಮಾಡುವ ಬಗೆಯನ್ನು ತಿಳಿಸಿ ಅನುಗ್ರಹಿಸಬೇಕು.

೩ ಬ್ರಹ್ಮದೇವರ ಪ್ರಾರ್ಥನೆಗೆ ಓಗೊಟ್ಟು ಹಂಸನು ಹೇಳಲು ಉಪಕ್ರಮಿಸಿದನು. ಯಾರಿಗೆ ಎಷ್ಟು ಶಕ್ತಿ ಇದೆಯೋ ಅವರವರ ಶಕ್ತಿಗೆ ಅನುಗುಣವಾಗಿ ಶ್ರೀಹರಿಯ ಪೂಜೆಯನ್ನು ಮಾಡಬೇಕು. ಆಲಸ್ಯದಿಂದಾಗಲೀ ಲೋಭದಿಂದಾಗಲೀ ಧನುರ್ಮಾಸ ಪೂಜೆಯನ್ನು ಆಚರಿಸದ ನರಾಧಮನು,

೪ ಹದಿನಾಲ್ಕು ಇಂದ್ರರ ಕಾಲದ ವರೆಗೆ ರೌರವ ನರಕವನ್ನು ಹೊಂದುವನು. ಅಂಥವನು ಆತ್ಮಹತ್ಯೆ ಮಾಡಿಕೊಂಡಂತೆಯೇ ಸರಿ. ಅವನು ನಿಶ್ಚಿತವಾಗಿ ಈ ಜನ್ಮ ಮತ್ತು ಮುಂದಿನ ಜನ್ಮಗಳಲ್ಲಿ ದರಿದ್ರನೆನಿಸುವನು.

**ಆರ್ದ್ರನಾಗರಸಂಯುಕ್ತಂ ಹಿಂಗುಜೀರಕಸಂಯುತಮ್ ॥೫॥**

**ಯದ್ವಸ್ತು ಲಭ್ಯತೇ ಯೇನ ತದ್ದಾತವ್ಯಂ ದ್ವಿಜಾತಯೇ ।**
**ಯೇನೈವ ಸುಕೃತೀ ಲಬ್ಧ್ವಾ ವಿಷ್ಣುಲೋಕೇ ಮಹೀಯತೇ ॥೬॥**

**ಕೋಮಲೈಸ್ತಂಡುಲೈರ್ದಿವ್ಯೈಃ ಮುದ್ಗಾದ್ಯೈಶ್ಚ ವಿಮಿಶ್ರಿತಮ್ ।**
**ಪಾಕಾಂತೇ ಗೋಘೃತೈರ್ಯುಕ್ತಂ ಸರ್ವದ್ರವ್ಯೈಶ್ಚ ಸಂಯುತಮ್ ॥೭॥**

**ಗವ್ಯಂ ಚ ದಧಿಖಂಡಂ ಚ ನವನೀತಂ ಶುಭಪ್ರದಮ್ ।**
**ತಾಂಬೂಲೈಃ ಕೋಮಲೈರ್ದಿವ್ಯೈಃ ಫಲೈಃ ಪೂಗೈಶ್ಚ ಸಂಯುತಮ್ ॥೮॥**

**ದಕ್ಷಿಣಾಂ ಚ ತಥಾ ದತ್ತ್ವಾ ಹರಿಸ್ತುಷ್ಟೋ ಭವೇದಿತಿ ।**
**ಯದ್ಯಶಕ್ತೋ ನರೋ ಯಸ್ತು ಬ್ರಾಹ್ಮಣಾನಾಂ ತು ಭೋಜನೇ ॥೯॥**

**ಸರ್ವೋಪಸ್ಕರಸಂಯುಕ್ತಂ ತಂಡುಲಂ ಚ ನಿವೇದಯೇತ್ ।**
**ಏಕೈಕಂ ನವನೀತಾದಿ ಬ್ರಾಹ್ಮಣಾನಾಂ ತು ಯೋ ನರಃ ॥೧೦॥**

---

೫ ಶುದ್ಧವಾದ ಉಪ್ಪು, ಮೆಣಸು, ಹಸಿಶುಂಠಿ, ಇಂಗು ಮೊದಲಾದವುಗಳಿಂದ ಕೂಡಿದ ಪದಾರ್ಥವನ್ನಾಗಲೀ

೬ ಅಥವಾ ಇವುಗಳಲ್ಲಿ ಯಾವ ಪದಾರ್ಥಗಳು ದೊರೆಯುವುದೋ ಅದನ್ನಾಗಲೀ ಬ್ರಾಹ್ಮಣನಿಗೆ ದಾನ ಮಾಡಬೇಕು. ಇಂಥ ದಾನದಿಂದಲೇ ಪುಣ್ಯವಂತನು ವಿಷ್ಣುಲೋಕವನ್ನು ಹೊಂದುವನು.

೭ ಕೋಮಲವಾದ ಅಕ್ಕಿ, ಉತ್ತಮವಾದ ಹೆಸರು, ಮೆಣಸು, ಲವಂಗ ಮುಂತಾದವುಗಳಿಂದ ಕೂಡಿದ, ಬೇಯಿಸಿದ ಮೇಲೆ ಅನೇಕ ಪದಾರ್ಥಗಳು ಹಾಗೂ ಗೋವಿನ ತುಪ್ಪವನ್ನು ಸೇರಿಸಿದ

೮ ಗಟ್ಟಿಯಾದ ಕೆನೆ ಮೊಸರು, ಶುಭ್ರವಾದ, ಸುವಾಸನಾಯುಕ್ತವಾದ ಬೆಣ್ಣೆ ಹಾಗೂ ಇತರ ಪದಾರ್ಥಗಳನ್ನು ಶ್ರೀಹರಿಗೆ ಸಮರ್ಪಿಸಿ, ಕೋಮಲವಾದ ವೀಳ್ಯೆದೆಲೆ ಸಹಿತವಾದ ಅಡಿಕೆಯನ್ನು

೯ ಬ್ರಾಹ್ಮಣ ಭೋಜನದ ನಂತರ ಬ್ರಾಹ್ಮಣನಿಗೆ ನೀಡಿ ಶ್ರೀಹರಿಯು ಪ್ರೀತನಾಗಲಿ ಎಂದು ಪ್ರಾರ್ಥಿಸಬೇಕು. ಈ ರೀತಿ ಬ್ರಾಹ್ಮಣರ ಭೋಜನ ಮಾಡಿಸಲು ಅಶಕ್ತನಾದ ಮನುಷ್ಯನು,

೧೦ ಎಲ್ಲ ಪದಾರ್ಥಗಳಿಂದ ಕೂಡಿದ ಅಕ್ಕಿಯನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ಬೆಣ್ಣೆಯೇ ಮೊದಲಾದ ಒಂದೊಂದು ಪದಾರ್ಥಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದ ಮನುಜನು,

**ತೇನೈವ ಸರ್ವಪುಣ್ಯಾನಿ ಲಭತೇ ನಾತ್ರ ಸಂಶಯಃ ॥೧೧॥**

**ಚಾಪಸ್ಥೇ ಚ ಯದಾ ಭಾನೌ ತಂಡುಲಂ ಚ ಪ್ರಯಚ್ಛತಿ ।**
**ಪೂರ್ಣಾಯುಷ್ಯಮವಾಪ್ನೋತಿ ದುರಿತಂ ಚ ವಿನಶ್ಯತಿ ॥೧೨॥**

**ಮುದ್ಗಾನ್ನಂ ಚೈವ ವಿಪ್ರಾಯ ಮುರಾರೇಃ ಪ್ರೀತಿಕಾರಣಾತ್ ।**
**ಮುರಾರಿಲೋಕಮಾಪ್ನೋತಿ ಬ್ರಹ್ಮಹತ್ಯಾಕೃತೇऽಪಿ ಚ ॥೧೩॥**

**ನವನೀತಂ ಚ ಯೋ ದದ್ಯಾತ್ ಶ್ರೀಕೃಷ್ಣಪ್ರೀತಯೇ ಸದಾ ।**
**ಕೈಟಭಾರೇಃ ಪಾದಮೂಲಂ ಪ್ರಾಪ್ನೋತ್ಯೇವ ನ ಸಂಶಯಃ ॥೧೪॥**

**ದಧಿಖಂಡಂ ಚ ಯೋ ದದ್ಯಾತ್ ವೈಷ್ಣವಾಯ ದ್ವಿಜಾತಯೇ ।**
**ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಚ ಗಚ್ಛತಿ ॥೧೫॥**

**ಮಾಷಂ ತು ಯೋ ದ್ವಿಜೇಂದ್ರಾಯ ಗ್ರಹಪೀಡಾದಿನಾಶನಮ್ ।**
**ತಸ್ಮಾನ್ಮಾಷಂ ಪ್ರದಾತವ್ಯಂ ಧನುರ್ಮಾಸೇ ದ್ವಿಜೋತ್ತಮ ॥೧೬॥**

**ಗೋಘೃತಂ ಚೈವ ಯೋ ದದ್ಯಾತ್ ತಕ್ರಂ ತಾಪವಿನಾಶನಮ್ ।**
**ತೇನೈವ ಮೋಕ್ಷಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥೧೭॥**

---

೧೧ ಅದರಿಂದಲೇ ನಿಶ್ಚಿತವಾಗಿ ಸಕಲ ಪುಣ್ಯಗಳನ್ನು ಹೊಂದುವನು.

೧೨ ಧನುರ್ಮಾಸದಲ್ಲಿ ಅಕ್ಕಿಯನ್ನು ದಾನ ಮಾಡಿದವನು ಪೂರ್ಣಾಯುಷ್ಯವಂತನಾಗುವನು. ಅವನ ದುರಿತಗಳೆಲ್ಲ ನಾಶವಾಗುವವು.

೧೩ ಮುರಾರಿಯೆನಿಸಿದ ಶ್ರೀಕೃಷ್ಣನ ಪ್ರೀತ್ಯರ್ಥವಾಗಿ ಉತ್ತಮ ಬ್ರಾಹ್ಮಣನಿಗೆ ಮುದ್ಗಾನ್ನ (ಹುಗ್ಗಿ) ವನ್ನು ದಾನ ಮಾಡಿದವನು ಬ್ರಹ್ಮಹತ್ಯೆಯನ್ನು ಮಾಡಿದವನಾದರೂ ಮುರಾರಿಯ ಲೋಕವನ್ನು ಹೊಂದುವನು.

೧೪ ಹೇ ಪ್ರಿಯ ಪುತ್ರ ಬ್ರಹ್ಮನೇ ಶ್ರೀಕೃಷ್ಣನ ಪ್ರೀತಿಗೋಸುಗ ಬೆಣ್ಣೆಯನ್ನು ದಾನ ಮಾಡಿದವನು ಕೈಟಭನನ್ನು ಸಂಹರಿಸಿದ ಶ್ರೀಕೃಷ್ಣನ ಪಾದಮೂಲವನ್ನೇ ಹೊಂದುವನು.

೧೫ ವಿಷ್ಣುಭಕ್ತನಾದ ಬ್ರಾಹ್ಮಣನಿಗೆ ಗಟ್ಟಿಯಾದ ಮೊಸರನ್ನು ದಾನ ಮಾಡಿದವನು ಸರ್ವ ಪಾಪ ನಿರ್ಮುಕ್ತನೆನಿಸಿ ವಿಷ್ಣುಲೋಕವನ್ನು ಹೊಂದುವನು.

೧೬ ಗ್ರಹಗಳಿಂದ ಸೂಚಿತವಾದ ಪೀಡೆಗಳನ್ನೆಲ್ಲ ಪರಿಹರಿಸುವ ಉದ್ದನ್ನು ಬ್ರಾಹ್ಮಣನಿಗೆ ನೀಡಿದವನು ಅದರಿಂದಲೇ ಮುಕ್ತನೆನಿಸುವನು.

೧೭ ಹಸುವಿನ ತುಪ್ಪವನ್ನು ದಾನ ಮಾಡಿದವನು, ತಾಪನಾಶಕವಾದ ತಕ್ರವನ್ನು

**ಪೂಗೀಫಲಸಮಾಯುಕ್ತಂ ನಾಗವಲ್ಲೀದಲೈರ್ಯುತಮ್**
**ಕರ್ಪೂರಾಗರುಸಂಯುಕ್ತಂ ದದ್ಯಾತ್ತಾಂಬೂಲಮುತ್ತಮಮ್ ॥೧೮॥**

**ತಾವಲ್ಲಬ್ಧ್ವಾ ಯಶೋ ಧೈರ್ಯಂ ಶ್ರಿಯಮಾಪ್ನೋತಿ ಮಾನವಃ ।**
**ರೋಗೀದತ್ವಾನಿರೋಗೀಸ್ಯಾತ್ ನಿರೋಗೀಮೋಕ್ಷಮಾಪ್ನುಯಾತ್ ॥೧೯॥**

**ಚಾಪಸ್ಥೇ ಚ ಯದಾ ಭಾನೌ ಯೋ ದದ್ಯಾತ್ ಕಂಬಲಂ ದ್ವಿಜೇ ।**
**ಅಪಮೃತ್ಯೋಃ ಕಾಲಮೃತ್ಯೋಃ ಮುಕ್ತೋ ಭವತಿ ತತ್ಕ್ಷಣಾತ್ ॥೨೦॥**

**ವಸ್ತ್ರದಾನಂ ತು ಯೋ ದದ್ಯಾತ್ ಶೀತಾರ್ತಾಯ ದ್ವಿಜಾತಯೇ ।**
**ತಸ್ಯ ಪುಣ್ಯಫಲಂ ವಕ್ತುಂ ನಾಹಂ ಶಕ್ತೋಽಸ್ಮಿ ಮಾನದ ॥೨೧॥**

**ಊರ್ಣವಸ್ತ್ರಂ ತು ಯೋ ದದ್ಯಾತ್ ತತ್ವನಿಷ್ಠಾಯ ಧೀಮತೇ ।**
**ತಸ್ಯ ಪುಣ್ಯ ಫಲಂ ವಕ್ತುಂ ಕಃ ಶಕ್ತೋ ದಿವಿ ವಾ ಭುವಿ ॥೨೨॥**

**ತೂಬರೀಂ ಗುಡಸಂಯುಕ್ತಾಂ ವೃಷಭೋದ್ವಾಹಿತಾಂ ತಥಾ ।**
**ಅಪಮೃತ್ಯೋಃ ಕಾಲಮೃತ್ಯೋಃ ಮುಕ್ತೋ ಭವತಿ ತತ್ಕ್ಷಣಾತ್ ॥೨೩॥**

---

ಮಜ್ಜಿಗೆಯನ್ನು ದಾನಮಾಡಿವನು ಈ ದಾನಗಳಿಂದ ಪಾಪನಿರ್ಮುಕ್ತ-ನಾಗುತ್ತಾನೆ. ಈ ವಿಷಯದಲ್ಲಿ ಸಂದೇಹ ಇಲ್ಲ.

೧೮ ಅಡಿಕೆ, ಮೃದುವಾದ ವೀಳ್ಯದೆಲೆ, ಪಚ್ಚಕರ್ಪೂರ, ಅಗರು ಮುಂತಾದವುಗಳಿಂದ ಕೂಡಿದ ಉತ್ತಮವಾದ ತಾಂಬೂಲವನ್ನು ಬ್ರಾಹ್ಮಣನಿಗೆ ನೀಡಬೇಕು.

೧೯ ಆ ತಾಂಬೂಲ ದಾನದಿಂದಲೇ ಯಶಸ್ಸು, ಧೈರ್ಯ, ಸಂಪತ್ತುಗಳನ್ನು ಪಡೆಯುವನು. ರೋಗಿಯು ರೋಗಮುಕ್ತನಾದರೆ, ರೋಗರಹಿತನು ಮುಕ್ತನೆನಿಸುವನು.

೨೦ ಧನುರ್ಮಾಸದಲ್ಲಿ ಬ್ರಾಹ್ಮಣನಿಗೆ ಕಂಬಳಿಯನ್ನು ದಾನ ಮಾಡಿದವನು ಆ ಕ್ಷಣದಲ್ಲಿಯೇ ಅಪಮೃತ್ಯು ಹಾಗೂ ಕಾಲಮೃತ್ಯುವಿನ ಭಯದಿಂದ ಮುಕ್ತನಾಗುವನು.

೨೧ ಹೇ ಬ್ರಹ್ಮನೇ ಶೀತದಿಂದ ಪೀಡಿತನಾದ ಬ್ರಾಹ್ಮಣನಿಗೆ ವಸ್ತ್ರದಾನ ಮಾಡುವುದರಿಂದ ಒದಗುವ ಪುಣ್ಯಫಲವನ್ನು ಹೇಳಲು ಸಾಧ್ಯವಿಲ್ಲ.

೨೨ ವಿಷ್ಣುಭಕ್ತ ಬ್ರಾಹ್ಮಣನಿಗೆ ಉಣ್ಣೆಯ ವಸ್ತ್ರದಾನದಿಂದ ದೊರೆಯುವ ಪುಣ್ಯವನ್ನು ವರ್ಣಿಸಲು ಭೂಲೋಕದಲ್ಲಿಯ ದೇವಲೋಕದಲ್ಲಿಯ ಜನರಿಗೆ ಸಾಧ್ಯವಿಲ್ಲ.

೨೩ ಎತ್ತಿನ ಮೇಲೆ ಹೇರಿ ತಂದ ಬೇಳೆ, ಬೆಲ್ಲಗಳನ್ನು, ಬ್ರಾಹ್ಮಣನಿಗೆ ದಾನ ಮಾಡಿದವನು ಅಪಮೃತ್ಯುವನ್ನು, ಕಾಲಮೃತ್ಯುವನ್ನು ಜಯಿಸುವನು.

**ಕೂಷ್ಮಾಂಡದಾನಂ ಕುರ್ಯಾಚ್ಚ ಚಾಪಸ್ಥೇ ಭಾಸ್ಕರೇ ಸತಿ ।**
**ನ ತಸ್ಯ ಸಂತತೇರ್ಹಾನಿಃ ಜಾಯತೇ ಶತಪೌರುಷೀ ॥೨೪॥**

**ನಾರಿಕೇಲಫಲಂ ಚೈವ ವಿಪ್ರವರ್ಯಾಯ ಧೀಮತೇ ।**
**ಸಪ್ತಜನ್ಮ ಭವೇದ್ವಿಪ್ರೋ ಧನಾಢ್ಯೋ ವೇದಪಾರಗಃ ॥೨೫॥**

**ಕುಲೈಶ್ಚ ಸಪ್ತಭಿರ್ಯುಕ್ತೋ ಮೋದತೇ ವಿಷ್ಣುಮಂದಿರೇ ।**
**ತಸ್ಮಾದ್ದಾನಂ ಪ್ರಶಂಸಂತಿ ವಿಷ್ಣುಪ್ರೀತಿಕರಂ ಚ ಯತ್ ॥೨೬॥**

**॥ ಇತಿ ಶ್ರೀಪಂಚರಾತ್ರಾಗಮೇ ಬ್ರಹ್ಮಹಂಸಸಂವಾದೇ**
**ಧನುರ್ಮಾಸಮಾಹಾತ್ಮ್ಯೇ ತೃತೀಯೋऽಧ್ಯಾಯಃ ॥**

★★★

---

೨೪ ಧನುರ್ಮಾಸದಲ್ಲಿ ಕುಂಬಳಕಾಯಿಯನ್ನು ದಾನ ಮಾಡುವವನ ವಂಶವು ನೂರು ತಲೆಮಾರುಗಳ ವರೆಗೆ ಅಖಂಡವಾಗಿ ವೃದ್ಧಿಯಾಗುವುದು.

೨೫ ತೆಂಗಿನಕಾಯಿಯನ್ನು ಬ್ರಾಹ್ಮಣನಿಗೆ ದಾನ ಮಾಡಿದವನು ಏಳು ಜನ್ಮಗಳಲ್ಲಿ ಶ್ರೀಮಂತನೂ, ವಿದ್ವಾಂಸನೂ ಆಗುವನು.

೨೬ ಮರಣಾನಂತರ ತನ್ನ ಏಳು ಕುಲದ ಪಿತೃಗಳಿಂದ ಯುಕ್ತನಾಗಿ ವಿಷ್ಣುಲೋಕದಲ್ಲಿ ಸುಖವಾಗಿ ಇರುವನು. ಆದುದರಿಂದ ವಿಷ್ಣುಪ್ರೀತಿಕರವಾದ ದಾನಗಳನ್ನು ಜ್ಞಾನಿಗಳು ಪ್ರಶಂಸೆ ಮಾಡುವರು.

**॥ ಇಲ್ಲಿಗೆ ಮೂರನೇ ಅಧ್ಯಾಯವು ಮುಗಿಯಿತು ॥**

# ಅಥ ಚತುರ್ಥೋಽಧ್ಯಾಯಃ

ಬ್ರಹ್ಮೋವಾಚ-

ಹರೇಃ ಪ್ರೀತಿವಿಧಾನಾರ್ಥಂ ಬ್ರಾಹ್ಮಣಾನಾಂ ನಿಮಂತ್ರಣಮ್ ।
ಪೂರ್ವಸ್ಮಿನ್ನೇವ ಹಿ ದಿನೇ ಇತ್ಯುಕ್ತಂ ತು ಸುರೋತ್ತಮ ॥೧॥

ಅನುಕೂಲಂ ಗೃಹೇ ನಾಸ್ತಿ ಕಥಂ ಕಾರ್ಯಂ ದ್ವಿಜಾತಿಭಿಃ ।
ಏತದ್ ಬ್ರೂಹಿ ಮಹಾಭಾಗ ಸರ್ವಜ್ಞೋಽಸಿ ಸುರೋತ್ತಮ ॥೨॥

ಹಂಸ ಉವಾಚ-

ಬ್ರಾಹ್ಮಣಾನ್ ಗೃಹಮಾಹೂಯ ನಿಮಂತ್ರಯತಿ ಸತ್ತಮ ।
ತಸ್ಮಾಚ್ಚ ದ್ವಿಗುಣಂ ಪುಣ್ಯಂ ಗೃಹಂ ಗತ್ವಾ ನಿಮಂತ್ರಿತೇ ॥೩॥

ತದ್ವಚ್ಚ ಭೋಜನಂ ಜ್ಞೇಯಮಿತಿ ವಿದ್ಧಿ ಸುರೋತ್ತಮ ॥೪॥

ಪಾಕಂ ಕೃತ್ವಾ ಬ್ರಾಹ್ಮಣೇಭ್ಯೋ ದತ್ವಾ ಪುಣ್ಯಂ ಚ ಲಭ್ಯತೇ ।
ತತ್ಪುಣ್ಯಾತ್ ದ್ವಿಗುಣಂ ಪುಣ್ಯಂ ಸ್ವಯಂ ಪಾಕೇ ಕೃತೇ ಸತಿ ॥೫॥

ತಸ್ಮಾದಷ್ಟಗುಣಂ ಪುಣ್ಯಂ ಗೃಹಂ ಗತ್ವಾ ಸಮರ್ಪಿತಮ್ ।

---

೧ ಬ್ರಹ್ಮದೇವರು ಕೇಳಿದರು. ದೇವೋತ್ತಮನೇ ಶ್ರೀಹರಿಯೆನಿಸಿದ ನಿನ್ನ ಪ್ರೀತ್ಯರ್ಥವಾಗಿ ಹಿಂದಿನ ದಿನವೇ ಬ್ರಾಹ್ಮಣರನ್ನು ಭೋಜನಕ್ಕೆ ಆಮಂತ್ರಿಸಿ ಮರುದಿನ ಅವರಿಗೆ ಭೋಜನ ಮಾಡಿಸಬೇಕೆಂದು ತಿಳಿಸಿರುವೆ.

೨ ಆದರೆ, ಬ್ರಾಹ್ಮಣ ಭೋಜನವನ್ನು ಮಾಡಿಸಲು ಮನೆಯಲ್ಲಿ ಅನುಕೂಲತೆ ಯಿಲ್ಲದಿದ್ದರೆ ಬ್ರಾಹ್ಮಣರು ಧನುರ್ಮಾಸವನ್ನು ಹೇಗೆ ಆಚರಿಸಬೇಕೆಂಬುದನ್ನು ಸರ್ವಜ್ಞನಾದ ನೀನು ಹೇಳಬೇಕು.

೩ ಹಂಸರೂಪೀ ಭಗವಂತನು ಹೇಳಿದನು. ಧನುರ್ಮಾಸದಲ್ಲಿ ಬ್ರಾಹ್ಮಣರನ್ನು ತನ್ನ ಮನೆಗೆ ಕರೆದು ಆಮಂತ್ರಿಸುವುದಕ್ಕಿಂತ, ತಾನೇ ಬ್ರಾಹ್ಮಣರ ಮನೆಗೆ ಹೋಗಿ ಆಮಂತ್ರಿಸಿದರೆ ಎರಡರಷ್ಟು ಪುಣ್ಯವನ್ನು ಪಡೆಯುವನು.

೪ ಹೇ ದೇವಶ್ರೇಷ್ಠನಾದ ಬ್ರಹ್ಮನೇ ಬ್ರಾಹ್ಮಣರ ಭೋಜನ ವಿಷಯದಲ್ಲೂ ಹೀಗೇ ತಿಳಿಯಬೇಕು.

೫ ತಾನು ಪಾಕ ಮಾಡಿ ನೈವೇದ್ಯಾದಿಗಳ ನಂತರ ಬ್ರಾಹ್ಮಣರಿಗೆ ಸಮರ್ಪಿಸುವ ಪುಣ್ಯಕ್ಕಿಂತ ಎರಡು ಪಟ್ಟು ಪುಣ್ಯವು ಆ ಬ್ರಾಹ್ಮಣನು ಸ್ವಯಂಪಾಕ ಮಾಡಿಕೊಂಡರೆ ದೊರಕುವುದು.

ಅನ್ನಂ ದತ್ವಾ ದ್ವಿಜೇಂದ್ರಾಯ ಸರ್ವೋಪಸ್ಕರಸಂಯುತಮ್ ॥೬॥

ಭಕ್ತ್ಯಾ ಚ ತದ್‌ಗೃಹೇ ಭುಕ್ತ್ವಾ ಸರ್ವಪಾಪೈಃ ಪ್ರಮುಚ್ಯತೇ ।
ಮಹಾಪಾತಕಯುಕ್ತೋಽಪಿ ಗಚ್ಛೇದ್ವೈಷ್ಣವಮಂದಿರಮ್ ॥೭॥

ಯಾಚಯೇದ್ ವೈಷ್ಣವಸ್ಯಾನ್ನಂ ತದಭಾವೇ ಜಲಂ ಪಿಬೇತ್ ।
ಇತಿ ಜ್ಞಾತ್ವಾ ಹಿ ವಿಪ್ರೇಂದ್ರಂ ಸಪತ್ನೀಕಂ ದ್ವಿಜೋತ್ತಮಮ್ ॥೮॥

ಭೋಜಯಿತ್ವಾ ಗೃಹಂ ಗಚ್ಛೇತ್ಸ ಮುಕ್ತೋ ಭವತಿ ಧ್ರುವಮ್ ॥೯॥

ಭೋಜನಾತ್ ದ್ವಿಗುಣಂ ಪುಣ್ಯಂ ಸ್ವಯಂ ಪಾಕೇ ಕೃತೇ ದ್ವಿಜೇ ।
ತದೇತದ್ವಿಷಯೇ ಪ್ರೋಕ್ತಂ ಪೂರ್ವವೃತ್ತಂ ಕಥಾಂತರೇ ॥೧೦॥

ದ್ವಾಪರೇಽಥ ಯುಗೇ ಪೂರ್ವಂ ಪಾಂಡವಾ ಯಜ್ಞಮಾರಭನ್ ।
ಬ್ರಾಹ್ಮಣಾನಾಂ ಸಹಸ್ರಂ ತು ಪ್ರತ್ಯಹಂ ಭೋಜನಂ ಭವೇತ್ ॥೧೧॥

---

೬ ಇನ್ನು ತನ್ನ ಮನೆಯಲ್ಲಿ ಸಿದ್ಧಪಡಿಸಿದ ಶುದ್ಧವಾದ ಪದಾರ್ಥಗಳನ್ನು ಬ್ರಾಹ್ಮಣನ ಮನೆಗೇ ಹೋಗಿ ಸಮರ್ಪಿಸಿದರೆ ಅದಕ್ಕಿಂತ ಎಂಟುಪಟ್ಟು ಅಧಿಕವಾದ ಪುಣ್ಯವನ್ನು ಸಂಪಾದಿಸುವನು.

೭ ಸರ್ವರೀತಿಯ ಪದಾರ್ಥಯುಕ್ತವಾದ ಅನ್ನವನ್ನು ಬ್ರಾಹ್ಮಣನಿಗೆ ಸಮರ್ಪಿಸಿ ಭುಕ್ತಶೇಷವನ್ನು ಅವನ ಮನೆಯಲ್ಲಿಯೇ ಭುಂಜಿಸುವವನ ಎಲ್ಲ ಪಾಪಗಳು ನಾಶವಾಗುವವು. ಹೀಗೆ ಮಾಡಿದವನು ಮಹಾಪಾತಕಿಯಾಗಿದ್ದರೂ ವಿಷ್ಣುಲೋಕವನ್ನು ಹೊಂದುವನು.

೮ ಯಾವಾಗಲೂ ವಿಷ್ಣುಭಕ್ತರ ಮನೆಯ ಅನ್ನವನ್ನೇ ಯಾಚಿಸಿ ಭೋಜನ ಮಾಡಬೇಕು. ಅನ್ನವು ಸಿಗದಿದ್ದರೆ ನೀರನ್ನು ಕುಡಿಯಬೇಕು. ಹೀಗೆಂದು ತಿಳಿದು ಬ್ರಾಹ್ಮಣ ದಂಪತಿಗಳಿಗೆ ಅವರ ಮನೆಯಲ್ಲೇ ಭೋಜನ ಮಾಡಿಸಿ ಬಂದು,

೯ ತನ್ನ ಮನೆಯಲ್ಲಿ ಊಟ ಮಾಡಿದವನೂ ಮುಂದೆ ನಿಶ್ಚಿತವಾಗಿ ಮೋಕ್ಷ ಪಡೆಯುವನು.

೧೦ ಇನ್ನು ಬ್ರಾಹ್ಮಣನು ತಾನೇ ಅಡಿಗೆ ಮಾಡಿಕೊಂಡು ಭೋಜನ ಮಾಡಿದರೆ ಯಜಮಾನನು ಎರಡರಷ್ಟು ಅಧಿಕ ಪುಣ್ಯವನ್ನು ಹೊಂದುವನು. ಈ ವಿಷಯಗಳಲ್ಲಿ ಕಥಾಂತರದಲ್ಲಿ ಹೇಳಲ್ಪಟ್ಟ ಒಂದು ಪುರಾತನ ವೃತ್ತಾಂತವನ್ನು ಹೇಳುವೆನು ಕೇಳು.

೧೧ ಹಿಂದೆ ದ್ವಾಪರಯುಗದಲ್ಲಿ ಪಾಂಡವರು ಒಂದು ಯಜ್ಞವನ್ನಾರಂಭಿಸಿದರು.

ಏಕಸ್ಮಿನ್ನೇವ ಹಿ ದಿನೇ ಮಧ್ಯಾಹ್ನಸಮಯೇ ದ್ವಿಜಃ ।
ಅನ್ನಾರ್ಥೀ ಬ್ರಾಹ್ಮಣಃ ಕಶ್ಚಿದ್ರಾಜಾನಂ ಸಮುಪಾಗಮತ್ ॥೧೨॥

ಆಶೀರ್ವಚನಮುಕ್ತ್ವಾ ತು ಅನ್ನಂ ದೇಹಿತ್ಯುವಾಚ ತಮ್ ।
ಶ್ರುತ್ವಾ ತದಾಬ್ರವೀದ್ವಾಕ್ಯಂ ಸ್ನಾತ್ವಾಽಽಗಚ್ಛ ದ್ವಿಜೋತ್ತಮ ॥೧೩॥

ಇತ್ಯುಕ್ತೇ ಚ ತದಾ ವಿಪ್ರೋ ಸ್ವಯಂಪಾಕೀ ತ್ವಹಂ ತ್ವಿತಿ ।
ಇತ್ಯುಕ್ತೇ ಪ್ರಾಹಸತ್ ರಾಜಾ ಪಾಕೋ ನೈವ ದ್ವಿಜೋತ್ತಮ ॥೧೪॥

ದ್ರೌಪದೀ ಪಾಕಕರ್ತ್ರೀ ಚ ಭೀಮಸ್ತು ಪರಿವೇಷತಿ ।
ಬ್ರಾಹ್ಮಣಾನಾಂ ಪೂಜನಂ ತು ಅಹಂ ಕರ್ತಾ ದ್ವಿಜೋತ್ತಮ ॥೧೫॥

ತಸ್ಮಾನ್ಮಮ ಗೃಹೇ ವಿಪ್ರ ಸ್ಥಲಂ ಚೈವ ನ ವಿದ್ಯತೇ ।
ಇತ್ಯುಕ್ತೇ ಧರ್ಮರಾಜೇ ತು ತೂಷ್ಣೀಂ ಸ್ಥಿತ್ವಾ ಮುಹೂರ್ತಕಮ್ ॥೧೬॥

ತಸ್ಮಿನ್ನೇವ ಕಾಲೇ ತು ಕೃಷ್ಣೋಽಭ್ಯೇತ್ಯ ನೃಪಾಂತಿಕಮ್ ।

---

ಆ ಯಜ್ಞದ ಅಂಗವಾಗಿ ಪ್ರತಿದಿನ ಸಾವಿರಾರು ಬ್ರಾಹ್ಮಣರ ಭೋಜನವಾಗುತ್ತಿತ್ತು.

೧೨ ಹೀಗೆ ಯಜ್ಞವು ನಡೆಯುತ್ತಿರಲು, ಒಂದು ದಿನ ಮಧ್ಯಾಹ್ನದ ಸಮಯಕ್ಕೆ ಓರ್ವ ಬ್ರಾಹ್ಮಣನು ಅನ್ನವನ್ನು ಅಪೇಕ್ಷಿಸಿ ಧರ್ಮರಾಜನ ಅರಮನೆಗೆ ಆಗಮಿಸಿದನು.

೧೩ ಧರ್ಮರಾಜನನ್ನು ಕಂಡು ಅನ್ನವನ್ನು ಯಾಚಿಸಿದನು. ಧರ್ಮರಾಜನು ಭೋಜನಕ್ಕಾಗಿ ಸ್ನಾನ ಮಾಡಿ ಬರುವಂತೆ ತಿಳಿಸಿದನು.

೧೪ ಆಗ ಆ ಬ್ರಾಹ್ಮಣನು ನಾನು ಸ್ವಯಂಪಾಕಿಯಾಗಿರುವೆನು. ಆದುದರಿಂದ ಸ್ವಲ್ಪ ಸ್ಥಳವನ್ನು ನೀಡಿದರೆ ನಾನೇ ಅಡಿಗೆ ಮಾಡಿಕೊಳ್ಳುವೆನೆಂದನು. ಬ್ರಾಹ್ಮಣನ ಮಾತುಗಳನ್ನು ಕೇಳಿ ಧರ್ಮರಾಜನು ಗಟ್ಟಿಯಾಗಿ ನಕ್ಕು ಹೇ ಬ್ರಾಹ್ಮಣೋತ್ತಮನೇ ಈಗಂತೂ ಅಡಿಗೆ ಮಾಡಿಕೊಳ್ಳಲು ಸಾಧ್ಯವಿಲ್ಲ.

೧೫ ನನ್ನ ಮನೆಯಲ್ಲಿ ದ್ರೌಪದಿಯು ಅಡಿಗೆ ಮಾಡಿದರೆ, ಭೀಮಸೇನನು ಬಡಿಸುವನು. ನಾನು ಬ್ರಾಹ್ಮಣರ ಪೂಜೆಯನ್ನು ಮಾಡುತ್ತೇನೆ ಎಂದು ಹೇಳುವೆನು.

೧೬ ಆದುದರಿಂದ ಹೇ ಬ್ರಾಹ್ಮಣನೇ ನನ್ನ ಮನೆಯಲ್ಲಿ ಭೋಜನ ಮಾಡಲು ಯಾವುದೇ ಸಂದೇಹ ಬೇಡ ಎಂದನು. ಧರ್ಮರಾಜನು ಹೀಗೆ ಹೇಳಲು ಆ ಬ್ರಾಹ್ಮಣನು ಒಂದು ಮುಹೂರ್ತದವರೆಗೆ ಸುಮ್ಮನೆ ನಿಂತನು.

**ಅಬ್ರವೀತ್ ಯಾದವಶ್ರೇಷ್ಠೋ ಕಸ್ಮಾದೇಷಸ್ತವಾಂತಿಕೇ ॥೧೭॥**

**ರಾಜಾ ತದಾಬ್ರವೀತ್ ಕೃಷ್ಣಂ ಸ್ವಯಂ ಪಾಕಂ ಕರೋಮ್ಯಹಮ್ ।**
**ಇತ್ಯುಚ್ಯತೇ ತದ್ವಿಪ್ರೇಣ ಸ್ಥಲಂ ಚೈವ ನ ವಿದ್ಯತೇ ॥೧೮॥**

**ಇತ್ಯುಕ್ತವಂತಂ ರಾಜಾನಮೂಚೇ ಕೃಷ್ಣೋ ಜಗದ್ಗುರುಃ ।**
**ಏವಂ ಚೇತ್ತರ್ಹಿ ರಾಜೇಂದ್ರ ಆಜ್ಞಾಂ ದೇಹಿ ದ್ವಿಜೋತ್ತಮಮ್ ॥೧೯॥**

**ಶಕ್ತಿರ್ನಾಸ್ತಿ ಸುಖಂ ಗಚ್ಛ ಇತಿ ವಕ್ತುಂ ನ ಶಕ್ಯತೇ ।**
**ಇತ್ಯುಕ್ತಂ ಧರ್ಮರಾಜಾನಂ ತದಾ ಕೃಷ್ಣೋಽಬ್ರವೀದಿದಮ್ ॥೨೦॥**

**ಭೋಜನಸ್ಯ ಸ್ಥಲಂ ವಿಪ್ರ ಸ್ವಯಂ ಪಾಕಂ ಕುರುಷ್ವಥ ।**
**ತಥಾಸ್ತ್ವಿತ್ಯಬ್ರವೀದ್ರಾಜಾ ಬ್ರಾಹ್ಮಣೋ ಹರ್ಷಮಾಗತಃ ॥೨೧॥**

**ಸ್ವಯಂ ಪಾಕಂ ಚ ಕೃತ್ವಾ ತು ಸರ್ವೋಪಸ್ಕರಸಂಯುತಮ್ ।**
**ವಿಪ್ರೈಃ ಸಾಕಂ ತದಾ ವಿಪ್ರೋ ಭುಕ್ತವಾನ್ ರಾಜಮಂದಿರೇ ॥೨೨॥**

---

೧೭ ಅದೇ ಸಮಯದಲ್ಲಿ ಶ್ರೀಕೃಷ್ಣನು ಧರ್ಮರಾಜನ ಸನಿಹ ಬಂದು ಈ ಬ್ರಾಹ್ಮಣನು ಹೀಗೇಕೆ ನಿನ್ನೆದುರು ನಿಂತುಕೊಂಡಿರುವನು ಎಂದು ಕೇಳಿದನು.

೧೮ ಆಗ ಧರ್ಮರಾಜನು ಶ್ರೀಕೃಷ್ಣನೇ! ಈ ಬ್ರಾಹ್ಮಣನು ಸ್ವಯಂ ಪಾಕ ಮಾಡಿಕೊಳ್ಳುವುದಾಗಿ ಹೇಳುತ್ತಿದ್ದಾನೆ. ಆದರೆ ಅರಮನೆಯಲ್ಲಿ ಅಡುಗೆಗೆ ಸ್ಥಳವಿಲ್ಲ ಎಂದನು.

೧೯ ಧರ್ಮರಾಜನು ಹೀಗೆ ಹೇಳಲು ಜಗದ್ಗುರು ಶ್ರೀಕೃಷ್ಣನು ಹಾಗಾದರೆ ಆ ಬ್ರಾಹ್ಮಣನಿಗೆ ಭೋಜನ ಮಾಡಿಸಲು ಶಕ್ತಿ ಇಲ್ಲ. ಆದುದರಿಂದ ಬೇರೆಡೆಗೆ ಹೋಗೆಂದು ತಿಳಿಸು ಎಂದನು.

೨೦ ಕೃಷ್ಣನ ಮಾತುಗಳನ್ನು ಕೇಳಿದ ಧರ್ಮರಾಜನು ಶ್ರೀಹರಿಯೇ ನನಗೆ ಶಕ್ತಿ ಇಲ್ಲ, ಮುಂದಕ್ಕೆ ಹೋಗು ಎಂದು ಹೇಳಲು ಸಾಧ್ಯವಿಲ್ಲವೆಂದನು. ಹೀಗೆಂದ ಧರ್ಮರಾಜನಿಗೆ ಶ್ರೀಕೃಷ್ಣನು ಹೇಳಿದನು.

೨೧ ಹಾಗಾದರೆ ಆ ಬ್ರಾಹ್ಮಣನಿಗೆ ಸ್ಥಳವನ್ನು ನೀಡೆಂದನು. ಆಗ ಧರ್ಮರಾಜನು ಬ್ರಾಹ್ಮಣಶ್ರೇಷ್ಠನೇ ನಿಮಗೆ ಸ್ವಯಂ ಪಾಕಕ್ಕೆ ಜಾಗ ಹಾಗೂ ಪದಾರ್ಥಗಳ ವ್ಯವಸ್ಥೆ ಮಾಡಲಾಗುವುದು. ನೀವು ಪಾಕ ಮಾಡಿಕೊಂಡು ಭೋಜನ ಮಾಡಿರಿ ಎಂದನು. ಧರ್ಮರಾಜನ ಮಾತುಗಳನ್ನು ಕೇಳಿದ ಬ್ರಾಹ್ಮಣನು ಹರ್ಷಭರಿತನಾದನು.

೨೨ ಆ ಬ್ರಾಹ್ಮಣನು ಧರ್ಮರಾಜನ ಮನೆಯಲ್ಲಿ ಎಲ್ಲ ವ್ಯಂಜನಗಳಿಂದ ಕೂಡಿದ

ಈ ಶ್ಲೋಕಗಳು ಹಸ್ತಪ್ರತಿಯಲ್ಲಿ ಅಧಿಕವಾಗಿವೆ.

(ರಾಜಾನಂ ಚ ಸಮಾಹೂಯ ತ್ಯಕ್ತಂ ಕುರು ಮಹಾಮತೇ ।
ಅಂಜಲ್ಯುದಕಮಾದಾಯ ಕೃಷ್ಣಾರ್ಪಣಮಿತೀರಯನ್ ॥

ಬ್ರಾಹ್ಮಣಸ್ಯ ತದಾ ಪಾತ್ರೇ ಕೃಷ್ಣರೂಪೀ ಹರಿಃ ಸ್ವಯಮ್ ।
ತದನ್ನಂ ಸ್ಪೃಷ್ಟವಾನ್ ಹಸ್ತೇ ಬ್ರಾಹ್ಮಣೋ ದೃಷ್ಟವಾನ್ ತದಾ ॥

ಗೋಪಾಲರೂಪಿಣಂ ವಿಷ್ಣುಂ ಗೋಪಪುತ್ರೇತಿ ಶಂಕಿತಃ ।
ವಿಹಾಯ ಭೋಜನಂ ಪಾತ್ರಂ ತತ್ರೈವೋತ್ಥಿತವಾನ್ ದ್ವಿಜಃ ॥

ಯುಧಿಷ್ಠಿರಸ್ತದಾ ದೃಷ್ಟ್ವಾ ಪುನಃ ಪಾಕಮಕಾರಯತ್ ।
ಕೃತೇತ್ಯುಕ್ತೇ ಪುನಶ್ಚೈವ ಸ್ಪೃಷ್ಟವಾನ್ ಮಧುಸೂದನಃ ॥

ಏವಂ ಪಾತ್ರಸಹಸ್ರೇಷು ಭುಕ್ತವಾನ್ ಸ ಹರಿಃ ಸ್ವಯಮ್ ।
ಸಮಾಪ್ತಿಮಗಮತ್ತತ್ರ ಕೃಷ್ಣೋಽಪ್ಯಾಹ ತದಾ ನೃಪಮ್ ॥

ತೃಪ್ತೋಽಸ್ಮಿ ತವ ದಾನೇನ ಅನ್ನತಾಂಬೂಲದಕ್ಷಿಣೈಃ ।
ಏತದಾಶ್ಚರ್ಯಂ ಮನ್ವಾನಃ ಸ್ವಯಂ ಪಾಕೇ ಮಹಾಫಲಮ್ ॥)

**ಏಕಪಾತ್ರಂ ವಿಹಾಯಾಶು ಸರ್ವಾಣ್ಯುದ್ಧೃತವಾನ್ ವಿಭುಃ ।**
**ವಿಹಾಪಯಾಮಾಸ ಭಗವಾನ್ ಏಕಪಾತ್ರಂ ವಿಹಾಯ ಚ ॥೨೩॥**

**ರಾಜಾ ತದಾಽಬ್ರವೀತ್ ಕೃಷ್ಣಂ ಕಥಮೇತತ್ ವಿಹಾಯ ಚ ।**
**ಇತ್ಯುಕ್ತವಂತಂ ರಾಜಾನಂ ವಿಸ್ಮೃತೋಽಸ್ಮಿ ಮಹಾಮತೇ ॥೨೪॥**

**ಸ್ವಯಂ ನಿರ್ವಾಹಮಕರೋತ್ ರಾಜಾ ದೃಷ್ಟ್ವಾ ಮಹಾದ್ಭುತಮ್ ।**
**ಪಾತ್ರಾಣ್ಯಾನಂತ್ಯಮಗಮನ್ ಸಹಸ್ರಂ ಚ ಯದಾಭವತ್ ॥೨೫॥**

---

ವಿವಿಧ ಪದಾರ್ಥಗಳನ್ನು ಸಿದ್ಧಪಡಿಸಿ ಅನೇಕ ಬ್ರಾಹ್ಮಣರೊಂದಿಗೆ ಭೋಜನ ಮಾಡಿದನು.

೨೩ ಬ್ರಾಹ್ಮಣರ ಭೋಜನದ ನಂತರ ಶ್ರೀಕೃಷ್ಣನು ಆ ಬ್ರಾಹ್ಮಣನ ಊಟದ ಎಲೆಯೊಂದನ್ನು ಬಿಟ್ಟು ಬೇರೆಲ್ಲ ಎಂಜಲು ಎಲೆಗಳನ್ನು ತಾನೇ ಎತ್ತಿ ಹೊರಗೆ ಚೆಲ್ಲಿ ಸ್ಥಳ ಶುದ್ಧಿ ಮಾಡಿದನು.

೨೪ ಇದನ್ನು ಕಂಡು ವಿಸ್ಮಿತನಾದ ಧರ್ಮರಾಜನು ಅದೊಂದೇ ಎಲೆಯನ್ನು ಬಿಟ್ಟಿದ್ದೇಕೆ? ಎಂದು ಪ್ರಶ್ನಿಸಲು ಶ್ರೀಕೃಷ್ಣನು ಅದು ಮರೆತು ಹೋಯಿತೆಂದನು.

೨೫ ಆಗ ಧರ್ಮರಾಜನು ಆ ಎಲೆಯನ್ನು ತಾನೇ ತೆಗೆಯಲು ಮುಂದಾದನು. ಆಗ

ಸಮಾಪ್ತಿರ್ನ ಭವೇತ್ತತ್ರ ಕೃಷ್ಣೋಽಪ್ಯಯಂ ತದಾ ನೃಪಃ ।
ಏತದಾಶ್ಚರ್ಯಂ ಮನ್ವಾನಃ ಸ್ವಯಂಪಾಕಂ ಮಹಾಫಲಮ್ ॥೨೬॥

ಪೃಥಕ್ ವೈಶ್ವದೇವಕರಣಂ ದೇವಾನಾಂ ತುಷ್ಟಿದಾಯಕಮ್ ।
ಸ್ವಯಂಪಾಕಂ ವಿಶಿಷ್ಟಂ ಹಿ ಕೃತಂ ಚ ಚತುರಾನನ ॥೨೭॥

ದಾನಂ ದದ್ಯಾತ್ ದ್ವಿಜೇಂದ್ರಾಯ ಕೂಷ್ಮಾಂಡಂ ಬ್ರಹ್ಮನಿರ್ಮಿತಮ್ ।
ಕೂಷ್ಮಾಂಡಸ್ಯ ಪ್ರದಾನೇನ ಸಂತತಿರ್ವರ್ಧತೇ ಸದಾ ॥೨೮॥

ಧನುರ್ಮಾಸಸ್ಯ ಮಹಾತ್ಮ್ಯಂ ಶ್ರುತ್ವಾ ಮೋಕ್ಷಮವಾಪ್ನುಯಾತ್ ॥೨೯॥

॥ ಇತಿ ಶ್ರೀಪಂಚರಾತ್ರಾಗಮೇ ಬ್ರಹ್ಮ ಹಂಸಸಂವಾದೇ
ಧನುರ್ಮಾಸ ಮಾಹಾತ್ಮ್ಯೇ ಚತುರ್ಥೋಽಧ್ಯಾಯಃ ॥
॥ ಸಮಾಪ್ತೋಽಯಂ ಗ್ರಂಥಃ ॥

---

ಅಲ್ಲೊಂದು ಅದ್ಭುತ ನಡೆಯಿತು. ಆ ಒಂದು ಎಲೆ ತೆಗೆದಂತೆ ಅಲ್ಲಿ ಮತ್ತೊಂದು ಎಲೆ ಹೀಗೆ ಸಾವಿರಾರು ಎಲೆಗಳು ಅಲ್ಲಿ ತೋರಿದವು.

೨೬ ಎಷ್ಟು ತೆಗೆದರೂ ಎಲೆಗಳು ಮುಗಿಯದಿರುವುದನ್ನು ಕಂಡು ಧರ್ಮರಾಜನು ಆಶ್ಚರ್ಯಚಕಿತನಾಗಿ ಆ ಬ್ರಾಹ್ಮಣನು ಸ್ವಯಂ ಶ್ರೀಕೃಷ್ಣನೇ ಎಂದು ತೀರ್ಮಾನಿಸಿದನು ಹಾಗೂ ಸ್ವಯಂ ಪಾಕದ ಶ್ರೇಷ್ಠ ಮಹಿಮೆಯನ್ನು ಮನಗಂಡನು.

೨೭ ಸ್ವಯಂಪಾಕ ಮಾಡಿ ಪ್ರತ್ಯೇಕ ವೈಶ್ವದೇವ ಮಾಡುವುದು ದೇವತೆಗಳಿಗೆ ಪ್ರಿಯವೆಂದು ಧರ್ಮರಾಜನು ಮನಗಂಡನು. ನಾಲ್ಮೊಗದ ಬ್ರಹ್ಮನೇ ಧನುರ್ಮಾಸದ ಹಾಗೂ ಸ್ವಯಂಪಾಕದ ಮಹಿಮೆಯು ಈ ರೀತಿಯಾಗಿದೆ.

೨೮ ಸತ್ಪಾತ್ರನಾದ ಬ್ರಾಹ್ಮಣನಿಗೆ ಕೂಷ್ಮಾಂಡ (ಕುಂಬಳಕಾಯಿ) ವನ್ನು ದಾನ ಮಾಡಬೇಕು. ಕೂಷ್ಮಾಂಡ ದಾನದಿಂದ ಸದಾಕಾಲ ಸಂತತಿಯು ವರ್ಧಿಸುವದು.

೨೯ ಶ್ರೇಷ್ಠವಾದ ಧನುರ್ಮಾಸದ ಮಹಿಮೆಯನ್ನು ಭಕ್ತಿಯಿಂದ ಕೇಳಿದವರು ಇಹಲೋಕದಲ್ಲಿ ಸುಖಿಗಳಾಗಿ ಕೊನೆಗೆ ಮೋಕ್ಷವನ್ನು ಹೊಂದುವರು.

॥ ಇಲ್ಲಿಗೆ ನಾಲ್ಕನೇ ಅಧ್ಯಾಯವು ಮುಗಿಯಿತು ॥

# ಮೊದಲನೇ ಅಧ್ಯಾಯ

ಶೌನಕರು ಸೂತರನ್ನು ಕೇಳಿದರು. ಸೂತಾಚಾರ್ಯರೇ ತಾವು ಮಹಾಭಾಗ್ಯಸಂಪನ್ನರಾಗಿರುವಿರು. ತಾವು ಎಲ್ಲ ಶಾಸ್ತ್ರಗಳನ್ನರಿತವರು. ಭಗವಾನ್ ವೇದವ್ಯಾಸರ ಅನುಗ್ರಹದಿಂದ ಎಲ್ಲ ಪುರಾಣಗಳನ್ನು ತಿಳಿದವರು. ನಿಮ್ಮ ಮುಖದಿಂದ ಎಲ್ಲ ಮಾಸಗಳ ಮಹಿಮೆಗಳನ್ನು ಕೇಳಿ ತಿಳಿದಿದ್ದೇವೆ. ಇದೀಗ ನಾವು ಶ್ರೇಷ್ಠವಾದ ಧನುರ್ಮಾಸದ ಮಹಾತ್ಮೆಯನ್ನು ಕೇಳಲು ಇಚ್ಛಿಸಿರುವೆವು.

ಮಾರ್ಗಶೀರ್ಷ ಮಾಸದಲ್ಲಿ ಬರುವ ಈ ಧನುರ್ಮಾಸದ ಮಹಿಮೆಯು ಅತಿಶ್ರೇಷ್ಠವಾಗಿದೆಯೆಂದು ಕೇಳಿದ್ದೇವೆ. ಮಹಾಜ್ಞಾನಿಗಳೇ! ಧನುರ್ಮಾಸದಲ್ಲಿ ಶ್ರೀಹರಿಯನ್ನು ಹೇಗೆ ಪೂಜಿಸಬೇಕು? ಯಾವ ಯಾವ ದ್ರವ್ಯಗಳಿಂದ ಪೂಜಿಸಬೇಕು? ಎಂಬುದನ್ನು ತಿಳಿಯಲು ಉತ್ಸುಕರಾಗಿದ್ದೇವೆ. ದಯಮಾಡಿ ಎಲ್ಲವನ್ನು ತಿಳಿಸಿರಿ. ಎಂದು ಪ್ರಾರ್ಥಿಸಿದರು.

ಅವರ ಪ್ರಾರ್ಥನೆಯಂತೆ ಸೂತರು ಹೇಳಲು ಉಪಕ್ರಮಿಸಿದರು. ಹೇ ಶೌನಕ ಮುನಿಗಳೇ! ಧನುರ್ಮಾಸದಲ್ಲಿ ಪರಮಾತ್ಮನ ಪೂಜೆಯ ವಿಧಾನವನ್ನು ನನ್ನಿಂದ ತಿಳಿಯಲು ನೀವೆಲ್ಲರೂ ಬಯಸಿರುವಿರಿ. ಆದ್ದರಿಂದ ಆ ವಿಷಯವನ್ನು ಹೇಳಲು ತೊಡಗುವ ನಾನು ನಿಜವಾಗಿಯೂ ಧನ್ಯನಾಗಿರುವೆನು.

ಹರಿಯೆಂದು ಸ್ಮರಿಸುವುದರಿಂದಲೇ ಎಲ್ಲ ಪಾಪಗಳು ನಷ್ಟವಾಗುತ್ತವೆ.ಅಂಥ ಪರಮಾತ್ಮನಲ್ಲಿಯ ಭಕ್ತಿಯಿಂದ ಪೂಜಾದಿರೂಪವಾದ ಧರ್ಮಗಳನ್ನು ಆಚರಿಸಿದವನು ನಿಶ್ಚಿತವಾಗಿಯೂ ಪಾಪವಿದೂರನಾಗದಿರಲು ಸಾಧ್ಯವಿದೆಯೇ? ಶ್ರೀಹರಿಯನ್ನು ಶ್ರದ್ಧೆಯಿಂದ ಪೂಜಿಸಿದವನು ನಿಶ್ಚಿತವಾಗಿಯೂ ಪಾಪಗಳಿಂದ ನಿರ್ಮುಕ್ತನಾಗುತ್ತಾನೆ. ಆದುದರಿಂದ ಮನುಜರೆಲ್ಲ ಸದಾಕಾಲ ಶ್ರೀಹರಿಯ ಸೇವಾರೂಪವಾಗಿ ಎಲ್ಲ ಕಾರ್ಯಗಳನ್ನು ಆಚರಿಸಬೇಕು.

ಧನುರ್ಮಾಸದಲ್ಲಿ ಅರುಣೋದಯಕಾಲಕ್ಕೆ ಸ್ನಾನ ಮಾಡಲು ಜಲಾಶಯಕ್ಕೆ ತೆರಳಬೇಕು. ಹೀಗೆ ನಡೆದುಹೋಗುವ ಪ್ರತಿಹೆಜ್ಜೆಗೂ ಅಶ್ವಮೇಧದ ಪುಣ್ಯವನ್ನು ಸಂಪಾದಿಸುತ್ತಾನೆ. ಈ ಮಾಸದಲ್ಲಿ ಬೆಳಗಿನ ಜಾವದಲ್ಲಿ ಭಾಗೀರಥಿಯನ್ನು ಸ್ಮರಿಸುವ ಮಾತ್ರದಿಂದಲೇ ಗಂಗಾಸ್ನಾನದ ಫಲವು ದೊರಕುವುದು.

ಆಗ ಪ್ರಾತಃಕಾಲದಲ್ಲೆದ್ದು ಶ್ರೀಕೃಷ್ಣನನ್ನು ಧ್ಯಾನಿಸಬೇಕು. ಅನಂತರ ಗ್ರಾಮದಿಂದ ದೂರವಿರುವ ಸ್ಥಳದಲ್ಲಿ ಮಲ-ಮೂತ್ರಗಳನ್ನು ವಿಸರ್ಜಿಸಬೇಕು. ವಿಧಿಗನುಸಾರವಾಗಿ ಮೃತ್ತಿಕಾಶೌಚವನ್ನು ಮಾಡಬೇಕು. ನಂತರ ಆಲಸ್ಯವಿಲ್ಲದೇ ದಂತಗಳನ್ನು ಶುದ್ಧಿಗೊಳಿಸಿಕೊಳ್ಳಬೇಕು. ಜಲಾಶಯಗಳಲ್ಲಿ ಸ್ನಾನ ಮಾಡಿ ನಿತ್ಯಕರ್ಮಗಳನ್ನು ಆಚರಿಸಬೇಕು.

ನಂತರ ಗಂಧ, ಪುಷ್ಪಾಕ್ಷತೆಗಳಿಂದ ದೇವನನ್ನು ಪೂಜಿಸಿ, ಹೆಸರುಬೇಳೆ, ಅಕ್ಕಿಗಳಿಂದ ಮಾಡಿದ ಮುದ್ಗಾನ್ನ (ಹುಗ್ಗಿ) ವನ್ನು ನಿವೇದಿಸಬೇಕು. ಇದಲ್ಲದೇ ಬೆಣ್ಣೆ, ಉದ್ದಿನಹಿಟ್ಟು ವಿವಿಧ ಕಾಯಿಪಲ್ಲೆಗಳು, ರಸಗಳು, ಪಾನೀಯಗಳು, ಗಟ್ಟಿಯಾದ ಮೊಸರು ವಿವಿಧ ಫಲಗಳು, ತಾಂಬೂಲ, ದಕ್ಷಿಣೆಗಳನ್ನು ಪರಮ ಪುರುಷನಿಗೆ ಸಮರ್ಪಿಸಬೇಕು. ಈ ರೀತಿ ಪ್ರತಿದಿನ ಷೋಡಶೋಪಚಾರಗಳಿಂದ ಶ್ರೀಹರಿಯನ್ನು ಪೂಜಿಸಬೇಕು. ಸೂರ್ಯೋದಯಕ್ಕಿಂತಲೂ ಪೂರ್ವದಲ್ಲಿಯೇ ಪೂಜೆಯನ್ನು ಮುಗಿಸಬೇಕು.

ದೇವಪೂಜೆಯ ನಂತರದಲ್ಲಿ ತನ್ನ ಶಕ್ತಿಗೆ ಅನುನುಸಾರವಾಗಿ ಬ್ರಾಹ್ಮಣರನ್ನು ಪೂಜಿಸಬೇಕು. ಬ್ರಾಹ್ಮಣರೊಂದಿಗೆ ನೈವೇದ್ಯಶೇಷವನ್ನು ಭುಂಜಿಸಬೇಕು. ಬ್ರಾಹ್ಮಣರಿಲ್ಲದೇ ಮಾಡುವ ಭೋಜನವು ನಿಷಿದ್ಧವಾಗಿದೆ.

ಜ್ಞಾನ-ಭಕ್ತಿಗಳಿಂದ ಕೂಡಿದ ಬ್ರಾಹ್ಮಣನು ಪರರ ಸರ್ವಪಾಪಗಳನ್ನು ಕಳೆಯಲು ಸಮರ್ಥನಾಗಿರುವನು. ಆದುದರಿಂದ ಸರ್ವತಂತ್ರ ಸ್ವತಂತ್ರನಾದ ಶ್ರೀಹರಿಯಲ್ಲಿ ಯಾವಾಗಲೂ ಆಸಕ್ತನಾಗಿರುವ ಸತ್ಪಾತ್ರನಾದ ಬ್ರಾಹ್ಮಣನಿಗೆ ಭೋಜನ ಮಾಡಿಸಬೇಕು.

ಅನ್ನದಾನ ಮಾಡುವ ಪುರುಷನಲ್ಲಿ ಎಲ್ಲ ತೀರ್ಥಗಳು ಸನ್ನಿಹಿತವಾಗಿರುವವು. ಅವನಲ್ಲಿ ಸಕಲದೇವತೆಗಳ ಸನ್ನಿಧಾನವಿರುವುದು. ಈ ವಿಧವಾದ ದೈವೀ-ಸನ್ನಿಧಾನವನ್ನು ಪಡೆಯಲು ಅಪೇಕ್ಷಿಸಿದ ಪ್ರತಿಯೊಬ್ಬ ಸಾಧಕನೂ ವಿಷ್ಣುಭಕ್ತನಾದ ಬ್ರಾಹ್ಮಣನಿಗೆ ಧನುರ್ಮಾಸದಲ್ಲಿ ಚಿತ್ರಾನ್ನವನ್ನು ದಾನವಾಗಿ ಕೊಡಬೇಕು. ತುಪ್ಪದಿಂದ ಕೂಡಿದ ಭಕ್ಷ್ಯ-ಭೋಜ್ಯಗಳನ್ನು, ಬೆಣ್ಣೆಯಿಂದ ಯುಕ್ತವಾದ ಹುಗ್ಗಿಯನ್ನು ಮಾಡಿ ಬ್ರಾಹ್ಮಣರ ಭೋಜನ ಮಾಡಿಸಿ ನಂತರ ಯಜಮಾನನು ತನ್ನ ಕುಟುಂಬದೊಂದಿಗೆ ಭೋಜನ ಮಾಡಬೇಕು.

ಬ್ರಾಹ್ಮಣರ ಭೋಜನಾನಂತರ ತಾಂಬೂಲ-ದಕ್ಷಿಣೆಗಳನ್ನು ನೀಡಿ ಅವರ ಆಶೀರ್ವಾದವನ್ನು ಪಡೆಯಬೇಕು. ಈ ರೀತಿಯಲ್ಲಿ ಭಕ್ತಿಯಿಂದ ಆಚರಿಸುವವನು, ಸರ್ವಪಾಪಮುಕ್ತನೆನಿಸುವನು. ಹಿಂದೆ ಹಂಸರೂಪೀ ಪರಮಾತ್ಮನು ತನ್ನ ನಾಭಿಕಮಲದಿಂದ ಜನಿಸಿದ ಚತುರ್ಮುಖ ಬ್ರಹ್ಮನಿಗೆ ಧನುರ್ಮಾಸದ ಶ್ರೇಷ್ಠವಾದ ಮಹಿಮೆಯನ್ನು ತಿಳಿಸಿದ್ದನು. ಶ್ರೀಹರಿಯಿಂದ ಹೇಳಲ್ಪಟ್ಟ ಈ ಮಹಾತ್ಮೆಯನ್ನು ಭಕ್ತಿಯಿಂದ ಕೇಳಿದವನ ಪಾಪಗಳೆಲ್ಲ ನಾಶ ಹೊಂದುವವು.

**॥ ಪಂಚರಾತ್ರಾಗಮೋಕ್ತ ಧನುರ್ಮಾಸ ಮಾಹಾತ್ಮ್ಯಯಲ್ಲಿ**
**ಮೊದಲನೇ ಅಧ್ಯಾಯವು ಸಮಾಪ್ತವಾಯಿತು ॥**

★★★

## ಎರಡನೇ ಅಧ್ಯಾಯ

ಬ್ರಹ್ಮದೇವರು ಕೇಳಿದರು. ಹೇ ದೇವಶ್ರೇಷ್ಠನೇ! ಧನುರ್ಮಾಸದಲ್ಲಿ ಹರಿಯ ಪೂಜೆಯನ್ನು ಮಾಡುವ ಬಗೆ ಹೇಗೆ? ಈ ವಿಷಯವನ್ನು ವಿಸ್ತಾರವಾಗಿ ತಿಳಿಸಬೇಕು. ಈ ಮುಖಾಂತರ ನನ್ನನ್ನು ಅನುಗ್ರಹಿಸಬೇಕು. ಹೀಗೆಂದು ಪ್ರಾರ್ಥಿಸಿದರು.

ಹಂಸನಾಮಕ ಪರಮಾತ್ಮನು ಈ ಪ್ರಾರ್ಥನೆಯಿಂದ ಪ್ರೀತನಾದ. ಹೇಳಲು ಉಪಕ್ರಮಿಸಿದ.

ಸೂರ್ಯನು ಧನುರಾಶಿಯಲ್ಲಿ ಸಂಚರಿಸುವುದರಿಂದ ಈ ಮಾಸವನ್ನು ಧನುರ್ಮಾಸ ಎಂದು ವ್ಯವಹರಿಸಿದ್ದಾರೆ. ಈ ಧನುರ್ಮಾಸದಲ್ಲಿ ಸೂರ್ಯೋದಯಕ್ಕಿಂತಲೂ ಪೂರ್ವದಲ್ಲಿಯೇ ಶ್ರೀಹರಿಯ ಪೂಜೆಯನ್ನು ಮುಗಿಸಬೇಕು. ಹುಗ್ಗಿಯನ್ನು ದೇವರಿಗೆ ನಿವೇದಿಸಬೇಕು. ಲೌಕಿಕವಾದ ಕಾಮನೆಗಳನ್ನು ತೊರೆದು ಈ ಧನುರ್ಮಾಸವ್ರತವನ್ನು ಪಾಲಿಸಬೇಕು. ಪ್ರತಿನಿತ್ಯದ ಆಹ್ನಿಕ-ಜಪ ಮುಂತಾದವುಗಳನ್ನು ಸಂಕ್ಷೇಪವಾಗಿ ಮಾಡಬೇಕು. ನಂತರ ಶ್ರೀಹರಿಯನ್ನು ಭಜಿಸುತ್ತ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ನಂತರ ಸ್ವಯಂ ತಾನು ಭೋಜನ ಮಾಡಬೇಕು.

ಈ ಧನುರ್ಮಾಸದಲ್ಲಿ ಭೋಜನದ ನಂತರದಲ್ಲಿ ಜಪಾದಿಗಳನ್ನು ಮಾಡಿದರೂ ಯಾವ ದೋಷವೂ ಇಲ್ಲ. ಹೀಗೆ ಸಂಕ್ಷೇಪವಾಗಿ ಧನುರ್ಮಾಸದ ಬಗ್ಗೆ ಹಂಸನು ತಿಳಿಸಿದನು.

ಮತ್ತೆ ಬ್ರಹ್ಮದೇವರು ಕೇಳಿದರು. ಶ್ರೀಹರಿಯೇ ಸೂರ್ಯೋದಯಕ್ಕಿಂತ ಮುಂಚೆ ಸಂಧ್ಯಾವಂದನೆಯೇ ಮುಂತಾದ ನಿತ್ಯಾಹ್ನಿಕಗಳನ್ನು ಮಾಡುವುದು ಹೇಗೆ? ಎಂಬ ಸಂದೇಹ ನನಗಿದೆ. ಸರ್ವಜ್ಞನಾಗಿರುವ ನೀನು ನನ್ನ ಸಂದೇಹವನ್ನು ಪರಿಹರಿಸಬೇಕು. ಎಂದು ಪ್ರಾರ್ಥಿಸಲು ಹಂಸರೂಪೀ ಪರಮಾತ್ಮನು ಹೇಳಿದನು.

ಧನುರ್ಮಾಸದಲ್ಲಿ ಪ್ರತಿದಿನ ಸೂರ್ಯೋದಯಕ್ಕಿಂತ ಮುಂಚೆ ನಿತ್ಯವಾದ ಸಂಧ್ಯಾವಂದನೆ-ದೇವಪೂಜೆ ಮುಂತಾದ ಕರ್ಮಗಳನ್ನು ಮಾಡಬೇಕು. ನೈಮಿತ್ತಿಕವಾದ ಶ್ರಾದ್ಧವನ್ನೂ ಮುಂಚೆಯೇ ಮಾಡಬೇಕು. ಸೂರ್ಯೋದಯಕ್ಕೆ ಸರಿಯಾಗಿ ಬ್ರಾಹ್ಮಣ ಭೋಜನ ಮಾಡಿಸಬೇಕು.

ಚತುರ್ಮುಖನೇ! ಧನುರ್ಮಾಸ ಪೂರ್ತಿಯಾಗಿ ಪ್ರತಿದಿನ ಈ ರೀತಿ ಪೂಜೆ ಮಾಡಲು ಅಶಕ್ತನಾದವನು, ಭಾನುವಾರ, ವ್ಯತೀಪಾತ, ವಿಷ್ಣುಸಂಬಂಧಿಯಾದ ಶ್ರವಣನಕ್ಷತ್ರ ಮುಂತಾದ ವಿಶಿಷ್ಟ ದಿನಗಳಲ್ಲಿಯಾದರೂ ಮಾಡಬೇಕು. ಅಂಥ ವಿಶಿಷ್ಟ ದಿನಗಳಲ್ಲಿ ತನ್ನ ಶಕ್ತಿಗನುಸಾರವಾಗಿ ಶ್ರೀಹರಿಯ ಪೂಜೆಯನ್ನು ಭಕ್ತಿಯಿಂದ ಮಾಡಬೇಕು. ಕೃಷ್ಣಪಕ್ಷದಲ್ಲಿ ಮಾಡುವ ಪೂಜೆಯು ಪಿತೃಗಳಿಗೆ ತೃಪ್ತಿದಾಯಕ-ವೆನಿಸಿದರೆ, ಶುಕ್ಲಪಕ್ಷದ ಪೂಜೆಯು ದೇವತೆಗಳಿಗೆ ಹರ್ಷವನ್ನುಂಟು ಮಾಡುವುದು. ಆದ್ದರಿಂದ ಶುಕ್ಲಪಕ್ಷದಲ್ಲಿ ಒಂದು ದಿನ, ಕೃಷ್ಣಪಕ್ಷದಲ್ಲಿ ಒಂದು ದಿನ ಹೀಗೆ ಎರಡು ದಿನದ ಮಟ್ಟಿಗೆಯಾದರೂ ಧನುರ್ಮಾಸದ ನಿಯಮವನ್ನು ಪಾಲಿಸಬೇಕು.

ಧನುರ್ಮಾಸದ ಉಷಃಕಾಲದಲ್ಲಿ ಬ್ರಾಹ್ಮಣಕುಟುಂಬಭೋಜನ ಮಾಡಿಸಬೇಕು. ಕುಟುಂಬಭೋಜನವನ್ನು ಮಾಡಿಸಲು ಅಶಕ್ತನಾದವನು ದಂಪತಿಗಳ ಭೋಜನವನ್ನು ಮಾಡಿಸಬೇಕು. ಇದರಿಂದ ಕರ್ತೃವಿನ ಎಲ್ಲ ವಿಧವಾದ ಪಾಪಗಳೂ ನಷ್ಟವಾಗುತ್ತವೆ. ಈ ವಿಷಯದಲ್ಲಿ ಆಶ್ಚರ್ಯಕರವೂ, ಪಾಪನಾಶಕವೂ ಆದ ಇತಿಹಾಸವೊಂದು ಹೇಳಲ್ಪಡುತ್ತದೆ.

ರೇವಾತೀರದಲ್ಲಿ ಹಿಂದೆ ಸತ್ಯಸಂಧ ಎಂಬ ಹೆಸರಿನ ರಾಜನೊಬ್ಬನಿದ್ದ. ಸ್ತ್ರೀ ಲೋಲುಪನಾದ ಆತನು ನಿತ್ಯದಲ್ಲೂ ಪರಸ್ತ್ರೀಯರನ್ನು ಪಡೆಯಲು ನಿರಂತರ ಪ್ರಯತ್ನಶೀಲನಾಗಿದ್ದ. ಆ ರಾಜನ ನಗರದಲ್ಲಿಯೇ ನಾರಾಯಣನೆಂಬ ಹೆಸರಿನ ವಿದ್ವಾಂಸನಾದ ಓರ್ವ ಬ್ರಾಹ್ಮಣನಿದ್ದ. ವೇದ-ಶಾಸ್ತ್ರಗಳನ್ನು ಚೆನ್ನಾಗಿ ಅರಿತ ಆತನು ನಿತ್ಯಕರ್ಮದಲ್ಲಿ ಆಸಕ್ತನಾಗಿದ್ದ.

ಹೀಗಿರಲೊಮ್ಮೆ ದೈವೇಚ್ಛೆಯಿಂದ ಪ್ರತಿವರ್ಷದಂತೆ ಧನುರ್ಮಾಸವು ಪ್ರಾಪ್ತವಾಯಿತು. ಪುಣ್ಯಕಾಲವು ಪ್ರಾಪ್ತವಾಯಿತೆಂದು ಆ ಬ್ರಾಹ್ಮಣ ಸಂತುಷ್ಟನಾದ. ಪ್ರತಿದಿನ ಅರುಣೋದಯಕ್ಕೆ ಸ್ನಾನ ಮಾಡಿ ದೇವಪೂಜೆಯನ್ನು ಮಾಡತೊಡಗಿದ.

ಬ್ರಾಹ್ಮಣರ ಭೋಜನಾನಂತರ ತಾಂಬೂಲ-ದಕ್ಷಿಣೆಗಳನ್ನು ನೀಡಿ ಅವರ ಆಶೀರ್ವಾದವನ್ನು ಪಡೆಯಬೇಕು. ಈ ರೀತಿಯಲ್ಲಿ ಭಕ್ತಿಯಿಂದ ಆಚರಿಸುವವನು, ಸರ್ವಪಾಪಮುಕ್ತನೆನಿಸುವನು. ಹಿಂದೆ ಹಂಸರೂಪೀ ಪರಮಾತ್ಮನು ತನ್ನ ನಾಭಿಕಮಲದಿಂದ ಜನಿಸಿದ ಚತುರ್ಮುಖ ಬ್ರಹ್ಮನಿಗೆ ಧನುರ್ಮಾಸದ ಶ್ರೇಷ್ಠವಾದ ಮಹಿಮೆಯನ್ನು ತಿಳಿಸಿದ್ದನು. ಶ್ರೀಹರಿಯಿಂದ ಹೇಳಲ್ಪಟ್ಟ ಈ ಮಹಾತ್ಮೆಯನ್ನು ಭಕ್ತಿಯಿಂದ ಕೇಳಿದವನ ಪಾಪಗಳೆಲ್ಲ ನಾಶ ಹೊಂದುವವು.

**|| ಪಂಚರಾತ್ರಾಗಮೋಕ್ತ ಧನುರ್ಮಾಸ ಮಾಹಾತ್ಮ್ಯೆಯಲ್ಲಿ ಮೊದಲನೇ ಅಧ್ಯಾಯವು ಸಮಾಪ್ತವಾಯಿತು ||**

★★★

## ಎರಡನೇ ಅಧ್ಯಾಯ

ಬ್ರಹ್ಮದೇವರು ಕೇಳಿದರು. ಹೇ ದೇವಶ್ರೇಷ್ಠನೇ! ಧನುರ್ಮಾಸದಲ್ಲಿ ಹರಿಯ ಪೂಜೆಯನ್ನು ಮಾಡುವ ಬಗೆ ಹೇಗೆ? ಈ ವಿಷಯವನ್ನು ವಿಸ್ತಾರವಾಗಿ ತಿಳಿಸಬೇಕು. ಈ ಮುಖಾಂತರ ನನ್ನನ್ನು ಅನುಗ್ರಹಿಸಬೇಕು. ಹೀಗೆಂದು ಪ್ರಾರ್ಥಿಸಿದರು.

ಹಂಸನಾಮಕ ಪರಮಾತ್ಮನು ಈ ಪ್ರಾರ್ಥನೆಯಿಂದ ಪ್ರೀತನಾದ. ಹೇಳಲು ಉಪಕ್ರಮಿಸಿದ.

ಸೂರ್ಯನು ಧನುರಾಶಿಯಲ್ಲಿ ಸಂಚರಿಸುವುದರಿಂದ ಈ ಮಾಸವನ್ನು ಧನುರ್ಮಾಸ ಎಂದು ವ್ಯವಹರಿಸಿದ್ದಾರೆ. ಈ ಧನುರ್ಮಾಸದಲ್ಲಿ ಸೂರ್ಯೋದಯಕ್ಕಿಂತಲೂ ಪೂರ್ವದಲ್ಲಿಯೇ ಶ್ರೀಹರಿಯ ಪೂಜೆಯನ್ನು ಮುಗಿಸಬೇಕು. ಹುಗ್ಗಿಯನ್ನು ದೇವರಿಗೆ ನಿವೇದಿಸಬೇಕು. ಲೌಕಿಕವಾದ ಕಾಮನೆಗಳನ್ನು ತೊರೆದು ಈ ಧನುರ್ಮಾಸವ್ರತವನ್ನು ಪಾಲಿಸಬೇಕು. ಪ್ರತಿನಿತ್ಯದ ಆಹ್ನಿಕ-ಜಪ ಮುಂತಾದವುಗಳನ್ನು ಸಂಕ್ಷೇಪವಾಗಿ ಮಾಡಬೇಕು. ನಂತರ ಶ್ರೀಹರಿಯನ್ನು ಭಜಿಸುತ್ತ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ನಂತರ ಸ್ವಯಂ ತಾನು ಭೋಜನ ಮಾಡಬೇಕು.

ಈ ಧನುರ್ಮಾಸದಲ್ಲಿ ಭೋಜನದ ನಂತರದಲ್ಲಿ ಜಪಾದಿಗಳನ್ನು ಮಾಡಿದರೂ ಯಾವ ದೋಷವೂ ಇಲ್ಲ. ಹೀಗೆ ಸಂಕ್ಷೇಪವಾಗಿ ಧನುರ್ಮಾಸದ ಬಗ್ಗೆ ಹಂಸನು ತಿಳಿಸಿದನು.

ಮತ್ತೆ ಬ್ರಹ್ಮದೇವರು ಕೇಳಿದರು. ಶ್ರೀಹರಿಯೇ ಸೂರ್ಯೋದಯಕ್ಕಿಂತ ಮುಂಚೆ ಸಂಧ್ಯಾವಂದನೆಯೇ ಮುಂತಾದ ನಿತ್ಯಾಹ್ನಿಕಗಳನ್ನು ಮಾಡುವುದು ಹೇಗೆ? ಎಂಬ ಸಂದೇಹ ನನಗಿದೆ. ಸರ್ವಜ್ಞನಾಗಿರುವ ನೀನು ನನ್ನ ಸಂದೇಹವನ್ನು ಪರಿಹರಿಸಬೇಕು. ಎಂದು ಪ್ರಾರ್ಥಿಸಲು ಹಂಸರೂಪೀ ಪರಮಾತ್ಮನು ಹೇಳಿದನು.

ಧನುರ್ಮಾಸದಲ್ಲಿ ಪ್ರತಿದಿನ ಸೂರ್ಯೋದಯಕ್ಕಿಂತ ಮುಂಚೆ ನಿತ್ಯವಾದ ಸಂಧ್ಯಾವಂದನೆ-ದೇವಪೂಜೆ ಮುಂತಾದ ಕರ್ಮಗಳನ್ನು ಮಾಡಬೇಕು. ನೈಮಿತ್ತಿಕವಾದ ಶ್ರಾದ್ಧವನ್ನೂ ಮುಂಚೆಯೇ ಮಾಡಬೇಕು. ಸೂರ್ಯೋದಯಕ್ಕೆ ಸರಿಯಾಗಿ ಬ್ರಾಹ್ಮಣ ಭೋಜನ ಮಾಡಿಸಬೇಕು.

ಚತುರ್ಮುಖನೇ! ಧನುರ್ಮಾಸ ಪೂರ್ತಿಯಾಗಿ ಪ್ರತಿದಿನ ಈ ರೀತಿ ಪೂಜೆ ಮಾಡಲು ಅಶಕ್ತನಾದವನು, ಭಾನುವಾರ, ವ್ಯತೀಪಾತ, ವಿಷ್ಣುಸಂಬಂಧಿಯಾದ ಶ್ರವಣನಕ್ಷತ್ರ ಮುಂತಾದ ವಿಶಿಷ್ಟ ದಿನಗಳಲ್ಲಿಯಾದರೂ ಮಾಡಬೇಕು. ಅಂಥ ವಿಶಿಷ್ಟ ದಿನಗಳಲ್ಲಿ ತನ್ನ ಶಕ್ತಿಗನುಸಾರವಾಗಿ ಶ್ರೀಹರಿಯ ಪೂಜೆಯನ್ನು ಭಕ್ತಿಯಿಂದ ಮಾಡಬೇಕು. ಕೃಷ್ಣಪಕ್ಷದಲ್ಲಿ ಮಾಡುವ ಪೂಜೆಯು ಪಿತೃಗಳಿಗೆ ತೃಪ್ತಿದಾಯಕ-ವೆನಿಸಿದರೆ, ಶುಕ್ಲಪಕ್ಷದ ಪೂಜೆಯು ದೇವತೆಗಳಿಗೆ ಹರ್ಷವನ್ನುಂಟು ಮಾಡುವುದು. ಆದ್ದರಿಂದ ಶುಕ್ಲಪಕ್ಷದಲ್ಲಿ ಒಂದು ದಿನ, ಕೃಷ್ಣಪಕ್ಷದಲ್ಲಿ ಒಂದು ದಿನ ಹೀಗೆ ಎರಡು ದಿನದ ಮಟ್ಟಿಗೆಯಾದರೂ ಧನುರ್ಮಾಸದ ನಿಯಮವನ್ನು ಪಾಲಿಸಬೇಕು.

ಧನುರ್ಮಾಸದ ಉಷಃಕಾಲದಲ್ಲಿ ಬ್ರಾಹ್ಮಣಕುಟುಂಬಭೋಜನ ಮಾಡಿಸಬೇಕು. ಕುಟುಂಬಭೋಜನವನ್ನು ಮಾಡಿಸಲು ಅಶಕ್ತನಾದವನು ದಂಪತಿಗಳ ಭೋಜನವನ್ನು ಮಾಡಿಸಬೇಕು. ಇದರಿಂದ ಕರ್ತೃವಿನ ಎಲ್ಲ ವಿಧವಾದ ಪಾಪಗಳೂ ನಷ್ಟವಾಗುತ್ತವೆ. ಈ ವಿಷಯದಲ್ಲಿ ಆಶ್ಚರ್ಯಕರವೂ, ಪಾಪನಾಶಕವೂ ಆದ ಇತಿಹಾಸವೊಂದು ಹೇಳಲ್ಪಡುತ್ತದೆ.

ರೇವಾತೀರದಲ್ಲಿ ಹಿಂದೆ ಸತ್ಯಸಂಧ ಎಂಬ ಹೆಸರಿನ ರಾಜನೊಬ್ಬನಿದ್ದ. ಸ್ತ್ರೀಲೋಲುಪನಾದ ಆತನು ನಿತ್ಯದಲ್ಲೂ ಪರಸ್ತ್ರೀಯರನ್ನು ಪಡೆಯಲು ನಿರಂತರ ಪ್ರಯತ್ನಶೀಲನಾಗಿದ್ದ. ಆ ರಾಜನ ನಗರದಲ್ಲಿಯೇ ನಾರಾಯಣನೆಂಬ ಹೆಸರಿನ ವಿದ್ವಾಂಸನಾದ ಓರ್ವ ಬ್ರಾಹ್ಮಣನಿದ್ದ. ವೇದ-ಶಾಸ್ತ್ರಗಳನ್ನು ಚೆನ್ನಾಗಿ ಅರಿತ ಆತನು ನಿತ್ಯಕರ್ಮದಲ್ಲಿ ಆಸಕ್ತನಾಗಿದ್ದ.

ಹೀಗಿರಲೊಮ್ಮೆ ದೈವೇಚ್ಛೆಯಿಂದ ಪ್ರತಿವರ್ಷದಂತೆ ಧನುರ್ಮಾಸವು ಪ್ರಾಪ್ತವಾಯಿತು. ಪುಣ್ಯಕಾಲವು ಪ್ರಾಪ್ತವಾಯಿತೆಂದು ಆ ಬ್ರಾಹ್ಮಣ ಸಂತುಷ್ಟನಾದ. ಪ್ರತಿದಿನ ಅರುಣೋದಯಕ್ಕೆ ಸ್ನಾನ ಮಾಡಿ ದೇವಪೂಜೆಯನ್ನು ಮಾಡತೊಡಗಿದ.

ಪೂಜಾ ಸಮಯದಲ್ಲಿ ಶ್ರೀಹರಿಗೆ ಚಿತ್ರಾನ್ನ, ನವನೀತ, ನಾನಾ ವಿಧ ಭಕ್ಷ್ಯಗಳು, ವಿವಿಧ ಕಾಯಿಪಲ್ಲೆಗಳು, ಖಾದ್ಯಗಳನ್ನು ಮತ್ತು ವಿಶಿಷ್ಟವಾದ ಹುಗ್ಗಿಯನ್ನು ನಿವೇದಿಸಿದ. ನಂತರ ಬ್ರಾಹ್ಮಣರಿಗೆ ಭೋಜನ ಮಾಡಿಸಿದ. ನಂತರ ತಾನು ಭೋಜನ ಮಾಡಿದ. ಬ್ರಾಹ್ಮಣರಿಗೆ ತಾಂಬೂಲ-ದಕ್ಷಿಣೆಗಳನ್ನು ಕೊಟ್ಟು ಅವರಿಂದ ಆಶೀರ್ವಾದಗಳನ್ನು ಪಡೆಯುತ್ತಿದ್ದ.

ಧನುರ್ಮಾಸದ ಧರ್ಮಗಳನ್ನು ಕೇಳಿದ ರಾಜನು ತನ್ನ ಅರಮನೆಯಲ್ಲಿಯೂ ಧನುರ್ಮಾಸಮಹೋತ್ಸವವನ್ನು ನಡೆಸಲು ನಿರ್ಧರಿಸಿದ. ಭೋಜನಕ್ಕೆ ಯಾವ ಬ್ರಾಹ್ಮಣನನ್ನು ಆಮಂತ್ರಿಸಲಿ? ಎಂದು ಆಲೋಚಿಸತೊಡಗಿದ. ತನ್ನ ಊರಿನಲ್ಲೇ ಇರುವ ವೇದ-ವೇದಾಂಗಗಳು ಹಾಗೂ ಪುರಾಣಗಳನ್ನು ಬಲ್ಲ ನಾರಾಯಣನೆಂಬ ಬ್ರಾಹ್ಮಣನನ್ನು ಆಮಂತ್ರಿಸಲು ಸ್ವತಃ ಆ ಬ್ರಾಹ್ಮಣನ ಮನೆಗೆ ನಡೆದ.

ಆ ನಾರಾಯಣಾಚಾರ್ಯರ ಮನೆ ಆಶ್ರಮದಂತೆಯೇ ಕಂಗೊಳಿಸುತ್ತಿತ್ತು. ನೂರಾರು ಜನ ಶಿಷ್ಯರು ಆ ಆಚಾರ್ಯರ ಸುತ್ತಲೂ ಇದ್ದರು. ಅವರೆಲ್ಲರಿಗೆ ಧನುರ್ಮಾಸದ ಮಹಿಮೆಯನ್ನು ಬೋಧಿಸುತ್ತಿದ್ದರು. ಇಂಥ ನಾರಾಯಣಾ-ಚಾರ್ಯರನ್ನು ಕಂಡ. ಅಲ್ಲಿಯೇ ಕುಳಿತ. ಧನುರ್ಮಾಸದ ಮಹಿಮೆಯನ್ನು ಕೇಳಿದ.

ಆ ಮಹಿಮೆಯಲ್ಲಿ ಬರುವ ದಂಪತಿಭೋಜನ, ವಸ್ತ್ರಾಲಂಕಾರದಾನ ಮುಂತಾದವುಗಳನ್ನು ಶ್ರದ್ಧೆಯಿಂದ ಕೇಳಿದ. ಇದೇ ಸಂದರ್ಭದಲ್ಲಿಯೇ ನಾರಾಯಣಾಚಾರ್ಯರ ಧರ್ಮಪತ್ನಿಯೂ ಅಲ್ಲಿಯೇ ಕುಳಿತಿದ್ದಳು. ಅವಳು ಕೂಡಾ ಅತ್ಯಂತ ಆಸಕ್ತಿಯಿಂದ ಧನುರ್ಮಾಸದ ಮಹಿಮೆಯನ್ನು ಕೇಳುತ್ತಿದ್ದಳು. ಅವಳು ಅತ್ಯಂತ ಸುಂದರಿಯಾಗಿದ್ದಳು. ಅವಳನ್ನು ನೋಡಿದ ರಾಜ ಕಾಮಮೋಹಿತನಾದ.

ತನ್ನ ಪತ್ನಿಯರಿಂದೊಡಗೂಡಿ ರಾಜನು ಆ ಬ್ರಾಹ್ಮಣದಂಪತಿಗಳನ್ನು ಸತ್ಕರಿಸಿದ. ತನ್ನ ಅರಮನೆಗೆ ಭೋಜನಕ್ಕೆ ಆಮಂತ್ರಿಸಿದ. ಹೇ ಬ್ರಾಹ್ಮಣಶ್ರೇಷ್ಠನೇ! ಧನುರ್ಮಾಸ ನಿಮಿತ್ತವಾಗಿ ಪ್ರತಿನಿತ್ಯ ಬ್ರಾಹ್ಮಣದಂಪತಿಗಳಿಗೆ ಭೋಜನ ಮಾಡಿಸಲು ಸಂಕಲ್ಪಿಸಿದ್ದೇನೆ. ಆದ್ದರಿಂದ ನಾಳೆ ಭೋಜನಕ್ಕೆ ತಾವು ಆಗಮಿಸಬೇಕು. ಈ ದಿನವೇ ಸಾಯಂಕಾಲ ಅರಮನೆಗೆ ಆಗಮಿಸಿ ಅಲ್ಲಿಯೇ ಮಲಗಿಕೊಳ್ಳಬೇಕು ಎಂದು ಪ್ರಾರ್ಥಿಸಿ ಅರಮನೆಗೆ ಬಂದ.

ರಾಜ ಮನಗೆ ಹೋದರೂ ಆತನ ಮನಸ್ಸು ಮಾತ್ರ ಬ್ರಾಹ್ಮಣಸ್ತ್ರೀಯಲ್ಲಿಯೇ ಆಸಕ್ತವಾಗಿತ್ತು. ಸಾಯಂಕಾಲಕ್ಕಾಗಿಯೇ ಕಾಯುತ್ತಿದ್ದ. ಸಾಯಂಕಾಲವಾಯಿತು. ಆ ಬ್ರಾಹ್ಮಣದಂಪತಿಗಳನ್ನು ಕರೆತರಲು ರಥದೊಂದಿಗೆ ದೂತನನ್ನು ಕಳಿಸಿದ.

ಬ್ರಾಹ್ಮಣ ದಂಪತಿಗಳು ರಥವೇರಿ ಅರಮನೆಗೆ ಬಂದರು. ಮನೆಗೆ ಬಂದಿರುವ ಅವರನ್ನು ಕಂಡು ಸ್ವಾಗತಿಸಿದ. ಅರಮನೆಯ ಮೇಲಿನ ಕೊಠಡಿಯಲ್ಲಿ ವಿಶ್ರಮಿಸುವಂತೆ ತಿಳಿಸಿದ. ರಾಜನು ನಿರ್ದೇಶಿಸಿದ ಸ್ಥಳದಲ್ಲಿ ಬ್ರಾಹ್ಮಣ ದಂಪತಿಗಳು ಮಲಗಿಕೊಂಡರು.

ಬ್ರಾಹ್ಮಣಪತ್ನಿಯನ್ನು ಸಂಗಮಿಸುವ ದುರುದ್ದೇಶ ರಾಜನ ಮನಸ್ಸಿನಲ್ಲಿ ಇತ್ತು. ಹೀಗಾಗಿ ನಿದ್ರೆ ಬರಲೇ ಇಲ್ಲ. ನಡುರಾತ್ರಿಯಾಯಿತು. ಪ್ರದೇಶವೆಲ್ಲ ಪ್ರಶಾಂತವಾಗಿತ್ತು. ಎಲ್ಲರೂ ಗಾಢನಿದ್ರೆಯಲ್ಲಿ ಇದ್ದರು. ಇದುವೇ ಸರಿಯಾದ ಸಮಯ ಎಂದು ತಿಳಿದ. ಬ್ರಾಹ್ಮಣದಂಪತಿಗಳು ಮಲಗಿದ್ದ ಕೊಠಡಿಯತ್ತ ನಡೆದ. ಆದರೆ ಮಾರ್ಗದಲ್ಲಿ ದೈವೇಚ್ಛೆಯಿಂದ ಸರ್ಪವೊಂದು ರಾಜನನ್ನು ಕಚ್ಚಿತು. ಸರ್ಪದಷ್ಟನಾದ ರಾಜ ಅಲ್ಲಿಯೇ ಮರಣ ಹೊಂದಿದ.

ಆಗ ಅವನನ್ನು ಎಳೆದೊಯ್ಯಲು ಯಮದೂತರೂ, ವಿಷ್ಣುಲೋಕಕ್ಕೆ ಕರೆದೊಯ್ಯಲು ವಿಷ್ಣು ದೂತರೂ ಆಗಮಿಸಿದರು. ಅಲ್ಲಿ ಬಂದ ಯಮದೂತರನ್ನು ನಿವಾರಿಸಿ ವಿಷ್ಣುದೂತರು ಹೇಳಿದರು. ಹೇ ಯಮದೂತರೇ! ಇವನು ಧನುರ್ಮಾಸದ ಭೋಜನಕ್ಕೆಂದು ಬ್ರಾಹ್ಮಣದಂಪತಿಗಳನ್ನು ಆಮಂತ್ರಿಸಿದ್ದಾನೆ. ಅಷ್ಟರಿಂದಲೇ ಸಾಕಷ್ಟು ಪುಣ್ಯವನ್ನು ಸಂಪಾದಿಸಿದ್ದಾನೆ. ಆ ಪುಣ್ಯದ ಪ್ರಭಾವದಿಂದಲೇ ಈ ರಾಜನು ವಿಷ್ಣುಲೋಕವನ್ನು ಪಡೆಯಲು ಅರ್ಹನಾಗಿದ್ದಾನೆ.

ಧನುರ್ಮಾಸದಲ್ಲಿ ಸಪತ್ನೀಕನಾದ ಬ್ರಾಹ್ಮಣನಿಗೆ ಭೋಜನ ಮಾಡಿಸಬೇಕು. ಆ ಪುಣ್ಯದ ಮಿತಿಯನ್ನು ವರ್ಣಿಸಲು ಯಾರಿಗೂ ಸಾಧ್ಯವಿಲ್ಲ.

ಹೀಗೆಂದು ತಿಳಿಸುತ್ತ ವಿಷ್ಣುದೂತರು ಆ ರಾಜನನ್ನು ಪವಿತ್ರವಾದ ವಿಷ್ಣುಲೋಕಕ್ಕೆ ಕರೆದೊಯ್ದರು. ಧನುರ್ಮಾಸದ ಆಚರಣೆ ಇಷ್ಟು ಪುಣ್ಯಪ್ರದವಾಗಿದೆ.

**॥ ಪಂಚರಾತ್ರಾಗಮೋಕ್ತ ಧನುರ್ಮಾಸ ಮಾಹಾತ್ಮ್ಯೆಯಲ್ಲಿ**
**ಎರಡನೇ ಅಧ್ಯಾಯವು ಸಮಾಪ್ತವಾಯಿತು ॥**

★★★

ಪೂಜಾ ಸಮಯದಲ್ಲಿ ಶ್ರೀಹರಿಗೆ ಚಿತ್ರಾನ್ನ, ನವನೀತ, ನಾನಾ ವಿಧ ಭಕ್ಷ್ಯಗಳು, ವಿವಿಧ ಕಾಯಿಪಲ್ಲೆಗಳು, ಖಾದ್ಯಗಳನ್ನು ಮತ್ತು ವಿಶಿಷ್ಟವಾದ ಹುಗ್ಗಿಯನ್ನು ನಿವೇದಿಸಿದ. ನಂತರ ಬ್ರಾಹ್ಮಣರಿಗೆ ಭೋಜನ ಮಾಡಿಸಿದ. ನಂತರ ತಾನು ಭೋಜನ ಮಾಡಿದ. ಬ್ರಾಹ್ಮಣರಿಗೆ ತಾಂಬೂಲ-ದಕ್ಷಿಣೆಗಳನ್ನು ಕೊಟ್ಟು ಅವರಿಂದ ಆಶೀರ್ವಾದಗಳನ್ನು ಪಡೆಯುತ್ತಿದ್ದ.

ಧನುರ್ಮಾಸದ ಧರ್ಮಗಳನ್ನು ಕೇಳಿದ ರಾಜನು ತನ್ನ ಅರಮನೆಯಲ್ಲಿಯೂ ಧನುರ್ಮಾಸಮಹೋತ್ಸವವನ್ನು ನಡೆಸಲು ನಿರ್ಧರಿಸಿದ. ಭೋಜನಕ್ಕೆ ಯಾವ ಬ್ರಾಹ್ಮಣನನ್ನು ಆಮಂತ್ರಿಸಲಿ? ಎಂದು ಆಲೋಚಿಸತೊಡಗಿದ. ತನ್ನ ಊರಿನಲ್ಲೇ ಇರುವ ವೇದ-ವೇದಾಂಗಗಳು ಹಾಗೂ ಪುರಾಣಗಳನ್ನು ಬಲ್ಲ ನಾರಾಯಣನೆಂಬ ಬ್ರಾಹ್ಮಣನನ್ನು ಆಮಂತ್ರಿಸಲು ಸ್ವತಃ ಆ ಬ್ರಾಹ್ಮಣನ ಮನೆಗೆ ನಡೆದ.

ಆ ನಾರಾಯಣಾಚಾರ್ಯರ ಮನೆ ಆಶ್ರಮದಂತೆಯೇ ಕಂಗೊಳಿಸುತ್ತಿತ್ತು. ನೂರಾರು ಜನ ಶಿಷ್ಯರು ಆ ಆಚಾರ್ಯರ ಸುತ್ತಲೂ ಇದ್ದರು. ಅವರೆಲ್ಲರಿಗೆ ಧನುರ್ಮಾಸದ ಮಹಿಮೆಯನ್ನು ಬೋಧಿಸುತ್ತಿದ್ದರು. ಇಂಥ ನಾರಾಯಣಾ-ಚಾರ್ಯರನ್ನು ಕಂಡ. ಅಲ್ಲಿಯೇ ಕುಳಿತ. ಧನುರ್ಮಾಸದ ಮಹಿಮೆಯನ್ನು ಕೇಳಿದ.

ಆ ಮಹಿಮೆಯಲ್ಲಿ ಬರುವ ದಂಪತಿಭೋಜನ, ವಸ್ತ್ರಾಲಂಕಾರದಾನ ಮುಂತಾದವುಗಳನ್ನು ಶ್ರದ್ಧೆಯಿಂದ ಕೇಳಿದ. ಇದೇ ಸಂದರ್ಭದಲ್ಲಿಯೇ ನಾರಾಯಣಾಚಾರ್ಯರ ಧರ್ಮಪತ್ನಿಯೂ ಅಲ್ಲಿಯೇ ಕುಳಿತಿದ್ದಳು. ಅವಳು ಕೂಡಾ ಅತ್ಯಂತ ಆಸಕ್ತಿಯಿಂದ ಧನುರ್ಮಾಸದ ಮಹಿಮೆಯನ್ನು ಕೇಳುತ್ತಿದ್ದಳು. ಅವಳು ಅತ್ಯಂತ ಸುಂದರಿಯಾಗಿದ್ದಳು. ಅವಳನ್ನು ನೋಡಿದ ರಾಜ ಕಾಮಮೋಹಿತನಾದ.

ತನ್ನ ಪತ್ನಿಯರಿಂದೊಡಗೂಡಿ ರಾಜನು ಆ ಬ್ರಾಹ್ಮಣದಂಪತಿಗಳನ್ನು ಸತ್ಕರಿಸಿದ. ತನ್ನ ಅರಮನೆಗೆ ಭೋಜನಕ್ಕೆ ಆಮಂತ್ರಿಸಿದ. ಹೇ ಬ್ರಾಹ್ಮಣಶ್ರೇಷ್ಠನೇ! ಧನುರ್ಮಾಸ ನಿಮಿತ್ತವಾಗಿ ಪ್ರತಿನಿತ್ಯ ಬ್ರಾಹ್ಮಣದಂಪತಿಗಳಿಗೆ ಭೋಜನ ಮಾಡಿಸಲು ಸಂಕಲ್ಪಿಸಿದ್ದೇನೆ. ಆದ್ದರಿಂದ ನಾಳೆ ಭೋಜನಕ್ಕೆ ತಾವು ಆಗಮಿಸಬೇಕು. ಈ ದಿನವೇ ಸಾಯಂಕಾಲ ಅರಮನೆಗೆ ಆಗಮಿಸಿ ಅಲ್ಲಿಯೇ ಮಲಗಿಕೊಳ್ಳಬೇಕು ಎಂದು ಪ್ರಾರ್ಥಿಸಿ ಅರಮನೆಗೆ ಬಂದ.

ರಾಜ ಮನಗೆ ಹೋದರೂ ಆತನ ಮನಸ್ಸು ಮಾತ್ರ ಬ್ರಾಹ್ಮಣಸ್ತ್ರೀಯಲ್ಲಿಯೇ ಆಸಕ್ತವಾಗಿತ್ತು. ಸಾಯಂಕಾಲಕ್ಕಾಗಿಯೇ ಕಾಯುತ್ತಿದ್ದ. ಸಾಯಂಕಾಲವಾಯಿತು. ಆ ಬ್ರಾಹ್ಮಣದಂಪತಿಗಳನ್ನು ಕರೆತರಲು ರಥದೊಂದಿಗೆ ದೂತನನ್ನು ಕಳಿಸಿದ.

ಬ್ರಾಹ್ಮಣ ದಂಪತಿಗಳು ರಥವೇರಿ ಅರಮನೆಗೆ ಬಂದರು. ಮನೆಗೆ ಬಂದಿರುವ ಅವರನ್ನು ಕಂಡು ಸ್ವಾಗತಿಸಿದ. ಅರಮನೆಯ ಮೇಲಿನ ಕೊಠಡಿಯಲ್ಲಿ ವಿಶ್ರಮಿಸುವಂತೆ ತಿಳಿಸಿದ. ರಾಜನು ನಿರ್ದೇಶಿಸಿದ ಸ್ಥಳದಲ್ಲಿ ಬ್ರಾಹ್ಮಣ ದಂಪತಿಗಳು ಮಲಗಿಕೊಂಡರು.

ಬ್ರಾಹ್ಮಣಪತ್ನಿಯನ್ನು ಸಂಗಮಿಸುವ ದುರುದ್ದೇಶ ರಾಜನ ಮನಸ್ಸಿನಲ್ಲಿ ಇತ್ತು. ಹೀಗಾಗಿ ನಿದ್ರೆ ಬರಲೇ ಇಲ್ಲ. ನಡುರಾತ್ರಿಯಾಯಿತು. ಪ್ರದೇಶವೆಲ್ಲ ಪ್ರಶಾಂತವಾಗಿತ್ತು. ಎಲ್ಲರೂ ಗಾಢನಿದ್ರೆಯಲ್ಲಿ ಇದ್ದರು. ಇದುವೇ ಸರಿಯಾದ ಸಮಯ ಎಂದು ತಿಳಿದ. ಬ್ರಾಹ್ಮಣದಂಪತಿಗಳು ಮಲಗಿದ್ದ ಕೊಠಡಿಯತ್ತ ನಡೆದ. ಆದರೆ ಮಾರ್ಗದಲ್ಲಿ ದೈವೇಚ್ಛೆಯಿಂದ ಸರ್ಪವೊಂದು ರಾಜನನ್ನು ಕಚ್ಚಿತು. ಸರ್ಪದಷ್ಟನಾದ ರಾಜ ಅಲ್ಲಿಯೇ ಮರಣ ಹೊಂದಿದ.

ಆಗ ಅವನನ್ನು ಎಳೆದೊಯ್ಯಲು ಯಮದೂತರೂ, ವಿಷ್ಣುಲೋಕಕ್ಕೆ ಕರೆದೊಯ್ಯಲು ವಿಷ್ಣು ದೂತರೂ ಆಗಮಿಸಿದರು. ಅಲ್ಲಿ ಬಂದ ಯಮದೂತರನ್ನು ನಿವಾರಿಸಿ ವಿಷ್ಣುದೂತರು ಹೇಳಿದರು. ಹೇ ಯಮದೂತರೇ! ಇವನು ಧನುರ್ಮಾಸದ ಭೋಜನಕ್ಕೆಂದು ಬ್ರಾಹ್ಮಣದಂಪತಿಗಳನ್ನು ಆಮಂತ್ರಿಸಿದ್ದಾನೆ. ಅಷ್ಟರಿಂದಲೇ ಸಾಕಷ್ಟು ಪುಣ್ಯವನ್ನು ಸಂಪಾದಿಸಿದ್ದಾನೆ. ಆ ಪುಣ್ಯದ ಪ್ರಭಾವದಿಂದಲೇ ಈ ರಾಜನು ವಿಷ್ಣುಲೋಕವನ್ನು ಪಡೆಯಲು ಅರ್ಹನಾಗಿದ್ದಾನೆ.

ಧನುರ್ಮಾಸದಲ್ಲಿ ಸಪತ್ನೀಕನಾದ ಬ್ರಾಹ್ಮಣನಿಗೆ ಭೋಜನ ಮಾಡಿಸಬೇಕು. ಆ ಪುಣ್ಯದ ಮಿತಿಯನ್ನು ವರ್ಣಿಸಲು ಯಾರಿಗೂ ಸಾಧ್ಯವಿಲ್ಲ.

ಹೀಗೆಂದು ತಿಳಿಸುತ್ತ ವಿಷ್ಣುದೂತರು ಆ ರಾಜನನ್ನು ಪವಿತ್ರವಾದ ವಿಷ್ಣುಲೋಕಕ್ಕೆ ಕರೆದೊಯ್ದರು. ಧನುರ್ಮಾಸದ ಆಚರಣೆ ಇಷ್ಟು ಪುಣ್ಯಪ್ರದವಾಗಿದೆ.

**|| ಪಂಚರಾತ್ರಾಗಮೋಕ್ತ ಧನುರ್ಮಾಸ ಮಾಹಾತ್ಮ್ಯೆಯಲ್ಲಿ**
**ಎರಡನೇ ಅಧ್ಯಾಯವು ಸಮಾಪ್ತವಾಯಿತು ||**

★★★

# ಮೂರನೇ ಅಧ್ಯಾಯ

ಬ್ರಹ್ಮದೇವರು ಕೇಳಿದರು. ಹೇ ಪುರುಷೋತ್ತಮನೇ! ಧನುರ್ಮಾಸದಲ್ಲಿ ಹರಿಯ ಪೂಜೆಯನ್ನು ಮಾಡುವ ಬಗೆ ಹೇಗೆಂಬುದನ್ನು ತಿಳಿಸಿ ಅನುಗ್ರಹಿಸಬೇಕು ಎಂದು ಪ್ರಾರ್ಥಿಸಿದರು.

ಈ ಪ್ರಾರ್ಥನೆಗೆ ಓಗೊಟ್ಟು ಹಂಸರೂಪೀ ಭಗವಂತನು ಹೇಳಲು ಉಪಕ್ರಮಿಸಿದನು. ಆಲಸ್ಯದಿಂದಾಗಲೀ, ಲೋಭದಿಂದಾಗಲೀ ಧನುರ್ಮಾಸದಲ್ಲಿ ಶ್ರೀಹರಿಯ ಪೂಜೆಯನ್ನು ಮಾಡದವನು ನರಾಧಮನೇ ಸರಿ. ಆದ್ದರಿಂದ ಒಂದು ದಿನದ ಮಟ್ಟಿಗೆಯಾದರೂ ಧನುರ್ಮಾಸದ ನಿಯಮವನ್ನು ಪಾಲಿಸಬೇಕು.

ಧನುರ್ಮಾಸದಲ್ಲಿ ಶುಭ್ರವಾದ ಉಪ್ಪು, ಮೆಣಸು, ಹಸಿಶುಂಠಿ, ಇಂಗು ಮೊದಲಾದ ಪದಾರ್ಥಗಳಿಂದ ಮಿಶ್ರಿತ ಪದಾರ್ಥವನ್ನಾಗಲೀ ಅಥವಾ ಇವುಗಳಲ್ಲಿ ಯಾವುದೇ ಪದಾರ್ಥವನ್ನಾಗಲೀ ಬ್ರಾಹ್ಮಣನಿಗೆ ದಾನವಾಗಿ ನೀಡಬೇಕು. ಇಂಥ ದಾನದ ಪುಣ್ಯದಿಂದ ವಿಷ್ಣುಲೋಕವನ್ನು ಹೊಂದುವನು.

ಮೆತ್ತಗೆ ಬೇಯುವ ಶ್ರೇಷ್ಠವಾದ ಅಕ್ಕಿ, ಉತ್ತಮ ಹೆಸರುಬೇಳೆ, ಮೆಣಸು, ಲವಂಗ ಮುಂತಾದವುಗಳನ್ನು ಸೇರಿಸಿ ಚೆನ್ನಾಗಿ ಬೇಯಿಸಿದ ಮೇಲೆ ಗೋವಿನ ತುಪ್ಪವನ್ನು ಸೇರಿಸಿ ತಯಾರಿಸಿದ ಹುಗ್ಗಿ, ಗಟ್ಟಿಯಾದ ಕೆನೆಮೊಸರು, ಹೊಸದಾದ ಬೆಣ್ಣೆ ಹಾಗೂ ಇತರ ಭಕ್ಷ್ಯ-ಭೋಜ್ಯಗಳನ್ನು ಪರಮಾತ್ಮನಿಗೆ ನಿವೇದಿಸಬೇಕು. ಸುಗಂಧಿತ ಅಡಿಕೆ ಕೋಮಲವಾದ ವೀಳ್ಯದೆಲೆ ಸಹಿತವಾಗಿ ದಕ್ಷಿಣೆಯನ್ನು ಸಮರ್ಪಿಸಬೇಕು. ಶ್ರೀಹರಿಯು ನನ್ನಲ್ಲಿ ಪ್ರೀತನಾಗಲಿ ಎಂಬ ಉದ್ದೇಶದಿಂದ ಬ್ರಾಹ್ಮಣ ಭೋಜನ ಮಾಡಿಸಬೇಕು.

ಈ ರೀತಿಯಾಗಿ ಬ್ರಾಹ್ಮಣರ ಭೋಜನವನ್ನು ಮಾಡಿಸುವ ಸಾಮರ್ಥ್ಯವಿಲ್ಲದ ಮನುಜನು ಅಡುಗೆಗೆ ಬೇಕಾಗುವ ಎಲ್ಲ ಪದಾರ್ಥಗಳನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ಅದರಿಂದಲೇ ಆ ದಾನಿಯು ಸರ್ವ ಪುಣ್ಯಗಳನ್ನು ಪಡೆಯುವನು.

ಧನುರ್ಮಾಸದಲ್ಲಿ ಅಕ್ಕಿಯನ್ನು ದಾನ ಮಾಡುವವನು ಪೂರ್ಣಾಯುಷ್ಯವನ್ನು ಹೊಂದುತ್ತಾನೆ. ಆತನ ಸಕಲದುರಿತಗಳೂ ನಾಶವಾಗುತ್ತವೆ. ಶ್ರೀಕೃಷ್ಣನ ಪ್ರೀತ್ಯರ್ಥವಾಗಿ ಧನುರ್ಮಾಸದಲ್ಲಿ ಹುಗ್ಗಿಯನ್ನು ದಾನ ಕೊಡುವವನು ಬ್ರಾಹ್ಮಣ ಹತ್ಯೆಯನ್ನು ಮಾಡಿದವನಾಗಿದ್ದರೂ ಶ್ರೀಕೃಷ್ಣನ ಲೋಕವನ್ನು ಹೊಂದುವನು. ಶ್ರೀಕೃಷ್ಣನ ಪ್ರೀತಿಗಾಗಿ ಶುದ್ಧವಾದ ಬೆಣ್ಣೆಯನ್ನು ದಾನ ಮಾಡುವವನು ಶ್ರೀಹರಿಯ ಪಾದವನ್ನು ಸೇರುವನು. ವಿಷ್ಣುಭಕ್ತನಾದ ಬ್ರಾಹ್ಮಣನಿಗೆ ಗಟ್ಟಿಯಾದ ಕೆನೆಮೊಸರನ್ನು ದಾನವಾಗಿ ನೀಡಿದವನು ಸಕಲ ಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕವನ್ನು

ಹೊಂದುತ್ತಾನೆ. ಉದ್ದಿನ ದಾನ ಮಾಡಿದವನು ಗ್ರಹಗಳ ಸ್ಥಿತಿ-ಗತಿಯಿಂದ ಸೂಚಿತವಾದ ಎಲ್ಲ ವಿಧವಾದ ಪೀಡೆಗಳಿಂದ ನಿರ್ಮುಕ್ತನಾಗುತ್ತಾನೆ.

ಉತ್ತಮ ಅಡಿಕೆ, ಚಿಗುರು ವೀಳ್ಯದೆಲೆ, ಪಚ್ಚಕರ್ಪೂರ, ಅಗರು ಮುಂತಾದವುಗಳಿಂದ ಯುಕ್ತವಾದ ಉತ್ತಮ ತಾಂಬೂಲವನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ಅಷ್ಟು ಮಾತ್ರದಿಂದಲೇ ದಾನಿಯು ಯಶಸ್ಸು, ಧೈರ್ಯ, ಸಂಪತ್ತುಗಳನ್ನು ಪಡೆಯುತ್ತಾನೆ.

ತಾಂಬೂಲದಾನದಿಂದ ರೋಗಿಯು ರೋಗಮುಕ್ತನಾಗುತ್ತಾನೆ. ನಿರೋಗಿಯು ಪಾಪಗಳಿಂದ ಮುಕ್ತನಾಗುತ್ತಾನೆ. ಧನುರ್ಮಾಸದಲ್ಲಿ ಬ್ರಾಹ್ಮಣನಿಗೆ ಕಂಬಳಿಯನ್ನು ದಾನ ಮಾಡಿದವನು ಅಪಮೃತ್ಯು-ಕಾಲಮೃತ್ಯುಗಳಿಂದ ಮುಕ್ತನಾಗುತ್ತಾನೆ. ಚಳಿಯಿಂದ ಪೀಡಿತನಾದ ಬ್ರಾಹ್ಮಣನಿಗೆ ವಸ್ತ್ರದಾನವನ್ನು ಮಾಡಿದರೆ ವರ್ಣಿಸಲು ಅಸಾಧ್ಯವಾದ ಪುಣ್ಯವು ಒದಗುತ್ತದೆ. ತತ್ವನಿಷ್ಠನಾದ ಬ್ರಾಹ್ಮಣನಿಗೆ ಉಣ್ಣೆಯ ವಸ್ತ್ರಗಳನ್ನು ದಾನ ನೀಡಿದರೆ ಅಧಿಕವಾದ ಪುಣ್ಯವು ಬರುತ್ತದೆ. ಬೇಳೆ ಹಾಗೂ ಬೆಲ್ಲಗಳನ್ನು ದಾನವಾಗಿ ನೀಡಿದವನು ಅಪಮೃತ್ಯು ಹಾಗೂ ಕಾಲಮೃತ್ಯುಗಳಿಂದ ಮುಕ್ತನಾಗುವನು. ಧನುರ್ಮಾಸದಲ್ಲಿ ಕುಂಬಳಕಾಯಿಯನ್ನು ದಾನ ಮಾಡಿದವನ ವಂಶವು ನೂರು ತಲೆಮಾರುಗಳವರೆಗೆ ವೃದ್ಧಿಸುತ್ತದೆ. ಬ್ರಾಹ್ಮಣೋತ್ತಮನಿಗೆ ತೆಂಗಿನ ಫಲವನ್ನು ದಾನ ಮಾಡಿದವನು ಏಳು ಜನ್ಮಗಳವರೆಗೆ ಧನವಂತನೂ, ವಿದ್ವಾಂಸನೂ ಆಗುವನು. ತನ್ನ ಏಳು ತಲೆಮಾರಿನ ಪಿತೃಗಳೊಂದಿಗೆ ವಿಷ್ಣುಲೋಕದಲ್ಲಿ ಸುಖವಾಗಿರುವನು. ಧನುರ್ಮಾಸದ ದಾನಗಳು ವಿಷ್ಣುವಿಗೆ ಪ್ರಿಯವಾಗಿವೆ. ಆದುದರಿಂದ ಜ್ಞಾನಿಗಳು ದಾನವನ್ನು ಪ್ರಶಂಸೆ ಮಾಡುವರು.

**॥ ಪಂಚರಾತ್ರಾಗಮೋಕ್ತ ಧನುರ್ಮಾಸ ಮಾಹಾತ್ಮ್ಯೆಯಲ್ಲಿ**
**ಮೂರನೇ ಅಧ್ಯಾಯವು ಸಮಾಪ್ತವಾಯಿತು ॥**

★★★

# ನಾಲ್ಕನೇ ಅಧ್ಯಾಯ

ಬ್ರಹ್ಮದೇವರು ಕೇಳುತ್ತಾರೆ. ಹೇ ದೇವಶ್ರೇಷ್ಠನೇ! ನಿನ್ನ ಪ್ರೀತಿಗಾಗಿ ಬ್ರಾಹ್ಮಣರನ್ನು ಭೋಜನಕ್ಕೆ ಹಿಂದಿನ ದಿನವೇ ಆಮಂತ್ರಿಸಬೇಕೆಂದು ತಿಳಿಸಿರುವೆ. ಆದರೆ ಇದೆಲ್ಲವನ್ನು ಮಾಡಲು ಮನೆಯಲ್ಲಿ ಅನುಕೂಲವಿಲ್ಲದಿರುವಾಗ ಬ್ರಾಹ್ಮಣರು ಧನುರ್ಮಾಸ ವ್ರತವನ್ನು ಆಚರಿಸುವ ಬಗೆ ಹೇಗೆ? ಎಂಬುದನ್ನು ಸರ್ವಜ್ಞನಾದ ನೀನೇ ತಿಳಿಸುವ ಕೃಪೆ ಮಾಡಬೇಕು ಎಂದು ಪ್ರಾರ್ಥಿಸಲು, ಹಂಸನು ಹೇಳಲಾರಂಭಿಸಿದನು.

ಬ್ರಾಹ್ಮಣರನ್ನು ತನ್ನ ಮನೆಗೆ ಕರೆದು ಆಮಂತ್ರಿಸುವುದಕ್ಕಿಂತ ತಾನೇ ಅವರ ಮನೆಗೆ ಹೋಗಿ ಆಮಂತ್ರಿಸುವುದರಿಂದ ದ್ವಿಗುಣವಾದ ಪುಣ್ಯವು ಲಭಿಸುತ್ತದೆ. ಭೋಜನ ವಿಷಯದಲ್ಲೂ ಹೀಗೇ ತಿಳಿಯಬೇಕು. ಬ್ರಾಹ್ಮಣನ ಮನೆಗೆ ಹೋಗಿ ತಾನು ಅಡುಗೆಯನ್ನು ಸಿದ್ಧಪಡಿಸಿ ಪೂಜಾ ನೈವೇದ್ಯದ ನಂತರ ಭೋಜನ ಮಾಡಿಸಿದಾಗ ಬರುವ ಪುಣ್ಯಕ್ಕಿಂತಲೂ ಎರಡರಷ್ಟು ಅಧಿಕಪುಣ್ಯವು ಆ ಬ್ರಾಹ್ಮಣನು ಸ್ವಯಂಪಾಕ ಮಾಡಿಕೊಂಡು ಭೋಜನ ಮಾಡಿದಾಗ ಒದಗುತ್ತದೆ.

ಇನ್ನು ತನ್ನ ಮನೆಯಲ್ಲಿ ಸಿದ್ಧಪಡಿಸಿ ನೈವೇದ್ಯ ಮಾಡಿದ ಶುದ್ಧಪದಾರ್ಥಗಳನ್ನು ಬ್ರಾಹ್ಮಣನ ಮನೆಗೇ ಹೋಗಿ ಸಮರ್ಪಿಸಿದರೆ ಎಂಟು ಪಟ್ಟು ಅಧಿಕ ಪುಣ್ಯವು ಒದಗುವುದು. ಅಡಿಗೆ ಮಾಡಿಕೊಳ್ಳಲು ಪದಾರ್ಥಗಳನ್ನು ಬ್ರಾಹ್ಮಣನಿಗೆ ಸಮರ್ಪಿಸಿ ಆತನ ಭೋಜನಾನಂತರ ಉಳಿದ ಆಹಾರವನ್ನು ಅವನ ಮನೆಯಲ್ಲಿಯೇ ಸೇವಿಸುವ ಮನುಜನ ಸಕಲಪಾಪಗಳೂ ನಾಶವಾಗುತ್ತವೆ. ಅಂಥವನು ಮಹಾಪಾಪಿಯಾಗಿದ್ದರೂ ಧಾನ್ಯದಾನ, ಶೇಷಭೋಜನಾದಿಗಳಿಂದ ಶುದ್ಧನಾಗಿ ವಿಷ್ಣುಲೋಕವನ್ನು ಹೊಂದುತ್ತಾನೆ.

ವೈಷ್ಣವರ ಮನೆಯಲ್ಲೇ ಅನ್ನವನ್ನು ಯಾಚಿಸಬೇಕು. ಅನ್ನವು ದೊರೆಯದಿದ್ದರೆ ಕೇವಲ ನೀರನ್ನು ಯಾಚಿಸಿ ಕುಡಿಯಬೇಕು. ಹೀಗೆ ತಿಳಿದು ಸಪತ್ನೀಕನಾದ ಬ್ರಾಹ್ಮಣನಿಗೆ ಅವನ ಮನೆಯಲ್ಲೇ ಭೋಜನ ಮಾಡಿಸಿ ಮನೆಗೆ ಬಂದವನು ನಿಶ್ಚಿತವಾಗಿಯೂ ಪಾಪಗಳಿಂದ ನಿರ್ಮುಕ್ತನಾಗುತ್ತಾನೆ. ಇನ್ನು ಬ್ರಾಹ್ಮಣನು ಯಜಮಾನನ ಮನೆಯಲ್ಲಿ ತಾನೇ ಅಡುಗೆ ಮಾಡಿಕೊಂಡು ಊಟ ಮಾಡಿದರೆ ಎರಡುಪಟ್ಟು ಪುಣ್ಯ ಪಡೆಯುತ್ತಾನೆ.

ಈ ವಿಷಯದಲ್ಲಿ ಒಂದು ಪುರಾತನ ವೃತ್ತಾಂತವನ್ನು ಹೇಳುವೆನು. ಹಿಂದೆ ದ್ವಾಪರಯುಗದಲ್ಲಿ ಪಾಂಡವರು ಒಂದು ಯಜ್ಞವನ್ನಾರಂಭಿಸಿದರು. ಆ ಯಜ್ಞದ ಅಂಗವಾಗಿ ಪ್ರತಿದಿನ ಸಾವಿರಾರು ಬ್ರಾಹ್ಮಣರ ಭೋಜನವಾಗುತ್ತಿತ್ತು.

ಹೀಗಿರುತ್ತಿರಲು ಒಂದು ದಿನ ಮಧ್ಯಾಹ್ನದ ಸಮಯಕ್ಕೆ ಓರ್ವ ಬ್ರಾಹ್ಮಣನು ಪಾಂಡವರ ಅರಮನೆಗೆ ಬಂದನು. ಧರ್ಮರಾಜನನ್ನು ಕಂಡು ಅನ್ನವನ್ನು ಯಾಚಿಸಿದನು. ಧರ್ಮರಾಜನು ಬ್ರಾಹ್ಮಣನಿಗೆ ಸ್ನಾನ ಮಾಡಿ ಬನ್ನಿರೆಂದು ಹೇಳಿದನು.

ಧರ್ಮರಾಜನು ಹೀಗೆನ್ನಲು ಆ ಬ್ರಾಹ್ಮಣನು ತನ್ನದು ಸ್ವಯಂಪಾಕ-ವ್ರತವೆಂದನು. ಬ್ರಾಹ್ಮಣನ ಮಾತನ್ನು ಕೇಳಿ ಧರ್ಮಸೂನುವು ಜೋರಾಗಿ ನಕ್ಕನು. ಬ್ರಾಹ್ಮಣನೇ! ಈಗ ಅಡುಗೆಗಾಗಿ ಜಾಗ ಮೊದಲಾದ ವ್ಯವಸ್ಥೆಗಳಿಲ್ಲ. ನನ್ನ ಮನೆಯಲ್ಲಿ ದ್ರೌಪದಿಯು ಪಾಕ ಮಾಡುತ್ತಾಳೆ. ಭೀಮಸೇನನು ಬಡಿಸುತ್ತಾನೆ. ನಾನು ನಿನಗೆ ಭೋಜನಕ್ಕೆ ಕೂರಿಸಿ ಕೃಷ್ಣಾರ್ಪಣವೆನ್ನುತ್ತೇನೆ. ಆದ್ದರಿಂದ ಯಾವುದೇ ಸಂದೇಹ ಪಡಬೇಡ. ಎನ್ನಲು ಆ ಬ್ರಾಹ್ಮಣನು ಒಂದು ಮುಹೂರ್ತಕಾಲ ಸುಮ್ಮನೇ ನಿಂತುಕೊಂಡನು.

ಆ ಸಮಯಕ್ಕೆ ಸರಿಯಾಗಿ ಶ್ರೀಕೃಷ್ಣನು ಅಲ್ಲಿಗೆ ಆಗಮಿಸಿದನು. ಆ ಬ್ರಾಹ್ಮಣನನ್ನು ಕಂಡು ಹೀಗೇಕೆ ನಿಂತಿರುವನೆಂದು ಯುಧಿಷ್ಠಿರನನ್ನು ಪ್ರಶ್ನೆ ಮಾಡಿದನು. ಆಗ ಧರ್ಮರಾಜನು ಶ್ರೀಕೃಷ್ಣನೇ ಈ ಬ್ರಾಹ್ಮಣನು ಸ್ವಯಂಪಾಕ ಮಾಡಿಕೊಳ್ಳುವುದಾಗಿ ಹೇಳುತ್ತಿದ್ದಾನೆ. ಆದರೆ ಏನು ಮಾಡುವುದು? ಸ್ವಯಂಪಾಕಕ್ಕೆ ಅರಮನೆಯಲ್ಲಿ ಜಾಗವಿಲ್ಲವೆಂದನು.

ಧರ್ಮರಾಜನ ಮಾತುಗಳನ್ನು ಕೇಳಿ ಶ್ರೀಕೃಷ್ಣನು ಹಾಗಾದರೆ ಆ ಬ್ರಾಹ್ಮಣನಿಗೆ ಭೋಜನ ಮಾಡಿಸುವ ಸಾಮರ್ಥ್ಯವಿಲ್ಲ. ನೀವು ಸುಖವಾಗಿ ಮುಂದೆ ನಡೆಯಲು ತಿಳಿಸೆಂದನು. ಆಗ ಧರ್ಮರಾಜನು ಶ್ರೀಕೃಷ್ಣನೇ ಶಕ್ತಿ ಇಲ್ಲ, ಸುಖವಾಗಿ ಮುಂದಕ್ಕೆ ನಡೆ ಎಂದು ನಾನಂತೂ ಹೇಳಲಾರೆ ಎಂದನು. ಶ್ರೀಕೃಷ್ಣನು ಹಾಗಾದರೆ ಅವನಿಗೆ ಸ್ವಯಂಪಾಕ ಮಾಡಿಕೊಳ್ಳಲು ವ್ಯವಸ್ಥೆ ಮಾಡೆಂದನು. ಧರ್ಮರಾಜನು ಹಾಗೇ ಆಗಲಿ ಎಂದು ನುಡಿಯಲು ಬ್ರಾಹ್ಮಣನು ಅತಿ ಸಂತುಷ್ಟನಾದನು.

ಆ ಬ್ರಾಹ್ಮಣನು ಧರ್ಮರಾಜನ ಮನೆಯಲ್ಲಿ ವಿವಿಧ ರೀತಿಯ ಪಾಕ ಪದಾರ್ಥಗಳನ್ನು ಮಾಡಿಕೊಂಡು ಬ್ರಾಹ್ಮಣರೊಂದಿಗೆ ಭೋಜನ ಮಾಡಿದನು. ಬ್ರಾಹ್ಮಣರ ಭೋಜನದ ನಂತರ ಶ್ರೀಕೃಷ್ಣ ಪರಮಾತ್ಮನು ಆ ಬ್ರಾಹ್ಮಣನ ಎಲೆಯೊಂದನ್ನು ಬಿಟ್ಟು ಉಳಿದೆಲ್ಲ ಬ್ರಾಹ್ಮಣರ ಎಂಜಲು ಎಲೆಗಳನ್ನು ತೆಗೆದು ಶುದ್ಧಗೊಳಿಸಿದನು.

ಆ ಒಂದು ಎಲೆಯನ್ನು ಬಿಟ್ಟಿದ್ದು ಯಾಕೆ ಎಂದು ಧರ್ಮರಾಜ ಶ್ರೀಕೃಷ್ಣನನ್ನು ಕೇಳಿದನು. ಆ ಎಲೆಯನ್ನು ತೆಗೆಯಲು ಮರೆತುಹೋಯಿತು. ಅದೊಂದನ್ನು ನೀನು

ಶುದ್ಧಗೊಳಿಸು ಎಂದು ಶ್ರೀಕೃಷ್ಣನು ಹೇಳಿದನು. ಧರ್ಮರಾಜನು ಆ ಬ್ರಾಹ್ಮಣನ ಎಂಜಲು ಎಲೆಯನ್ನು ತೆಗೆದನು. ಅಲ್ಲೊಂದು ವಿಸ್ಮಯ ಘಟಿಸಿತು. ಒಂದು ಎಲೆ ತೆಗೆದಂತೆ ಮತ್ತೊಂದು ಎಲೆ ಹೀಗೆ ಸಾವಿರಾರು ಎಲೆಗಳು ಬರುತ್ತಲೇ ಇವೆ. ಎಷ್ಟು ಎಲೆಗಳನ್ನು ತೆಗೆದರೂ ಮುಗಿಯದಿರುವುದನ್ನು ಕಂಡು ಪಾಂಡುನಂದನನು ಆಶ್ಚರ್ಯಚಕಿತನಾದನು. ಮತ್ತು ಆ ಬ್ರಾಹ್ಮಣನು ಬೇರಾರೂ ಅಲ್ಲದೇ ಸ್ವಯಂ ಶ್ರೀಕೃಷ್ಣನೇ ಆಗಿರುವನೆಂದು ನಿರ್ಧರಿಸಿದನು.

ಸ್ವಯಂಪಾಕವನ್ನು ಮಾಡಿ ಪ್ರತ್ಯೇಕ ವೈಶ್ವದೇವ ಮಾಡುವುದು ದೇವತೆಗಳಿಗೆ ಪ್ರಿಯವೆಂದು ತಿಳಿದು ಧರ್ಮರಾಜನು ಬಹಳ ಸಂತೋಷ ಹೊಂದಿದನು. ಹೇ ಚತುರ್ಮುಖನೇ! ನೋಡಿದೆಯಾ, ಧನುರ್ಮಾಸದ ಹಾಗೂ ಸ್ವಯಂಪಾಕದ ಮಹಿಮೆಯನ್ನು. ಅದರ ಮಹಿಮೆ ಅನುಪಮವಾಗಿದೆ.

ಧನುರ್ಮಾಸದಲ್ಲಿ ಸತ್ಪಾತ್ರನಾದ ಬ್ರಾಹ್ಮಣನಿಗೆ ಕೂಷ್ಮಾಂಡ (ಕುಂಬಳಕಾಯಿ) ದಾನವನ್ನು ಮಾಡಬೇಕು. ಕುಂಬಳಕಾಯಿಯ ದಾನದಿಂದ ಯಾವಾಗಲೂ ವಂಶವೃದ್ಧಿಯಾಗುವುದು. ವಿಶಿಷ್ಟವಾದ ಧನುರ್ಮಾಸದ ಮಹಿಮೆಯನ್ನು ಕೇಳುವವನು ಈ ಲೋಕದಲ್ಲಿ ಸಕಲ ಭೋಗ ಭಾಗ್ಯಗಳನ್ನು ಅನುಭವಿಸಿ ಕೊನೆಗೆ ಮೋಕ್ಷವನ್ನೇ ಹೊಂದುತ್ತಾನೆ.

**॥ ಪಂಚರಾತ್ರಾಗಮೋಕ್ತ ಧನುರ್ಮಾಸ ಮಾಹಾತ್ಮ್ಯೆಯಲ್ಲಿ ನಾಲ್ಕನೇ ಅಧ್ಯಾಯವು ಸಮಾಪ್ತವಾಯಿತು ॥**

★★★

# ಶ್ರೀ ಆಗ್ನೇಯಪುರಾಣಾಂತರ್ಗತ
# ಧನುರ್ಮಾಸ ಮಾಹಾತ್ಮ್ಯಮ್
## ಅಥ ಪ್ರಥಮೋಽಧ್ಯಾಯಃ

**ಋಷಯ ಊಚುಃ -**

**ಸೂತ ಸೂತ ಮಹಾಭಾಗ ಸರ್ವಶಾಸ್ತ್ರವಿಶಾರದ ।**
**ಧನುರ್ಮಾಸಸ್ಯ ಮಾಹಾತ್ಮ್ಯಂ ವಿಸ್ತರಾದ್ ಬ್ರೂಹಿ ನೋ ಮುನೇ ॥೧॥**

**ಸೂತ ಉವಾಚ-**

**ಧನುರ್ಮಾಸಸ್ಯ ಮಾಹಾತ್ಮ್ಯಂ ಕೋ ವಾ ವರ್ಣಯಿತುಂ ಕ್ಷಮಃ ।**
**ಬ್ರಹ್ಮಾ ಚತುರ್ಮುಖಃ ಶೇಷಃ ಸಹಸ್ರವದನೋಽಪಿ ವಾ ॥೨॥**

**ಧನುರ್ಮಾಸಸ್ಯ ಮಾಹಾತ್ಮ್ಯಂ ಸಮರ್ಥೋ ನ ಹಿ ವರ್ಣಿತುಮ್ ।**
**ತಥಾಪಿ ವಕ್ಷ್ಯೇ ಶೃಣುತ ಯಥಾ ವ್ಯಾಸೋಽಬ್ರವೀದ್ಧಿ ಮೇ ॥೩॥**

**ಯುಧಿಷ್ಠಿರಸ್ಯ ಕೃಷ್ಣಸ್ಯ ಸಂವಾದಂ ಪರಮಾದ್ಭುತಮ್ ।**
**ಭುಕ್ತಿಮುಕ್ತಿಪ್ರದಂ ಪುಣ್ಯಂ ಶ್ರವಣಾತ್ ಪಾಪನಾಶನಮ್ ॥೪॥**

---

೧ ಋಷಿಗಳು ಪ್ರಾರ್ಥನೆ ಮಾಡುತ್ತಾರೆ. ಮಹಾಭಾಗ್ಯವಂತರಾದ ಸಕಲ ಶಾಸ್ತ್ರಜ್ಞರಾದ ಸೂತ ಮುನಿಗಳೇ! ನಮಗೆಲ್ಲ ಧನುರ್ಮಾಸದ ಮಾಹಾತ್ಮ್ಯ-ಯನ್ನು ವಿಶದವಾಗಿ ತಿಳಿಸಿರಿ.

೨ ಸೂತರು ಹೇಳುತ್ತಾರೆ. ಧನುರ್ಮಾಸದ ಮಹಿಮೆಯನ್ನು ವರ್ಣಿಸಲು ಯಾರು ಸಮರ್ಥರು? ಚತುರ್ಮುಖರಾದ, ಬ್ರಹ್ಮದೇವರಾಗಲೀ, ಸಾವಿರ ಮುಖದ ಶೇಷದೇವರಾಗಲೀ,

೩ ಧನುರ್ಮಾಸದ ಮಹಿಮೆಯನ್ನು ವರ್ಣಿಸಲು ಶಕ್ತರಲ್ಲ. ಬ್ರಹ್ಮದೇವರಿಗೆ ಶೇಷದೇವರಿಗೆ ಧನುರ್ಮಾಸವನ್ನು ವರ್ಣಿಸಲು ಸಾಧ್ಯವಿಲ್ಲ ಅಂತ ಅಭಿಪ್ರಾಯವಲ್ಲ. ಧನುರ್ಮಾಸವ್ರತ ಪ್ರಶಸ್ತವಾಗಿದೆ. ಈ ವ್ರತವನ್ನು ಆಚರಿಸಬೇಕು. ಅಂತ ತಾತ್ಪರ್ಯ. ಇಂಥ ಧನುರ್ಮಾಸದ ಮಹಿಮೆಯನ್ನು ವೇದವ್ಯಾಸದೇವರು ಹೇಳಿದ ರೀತಿಯಲ್ಲಿ ನಿಮಗೆ ತಿಳಿಸುತ್ತೇನೆ, ಕೇಳಿರಿ.

೪ ಅತ್ಯಾಶ್ಚರ್ಯಕರವಾದ ಈ ಧನುರ್ಮಾಸ ಮಾಹಾತ್ಮ್ಯೆಯು ಯುಧಿಷ್ಠಿರ ಹಾಗೂ ಭಗವಾನ್ ಕೃಷ್ಣನ ಸಂವಾದ ರೂಪವಾಗಿದೆ. ಶ್ರವಣಮಾತ್ರದಿಂದ ಪಾಪ ಕಳೆಯುವ ಈ ಮಹಿಮೆಯು ಭೋಗಪ್ರದವೂ ಅಲ್ಲದೇ ಭಗವಂತನಲ್ಲಿ

**ಋಷಯ ಊಚುಃ -**

**ಕಥಂ ತು ಕೃತವಾನ್ ಪ್ರಶ್ನಂ ಕೃಷ್ಣಂ ಪ್ರತಿ ಯುಧಿಷ್ಠಿರಃ ।**
**ಏತತ್ತು ಸರ್ವಮಾಖ್ಯಾನಂ ಬ್ರೂಹಿ ನೋ ಮುನಿಸತ್ತಮ ॥೫॥**

**ಸೂತ ಉವಾಚ -**

**ದ್ವೈತೇ ವನೇ ಸ್ಥಿತಾನ್ ಪಾಂಡೂನ್ ವಸುದೇವಸುತೋ ಹರಿಃ ।**
**ಸಮಾಧಾನಾರ್ಥಮೇತೇಷಾಮಾಗತೋ ದುಃಖಶಾಂತಯೇ ॥೬॥**

**ಯುಧಿಷ್ಠಿರೋಽಥ ತಂ ದೃಷ್ಟ್ವಾ ಸ್ನೇಹವಾತ್ಸಲ್ಯಯಂತ್ರಿತಃ ।**
**ಉತ್ಥಾಯ ಚಾಸನಾತ್ ತೂರ್ಣಮಾಲಿಂಗ್ಯಾಸನಮಾಸ್ಥಿತಃ ॥೭॥**

**ಧರ್ಮರಾಜಃ ಸ್ಥಿತಂ ಕೃಷ್ಣಂ ದೇವಕೀನಂದನಂ ಹರಿಮ್ ।**
**ದುರ್ಯೋಧನಕೃತಾನ್ ಕ್ಲೇಶಾನ್ ಸ್ಮರನ್ ಸಾಶ್ರುರಭಾಷತ ॥೮॥**

**ಯುಧಿಷ್ಠಿರ ಉವಾಚ-**

**ನಾಸ್ಮತ್ತೋ ಭಾಗ್ಯಹೀನೋಽಸ್ತಿ ಮಾತುಲೇಯ ಮಹೀತಲೇ ।**
**ವಯಂ ತು ಬಾಲ್ಯಮಾರಭ್ಯ ಯತ್ ಕ್ಲೇಶಾನನ್ವಭೂಮ ಹಿ ॥೯॥**

---

ಅತಿಶಯ ಭಕ್ತಿಯನ್ನು ನೀಡುವ ಮುಖಾಂತರ ಮೋಕ್ಷದಾಯಕವೂ ಆಗಿದೆ.

೫ ಮುನಿಶ್ರೇಷ್ಠರಾದ ಸೂತರೇ, ಯುಧಿಷ್ಠಿರನು ಕೃಷ್ಣನನ್ನು ಏನೆಂದು ಪ್ರಶ್ನೆ ಮಾಡಿದನು. ಅವರಿಬ್ಬರ ಮಂಗಲಕರವಾದ ಸಂವಾದವನ್ನು ನಮಗೆ ತಿಳಿಸಿರಿ ಎಂದು ಋಷಿಗಳು ಸೂತರನ್ನು ಪ್ರಶ್ನೆ ಮಾಡಿದರು.

೬ ಮೋಸದ ದ್ಯೂತದಲ್ಲಿ ಸೋತು ವನವಾಸಿಗಳಾಗಿ ದ್ವೈತವನದಲ್ಲಿರುವ ಪಾಂಡವರನ್ನು ಸಮಾಧಾನಪಡಿಸಲು ವಾಸುದೇವನಾದ ಕೃಷ್ಣನು ಅಲ್ಲಿಗೆ ಆಗಮಿಸಿದ.

೭ ತಮ್ಮ ನಿವಾಸಕ್ಕೆ ಆಗಮಿಸಿದ ಕೃಷ್ಣನನ್ನು ನೋಡಿ ಭಕ್ತಿ ವಶನಾದ ಧರ್ಮರಾಜನು ಆಸನದಿಂದೆದ್ದು ಕೃಷ್ಣನನ್ನು ಆಲಿಂಗಿಸಿ ಯೋಗ್ಯ ಆಸನದಲ್ಲಿ ಕುಳ್ಳಿರಿಸಿದ.

೮ ದೇವಕೀಸುತನಾಗಿ ಅವತರಿಸಿದ ಕೃಷ್ಣನನ್ನು ಆಸನದಲ್ಲಿ ಕುಳ್ಳಿರಿಸಿದ ಧರ್ಮರಾಜನು, ದುರ್ಯೋಧನನು ನೀಡಿದ ಕ್ಲೇಶಗಳನ್ನು ಸ್ಮರಿಸಿ ದುಃಖಿತ-ನಾಗಿ ಕಣ್ಣೀರಿಡುತ್ತಾ ಕೃಷ್ಣನಿಗೆ ಹೇಳತೊಡಗಿದ.

೯ ಹೇ ಪರಮಾತ್ಮನಾದ ಶ್ರೀಕೃಷ್ಣನೇ, ಪ್ರಪಂಚದಲ್ಲಿ ನಮಗಿಂತ ಭಾಗ್ಯಹೀನರು ಮತ್ತಾರೂ ಇಲ್ಲ. ನಾವು ಬಾಲ್ಯದಿಂದಲೂ ಕ್ಲೇಶಗಳನ್ನೇ ಅನುಭವಿಸುತ್ತಿದ್ದೇವೆ.

**ಪಿತ್ರಾ ವಿಶ್ಲೇಷಿತಾ ಬಾಲ್ಯೇ ಪಿತೃವ್ಯೇಣಾಪ್ಯುಪೇಕ್ಷಿತಾಃ ।**
**ಪುರಾನ್ನಿಶ್ಚಾಸಿತಾಃ ಸರ್ವೇ ವಾರಣಾವತಪತ್ತನೇ ॥೧೦॥**

**ಲಾಕ್ಷಾಗೃಹೇಽನಲೇ ಹಂತುಂ ವಂಚಿತಾಃ ಸ್ಮ ಪುರೋಚನಾತ್ ।**
**ಏಕಚಕ್ರಾಖ್ಯನಗರೇ ಪುನರ್ಭೈಕ್ಷ್ಯೋದರಂಭರಾಃ ॥೧೧॥**

**ಕೃಷ್ಣಾವಿವಾಹಮಾಕರ್ಣ್ಯ ಧೃತರಾಷ್ಟ್ರೇಣ ಪತ್ತನೇ ।**
**ಆಹೂಯ ಬಾಂಧವಾಗ್ರೇ ತು ಪುನರ್ನಿರ್ವಾಸಿತಾ ವನೇ ॥೧೨॥**

**ಮಾತುಲೇನ ಭವದ್ಭಿರ್ವಾ ಕದಾಚಿನ್ನ ವಿಚಾರಿತಾಃ ।**
**ಅಸ್ಮನ್ಮಾತಾ ಕೃಶಾ ದುಃಖಾತ್ ನ ಸ್ಮೃತಾ ಭಾಗ್ಯಸಂಕ್ಷಯಾತ್ ॥೧೩॥**

**ದರಿದ್ರಸ್ಯ ಕುತೋ ಬಂಧುಃ ದರಿದ್ರಸ್ಯ ಕುತಃ ಸುಖಮ್ ।**
**ದರಿದ್ರಸ್ಯ ಕುತೋ ಧರ್ಮೋ ಮೃತಪ್ರಾಯೋಽಧನಃ ಸ್ಮೃತಃ ॥೧೪॥**

**ಯಸ್ಯಾಸ್ತಿ ವಿತ್ತಂ ಸ ನರಃ ಕುಲೀನಃ ಸ ಪಂಡಿತಃ ಸ ಶ್ರುತವಾನ್ ಗುಣಜ್ಞಃ ।**
**ಸ ಏವ ವಕ್ತಾ ಸ ಚ ದರ್ಶನೀಯಃ ಸರ್ವೇ ಜನಾಃ ಕಾಂಚನಮಾಶ್ರಯಂತೇ ॥**

---

೧೦ ಬಾಲ್ಯದಲ್ಲೇ ತಂದೆಯಾದ ಪಾಂಡುರಾಜನನ್ನು ಕಳೆದುಕೊಂಡೆವು. ತಂದೆಯ ಸೋದರನಾದ ಧೃತರಾಷ್ಟ್ರನು ಕೂಡ ನಮ್ಮನ್ನು ತಿರಸ್ಕರಿಸಿ ಹಸ್ತಿನಾಪುರದಿಂದ ಹೊರಗೆ ಕಳಿಸಿದ.

೧೧ ವಾರಣಾವತ ನಗರದಲ್ಲಿ ಪುರೋಚನನಿಂದ ನಮ್ಮನ್ನೆಲ್ಲ ಅರಗಿನ ಮನೆಯಲ್ಲಿ ಸುಟ್ಟು ಹಾಕುವ ವಂಚನೆಯೂ ನಡೆಯಿತು. ರಾಜಪುತ್ರರಾಗಿಯೂ ಕೂಡ ಏಕಚಕ್ರನಗರದಲ್ಲಿ ಭಿಕ್ಷಾನ್ನದಿಂದ ಹೊಟ್ಟೆ ತುಂಬಿಸಿಕೊಂಡೆವು.

೧೨ ದ್ರೌಪದಿಯೊಡನೆ ವಿವಾಹದ ನಂತರ ಬಾಂಧವರೆದುರು ನಮ್ಮನ್ನೆಲ್ಲ ಹಸ್ತಿನಾಪುರಕ್ಕೆ ಕರೆಸಿದ ಧೃತರಾಷ್ಟ್ರನು, ದ್ಯೂತದ ನೆಪದಿಂದ ನಮ್ಮನ್ನೆಲ್ಲ ವನವಾಸಕ್ಕೆ ಕಳುಹಿಸಿದ.

೧೩ ಮಾತುಲನಾದ ವಸುದೇವನಾಗಲೀ; ವಸುದೇವ ಸುತನಾದ ನೀನಾಗಲೀ ನಮ್ಮನ್ನು ಈ ಕಷ್ಟಗಳಿಂದ ರಕ್ಷಿಸಲಿಲ್ಲ. ದುಃಖದಿಂದ ಕೃಶಳಾದ ನಮ್ಮ ತಾಯಿ ಕುಂತಿಯೂ ದೌರ್ಭಾಗ್ಯದಿಂದ ನಿಮ್ಮ ಸ್ಮರಣೆಗೆ ಬರಲಿಲ್ಲ.

೧೪ ದರಿದ್ರನಿಗಾರೂ ಬಂಧುಗಳಿಲ್ಲ, ದರಿದ್ರನಿಗೆಲ್ಲೂ ಸುಖವಿಲ್ಲ. ನಿರ್ಧನನಿಗೆ ಧರ್ಮ ಸಾಧನೆಯೂ ಇಲ್ಲ. ಅಧನನು ಬದುಕಿದ್ದೂ ಮೃತನಂತೆಯೇ ಸರಿ.

೧೫ ಯಾವನು ಧನವಂತನೋ, ಅವನೇ ಒಳ್ಳೆಯ ಕುಲದಲ್ಲಿ ಹುಟ್ಟಿದವನು, ಅವನೇ ಪಂಡಿತ, ಉತ್ತಮ ಗುಣವಂತ. ಆತನೇ ಉತ್ತಮ ವಾಗ್ಮಿ, ಉತ್ತಮ ರೂಪವಂತ, ಎಲ್ಲ ಜನರು ಧನವಂತನನ್ನೇ ಆಶ್ರಯಿಸುತ್ತಾರೆ.

ಯಸ್ಯೇಶ್ವರಃ ಕೃಪಾಪೂರ್ಣೋ ತಸ್ಯ ಸಂಪದ್ಭವೇದ್ಧ್ರುವಮ್ ।
ಯಸ್ಯೈಶ್ವರ್ಯಂ ಭವೇತ್ಸರ್ವೇ ಬಾಂಧವಾಸ್ತಮುಪಾಸತೇ ॥೧೬॥

ಶತ್ರವೋಽಪಿ ನಿರಸ್ತಾಃ ಸ್ಯುಃ ದೈವಂ ತಸ್ಯ ಸುಖಪ್ರದಮ್ ।
ನ ತಸ್ಯ ಶತ್ರುಬಾಧಾ ಸ್ಯಾದಷ್ಟೈಶ್ವರ್ಯಂ ಚ ಲಭ್ಯತೇ ॥೧೭॥

ಯಥಾ ವಂಶಾಭಿವೃದ್ಧಿಃ ಸ್ಯಾದ್ಯಥೇಶೋಽಭೀಷ್ಟದೋ ಭವೇತ್ ।
ಸರ್ವಂ ವಿಚಾರ್ಯ ತತ್ತ್ವೇನ ಬ್ರೂಹಿ ಮೇ ಪುರುಷೋತ್ತಮ ॥೧೮॥

ಕೃಪಾದೃಷ್ಟಿಂ ಕುರು ಶ್ರೀಮನ್ ದಾಸೋಽಸ್ಮಿ ತವ ಕೇಶವ
ಇತ್ಯುಕ್ತ್ವಾ ವಿರರಾಮಾಥ ಸಾಶ್ರುಕಂಠೋ ಯುಧಿಷ್ಠಿರಃ ॥೧೯॥

ಕೃಷ್ಣ ಉವಾಚ-

ಇತಿ ಯೌಧಿಷ್ಠಿರಂ ವಾಕ್ಯಂ ಶ್ರುತ್ವಾ ಸಕರುಣಂ ಹರಿಃ ।
ಭೋ ಭೋ ರಾಜನ್ ವೃಥಾ ಕ್ಲೇಶಂ ಕುತಃ ಸ್ಮರಸಿ ಮೂರ್ಖವತ್ ॥೨೦॥

ಹಸ್ತಮಾಲಂಬ್ಯ ಸಸ್ನೇಹಂ ಸಾಂತ್ವಯನ್ನಿದಮಬ್ರವೀತ್ ।
ಕಿಮಿದಂ ಪ್ರಾಕೃತಾಂ ಬುದ್ಧಿಂ ಕುರುಷೇ ಕೌರವೋತ್ತಮ ॥೨೧॥

---

೧೬ ಯಾವನು ಈಶ್ವರನ ಕೃಪೆಗೆ ಪಾತ್ರನೋ ಆತನು ನಿಶ್ಚಿತವಾಗಿ ಸಂಪತ್ತನ್ನು ಪಡೆಯುತ್ತಾನೆ. ಯಾರಲ್ಲಿ ಐಶ್ವರ್ಯವಿದೆಯೋ ಆತನನ್ನು ಎಲ್ಲ ಬಂಧುಗಳೂ ಓಲೈಸುತ್ತಾರೆ.

೧೭ ಈಶ್ವರನ ಕೃಪಾಪಾತ್ರನಾದವನ ಶತ್ರುಗಳು ನಷ್ಟರಾಗುತ್ತಾರೆ. ಎಲ್ಲ ದೇವತೆಗಳು ಆತನಿಗೆಸುಖವನ್ನೇ ಉಂಟುಮಾಡುತ್ತಾರೆ. ಆತನಿಗೆಶತ್ರುಬಾಧೆಯಾಗುವುದಿಲ್ಲ. ಅಷ್ಟೈಶ್ವರ್ಯಗಳನ್ನು ಆತನು ಹೊಂದುತ್ತಾನೆ.

೧೮ ಹೇ ಪುರುಷೋತ್ತಮನಾದ ಕೃಷ್ಣನೇ! ನಮಗೆ ಈಶ್ವರನು ಇಷ್ಟಾರ್ಥಗಳನ್ನು ಕರುಣಿಸಬೇಕು. ನಮ್ಮ ವಂಶದ ಅಭಿವೃದ್ಧಿಯಾಗಬೇಕು. ಅದಕ್ಕಾಗಿ ನಾವೇನು ಮಾಡಬೇಕೆಂಬುದನ್ನು ತಿಳಿಸು.

೧೯ ಹೇ ಕೇಶವ ನಾನು ನಿನ್ನ ದಾಸ. ನನ್ನಲ್ಲಿ ಕೃಪೆದೋರು ಎಂದು ಗದ್ಗದ ಕಂಠದಿಂದ ಒದ್ದೆ ಕಂಗಳಿಂದ ಕೂಡಿದ ಧರ್ಮರಾಜನು ಕೃಷ್ಣನನ್ನು ಪ್ರಾರ್ಥಿಸಿ ವಿರಮಿಸಿದನು.

೨೦ ಕರುಣೆ ತುಂಬಿದ ಧರ್ಮರಾಜನ ಮಾತುಗಳನ್ನು ಶ್ರೀಕೃಷ್ಣಪರಮಾತ್ಮ ಕೇಳಿದ. ಮಾತನಾಡಿದ. ಹೇ ರಾಜನೇ! ಹಿಂದೆ ಅನುಭವಿಸಿದ ದುಃಖಗಳನ್ನೇ ಸ್ಮರಿಸಿ ಕೊಳ್ಳುವವನು ಮೂರ್ಖನೇ ಸರಿ.

೨೧ ಸ್ನೇಹಪೂರ್ವಕವಾಗಿ ಅಜಾತಶತ್ರುವಿನ ಹಸ್ತವನ್ನು ಹಿಡಿದುಕೊಂಡು ಸಂತೈಸುತ್ತ

ತತ್ತ್ವಜ್ಞೋಽಪಿ ಹಿ ಸಂಸಾರೇ ಕಥಂ ಮುಹ್ಯಸಿ ಮೂಢವತ್ ।
ಗತಿರೇತಾದೃಶೀ ರಾಜನ್ ಸಂಸಾರನರಕಾರ್ಣವೇ ॥೨೨॥

ಅಸ್ಮಾಕಮೀದೃಶಂ ದುಃಖಂ ನಾಭೂತ್ಕಿಂ ನ ವಿಚಾರ್ಯತೇ ।
ಅಸ್ಮಾಕಂ ಮಾತುಲಃ ಕಂಸಃ ಕಿಂ ಕಿಂ ವಾ ನ ಕರೋದ್ಧಿ ವೈ ॥೨೩॥

ಬಾಲ್ಯಮಾರಭ್ಯ ವೈ ದ್ವೇಷಾತ್ ನಿತ್ಯೋಪದ್ರವಕಾರಕಃ ।
ಪೂತನಾಸ್ತನ್ಯಪಾನೇ ಚ ವಿಷಂ ಪೀತ್ವಾ ಮಯಾ ತದಾ ॥೨೪॥

ಜೀರ್ಣಯಿತ್ವಾ ಚ ಮೇ ಸರ್ವಮಮೃತಂ ಮೇಽಭವತ್ ಕಿಲ ।
ತೃಣಾವರ್ತಾದಿದೈತ್ಯಾಶ್ಚ ಮಯಾ ನಿರ್ವಾಪಿತಾ ನ ಕಿಮ್ ॥೨೫॥

ಯಮಲಾರ್ಜುನವೃಕ್ಷೌ ಚ ಶಕಟೋ ಪ್ರಾಣಘಾತಕಃ ।
ಬಕಮುಷ್ಟಿಕಮಲ್ಲಾದಿಚಾಣೂರರಣಪುಂಗವಾಃ ॥೨೬॥

---

ಕೃಷ್ಣ ಹೇಳಿದ. ಉತ್ತಮ ಕುರುವಂಶದಲ್ಲಿ ಜನಿಸಿದ ಧರ್ಮರಾಜನೇ! ನಿನ್ನ ಬುದ್ಧಿಯೇಕೆ ಅಜ್ಞಾನಿಗಳಂತಾಗಿದೆ.

೨೨ ಚೆನ್ನಾಗಿ ತತ್ವವನ್ನು ತಿಳಿದ ನೀನೇಕೆ ಅಜ್ಞಾನಿಯಂತೆ ಮೋಹಿತನಾಗಿರುವಿ. ಸಂಸಾರವೆಂಬ ದುಃಖಸಾಗರದಲ್ಲಿ ಇದು ಸಾಮಾನ್ಯವಾಗಿದೆ.

೨೩ ನನಗೂ ಕೂಡ ಇದಕ್ಕಿಂತಲೂ ಹೆಚ್ಚಿನ ಕಷ್ಟ ಪರಂಪರೆ ಒದಗಿದುದನ್ನು ನೀನರಿಯೆಯಾ? ನನ್ನ ಸೋದರ ಮಾವನಾದ ಕಂಸನು ನನ್ನನ್ನು ಸಂಹರಿಸಲು ಏನೇನು ಪ್ರಯತ್ನ ಮಾಡಲಿಲ್ಲ?

೨೪ ನನ್ನ ಬಾಲ್ಯದಿಂದಲೂ ದ್ವೇಷ ಸಾಧಿಸುತ್ತ ನಿತ್ಯದಲ್ಲೂ ಉಪದ್ರವ ನೀಡಿದ. ಪೂತನಿಯು ಸ್ತನಪಾನದ ಹೆಸರಲ್ಲಿ ವಿಷವನ್ನೇ ಉಣಿಸಿದಳು.

೨೫ ಆ ವಿಷವೂ ಜೀರ್ಣವಾಗಿ ಅಮೃತದಂತೆಯೇ ಆಯಿತಷ್ಟೇ. ಬಾಲ್ಯದಲ್ಲೇ ನನ್ನನ್ನು ಸಂಹರಿಸಲು ಬಂದ ತೃಣಾವರ್ತಾದಿ ದೈತ್ಯರನ್ನು ನಾನು ಸಂಹರಿಸಲಿಲ್ಲವೇ?

೨೬ ಬಾಲ್ಯದಲ್ಲೇ ಅವಳಿ ಅರ್ಜುನ ವೃಕ್ಷಗಳನ್ನು (ಬಿಳಿ ಮತ್ತಿಯ ಮರ) ಬೀಳಿಸಿದೆ. ಪ್ರಾಣಘಾತಕ ಶಕಟಾಸುರ ನನ್ನನ್ನು ಕೊಲ್ಲಲು ಹವಣಿಸಿದ. ಕಂಸನ ಭೃತ್ಯರಾದ, ಬಕ, ಮುಷ್ಟಿಕ, ಚಾಣೂರ ಇತ್ಯಾದಿ ವೀರರೆಲ್ಲ ನನ್ನೊಡನೆ ಯುದ್ಧವಾಡಿ ಹತರಾದರು.

**ಮಾತಂಗದಂತಪೀಡಾ ಚ ಪ್ರಾಪ್ತಾ ನ ಮರಣಾಂತಿಕೀ ।**
**ಏತಾನಿ ಮಮ ದುಃಖಾನಿ ಮಾತುಲೇನ ಕೃತಾನಿ ವೈ ॥೨೭॥**

**ನ ತಾವಂತೋ ಜರಾಸಂಧಕೃತಾಃ ಕ್ಲೇಶಾ ಮಹೀಪತೇ ।**
**ವಯಂ ತು ತ್ಯಕ್ತ್ವಾ ಮಥುರಾಂ ಜರಾಸಂಧನಿಪೀಡಿತಾಮ್ ॥೨೮॥**

**ದ್ವಾರವತ್ಯಾಂ ಸಮುದ್ರಾಂತೇ ಪುರೀಂ ಪ್ರಾಪ್ತಾ ಅಲೌಕಿಕೀಮ್ ।**
**ವಾಚಾಮಗೋಚರಾಃ ಸರ್ವೇ ವಯಂ ಕಿಂ ನ ಸಹೇಮಹಿ ॥೨೯॥**

---

೨೭ ಕುವಲಯಾಪೀಡವೆಂಬ ಕಂಸನ ಆನೆಯ ಮಾರಣಾಂತಿಕ ದಂತಗಳಲ್ಲಿ ಸಿಲುಕಿಸಿ ಸಂಹರಿಸುವ ಪ್ರಯತ್ನವೂ ನಡೆಯಿತು. ಇವೆಲ್ಲ ನನ್ನ ಸೋದರ ಮಾವನಾದ ಕಂಸನು ನನಗೆ ನೀಡಿದ ದುಃಖ ಪರಂಪರೆ.

೨೮ ಕಂಸನ ತೊಂದರೆಗಳಲ್ಲದೇ ನನ್ನ ದ್ವೇಷಿಗಳ ನಿಯಾಮಕನಾದ ಜರಾಸಂಧ ಮಾಡಿದ ತೊಂದರೆಗಳು ಅಷ್ಟಿಷ್ಟಲ್ಲ. ಜರಾಸಂಧನಿಂದ ಪೀಡಿತವಾದ ಮಥುರಾ ಪಟ್ಟಣವನ್ನೇ ತ್ಯಜಿಸಬೇಕಾಯಿತು.

೨೯ ಮತ್ತೆ ಮತ್ತೆ ಜರಾಸಂಧನ ಆಕ್ರಮಣದಿಂದ ಪೀಡಿತವಾದ, ಮಥುರೆಯನ್ನು ಬಿಟ್ಟು ಸಮುದ್ರ ಮಧ್ಯದಲ್ಲಿ ಮಾನವರಿಗೆ ಅಸಾಧ್ಯವಾದ ದ್ವಾರಕೆಯನ್ನೇ ನಿರ್ಮಿಸಿಕೊಂಡು, ವಾಸಿಸುತ್ತಿದ್ದೇವೆ. ಹೇಳಿ ಮುಗಿಸಲಾಗದ ಈ ಎಲ್ಲ ಕಷ್ಟಗಳನ್ನು ನಾವು ಸಹಿಸುತ್ತಿಲ್ಲವೇ?

ಜರಾಸಂಧನಿಂದ ಪೀಡಿತನಾಗಿ ತಾನು ಮಥುರೆಯನ್ನು ತ್ಯಜಿಸಿರುವುದಾಗಿ ಕೃಷ್ಣ ಹೇಳುತ್ತಿದ್ದರೂ ಕೂಡ, ಸೋಲಿನಿಂದ ಕಂಗೆಟ್ಟ ಜರಾಸಂಧನು ಎಲ್ಲ ಯಾದವರನ್ನು ಪೀಡಿಸುತ್ತಾನೆ. ಅವನಿಂದ ಯಾದವರನ್ನು ರಕ್ಷಿಸಲು ದ್ವಾರಕೆಯನ್ನು ಶ್ರೀಕೃಷ್ಣನು ಸಮುದ್ರ ಮಧ್ಯದಲ್ಲಿ ಶತ್ರುಗಳಿಗೆ ಅಗಮ್ಯವಾಗಿ ನಿರ್ಮಿಸಿದನೆಂಬುದಾಗಿ ಶ್ರೀಮದಾಚಾರ್ಯರು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ತಿಳಿಸುತ್ತಾರೆ.

**ನಿರಾಶಕೋಽದ್ಯ ಯಾದವಾನಪಿ ಸ್ಮ ಪೀಡಯಿಷ್ಯತಿ ।**
**ಅತಃ ಸಮುದ್ರಮಧ್ಯಗಾ ಪುರೀ ವಿಧಾನಮದ್ಯ ಮೇ ॥** ಮ.ತಾ.ನಿ. ೧೭-೧೧೦

ಶ್ರೀಕೃಷ್ಣನ ಆಜ್ಞೆಯಂತೆ ಸಮುದ್ರದಲ್ಲಿ ನೀರಿಲ್ಲದಂತೆ ಮಾಡಲ್ಪಡಲು ವಿಶ್ವಕರ್ಮನು ದ್ವಾರಕೆಯನ್ನು ನಿರ್ಮಾಣ ಮಾಡಿದ.

**ಸಭೌವನಃ ಸಮಾಗತಃ ಕುಶಸ್ಥಲೀಂ ವಿನಿರ್ಮಮೇ ।**
**ನಿರಂಬುಕೇ ತು ಸಾಗರೇ ಜನಾರ್ದನಾಜ್ಞಯಾ ಕೃತೇ ॥** ಮ.ತಾ.ನಿ. ೧೭-೧೧೨

**ಜನ್ಮಾಂತರಕೃತಂ ಪಾಪಮೇವಂರೂಪೇಣ ಬಾಧತೇ ।**
**ತಸ್ಮಾದ್ವಿಚಾರ್ಯ ಶಾಸ್ತ್ರಾಣಿ ಕಾರ್ಯಾಕಾರ್ಯೇ ವಿನಿಶ್ಚಿನು ॥೩೦॥**

**ಯೋ ವಿಜ್ಞಾಯ ಚಲಂ ದೇಹಮುನ್ಮತ್ತಃ ಪಾಪಮಾಚರೇತ್ ।**
**ಸ ವೃಕ್ಷಾಗ್ರಂ ಸಮಾರೂಢಃ ಫಲಾರ್ಥೀ ನಿಪತೇತ್ ಧ್ರುವಮ್ ॥೩೧॥**

---

ಜಲರಾಶಿಯ ಮಧ್ಯದಲ್ಲಿ ನಿರ್ಮಿತವಾದ ಹನ್ನೆರಡು ಯೋಜನ ವಿಸ್ತೀರ್ಣದ ದ್ವಾರಕೆಯು ಕ್ಷೀರ ಸಮುದ್ರಮಧ್ಯದ ಶ್ವೇತದ್ವೀಪದಂತೆ ಕಂಗೊಳಿಸುತ್ತಿತ್ತು.

**ಮಹೋದಕಸ್ಯ ಮಧ್ಯತಶ್ಚಕಾರ ತಾಂ ಪುರೀಂ ಶುಭಾಮ್ ।**
**ದ್ವಿಷಟ್ಕಯೋಜನಾಯತಾಂ ಪಯೋಬ್ಧಿಮಧ್ಯಗೋಪಮಾಮ್ ॥** ಮ.ತಾ.ನಿ.೧೭-೧೧೩

ದ್ವಾರಕೆಯ ಸುತ್ತಲಿನ ಉಪ್ಪು ನೀರನ್ನು ಕೃಷ್ಣ ಅಮೃತದಂತಾಗಿಸಿದ, ಹಾಗೂ ಕ್ಷಣ ಮಾತ್ರದಲ್ಲಿ ಮಥುರಾ ವಾಸಿಗಳನ್ನು ದ್ವಾರಕೆಗೆ ಸ್ಥಳಾಂತರಿಸಿದ ಅಪೂರ್ವ ಮಹಿಮೆಯನ್ನು ಆಚಾರ್ಯರು ತಿಳಿಸಿದ್ದಾರೆ.

**ಚಕಾರ ಲಾವಣೋದಕಂ ಜನಾರ್ದನೋಽಮೃತೋಪಮಮ್ ॥** ಮ.ತಾ.ನಿ.17-114
**ಸಮಸ್ತಮಾಥುರಾನ್ ಪ್ರಭುಃ ಕುಶಸ್ಥಲೀಸ್ಥಿತಾನ್ ಕ್ಷಣಾತ್ ।**
**ವಿಧಾಯ ಬಾಹುಯೋಧಕಃ ಸಯಾವನಂ ಸಮಭ್ಯಯಾತ್ ॥** ಮ.ತಾ.ನಿ.17-117

ಅನಂತ ಶಕ್ತಿ ಸಂಪನ್ನನಾದ ಸರ್ವೇಶ್ವರನಾದ ಕೃಷ್ಣನು ಮಥುರಾ ಪಟ್ಟಣದಿಂದ ದ್ವಾರಕೆಗೆ ಸ್ಥಳಾಂತರಗೊಂಡದ್ದು ನೀತಿ ಪ್ರದರ್ಶನಕ್ಕಾಗಿಯೇ ಹೊರತು ಜರಾಸಂಧನ ಭಯದಿಂದಲ್ಲ. ಸಮುದ್ರದ ಮಧ್ಯದಲ್ಲಿ ಅಪೂರ್ವ ನಗರವನ್ನು ನಿರ್ಮಿಸುವ ಮೂಲಕವೇ ತಾನು ಅಚಿಂತ್ಯಶಕ್ತಿಸಂಪನ್ನನಾದ ಸರ್ವೋತ್ತಮ. ತನಗಾರ ಭಯವೂ ಇಲ್ಲ. ದ್ವಾರಕಾನಿರ್ಮಾಣವೂ ಕೇವಲ ಭಗವಂತನಾದ ತನ್ನ ಲೀಲೆಯೇ ಹೊರತು ತನಗಾರ ಭಯವೂ ಇಲ್ಲ ಎಂದು ತೋರಿಸಿದ.

೩೦ ಹಿಂದಿನ ಜನ್ಮಗಳಲ್ಲಿ ನಾವು ಮಾಡಿದ ಪಾಪವು ಈ ರೀತಿಯಾಗಿ ಬಾಧಿಸುತ್ತದೆ. ಆದುದರಿಂದ ಶಾಸ್ತ್ರ ವಿಮರ್ಶೆ ಮಾಡಿ ಇದು ಕಾರ್ಯ ಇದು ಅಕಾರ್ಯ ಎಂದು ನಿಶ್ಚಯ ಮಾಡಿಕೋ.

ತಾನು ಪುಣ್ಯ ಪಾಪರಹಿತನಾಗಿದ್ದರೂ, ಪಾಪಪುಣ್ಯಗಳಿಂದ ಒದಗುವ ವೃದ್ಧಿಹ್ರಾಸ ವರ್ಜಿತನಾಗಿದ್ದರೂ ಶ್ರೀಕೃಷ್ಣನು ಲೋಕದ ಎಲ್ಲರ ಸುಖದುಃಖಗಳೂ ಅವರು ಮಾಡಿದ ಪುಣ್ಯಪಾಪಗಳ ಫಲಗಳು ಎಂಬುದನ್ನು ತಿಳಿಸಲು ಹೀಗೆ ಹೇಳುತ್ತಿದ್ದಾನೆ.

೩೧ ಯಾವನು ನಶ್ವರವಾದ ಶರೀರವನ್ನು ಶಾಶ್ವತವೆಂದು ಭಾವಿಸಿ ಉನ್ಮತ್ತನಾಗಿ

ಯಥೈವ ಕರ್ಷಕಃ ಶೀಘ್ರಂ ತಟಾಕಂ ಪೂರಯೇಜ್ಜಲೈಃ ।
ವರ್ಷಾಗಮೇ ಸುಧೀಃ ಪುಣ್ಯಂ ಶೀಘ್ರಂ ಕುರ್ಯಾದ್ದೃಢೇಂದ್ರಿಯಃ॥೩೨॥

ಮಾ ವಿಚಾರಯ ರಾಜೇಂದ್ರ ಸರ್ವಂ ಶ್ರೇಯೋ ಭವೇತ್ತವ ।
ತ್ವಂ ಹಿ ಧರ್ಮರತೋ ನಿತ್ಯಂ ತ್ವಂ ಹಿ ಧರ್ಮಪ್ರಪೂಜಕಃ ॥೩೩॥

ಇತಃ ಪರಂ ಮಹಾವೃದ್ಧಿರ್ಭವೇದೇವ ನ ಸಂಶಯಃ ।
ಶತ್ರವಸ್ತೇ ಹತಾಃ ಸ್ಯುಶ್ಚ ಸಾಮ್ರಾಜ್ಯಂ ತೇ ಭವಿಷ್ಯತಿ ॥೩೪॥

ಧನುರ್ಮಾಸೇ ಹರಿಃ ಪ್ರೀತಃ ಉಷಃಕಾಲಾರ್ಚನಾದ್ಧ್ರುವಮ್ ।
ದದಾತ್ಯಭೀಷ್ಟಮಕ್ಷಯ್ಯಂ ಸತ್ಯಮೇವ ಬ್ರವೀಮಿ ತೇ ॥೩೫॥

॥ ಇತಿ ಶ್ರೀಮದಾಗ್ನೇಯಪುರಾಣೇ
ಧನುರ್ಮಾಸಮಾಹಾತ್ಮ್ಯೇ ಪ್ರಥಮೋಽಧ್ಯಾಯಃ ॥

---

ಪಾಪವನ್ನು ಮಾಡುತ್ತಾನೋ ಅವನು ಹಣ್ಣಿಗಾಗಿ ವೃಕ್ಷದ ಮೇಲ್ಭಾಗವನ್ನು ಹತ್ತಿ ಜಾರಿ ಕೆಳ ಬಿದ್ದವನಂತೆ ಆಗುತ್ತಾನೆ.

೩೨ ಮಳೆಯು ಬರುತ್ತಿದ್ದಂತೆಯೇ ಕೃಷಿಕನು ಗದ್ದೆಯನ್ನು ನೀರಿನಿಂದ ತುಂಬಿಸುವಂತೆ ಬುದ್ಧಿವಂತನಾದವನು ಇಂದ್ರಿಯಗಳು ಸದೃಢವಾಗಿರುವಾಗಲೇ ಪುಣ್ಯವನ್ನು ಸಂಪಾದಿಸಬೇಕು.

೩೩ ಹೇ ರಾಜಶ್ರೇಷ್ಠನೇ! ನೀನು ಧರ್ಮಪೂಜಕನಾಗಿರುವೆ. ಧರ್ಮದಲ್ಲಿ ಆಸಕ್ತನೂ ಆಗಿರುವೆ. ಯೋಚನೆ ಮಾಡಬೇಡ. ನಿನಗೆಲ್ಲ ಮಂಗಲವಾಗುತ್ತದೆ.

೩೪ ಇನ್ನು ಮುಂದೆ ನೀನು ಅತ್ಯಂತ ಅಭಿವೃದ್ಧಿಯನ್ನು ಹೊಂದುವೆ. ನಿಸ್ಸಂಶಯವಾಗಿ ನಿನ್ನ ಶತ್ರುಗಳೆಲ್ಲ ನಾಶ ಹೊಂದುತ್ತಾರೆ. ಇಡೀ ಸಾಮ್ರಾಜ್ಯವೇ ನಿನ್ನದಾಗುತ್ತದೆ.

೩೫ ಧನುರ್ಮಾಸದ ಉಷಃಕಾಲದ ಪೂಜೆಯಿಂದ ಪ್ರೀತನಾದ, ಶ್ರೀಹರಿಯು ನಿನಗೆ ಅಕ್ಷಯವಾದ ಅಭೀಷ್ಟವನ್ನು ನೀಡುತ್ತಾನೆ. ಇದು ಪರಮಸತ್ಯವಾಗಿದೆ.

॥ ಇಲ್ಲಿಗೆ ಮೊದಲನೇ ಅಧ್ಯಾಯವು ಮುಗಿಯಿತು ॥

# ಅಥ ದ್ವಿತೀಯೋಽಧ್ಯಾಯಃ

**ಯುಧಿಷ್ಠಿರ ಉವಾಚ -**

**ನಾರಾಯಣೋ ಧನುರ್ಮಾಸೇ ಪೂಜನೀಯಃ ಕಥಂ ವಿಭೋ ।**
**ಕೇನ ದ್ರವ್ಯೇಣ ಕಿಂ ದೇಯಂ ವಿಸ್ತರೇಣ ವದಾದ್ಯ ಮೇ ॥೧॥**

**ಕೃಷ್ಣ ಉವಾಚ -**

**ಉಷಃಕಾಲೇ ಧನುರ್ಮಾಸೇ ಸ್ನಾತ್ವಾ ಸಮ್ಯಗ್ ಜನಾರ್ದನಮ್ ।**
**ತ್ವಂ ಸಮಭ್ಯರ್ಚ್ಯ ಮುದ್ಗಾನ್ನಂ ದಧ್ನಾ ಸಹ ಸಮರ್ಪಯ ॥೨॥**

**ಭೋಜಯ ದ್ವಿಜವರ್ಯಾಂಶ್ಚ ಪ್ರಾತಃಕಾಲೇ ಯಥಾಬಲಮ್ ।**
**ಭುಕ್ತ್ವೇಹ ಸಕಲಾನ್ ಭೋಗಾನ್ ಪದಂ ಪ್ರಾಪ್ಸ್ಯಸಿ ವೈಷ್ಣವಮ್ ॥೩॥**

**ಯೋ ಧನುರ್ಮಾಸ್ಯುಷಃಕಾಲೇ ದಧ್ಯಾದ್ರ್ರಕಮನೋಹರಮ್ ।**
**ಆಜ್ಯೈಲಾಶರ್ಕರಾಯುಕ್ತಂ ಸಹಾಮಲಕಮೂಲಕಮ್ ॥೪॥**

**ನಿವೇದಯಿತ್ವಾ ಹರಯೇ ಬ್ರಾಹ್ಮಣಾನ್ ಭೋಜಯೇತ್ ಸುಧೀಃ ।**
**ಯಂ ಯಂ ಕಾಮಯತೇ ಕಾಮಂ ತಂ ತಂ ಪ್ರಾಪ್ಯ ಸುದುರ್ಲಭಮ್ ॥೫॥**

---

೧ ಯುಧಿಷ್ಠಿರನು ಪ್ರಶ್ನೆ ಮಾಡುತ್ತಾನೆ. ಧನುರ್ಮಾಸದಲ್ಲಿ ನಾರಾಯಣನನ್ನು ಹೇಗೆ ಪೂಜೆ ಮಾಡಬೇಕು? ಯಾವ ದ್ರವ್ಯಗಳಿಂದ ಪೂಜಿಸಬೇಕು? ಏನನ್ನು ದಾನ ಮಾಡಬೇಕು? ಎಂಬುದನ್ನು ನನಗೆ ವಿಸ್ತೃತವಾಗಿ ಹೇಳು.

೨ ಕೃಷ್ಣನು ಹೇಳುತ್ತಾನೆ. ಯುಧಿಷ್ಠಿರನೇ! ನೀನು ಧನುರ್ಮಾಸದಲ್ಲಿ ಉಷಃ ಕಾಲದಲ್ಲಿ ಸ್ನಾನಮಾಡಿ (ಸುಮಾರು ಬೆಳಗಿನ ೪ ಗಂಟೆಯ ಸಮಯ) ವಿಷ್ಣುವನ್ನು ಪೂಜಿಸಿ ಮುದ್ಗಾನ್ನವನ್ನು (ಹೆಸರು ಬೇಳೆ ಮತ್ತು ಅಕ್ಕಿಯನ್ನು ಸೇರಿಸಿ ಮಾಡಿದ ಹುಗ್ಗಿ) ಹಾಗೂ ಮೊಸರನ್ನು ಸಮರ್ಪಣೆ ಮಾಡು.

೩ ಪ್ರಾತಃಕಾಲದಲ್ಲಿ ನಿನ್ನ ಯೋಗ್ಯತೆಗನುಗುಣವಾಗಿ ಉತ್ತಮ ಬ್ರಾಹ್ಮಣರಿಗೆ ವಿಷ್ಣುವಿಗೆ ನಿವೇದಿಸಿದ ಹುಗ್ಗಿಯೇ ಮೊದಲಾದ ಪಕ್ವಾನ್ನಗಳಿಂದ ಭೋಜನ ಮಾಡಿಸು. ಈ ಜನ್ಮದಲ್ಲಿ ಎಲ್ಲ ಭೋಗಗಳನ್ನು ಹೊಂದಿ ಕೊನೆಗೆ ವಿಷ್ಣುಲೋಕವನ್ನೇ ಹೊಂದುವಿ.

೪ ಯಾರು ಧನುರ್ಮಾಸದ ಉಷಃ ಕಾಲದಲ್ಲಿ ಮೊಸರು, ಶುಂಠಿ, ತುಪ್ಪ, ಸಕ್ಕರೆ, ಏಲಕ್ಕಿ ಹಾಗೂ ನೆಲ್ಲಿಕಾಯಿ ಇವುಗಳಿಂದ ಕೂಡಿದ ಹುಗ್ಗಿಯನ್ನು.

೫ ಶ್ರೀಹರಿಗೆ ನಿವೇದಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಿದ ಜ್ಞಾನಿಯು, ತಾನು ಅಪೇಕ್ಷಿಸಿದ ಅತಿ ದುರ್ಲಭವಾದ ಕಾಮನೆಗಳನ್ನು ಕೂಡ ಹೊಂದುತ್ತಾನೆ.

**ಸಃ ಸ್ಯಾದ್ಯೋಗೀ ಸುಧೀಃ ಶ್ರೀಮಾನ್ ವೈಷ್ಣವೋ ಜನ್ಮಜನ್ಮನಿ ।**
**ಉಷಃಪೂಜಾಂ ಧನುರ್ಮಾಸೇ ಯೋ ನ ಕುರ್ಯಾತ್ತು ವೈಷ್ಣವೀಮ್ ॥೬॥**

**ಸಪ್ತಜನ್ಮಸು ರಿಕ್ತಃ ಸ್ಯಾತ್ ಕ್ಷಯರೋಗೀ ಚ ಮೂಢಧೀಃ ।**
**ಕೋದಂಡಸ್ಥೇ ಸವಿತರಿ ಮುದ್ಗಾನ್ನಂ ಯೋ ನಿವೇದಯೇತ್ ॥೭॥**

**ಸಹಸ್ರವಾರ್ಷಿಕೀಂ ಪೂಜಾಂ ದಿನೇನೈಕೇನ ಲಭ್ಯತೇ ।**
**ಯಥಾ ತುಷ್ಯೇದ್ಧನುರ್ಮಾಸೇ ಮುದ್ಗಾನ್ನೇನ ರಮಾಪತಿಃ ॥೮॥**

**ನ ತಥಾ ವ್ರತದಾನಾದ್ಯೈಃ ನ ತಪೋಭಿರ್ನ ಚಾಧ್ವರೈಃ ।**
**ಕೋದಂಡಸ್ಥೇ ದಿವಾನಾಥೇ ಯೋ ಮುದ್ಗಾನ್ನಂ ಸಹಾರ್ದ್ರಕಮ್ ॥೯॥**

**ನಿವೇದಯೇದ್ಧರೇಸ್ಸಮ್ರಾಟ್ ಜಿತ್ವಾ ಶತ್ರೂನ್ ಕ್ಷಣೇನ ಸಃ ।**
**ಸದಧ್ಯಾರ್ದ್ರಕಮುದ್ಗಾನ್ನಂ ಯೋ ಧನುರ್ಮಾಸಿ ವೈಷ್ಣವಃ ॥೧೦॥**

**ಸಮರ್ಪಯೇತ್ ಸ ದೀರ್ಘಾಯುಃ ಧನಾಢ್ಯೋ ವೇದಪಾರಗಃ ।**

---

೬ ಇಷ್ಟೇ ಅಲ್ಲದೇ ಅವನು ಮುಂದೆ ಅನೇಕ ಜನ್ಮಗಳಲ್ಲಿ ಯೋಗಿಯೂ, ಜ್ಞಾನಿಯೂ, ಧನವಂತನೂ ಆಗಿ ಹುಟ್ಟುತ್ತಾನೆ. ಧನುರ್ಮಾಸದ ಉಷಃ ಕಾಲದಲ್ಲಿ ವಿಷ್ಣುವಿನ ಪೂಜೆಯನ್ನು ಒಂದು ದಿನವೂ ಯಾವನು ಮಾಡುವುದಿಲ್ಲವೋ,

೭ ಅಂಥ ಪುರುಷನು ಮುಂದಿನ ಏಳು ಜನ್ಮಗಳಲ್ಲಿ ಅತಿ ದರಿದ್ರನಾಗಿಯೂ, ಕ್ಷಯರೋಗಿಯೂ, ಮೂರ್ಖನೂ ಆಗುತ್ತಾನೆ. ಸೂರ್ಯನು ಧನುರಾಶಿ-ಯಲ್ಲಿರುವಾಗ ಯಾವ ಪುರುಷನು ಮುದ್ಗಾನ್ನವನ್ನು ಸಮರ್ಪಿಸುವನೋ

೮ ಅವನು ಒಂದೇ ದಿನದಲ್ಲಿ ಸಾವಿರ ವರುಷಗಳ ಪೂಜೆಯ ಫಲವನ್ನು ಪಡೆಯುವನು. ಧನುರ್ಮಾಸದಲ್ಲಿ ಹುಗ್ಗಿಯ ಸಮರ್ಪಣೆಯಿಂದ ರಮಾಕಾಂತನು ಪ್ರೀತನಾಗುವಂತೆ,

೯ ವ್ರತಗಳಿಂದಾಗಲೀ, ಮಹಾದಾನಗಳಿಂದಾಗಲೀ, ಘೋರ ತಪಸ್ಸಿನಿಂದಾಗಲೀ, ಯಜ್ಞಗಳಿಂದಾಗಲೀ ಪ್ರೀತನಾಗುವುದಿಲ್ಲ. ದಿನಮಣಿಯಾದ ರವಿಯು ಧನುರಾಶಿಯಲ್ಲಿರುವಾಗ ಯಾರು ಹಸಿಶುಂಠಿಸಹಿತ ಹುಗ್ಗಿಯನ್ನು

೧೦ ಶ್ರೀಹರಿಗೆ ನಿವೇದನೆ ಮಾಡುವರೋ, ಅವನು ಕ್ಷಣ ಮಾತ್ರದಲ್ಲಿ ಶತ್ರುಗಳನ್ನು ಗೆದ್ದು ರಾಜಾಧಿರಾಜನಾಗುತ್ತಾನೆ. ಯಾವ ವಿಷ್ಣುಭಕ್ತನು ಧನುರ್ಮಾಸದಲ್ಲಿ ಮೊಸರನ್ನು, ಹಸಿಶುಂಠಿಯಿಂದ ಸಹಿತವಾದ ಹುಗ್ಗಿಯನ್ನು

೧೧ ಸಮರ್ಪಿಸುತ್ತಾನೋ ಅವನು ದೀರ್ಘ ಆಯುಷ್ಯವಂತನೂ, ಧನವಂತನು,

**ಸಹಾದ್ರ್ರಕಂ ತು ಮುದ್ಗಾನ್ನಂ ಯೋಽಚ್ಯುತಾಯ ನಿವೇದಯೇತ್ ॥೧೧॥**

**ಕಿಂ ತಸ್ಯ ಗಂಗಾಸ್ನಾನಾದ್ಯೈಃ ಕಿಂ ಜಪೈಶ್ಚ ಕಿಮಧ್ವರೈಃ ।**
**ಆಯುರಾರೋಗ್ಯಮೈಶ್ವರ್ಯಂ ಯ ಇಚ್ಛೇತ್ತಸ್ಯ ಏವ ಹಿ ॥೧೨॥**

**ಪ್ರೀಣಯೇತ್ಸ ಧನುರ್ಮಾಸೇ ಮುದ್ಗಾನ್ನೇನಾಂಬುಜೇಕ್ಷಣಮ್ ।**
**ಪ್ರಾಪ್ನೋನ್ನಿವೇದ್ಯ ಮುದ್ಗಾನ್ನಂ ಪುರೇಂದ್ರಾಣೀ ಸಹಾದ್ರ್ರಕಮ್ ವಿಷ್ಣವೇ ।**
**ದುಃಖಿತಾ ಸಾಧ್ವೀ ನಿತ್ಯೈಶ್ವರ್ಯಂ ಸುಮಂಗಲಾ ॥೧೩॥**

**ಯುಧಿಷ್ಠಿರ ಉವಾಚ -**

**ಶಚ್ಯಾಃ ಕಿಂ ದುಃಖಮಭವತ್ ಕಥಂ ಮಾಂಗಲ್ಯಮಕ್ಷಯಮ್ ॥೧೪॥**

**ಕದಾ ಮುದ್ಗಾನ್ನನೈವೇದ್ಯಮಕರೋತ್ ಪರಮಾತ್ಮನೇ ।**
**ಏತತ್ಸರ್ವಂ ಸುವಿಸ್ತಾರ್ಯ ಭಗವಾನ್ ಭಕ್ತವತ್ಸಲ ॥೧೫॥**

**ಬ್ರೂಹಿ ಸರ್ವಮಶೇಷೇಣ ಕೃತಾರ್ಥಃ ಸ್ಯಾಂ ತವಾಜ್ಞಯಾ ॥೧೬॥**

---

ವೇದಗಳನ್ನು ಅಧ್ಯಯನ ಮಾಡಿದವನೂ ಆಗುತ್ತಾನೆ. ಹಸಿಶುಂಠಿಯಿಂದ ಸಹಿತವಾದ ಹುಗ್ಗಿಯನ್ನು ಯಾವನು ಅಚ್ಯುತನಿಗೆ ನಿವೇದಿಸುವನೋ

೧೨ ಆತನಿಗೆ ಗಂಗಾಸ್ನಾನವೇಕೆ? ಜಪವೇಕೆ? ಯಜ್ಞಯಾಗಾದಿಗಳೇಕೆ? ಆಯುಷ್ಯ, ಆರೋಗ್ಯ, ಐಶ್ವರ್ಯಗಳನ್ನು ಶೀಘ್ರವಾಗಿ ಪಡೆಯಲಿಚ್ಛಿಸುವ ಮನುಜನು

೧೩ ಧನುರ್ಮಾಸದಲ್ಲಿ ಮುದ್ಗಾನ್ನದ (ಹುಗ್ಗಿಯ) ಸಮರ್ಪಣೆಯಿಂದ ತಾವರೆ-ದಲನಯನನಾದ ಹರಿಯನ್ನು ಸಂಪ್ರೀತನನ್ನಾಗಿಸಬೇಕು. ಹಿಂದೆ ಇಂದ್ರಪತ್ನಿಯಾದ ಶಚಿದೇವಿಯು ಮುದ್ಗಾನ್ನವನ್ನು ವಿಷ್ಣುವಿಗೆ ಸಮರ್ಪಿಸಿ, ದುಃಖಪೀಡಿತಳಾದ ಆ ಸಾಧ್ವಿಯು ದುಃಖದಿಂದ ಬಿಡುಗಡೆ ಹೊಂದಿ ಆ ಸುಮಂಗಲೆಯು ನಿತ್ಯೈಶ್ವರ್ಯವನ್ನು ಹೊಂದಿದಳು.

೧೪ ಯುಧಿಷ್ಠಿರನು ಕೇಳುತ್ತಾನೆ. ಶಚೀದೇವಿಗೆ ಒದಗಿದ ದುಃಖವೇನು? ಯಾವ ರೀತಿ ಅವಳು ಅಕ್ಷಯ ಸೌಭಾಗ್ಯವನ್ನು ಪಡೆದಳು?

೧೫ ಯಾವ ಸಮಯದಲ್ಲಿ ಪರಮಾತ್ಮನಿಗೆ ಶಚಿದೇವಿಯು ಹುಗ್ಗಿಯ ನೈವೇದ್ಯವನ್ನು ಮಾಡಿದಳು, ಭಕ್ತವತ್ಸಲನಾದ ಭಗವಂತನೇ ಇದೆಲ್ಲವನ್ನು ವಿಸ್ತಾರವಾಗಿ ಹೇಳುವ ಕೃಪೆ ಮಾಡಬೇಕು.

೧೬ ನನಗೆಲ್ಲವನ್ನು ಹೇಳುವ ಕೃಪೆ ಮಾಡಬೇಕು. ನಿನ್ನ ಉಪದೇಶ ಪಡೆದ ನಾನು ಕೃತಾರ್ಥನಾಗುತ್ತೇನೆ.

ಶ್ರೀ ಭಗವಾನುವಾಚ -

ಶೃಣು ರಾಜೇಂದ್ರ ವಕ್ಷ್ಯಾಮಿ ಸರ್ವಪೂಜಾಫಲಪ್ರದಮ್ ।
ಮುದ್ಗಾನ್ನಪೂಜನಂ ವಿಷ್ಣೋರುಷ್ಣಾಂಶೌ ಕಾರ್ಮುಕಸ್ಥಿತೇ ।
ಆದ್ಯಮನ್ವಂತರೇ ರಾಜನ್ ಪುಣ್ಯೇ ಕೃತಯುಗೇ ತಥಾ ॥೧೭॥

ಪರಂ ಬ್ರಹ್ಮ ಹರಿಸ್ಸಾಕ್ಷಾತ್ ನಿರ್ಗುಣೋ ಹರಿರೀಶ್ವರಃ ।
ಲೀಲಾರ್ಥಮಸೃಜದ್ದೈತ್ಯಾನ್ ವೃಷಪರ್ವಾದಿಕಾನ್ ಖಿಲಾನ್ ॥೧೮॥

ಜಿಜ್ಞಾಸುಃ ಸ್ವಬಲಂ ಶ್ರೀಮಾನ್ ಭಗವಾನ್ ಪುರುಷೋತ್ತಮಃ ।
ಕಲಹಂ ಜನಯಾಮಾಸ ದೈತ್ಯಾನಾಂ ಚ ಶತಕ್ರತೋಃ ॥೧೯॥

ಬಾಧಿತಸ್ಸೈರ್ಮಹಾಘೋರೈರಿಂದ್ರಸ್ಸರ್ವಮರುದ್ಗಣೈಃ ।
ಸ್ಥಾನಾತ್ ಭ್ರಷ್ಟೋ ಭುವಂ ಪ್ರಾಪ್ಯ ಗುಪ್ತರೂಪಶ್ಚಚಾರ ಹ ॥೨೦॥

---

೧೭ ಭಗವಂತನು ಹೇಳುತ್ತಾನೆ. ರಾಜನೇ! ಹೇಳುವೆನು ಕೇಳು. ಸೂರ್ಯನು ಧನುರಾಶಿಯಲ್ಲಿರುವಾಗ ವಿಷ್ಣುವಿಗೆ ಹುಗ್ಗಿಯ ಸಮರ್ಪಣೆ ಸಕಲ ಪೂಜೆಗಳ ಫಲವನ್ನು ನೀಡುವುದು. ಪುಣ್ಯತಮವಾದ ಕೃತಯುಗದ ಮೊದಲನೆಯ ಮನ್ವಂತರದ (ಸ್ವಾಯಂಭುವ ಮನ್ವಂತರ) ಸಂದರ್ಭ.

೧೮ ಸಾಕ್ಷಾತ್ ಪರಬ್ರಹ್ಮನಾದ ಜಗನ್ನಿಯಾಮಕನಾದ ಪ್ರಾಕೃತಗುಣರಹಿತನಾದ ಹರಿಯು, ಲೀಲೆಗಾಗಿ ದುಷ್ಟರಾದ ವೃಷಪರ್ವಾದಿ ದೈತ್ಯರನ್ನು ಸೃಷ್ಟಿಮಾಡಿದನು.

ವಿಶೇಷ :- ಭಗವಂತನಿಗೆ ನಿರ್ಗುಣ ಎಂದು ಕರೆದಲ್ಲಿ ಪ್ರಾಕೃತ ಗುಣರಹಿತನೆಂದು ಸಗುಣನೆಂದು ಕರೆದಲ್ಲಿ ಅಪ್ರಾಕೃತವಾದ ಗುಣಗಳಿಂದ ಕೂಡಿದವನೆಂದು ಅರ್ಥೈಸಬೇಕೆಂದು ಶ್ರೀಮದಾಚಾರ್ಯರು ತಮ್ಮ ಭಾಗವತ ತಾತ್ಪರ್ಯದಲ್ಲಿ ಪ್ರಮಾಣಪೂರ್ವಕ ನಿರ್ಣಯಿಸಿದ್ದಾರೆ. ''ಅಗುಣೋಽಗುಣದೇಹತ್ವಾತ್ ಸಗುಣೋ ಗುಣಧಾರಣಾತ್ । ಐಶ್ವರ್ಯಾದಿಗುಣತ್ವಾದ್ವಾ ವಾಸುದೇವ ಇತೀರ್ಯತೇ ॥ ಇತ್ಯಾಗ್ನೇಯೇ (ಭಾ.ತಾ. ೧೦-೪-೨೦)

೧೯ ತನ್ನ ಸಾಮರ್ಥ್ಯವನ್ನು ಜಗತ್ತಿಗೆ ತಿಳಿಸಲು ಪುರುಷೋತ್ತಮನು ದೇವತೆಗಳ ದೊರೆಯಾದ ಇಂದ್ರನಿಗೂ ಹಾಗೂ ದೈತ್ಯರಿಗೂ ಕಲಹವುಂಟು ಮಾಡಿದನು.

೨೦ ಘೋರ ರಾಕ್ಷಸರಿಂದ ಪೀಡಿತನಾದ ಇಂದ್ರನು ಸ್ವರ್ಗವನ್ನು ತೊರೆದು ದೇವತೆಗಳೊಡನೆ ಭೂಮಿಗೆ ಬಂದನು. ಭುವಿಯಲ್ಲಿ ಯಾರಿಗೂ ತೋರದಂತೆ ಸಂಚರಿಸತೊಡಗಿದನು.

ಅಥೇಂದ್ರಾಣ್ಯತಿದುಃಖೇನ ದೈತ್ಯಾನಾಂ ದಾಸ್ಯಮಾಗತಾ ।
ಪ್ರಣಮ್ಯ ಸಾಶ್ರುನೇತ್ರಾಹ ಕೃತಾಂಜಲಿರಿದಂ ವಚಃ ॥೨೦॥

ಇಂದ್ರಾಣ್ಯುವಾಚ -

ಆಚಾರ್ಯ ಸರ್ವಧರ್ಮಜ್ಞ ತ್ವಚ್ಛಿಷ್ಯೋಽದ್ಯ ಸುರಾಧಿಪಃ ।
ಪಲಾಯಿತೋಽಭೂತ್ ಕುತ್ರಾಪಿ ದೈವಯೋಗಾತ್ಸುರೈಃ ಸಹ ॥೨೧॥

ಲೇಭೇ ನ ಶರ್ಮಾಹಂ ಚಾಪಿ ದಾನವೈರತಿಬಾಧಿತಾ ।
ಕಥಂ ಸಮಾಪ್ನುಯಾದಿಂದ್ರಃ ಸ್ವಸ್ಥಾನಮಮರೈಃ ಸಹ ॥೨೨॥

ಪರಾಜಿತಾಃ ಕಥಂ ದೈತ್ಯಾ ಅಹಂ ನಿತ್ಯೋತ್ಸವಾ ಕಥಮ್ ।
ಏತಾದೃಶಂ ಮಹದ್ದುಃಖಂ ನ ಭವೇಚ್ಚ ಕದಾಚನ ॥೨೪॥

ನಿತ್ಯೈಶ್ವರ್ಯಮಹಂ ಪ್ರಾಪ್ಯ ಕೇನ ಸ್ಯಾಂ ಭರ್ತೃಸಂಗತಾ ।
ಸರ್ವಂ ನಿಶ್ಚಿತ್ಯ ತತ್ತ್ವೇನ ಸರ್ವಜ್ಞಸ್ತ್ವಂ ಜಗದ್ಗುರೋ ॥೨೫॥

ತ್ವಚ್ಛಿಷ್ಯಾ ತ್ವದಧೀನಾಹಂ ಬ್ರೂಹಿ ಶಾಸ್ತ್ರಾರ್ಥಮುತ್ತಮಮ್ ॥೨೬॥

---

೨೦ ದೈತ್ಯರ ದಾಸಿಯಾದ ಇಂದ್ರಪತ್ನಿ ಶಚಿಯು ಬಹಳ ದುಃಖಿತಳಾಗಿ ಕಣ್ಣೀರನ್ನು ಸುರಿಸುತ್ತಾ, ಕೈಮುಗಿದು ದೇವಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ಪ್ರಾರ್ಥಿಸಿದಳು.

೨೧ ಹೇ ಆಚಾರ್ಯರೇ! ತಾವು ಸಕಲ ಧರ್ಮಗಳನ್ನು ತಿಳಿದವರು. ತಮ್ಮ ಶಿಷ್ಯ ದೇವೇಂದ್ರನು ದೈವಯೋಗದಿಂದ ದೇವತೆಗಳೊಡನೆ ಎಲ್ಲಿಯೋ ಓಡಿ ಹೋಗಿದ್ದಾನೆ.

೨೨ ದಾನವರಿಂದ ಅತ್ಯಂತ ಪೀಡಿತಳಾದ ನನಗೆ ಸ್ವಲ್ಪವೂ ಮನಶ್ಶಾಂತಿಯಿಲ್ಲ. ಯಾವ ರೀತಿ ಇಂದ್ರನು ಮತ್ತೆ ಸುರರೊಂದಿಗೆ ಕೂಡಿಕೊಂಡು ತನ್ನ ಸ್ಥಾನವನ್ನು ಪಡೆಯುವನು?

೨೪ ದೈತ್ಯರೆಲ್ಲ ಸೋತು ಅವರ ಸದ್ದಡಗಬೇಕು. ನನ್ನ ಮನೆ ನಿತ್ಯ ಉತ್ಸವದ ಬೀಡಾಗಬೇಕು. ಇಂತಹ ಮಹಾದುಃಖವು ಮುಂದೆಂದೂ ಒದಗಬಾರದು.

೨೫ ಮತ್ತೆ ನಾನು ನಿತ್ಯೈಶ್ವರ್ಯವನ್ನು ಪಡೆದು, ಪತಿಯೊಡನೆ ಸೇರಲು ಉಪಾಯವೇನು? ಸರ್ವಜ್ಞರಾದ ತಾವು ಎಲ್ಲವನ್ನು ನಿಶ್ಚಿತವಾಗಿ ತಿಳಿದವರು.

೨೬ ನಿಮ್ಮ ಶಿಷ್ಯೆಯು, ನಿಮ್ಮ ಅಧೀನಳೂ ಆದ ನನಗೆ ಉತ್ತಮ ಶಾಸ್ತ್ರಾರ್ಥರೂಪ ಉಪಾಯವನ್ನು ಹೇಳಿ ಅನುಗ್ರಹಿಸಬೇಕು.

ಬೃಹಸ್ಪತಿರುವಾಚ -

ಮಾ ಶುಚಸ್ತ್ವಂ ಮಹಾಭಾಗೇ ಪೂರ್ವಕರ್ಮಾನುರೋಧತಃ ।
ಸುಖಂ ದುಃಖಂ ಭವತ್ಯೇವ ನ ಶೋಚೇತ್ ಬುದ್ಧಿಮಾನ್ ಜನಃ ।
ತವ ಸಾಧ್ವಿ ಮಹಚ್ಛ್ರೇಯೋ ಭವಿಷ್ಯತಿ ನ ಸಂಶಯಃ ॥೨೭॥

ಮಂತ್ರಂ ತು ಲಕ್ಷ್ಮೀಹೃದಯಂ ಸರ್ವಾಭೀಷ್ಟಫಲಪ್ರದಮ್ ।
ಉಪದೇಕ್ಷ್ಯಾಮ್ಯಹಂ ಭದ್ರೇ ತವ ಶ್ರೇಯೋ ಭವಿಷ್ಯತಿ ॥೨೮॥

ಇದಂ ಜಪ್ತ್ವಾ ಧನುರ್ಮಾಸೇ ಮುದ್ಗಾನ್ನಂ ಹರಯೇಽರ್ಪಯ ।
ಭವಿಷ್ಯಂತ್ಯರಯೋ ಭಗ್ನಾಃ ಸರ್ವಸಿದ್ಧಿಮವಾಪ್ಸ್ಯಸಿ ॥೨೯॥

ಇತ್ಯುಕ್ತ್ವೋಪಾದಿಶತ್ತಸ್ಯೈ ಪ್ರಸನ್ನಃ ಶಚಯೇ ಗುರುಃ ।
ಸಾ ಗೃಹೀತ್ವಾ ಮನುಂ ಲಕ್ಷ್ಮೀಹೃದಯಂ ಪುಣ್ಯಮುತ್ತಮಮ್ ॥೩೦॥

ಆಬಭಾಸೇ ವಸಂತರ್ತೌ ಪದ್ಮಿನೀವಾಂಬುಜೋಜ್ವಲಾ ॥೩೧॥

ಯುಧಿಷ್ಠಿರ ಉವಾಚ -

ಭಗವನ್ ಯೋಗಿನಾಂ ಶ್ರೇಷ್ಠ ಕಂಸಾರೇ ಭಕ್ತವತ್ಸಲ ।
ಲಕ್ಷ್ಮೀಮಂತ್ರೋಪದೇಶೇನ ಕೃತಾರ್ಥಂ ಕುರು ಮಾಮಪಿ ।

---

೨೭ ಇಂದ್ರಾಣಿಯ ಪ್ರಾರ್ಥನೆಯಿಂದ ಪ್ರೀತರಾದ ಬೃಹಸ್ಪತ್ಯಾಚಾರ್ಯರು ಶಚಿಯನ್ನು ಕುರಿತು ಹೇಳಿದರು. ಮಹಾಸೌಭಾಗ್ಯವುಳ್ಳ ಶಚಿದೇವಿಯೇ! ನೀನು ಕೊರಗದಿರು. ಪೂರ್ವಕರ್ಮಕ್ಕೆ ಅನುಗುಣವಾಗಿ ಸುಖ-ದುಃಖಗಳು ಒದಗುತ್ತವೆ. ಬುದ್ಧಿವಂತನಾದವನು ಅದಕ್ಕಾಗಿ ಶೋಕಿಸುವುದಿಲ್ಲ. ಸಾಧ್ವಿಯೇ! ನಿನಗೆ ನಿಶ್ಚಿತವಾಗಿ ಬಹಳ ಶ್ರೇಯಸ್ಸಾಗುತ್ತದೆ.

೨೮ ಸಕಲ ಕಾಮನೆಗಳನ್ನು ಪೂರೈಸುವ ಲಕ್ಷ್ಮೀಹೃದಯ ಮಂತ್ರವನ್ನು ನಿನಗೆ ಉಪದೇಶಿಸುತ್ತೇನೆ. ಇದರಿಂದ ನಿನಗೆ ಮಂಗಳವಾಗುತ್ತದೆ.

೨೯ ಧನುರ್ಮಾಸದಲ್ಲಿ ಈ ಮಂತ್ರವನ್ನು ಜಪಿಸಿ ಹುಗ್ಗಿಯನ್ನು ಹರಿಗೆ ಅರ್ಪಿಸು. ನಿನ್ನೆಲ್ಲ ಶತ್ರುಗಳು ನಾಶ ಹೊಂದುವರು. ನೀನು ಎಲ್ಲ ಸಿದ್ಧಿಗಳನ್ನು ಹೊಂದುವೆ.

೩೦ ಎಂದು ಹೇಳಿ ದೇವಗುರುಗಳು ಶಚೀದೇವಿಗೆ ಲಕ್ಷ್ಮೀಮಂತ್ರವನ್ನು ಉಪದೇಶ ನೀಡಿದರು. ಪುಣ್ಯತಮವಾದ ಲಕ್ಷ್ಮೀಮಂತ್ರವನ್ನು ಸ್ವೀಕರಿಸಿದ ಇಂದ್ರಾಣಿಯು

೩೧ ತಾವರೆ ತುಂಬಿದ ವಸಂತಋತುವಿನ ಕೊಳದಂತೆ ಶೋಭಿಸಿದಳು.

ಭವಾನ್ ಭಕ್ತಪರಾಧೀನ ಇತಿ ಕೀರ್ತಿಂ ಪ್ರಕಾಶಯ ॥೩೨॥

ತ್ವದನುಗ್ರಹಣೇನಾಹಂ ಸರ್ವಸಿದ್ಧಿಮವಾಪ್ನುಯಾಮ್ ।
ಇತಿ ತಸ್ಯ ವಚಃ ಶ್ರುತ್ವಾ ಭಗವಾನ್ ಭಕ್ತವತ್ಸಲಃ ॥೩೩॥

ಸ್ಮಯಮಾನಮುಖಾಂಭೋಜೋ ಧರ್ಮಸೂನುಮಥಾಬ್ರವೀತ್ ॥೩೪॥

ಶ್ರೀ ಭಗವಾನುವಾಚ –

ಅನುಗ್ರಹಾಯ ತೇ ರಾಜನ್ ಪ್ರಾಪ್ತೋಽಹಮಿಹ ಶೋಚ್ಯತಾಮ್ ।
ಮಾಂ ಪ್ರಪನ್ನೋ ಜನಃ ಕೋ ವಾ ಸಂಸಾರಂ ಪ್ರಾಪ್ತುಮರ್ಹತಿ ।
ಅಪವಾದೋ ಮಮೈವಾಯಂ ಮದ್ಭಕ್ತೋ ದುಃಖಿತೋ ಯದಿ ॥೩೫॥

ನ ಸಹೇಯಂ ಕ್ಷಣಮಪಿ ಭಕ್ತದುಃಖಂ ಕದಾಚನ ।
ಕೌಸ್ತುಭಾದಿವಿನಾಶೋ ವಾ ವಿಶ್ಲೇಷೋ ವಾ ಚಿರಂ ಶ್ರಿಯಾ ॥೩೬॥

ಸರ್ವಥಾ ಶಕ್ಯತೇ ಸೋಢುಂ ಭಕ್ತದುಃಖಂ ಕದಾಪಿ ನ ।
ಇದಂ ಸರ್ವಾತ್ಮನಾ ಗೋಪ್ಯಮತ್ಯಾಪತ್ಸು ಮಹೀತಲೇ ॥೩೭॥

---

೩೨ ಯುಧಿಷ್ಠಿರನು ಕೇಳುತ್ತಾನೆ. ಹೇ ಯೋಗಿಶ್ರೇಷ್ಠನಾದ ಭಗವಂತನೇ! ಕಂಸಶತ್ರುವೇ! ಭಕ್ತವತ್ಸಲನೇ! ನನಗೂ ಲಕ್ಷ್ಮೀಮಂತ್ರವನ್ನು ಉಪದೇಶ ಮಾಡು. ಕೃತಾರ್ಥನನ್ನಾಗಿಸು. ಭಕ್ತರ ಭಕ್ತಿಗೆ ವಶನಾದವನು ಎಂಬ ನಿನ್ನ ಕೀರ್ತಿಯನ್ನು ಸಾರ್ಥಕಗೊಳಿಸು.

೩೩ ನಿನ್ನ ಅನುಗ್ರಹದಿಂದ ನಾನು ಎಲ್ಲ ಸಿದ್ಧಿಗಳನ್ನು ಪಡೆಯುವೆನು. ಹೀಗೆಂದ ಧರ್ಮರಾಜನ ಮಾತುಗಳನ್ನು ಕೇಳಿದ ಭಕ್ತವತ್ಸಲ ಭಗವಂತನು

೩೪ ಹಸನ್ಮುಖನಾಗಿ ಧರ್ಮನಂದನನನ್ನು ಕುರಿತು ಹೇಳಿದನು.

೩೫ ಹೇ ರಾಜನೇ! ನಿನ್ನ ಅನುಗ್ರಹಕ್ಕಾಗಿ ನಾನಿಲ್ಲಿ ಮನುಜನಂತೆ ಅವತರಿಸಿದ್ದೇನೆ. ನನಗೆ ಶರಣಾದ ಯಾವ ಜನರು ಸಂಸಾರವನ್ನು ಹೊಂದುತ್ತಾರೆ? ನನ್ನ ಭಕ್ತನು ದುಃಖಿತನಾದರೆ ಅದು ನನ್ನ ಭಕ್ತವತ್ಸಲನೆಂಬ ಬಿರುದಿಗೆ ಅಪವಾದವೇ ಸರಿ.

೩೬ ನನ್ನ ಆಭರಣಗಳಾದ ಕೌಸ್ತುಭಮಣಿ ಮೊದಲಾದ ಆಭರಣಗಳ ವಿನಾಶವನ್ನಾಗಲಿ, ಬಹುಕಾಲದವರೆಗೆ ಲಕ್ಷ್ಮಿಯ ವಿಯೋಗವನ್ನಾಗಲೀ ಸಹಿಸಬಲ್ಲೆ.

೩೭ ಆದರೆ ಕ್ಷಣಕಾಲದ ಭಕ್ತದುಃಖವನ್ನು ನಾನು ಸಹಿಸಲಾರೆ. ಹೇ ರಾಜನೇ! ಈ ಲಕ್ಷ್ಮೀಮಂತ್ರವು ಅತಿ ರಹಸ್ಯವಾದುದು. ಅತಿ ಆಪತ್ತಿನಲ್ಲಿಯೂ ಇದನ್ನು ರಹಸ್ಯವಾಗಿರಿಸಬೇಕು.

ತವ ಸ್ನೇಹೇನ ರಾಜೇಂದ್ರ ಮಯ್ಯೈತದುಪದಿಶ್ಯತೇ ।
ಅನೇನ ಸದೃಶೋ ಮಂತ್ರೋ ನಾಸ್ತಿ ಸರ್ವಾಗಮೇಷ್ವಪಿ ॥೩೮॥

ಇದಂ ಸರ್ವಮನುಷ್ಠೇಯಂ ಸರ್ವಪಾಪಪ್ರಣಾಶನಮ್ ।
ಸದ್ಯಃ ಸಿದ್ಧಿಕರಂ ಪುಣ್ಯಂ ಸರ್ವಶತ್ರುವಿನಾಶನಮ್ ॥೩೯॥

ದಿವ್ಯೈಶ್ವರ್ಯಪ್ರದಂ ದಿವ್ಯಮಾಯುರಾರೋಗ್ಯವರ್ಧನಮ್ ।
ಭೂತಪ್ರೇತಪಿಶಾಚಾನಾಂ ವಿದ್ರಾವಕಮನುತ್ತಮಮ್ ॥೪೦॥

ತ್ರಿಕಾಲಮೇಕಕಾಲಂ ವಾ ಪಠನ್ ಶೃಣ್ವನ್ ಸಮಾಹಿತಃ ।
ಬ್ರಹ್ಮಹಾಪಿ ವಿಶುದ್ಧ್ಯೇತ ಕಿಂ ಪುನಃ ಶ್ರೋತ್ರಿಯೋ ಜಪನ್ ॥೪೧॥

---

**ವಿಶೇಷ :-** ಲಕ್ಷ್ಮೀ ಹಾಗೂ ಭಗವಂತನಿಗೆ ಎಂದಿಗೂ ವಿಯೋಗವಿಲ್ಲ. ಹಾಗೆ ವಿಯೋಗ ಚಿಂತನೆ ಅನರ್ಥಸಾಧನ. ಇದು ಕೇವಲ ಭಗವಂತನ ಭಕ್ತಕಾರುಣ್ಯವನ್ನು ಹೇಳುವ ಅರ್ಥವಾದ. ಮೂಲರೂಪವಷ್ಟೇ ಅಲ್ಲದೇ ಅವತಾರ ರೂಪಗಳಲ್ಲೂ ಅವರಿಗೆ ವಿಯೋಗವಿಲ್ಲ. ಹೀಗೆ ಎಂದೂ ಭಗವಂತನಿಂದ ವಿಯೋಗ ಹೊಂದದೆ ದೇಶತಃ, ಕಾಲತಃ ಜೊತೆಯಾಗಿ ಇರುವುದರಿಂದಲೇ ಮಹಾಲಕ್ಷ್ಮಿಗೆ ''ಸಮನಾ'' ಎಂದು ಹೆಸರಿದೆ.

ದೇಶತಃ ಕಾಲತಶ್ಚೈವ ಸಮಾ ಪ್ರಕೃತಿರೀಶ್ವರೇ ।
ಉಭಯೋರಪ್ಯಬದ್ಧತ್ವಂ ತದಬಂಧಃ ಪರಾತ್ಮನಃ ।
ಸ್ವತ ಏವ ಪರೇಶಸ್ಯ ಸಾ ಚೋಪಾಸ್ತೇ ಸದಾ ಹರಿಮ್ ॥

(ಬ್ರಹ್ಮಸೂತ್ರ ಭಾಷ್ಯದಲ್ಲಿ ಉದ್ಧೃತವಾದ ಭವಿಷ್ಯತ್ಪರ್ವವಚನ)

೩೮ ರಾಜಶ್ರೇಷ್ಠನೇ! ನಿನ್ನಲ್ಲಿಯ ಸ್ನೇಹದಿಂದ ಇದನ್ನು ಉಪದೇಶ ಮಾಡಿದ್ದೇನೆ. ಇದಕ್ಕೆ ಸಮಾನವಾದ ಮಂತ್ರವು ಸಕಲ ಆಗಮಗಳಲ್ಲಿಯೂ ದೊರೆಯದು.

೩೯ ಸಕಲ ಪಾಪಗಳನ್ನು ನಾಶಗೊಳಿಸುವ, ಸಮಸ್ತ ಶತ್ರುಗಳನ್ನು ಇಲ್ಲದಂತೆ ಮಾಡುವ, ಸದ್ಯದಲ್ಲಿಯೇ ಸಿದ್ಧಿಗಳನ್ನು ನೀಡುವ ಈ ಮಂತ್ರವನ್ನು ಕ್ರಮವಾಗಿ ಅನುಷ್ಠಾನ ಮಾಡು.

೪೦ ಆಯುಷ್ಯ, ಆರೋಗ್ಯಗಳನ್ನು ವೃದ್ಧಿಸಿ, ಭೂತ, ಪ್ರೇತ, ಪಿಶಾಚಗಳ ಬಾಧೆಯನ್ನು ತರಿದು ಹಾಕಿ, ದಿವ್ಯವಾದ ಐಶ್ವರ್ಯವನ್ನು ನೀಡುವಲ್ಲಿ ಈ ಲಕ್ಷ್ಮೀಮಂತ್ರಕ್ಕೆ ಸಮಾನವಾದ ಮತ್ತೊಂದು ಮಂತ್ರವಿಲ್ಲ.

೪೧ ಈ ಮಂತ್ರವನ್ನು ಪ್ರತಿದಿನ (ವಿಶೇಷವಾಗಿ ಧನುರ್ಮಾಸದಲ್ಲಿ) ಮೂರು ಬಾರಿಯಾಗಲೀ ಕೊನೆಗೆ ಒಂದು ಬಾರಿಯಾಗಲೀ ಪಠಿಸಿದವನು ಅಥವಾ

ಏಕಾದಶ್ಯಾಂ ವಿಶೇಷೇಣ ಪುಣ್ಯಕಾಲೇ ಭೃಗೋರ್ದಿನೇ ।
ಪುಣ್ಯದೇಶೇ ನದೀತೀರೇ ಸನ್ನಿಧೌ ಮೇ ವಿಶೇಷತಃ ॥೪೨॥

ಏತಜ್ಜಪ್ತ್ವಾ ವಿಶುದ್ಧಾತ್ಮಾ ಮದ್ಭಕ್ತೋ ವಿಜಿತೇಂದ್ರಿಯಃ ।
ಭುಕ್ತ್ವೇಹ ಸಕಲಾನ್ ಭೋಗಾನಂತೇ ಮಾಮೇತ್ಯಸಂಶಯಃ ॥೪೩॥

ಇದಂ ದ್ವಾದಶವಾರಂ ತು ಜಪ್ತ್ವಾ ಲಕ್ಷ್ಮೀಶಮರ್ಚಯ ।
ನಿವೇದ್ಯ ಗುಡಮುದ್ಗಾನ್ನಂ ಧನುರ್ಮಾಸೇಽರ್ಥಸಿದ್ಧಯೇ ॥೪೪॥

ಅನ್ಯಕಾಲೇಽಪಿ ವಾ ಜಪ್ತ್ವಾ ಸ್ತೋತ್ರಮೇತತ್ಸಕೃಚ್ಛುಚಿಃ ।
ಸದ್ಯ ಏವಾಪ್ನುಯಾಲ್ಲಕ್ಷ್ಮೀಕಟಾಕ್ಷೇಣಾಕ್ಷಯಂ ಧನಮ್ ॥೪೫॥

ಸತ್ಯಮೇವ ಮಯಾ ಪ್ರೋಕ್ತಂ ನಾತ್ರ ಕಾರ್ಯಾ ವಿಚಾರಣಾ ।
ಇತ್ಯುಕ್ತ್ವಾ ಸುವಿನೀತಾಯ ಶುಚಯೇ ಧರ್ಮಸೂನವೇ ॥೪೬॥

---

ಬ್ರಾಹ್ಮಣರಿಂದ ಹೇಳಿಸಿ ಭಕ್ತಿಯಿಂದ ಕೇಳಿದವನು, ಬ್ರಹ್ಮಹತ್ಯೆಯಂತಹ ಮಹಾಪಾತಕವನ್ನು ಮಾಡಿದವನಾದರೂ ಶುದ್ಧನಾಗುತ್ತಾನೆ ಎಂದ ಮೇಲೆ ಸತ್ಕುಲದಲ್ಲಿ ಜನಿಸಿದ ಬ್ರಾಹ್ಮಣನು ಇದನ್ನು ಜಪಿಸಿ ಶುದ್ಧಿ ಹಾಗೂ ಸಿದ್ಧಿಯನ್ನು ಪಡೆಯುವನೆಂದು ಬೇರೆ ಹೇಳಬೇಕೆ?

೪೨ ಉತ್ತಮವಾದ ಪುಣ್ಯದೇಶದಲ್ಲಾಗಲೀ, ನದೀತೀರದಲ್ಲಾಗಲೀ, ಭಗವಂತನ ಸನ್ನಿಧಿಯಲ್ಲಾಗಲೀ, ಪುಣ್ಯಕಾಲಗಳಲ್ಲಿ, ವಿಶೇಷವಾಗಿ ಏಕಾದಶೀ ಹಾಗೂ ಶುಕ್ರವಾರಗಳಂದು,

೪೩ ಈ ಮಂತ್ರವನ್ನು ಜಪಿಸಿದ ನನ್ನ ಭಕ್ತನು, ಪಾಪರಹಿತನಾಗಿ, ಇಂದ್ರಿಯಗಳ ವಶನಾಗದೇ ಈ ಲೋಕದಲ್ಲಿ ಎಲ್ಲ ರೀತಿಯ ಭೋಗಭಾಗ್ಯಗಳನ್ನು ಅನುಭವಿಸಿ ಕೊನೆಗೆ ನಿಶ್ಚಿತವಾಗಿ ನನ್ನನ್ನೇ ಹೊಂದುವನು.

೪೪ ಇಷ್ಟಾರ್ಥ ಸಿದ್ಧಿಗಾಗಿ ಈ ಮಂತ್ರವನ್ನು ಧನುರ್ಮಾಸದಲ್ಲಿ ಹನ್ನೆರಡು ಬಾರಿ ಜಪಿಸಿ, ಹುಗ್ಗಿ, ಗುಡಾನ್ನ (ಬೆಲ್ಲ ಸೇರಿಸಿ ಮಾಡಿದ ಅನ್ನ) ವನ್ನು ಲಕ್ಷ್ಮೀಪತಿ ನಾರಾಯಣನಿಗೆ ಸಮರ್ಪಿಸಿ ಅವನನ್ನು ಪೂಜಿಸು.

೪೫ ಬೇರೆ ಕಾಲದಲ್ಲಿಯೂ ಕೂಡ ಶುದ್ಧವಾಗಿ ಒಮ್ಮೆಯಾದರೂ ಈ ಸ್ತೋತ್ರವನ್ನು ಜಪಿಸಿದವನು ಶೀಘ್ರದಲ್ಲಿಯೇ ಲಕ್ಷ್ಮೀ ಅನುಗ್ರಹದಿಂದ ಶಾಶ್ವತವಾದ ಸಂಪತ್ತನ್ನು ಪಡೆಯುವನು.

೪೬ ರಾಜನೇ! ನಾನು ಹೇಳಿರುವುದು ಸತ್ಯವಾಗಿದೆ. ಇದರಲ್ಲಿ ಸಂದೇಹಬೇಡ ಎಂದು ಹೇಳಿ ವಿನೀತನೂ ಪರಮ ಶುದ್ಧನೂ ಆದ ಧರ್ಮರಾಜನಿಗೆ,

**ಧರ್ಮ್ಯಮೇತದ್ರಮಾಮಂತ್ರಂ ಗೋವಿಂದಸ್ಸಮುಪಾದಿಶತ್ ॥೪೭॥**

**ಶ್ರೀದೇವೀ ಪ್ರಥಮಂ ನಾಮ ದ್ವಿತೀಯಮಮೃತೋದ್ಭವಾ ।**
**ತೃತೀಯಂ ಕಮಲಾ ಪ್ರೋಕ್ತಾ ಚತುರ್ಥಂ ಲೋಕಸುಂದರೀ ।**
**ಪಂಚಮಂ ವಿಷ್ಣುಪತ್ನೀ ಚ ಷಷ್ಠಂ ಶ್ರೀವೈಷ್ಣವೀ ತಥಾ ॥೪೮॥**

**ಸಪ್ತಮಂ ತು ವರಾರೋಹಾ ಅಷ್ಟಮಂ ಹರಿವಲ್ಲಭಾ ।**
**ನವಮಂ ಶಾರ್ಙ್ಗಿಣೀ ಪ್ರೋಕ್ತಾ ದಶಮಂ ದೇವದೇವಿಕಾ ॥೪೯॥**

**ಏಕಾದಶಂ ಮಹಾಲಕ್ಷ್ಮೀಃ ದ್ವಾದಶಂ ಭುವನೇಶ್ವರೀ ॥೫೦॥**

**ಶ್ರೀಃ ಪದ್ಮಾ ಕಮಲಾ ಮುಕುಂದಮಹಿಷೀ ಲಕ್ಷ್ಮೀಸ್ತ್ರಿಕೋಣೇಶ್ವರೀ ।**
**ಮಾ ಕ್ಷೀರಾಬ್ಧಿಸುತಾ ವಿರಿಂಚಜನನೀ ವಿದ್ಯಾ ಸರೋಜಾತ್ಮಿಕಾ ॥೫೧॥**

**ಸರ್ವಾಭೀಷ್ಟಫಲಪ್ರದೇತಿ ಸತತಂ ನಾಮಾನಿ ಯೇ ದ್ವಾದಶ ।**
**ಪ್ರಾತಃ ಶುದ್ಧತರಾಃ ಪಠಂತಿ ಸತತಂ ಸರ್ವಾನ್ ಲಭಂತೇ ಶುಭಾನ್ ॥೫೨॥**

---

೪೭ ಧರ್ಮ ಪ್ರಾಪ್ತವಾದ ರಮಾ ಮಂತ್ರವನ್ನು ಶ್ರೀಕೃಷ್ಣನು ಉಪದೇಶ ನೀಡಿದನು. ಲಕ್ಷ್ಮೀಯ ಹನ್ನೆರಡು ನಾಮಗಳಿಂದ ಯುಕ್ತವಾದುದು ಈ ಮಹಾಮಂತ್ರ.

೪೮ ಶ್ರೀದೇವಿ ಪ್ರಥಮ ನಾಮವಾದರೆ, ಎರಡನೇಯದು ಅಮೃತೋದ್ಭವಾ, ಮೂರನೇಯದು ಕಮಲಾ, ನಾಲ್ಕನೆಯ ಹೆಸರೇ ಲೋಕಸುಂದರಿ. ಐದನೆಯದು ವಿಷ್ಣು ಪತ್ನಿಯಾದರೆ, ಆರನೆಯದು ಶ್ರೀ ವೈಷ್ಣವೀ,

೪೯ ಏಳನೆಯ ಅಭಿದಾನ ವರಾರೋಹಾ, ಎಂಟನೆಯದು ಹರಿವಲ್ಲಭಾ, ಒಂಭತ್ತನೆಯದು ಶಾಂರ್ಙ್ಗಿಣೀ, ಹತ್ತನೆಯದು ದೇವದೇವಿಕಾ,

೫೦ ಹನ್ನೊಂದು ಮಹಾಲಕ್ಷ್ಮೀ, ಹನ್ನೆರಡನೆಯದು ಭುವನೇಶ್ವರಿ.

೫೧ (೧) ಶ್ರೀ (೨) ಪದ್ಮಾ (೩) ಕಮಲಾ (೪) ಮುಕುಂದ ಮಹೀಷೀ (೫) ಲಕ್ಷ್ಮೀ (೬) ತ್ರಿಕೋಣೇಶ್ವರೀ (ತ್ರಿಲೋಕೇಶ್ವರೀ ಎಂದೂ ಪಾಠವಿದೆ.) (೭) ಮಾ (೮) ಕ್ಷೀರಾಬ್ಧಿಸುತಾ (೯) ವಿರಿಂಚಜನನೀ (೧೦) ವಿದ್ಯಾ (೧೧) ಸರೋಜಾತ್ಮಿಕಾ

೫೨ (೧೨) ಸರ್ವಾಭೀಷ್ಟಫಲಪ್ರದಾ ಎಂಬ ಹನ್ನೆರಡು ಹೆಸರುಗಳನ್ನು ಪ್ರಾತಃ ಕಾಲದಲ್ಲಿ ಶುಚಿರ್ಭೂತರಾಗಿ ಸತತವಾಗಿ ಪಠಿಸಿದವರು ಎಲ್ಲ ಶುಭಫಲಗಳನ್ನು ಪಡೆಯುತ್ತಾರೆ.

**ಇತ್ಯೇತದ್ಗೀಷ್ಪತಿಃ ಶ್ರೀಮಾನ್ ಲಕ್ಷ್ಮೀಹೃದಯಮುತ್ತಮಮ್ ।**
**ಉಪದಿಶ್ಯೇಂದ್ರಪತ್ನ್ಯೈ ತಾಮುವಾಚ ವಚನಂ ಶುಭಮ್ ॥೫೩॥**

**ಭದ್ರೇ ಲಕ್ಷ್ಮೀಸ್ತವಂ ದಿವ್ಯಂ ಪುಣ್ಯಮೇತಚ್ಛುಭಾವಹಮ್ ।**
**ಜಪ್ತ್ವೈತತ್ಕಮಲಾಸ್ತೋತ್ರಂ ಸರ್ವಾನ್ ಕಾಮಾನವಾಪ್ಸ್ಯಸಿ ॥೫೪॥**

**ಗಚ್ಛ ತ್ವಂ ಸ್ವರ್ಣಶೈಲೇಂದ್ರಮಿಂದ್ರಾಣೀಂದ್ರಜಯಾಪ್ತಯೇ ।**
**ಮಾನಸೇ ಸರಸಿ ಸ್ನಾತ್ವಾ ಲಕ್ಷ್ಮೀಸ್ತೋತ್ರಮಿದಂ ಜಪ ॥೫೫॥**

**ಸರ್ವಾಸುರೇಷು ನಷ್ಟೇಷು ತ್ವದ್ಭರ್ತರಿ ಚ ವಿಜ್ವರೇ ।**
**ಪುನಃ ಸಿಂಹಾಸನಂ ಪ್ರಾಪ್ತೇ ಕೃಪಯಾ ಪರಮಾತ್ಮನಃ**
**ಯದುಕ್ತಂ ತು ಮಯಾ ತತ್ತ್ವಂ ಸರ್ವಂ ಸಂಶ್ರೋಷ್ಯಸೇ ತದಾ ॥೫೬॥**

**॥ ಇತಿ ಶ್ರೀಮದಾಗ್ನೇಯಪುರಾಣೇ**
**ಧನುರ್ಮಾಸಮಾಹಾತ್ಮ್ಯೇ ದ್ವಿತೀಯೋಽಧ್ಯಾಯಃ ॥**

★★★

---

೫೩ ಇಂತಹ ಉತ್ತಮ ಲಕ್ಷ್ಮೀಹೃದಯ (ಲಕ್ಷ್ಮೀದ್ವಾದಶನಾಮ) ಸ್ತೋತ್ರವನ್ನು ಬೃಹಸ್ಪತ್ಯಾಚಾರ್ಯರು ಇಂದ್ರಪತ್ನಿಯಾದ ಶಚೀದೇವಿಗೆ ಉಪದೇಶ ನೀಡಿ ಅವಳನ್ನು ಕುರಿತು ಹೇಳಿದರು.

೫೪ ಮಂಗಳಾಂಗಿಯೇ! ಪುಣ್ಯತಮವಾದ ಈ ಲಕ್ಷ್ಮೀಸ್ತೋತ್ರವನ್ನು ಜಪಿಸು. ನಿನ್ನ ಎಲ್ಲ ಕಾಮನೆಗಳನ್ನು ಹೊಂದುವಿ.

೫೫ ಇಂದ್ರಪತ್ನಿಯೇ! ಇಂದ್ರನ ಜಯ ಪ್ರಾಪ್ತಿಗೋಸುಗ ನೀನು ಸ್ವರ್ಣಪರ್ವತಕ್ಕೆ ಹೊರಡು. ಅಲ್ಲಿ ಮಾನಸಸರೋವರದಲ್ಲಿ ಸ್ನಾನಮಾಡಿ ಈ ಲಕ್ಷ್ಮೀಸ್ತೋತ್ರವನ್ನು ಭಕ್ತಿಯಿಂದ ಜಪಿಸು.

೫೬ ಎಲ್ಲ ಅಸುರರು ನಾಶಹೊಂದಿ, ನಿನ್ನ ಪತಿಯಾದ ಇಂದ್ರನು ಶತ್ರುಬಾಧೆಯಿಂದ ಮುಕ್ತನಾಗಿ, ಪರಮಾತ್ಮನ ಕೃಪೆಯಿಂದ ಮತ್ತೆ ಸಿಂಹಾಸನವನ್ನು ಪಡೆಯುತ್ತಾನೆ. ಆಗ ನಾನು ಹೇಳಿದ ಎಲ್ಲವನ್ನು ಸ್ಮರಿಸಿಕೊಳ್ಳುವೆ.

**॥ ಇಲ್ಲಿಗೆ ಎರಡನೇ ಅಧ್ಯಾಯವು ಮುಗಿಯಿತು ॥**

# ಅಥ ತೃತೀಯೋಽಧ್ಯಾಯಃ

**ಕೃಷ್ಣ ಉವಾಚ -**

**ಗುರುಣೈವಂ ಸಮಾಜ್ಞಪ್ತಾಽಕಾರ್ಷೀತ್ಸರ್ವಂ ಯದಾ ಶಚೀ ।**
**ತತೋ ಲಕ್ಷ್ಮೀಕಟಾಕ್ಷೇಣ ಸುರರಾಜಃ ಸಮೇಧಿತಃ ॥೧॥**

**ದ್ವಿಗುಣಂ ಬಲವೀರ್ಯೌಜಃಸಮೃದ್ಧಃ ಕುಲಿಶಾಯುಧಃ ।**
**ಐರಾವತಂ ಸಮಾಸ್ಥಾಯ ಸರ್ವದೇವೈರ್ಬಲೋತ್ಕಟೈಃ ॥೨॥**

**ಯುಕ್ತೋ ದೈತೇಯನಗರೀಮಾವವಾರ ಮಹಾಬಲಃ ।**
**ಅಥೋ ನಿರ್ಜಗ್ಮುರತ್ಯುಗ್ರಾ ಮಹಾವೀರ್ಯಾ ಮಹಾಬಲಾಃ ॥೩॥**

**ಮಹೋತ್ಸಾಹಾ ಮಹಾಘೋರಾ ಮಹಾಕ್ರುದ್ಧಾಶ್ಚ ದಾನವಾಃ ।**
**ತತೋ ಯುದ್ಧಮಭೂತ್ತೇಷಾಮನ್ಯೋನ್ಯಮಭಿಗರ್ಜತಾಮ್ ॥೪॥**

**ಪಶ್ಯತಾಂ ಸರ್ವಭೂತಾನಾಂ ತುಮುಲಂ ರೋಮಹರ್ಷಣಮ್ ।**
**ತತೋಽಸುರಃ ಕುರುಶ್ರೇಷ್ಠ ವಲೋ ನಾಮ ಮಹಾಬಲಃ ॥೫॥**

---

೧ ಗುರುಗಳಾದ ಬೃಹಸ್ಪತ್ಯಚಾರ್ಯರ ಆಜ್ಞೆಗೆ ಅನುಗುಣವಾಗಿ ಶಚಿದೇವಿಯು ಎಲ್ಲವನ್ನೂ ವಿಧಿಪೂರ್ವಕವಾಗಿ ಆಚರಿಸಿದಳು. ಆಗ ಲಕ್ಷ್ಮೀ ಅನುಗ್ರಹದಿಂದ ಇಂದ್ರನು ಅಭಿವೃದ್ಧನಾದನು.

೨ ಮೊದಲಿಗಿಂತ ಎರಡು ಪಟ್ಟು ಬಲ, ವೀರ್ಯ, ಕಾಂತಿಗಳಿಂದ ಯುಕ್ತನಾಗಿ, ವಜ್ರಾಯುಧದಿಂದ ಸಮೃದ್ಧನಾದನು. ಬಲಯುಕ್ತರಾದ ಸರ್ವದೇವತೆಗಳಿಂದ ಕೂಡಿ ಐರಾವತದ ಮೇಲೇರಿ,

೩ ದೈತ್ಯರ ನಗರಿಯನ್ನು ಆಕ್ರಮಿಸಿದನು. ಅತ್ಯುಗ್ರರಾದ, ಅತಿಬಲರೂ, ವೀರ್ಯವಂತರೂ ಆದ ದೈತ್ಯರು ಯುದ್ಧಕ್ಕಾಗಿ ಹೊರಟರು.

೪ ಅತಿ ಕ್ರೂರಿಗಳಾದ, ಅತ್ಯಂತ ಕ್ರುದ್ಧರಾದ, ಬಹಳ ಉತ್ಸಾಹಿಗಳಾದ ದೈತ್ಯರು ಹಾಗೂ ದೇವತೆಗಳು ಮುಖಾಮುಖಿಯಾದರು. ಪರಸ್ಪರವಾಗಿ ಗರ್ಜನೆ ಮಾಡುತ್ತ ಮೇಲೆರಗಿದ ಅವರ ಮಧ್ಯೆ ಕದನವು ಪ್ರಾರಂಭವಾಯಿತು.

೫ ಹೇ ಕುರುಶ್ರೇಷ್ಠನೇ! ಸಕಲ ಜೀವರಾಶಿಗಳು ನೋಡುತ್ತಿರಲು ರೋಮಾಂಚಕ ಯುದ್ಧವು ಆರಂಭವಾಯಿತು. ಆಗ ಅತಿಬಲಶಾಲಿಯಾದ ''ವಲ''ನೆಂಬ ಅಸುರನು,

**ಅಟ್ಟಹಾಸೇನ ಮಹತಾ ದಿಶೋ ದಶ ನಿನಾದಯನ್ ।**
**ಉತ್ಪತ್ಯ ವೇಗಾತ್ ಸಂಕ್ರುದ್ಧೋ ಗದಯಾ ವಜ್ರಕಲ್ಪಯಾ ॥೬॥**

**ಪ್ರಾಹರನ್ನಾಗರಾಜಸ್ಯ ಮೂರ್ಧ್ನಿ ಮೂರ್ಖೋಽತಿಭೀಷಣಃ ।**
**ಸಾ ಗದಾಶನಿಸಂಕಾಶಾ ವ್ಯಾಯಾಮಾಷ್ಟಶತಾ ಶುಭಾ ॥೭॥**

**ಹೇಮಪಟ್ಟಪರಿಕ್ಷಿಪ್ತಾ ಶತ್ರುಶೋಣಿತರಂಜಿತಾ ।**
**ಅರತ್ನೀತ್ರಯಸಂಸ್ಥೂಲಾ ಘೋರಾ ಸರ್ವಾಯಸೀ ಗದಾ ॥೮॥**

**ಪಪಾತ ಶಕಲೀಭೂತಾ ಶತಭಾನುಸಮಪ್ರಭಾ ।**
**ತಾಂ ದೃಷ್ಟ್ವಾ ತು ತಥಾಭೂತಾಂ ವಿಷೇದುಸ್ತತ್ರ ದಾನವಾಃ ॥೯॥**

**ಜಗರ್ಜುರುಚ್ಚೈರ್ದೇವಾಸ್ತೇ ವಸ್ವಾದಿತ್ಯಪುರೋಗಮಾಃ ।**
**ತತ ಐರಾವತೋ ನಾಗಃ ಕುಲಿಶಾದೇಶಚೋದಿತಃ ॥೧೦॥**

**ಇಂದ್ರೇಣ ಬಲವಾನ್ ಕ್ರುದ್ಧೋ ಗದಯಾ ವಜ್ರಕಲ್ಪಯಾ ।**
**ತಾಡಿತೋ ದೈತ್ಯಸೈನ್ಯಾಯ ಭೃಶಂ ಬೃಂಹಿತಮಾತನೋತ್ ॥೧೧॥**

---

೬ ಹತ್ತು ದಿಕ್ಕುಗಳೂ ಕಂಪಿಸುವಂತೆ ಅಟ್ಟಹಾಸದಿಂದ ಗರ್ಜಿಸಿ, ಕ್ರುದ್ಧನಾಗಿ ವೇಗದಿಂದ ಜಿಗಿದು ವಜ್ರಸಮಾನವಾದ ಗದೆಯಿಂದ,

೭ ಅತಿ ಕ್ರೂರಿಯೂ ಮೂರ್ಖನೂ ಆದ ಆ ವಲಾಸುರನು ಐರಾವತದ ತಲೆಯ ಮೇಲೆ ಪ್ರಹಾರ ಮಾಡಿದ. ಆ ಗದೆಯಾದರೋ ವಜ್ರಾಯುಧದಂತೆ ಕಾಂತಿಯುಳ್ಳದ್ದು. ಅತ್ಯಂತ ಭಯಾನಕವಾದುದು, ಗಾತ್ರದಲ್ಲಿ ದೊಡ್ಡದೂ ಆಗಿತ್ತು ಆ ಗದೆ.

೮ ಬಂಗಾರದ ಪಟ್ಟಿಗಳಿಂದ ಅಲಂಕರಿಸಲ್ಪಟ್ಟ ಅಗಲವಾದ ಹಿಡಿಯುಳ್ಳ, ಶತ್ರುಗಳ ರಕ್ತದಲ್ಲಿ ತೋಯ್ದು ಕೆಂಪಾದ ಆ ಕಬ್ಬಿಣದ ಗದೆಯು,

೯ ನೂರು ಸೂರ್ಯರ ಕಾಂತಿಯುಳ್ಳ ಆ ಗದೆಯು ತುಂಡು ತುಂಡಾಗಿ ಬಿದ್ದಿತು. ಮುರಿದು ಹೋದ ಆ ಗದೆಯನ್ನು ಕಂಡು ದಾನವರೆಲ್ಲ ಅತಿ ದುಃಖಿತರಾದರು.

೧೦ ವಸುಗಳು, ಆದಿತ್ಯರು ಮುಂತಾದ ದೇವತೆಗಳು ವೀರಗರ್ಜನೆ ಮಾಡಿದರು. ಆಗ ಅಂಕುಶದಿಂದ ಪ್ರೇರಿತವಾದ,

೧೧ ವಲಾಸುರನ ಗದೆಯಿಂದ ಪ್ರಹರಿಸಲ್ಪಟ್ಟ ಐರಾವತವು, ಇಂದ್ರನಿಂದ ಪ್ರೇರಿತವಾಗಿ ದೈತ್ಯಸೈನ್ಯದೆಡೆಗೆ ತಿರುಗಿ ಜೋರಾಗಿ ಘೀಳಿಟ್ಟಿತು.

ತೇನ ಬೃಂಹಿತಘೋಷೇಣ ಪ್ರಲಯಾಬ್ಧಿನಿಭೇನ ತು ।
ಕೇಚಿದ್ಧತಾ ರಣೇ ದೈತ್ಯಾಃ ಕೇಚಿತ್ತತ್ರ ಪಲಾಯಿತಾಃ ॥೧೨॥

ಮೂರ್ಛಿತಾಃ ಕತಿಚಿತ್ ಕೇಚಿತ್ ಧಾವಂತೋ ನಾವತಸ್ಥಿರೇ ।
ಗದಾಯಾಂ ತು ಪ್ರಭಗ್ನಾಯಾಂ ಮಹಾಕ್ರೋಧೋ ವಲಾಸುರಃ ॥೧೩॥

ತ್ರಿಶೂಲೇನ ಮಹಾನಾಗಂ ವ್ಯಹಂಶ್ಚಾಪಿ ಪುನರ್ಭೃಶಮ್ ।
ತತಸ್ತ್ರಿಶೂಲಾಭಿಹತಃ ಪರಾವೃತ್ಯ ಗಜೋತ್ತಮಃ ॥೧೪॥

ಅತೀವ ವಿಹ್ವಲೋ ವೇಗಾತ್ ಕ್ರೋಶಮಾತ್ರಂ ವಿದುದ್ರುವೇ ।
ತತೋ ದೇವಾಸ್ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ॥೧೫॥

ಹಾಹೇತಿ ಚುಕ್ರುಶುರ್ದೈತ್ಯಾ ವಿನೇದುರ್ದುಃಖಿತಾ ಭೃಶಮ್ ।
ಅತಿಕ್ರುದ್ಧೋಽಥ ದೇವೇಂದ್ರಃ ಸ್ತಂಭಯಿತ್ವಾ ಗಜಂ ಶನೈಃ ॥೧೬॥

ಕರಾಭ್ಯಾಂ ಕುಂಭಯುಗಲೇ ಉಪಲಾಲನಪೂರ್ವಕಮ್ ।
ನಿವರ್ತಯಿತ್ವಾ ವೇಗೇನ ದೇವರ್ಷಿಭಿರಭಿಷ್ಟುತಃ ॥೧೭॥

---

೧೨ ಪ್ರಲಯಕಾಲದ ಸಮುದ್ರ ಘೋಷದಂತಿದ್ದ ಐರಾವತದ ಶಬ್ದದಿಂದ ಕೆಲ ದೈತ್ಯರು ಎದೆಯೊಡೆದು ಅಸು ನೀಗಿದರು. ಮತ್ತೆ ಕೆಲವರು ರಣರಂಗದಿಂದ ಕಾಲಿಗೆ ಬುದ್ಧಿ ಹೇಳಿದರು.

೧೩ ಮತ್ತೆ ಕೆಲವರು ಮೂರ್ಛಿತರಾದರು. ರಣರಂಗದಲ್ಲಿ ಯಾವ ದೈತ್ಯರೂ ನಿಲ್ಲದಾದರು. ಗದೆಯು ಪುಡಿಯಾಗಲು ಅತಿಕ್ರುದ್ಧನಾದ ವಲಾಸುರನು,

೧೪ ತ್ರಿಶೂಲವನ್ನೆತ್ತಿ ವೇಗವಾಗಿ ಐರಾವತವನ್ನು ಹೊಡೆದನು. ತ್ರಿಶೂಲಘಾತಿತವಾದ ಐರಾವತವು ಹಿಂದಿರುಗಿ,

೧೫ ಅತ್ಯಂತ ದುಃಖದಿಂದ ವೇಗವಾಗಿ ಬಂದು ಕ್ರೋಶದವರೆಗೆ ಓಡಿ ಹೋಯಿತು. ಆಗ ಎಲ್ಲಾ ದೇವತೆಗಳು, ಗಂಧರ್ವರು, ಸಿದ್ಧರು, ಮಹರ್ಷಿಗಳು ಹಾಗೂ

೧೬ ದೈತ್ಯರು ಹಾ ಹಾ ಎಂದು ದುಃಖದಿಂದ ರೋದಿಸಿದರು. ಬಹಳ ಕೋಪಗೊಂಡ ದೇವೇಂದ್ರನು ನಿಧಾನವಾಗಿ ಐರಾವತವನ್ನು ನಿಲ್ಲಿಸಿದನು.

೧೭ ಕೈಗಳಿಂದ ಆನೆಯ ಗಂಡಸ್ಥಲವನ್ನು ನೇವರಿಸಿ, ದೇವರ್ಷಿಗಳು ಸ್ತುತಿಸುತ್ತಿರಲು ಆನೆಯನ್ನು ತಿರುಗಿಸಿದನು.

ರಣಭೂಮಿಂ ಪುನಃ ಪ್ರಾಪ್ಯ ವಲಸ್ಯಾಭಿಘ್ನತಃ ಪುರಃ ।
ಶಿರೋ ಜಹಾರ ವಜ್ರೇಣ ವೃಂತಾತ್ತಾಲಫಲಂ ಯಥಾ ॥೧೮॥

ಅಥ ದೈತ್ಯೇ ಹತೇ ಘೋರೇ ಮಹಾಬಲಪರಾಕ್ರಮೇ ।
ಭಯಾರ್ತಾ ದುದ್ರುವುಸ್ಸರ್ವೇ ದಿಶೋ ದಶ ದಿತೇಃ ಸುತಾಃ ॥೧೯॥

ದೇವಾ ಜಹೃಷುರತ್ಯಂತಂ ದೇವೇಂದ್ರಂ ಮುನಯೋಽಸ್ತುವನ್ ।
ಪಲಾಯಿತೇಷು ದೈತ್ಯೇಷು ನಾತಿಷ್ಠತ್ತತ್ರ ಕೋಽಪ್ಯಹೋ ॥೨೦॥

ತದ್ದೃಷ್ಟ್ವಾ ವಿದ್ರುತಂ ಸೈನ್ಯಂ ವೃಷಪರ್ವಾಽಸುರೋತ್ತಮಃ ।
ಭೀಮೋ ಜಂಭಶ್ಚ ಪಾಕಶ್ಚ ತ್ರಯ ಏತೇ ಮಹಾಬಲಾಃ ॥೨೧॥

ನಿವರ್ತಯಿತ್ವಾ ಸೈನ್ಯಂ ಚ ಗರ್ಜಂತೋ ರಥಸಂಸ್ಥಿತಾಃ ।
ವಾತಪಿತ್ತಶ್ಲೇಷ್ಮನಿಭಾ ಕ್ರುದ್ಧಾ ಇಂದ್ರಂ ಸಮದ್ರವನ್ ॥೨೨॥

ಪ್ರಾವರ್ತತ ಪುನರ್ಯುದ್ಧಂ ಪಶ್ಯತಾಮತಿಭೀಷಣಮ್ ।
ಇಂದ್ರಸ್ಯ ತೇಷಾಂ ದೈತ್ಯಾನಾಂ ಸಿಂಹನಾದಂ ಚ ಕುರ್ವತಾಮ್ ॥೨೩॥

---

೧೮ ಆನೆಯನ್ನು ಮತ್ತೆ ರಣಭೂಮಿಗೆ ಕರೆ ತಂದು ಯುದ್ಧೋನ್ಮತ್ತನಾದ ವಲನ ಎದುರು ನಿಲ್ಲಿಸಿದನು. ಕತ್ತಿಯಿಂದ ತಾಳೆಯ ಹಣ್ಣನ್ನು ಕತ್ತರಿಸಿದಂತೆ ವಜ್ರಾಯುಧದಿಂದ ವಲಾಸುರನ ಶಿರವನ್ನು ಕತ್ತರಿಸಿದನು.

೧೯ ಅತ್ಯಂತ ಬಲ, ಪರಾಕ್ರಮಗಳುಳ್ಳ, ಘೋರ ದೈತ್ಯನು ಹತನಾಗಲು, ಭೀತರಾದ ದೈತ್ಯರು ದಿಕ್ಕುಗಾಣದೇ ಓಡತೊಡಗಿದರು.

೨೦ ದೇವತೆಗಳ ಹರ್ಷಕ್ಕೆ ಪಾರವಿಲ್ಲದಾಯಿತು. ಮುನಿಗಳೆಲ್ಲ ದೇವೇಂದ್ರನನ್ನು ಸ್ತೋತ್ರ ಮಾಡಿದರು. ದೈತ್ಯರೆಲ್ಲ ಓಡಿಹೋಗಲು ಸಮರಭೂಮಿಯಲ್ಲಿ ನಿಲ್ಲುವವರಾರು?

೨೧ ಚದುರಿಹೋದ ದೈತ್ಯಸೇನೆಯನ್ನು ಕಂಡು, ಅಸುರನಾಯಕನಾದ ವೃಷಪರ್ವ ಹಾಗೂ ಭೀಮ,ಜಂಭ,ಪಾಕ ಎಂಬ ಅತಿ ಬಲಶಾಲಿಗಳಾದ ಮೂವರು ದೈತ್ಯರು,

೨೨ ರಣಭೂಮಿಯಿಂದ ಓಡುತ್ತಿರುವ ದೈತ್ಯಸೇನೆಯನ್ನು ನಿಲ್ಲಿಸಿ, ರಥಗಳನ್ನೇರಿ, ಗರ್ಜಿಸುತ್ತ, ಅತ್ಯಂತ ಕೋಪದಿಂದ, ವಾತ, ಪಿತ್ತ, ಕಫಗಳಂತೆ ಇಂದ್ರನ ಮೇಲೆರಗಿದರು.

೨೩ ಸಿಂಹಗಳಂತೆ ಗರ್ಜಿಸುತ್ತಿರುವ ಇಂದ್ರ ಹಾಗೂ ವೃಷಪರ್ವನೇ ಮೊದಲಾದ ನಾಲ್ಕು ಜನ ದೈತ್ಯರ ಮಧ್ಯೆ ಅತಿ ಭಯಂಕರವಾದ ಕದನವು ಮತ್ತೆ ಆರಂಭವಾಯಿತು.

ಅಸುರಾಶ್ಚ ಪುನಃ ಸರ್ವೇ ನಿವೃತ್ತಾ ಆಹವೋನ್ಮುಖಾಃ ।
ನಾನಾಯುಧೈರ್ಮಹಾತೀಕ್ಷ್ಣೈಃ ಪ್ರಾಹರನ್ನಮರಾನ್ ಭೃಶಮ್ ॥೨೪॥

ತತಃ ಕ್ರುದ್ಧಾ ಮಹಾಸತ್ವಾ ವಸವೋಽಷ್ಟೌ ಮಹಾಹವೇ ।
ರುದ್ರಾದಿತ್ಯಾಶ್ಚ ಸಿದ್ಧಾಶ್ಚ ಜಘ್ನುರ್ದೈತ್ಯಾನ್ ಶನೈಃ ಶನೈಃ ॥೨೫॥

ಸ ಸಂಪ್ರಹಾರಸ್ತುಮುಲಃ ಸುಮಹಾನ್ ರೋಮಹರ್ಷಣಃ ।
ಕದಾಪ್ಯಭೂತಪೂರ್ವಸ್ತು ಬಭೂವಾತಿಭಯಂಕರಃ ॥೨೬॥

ದಿಶಶ್ಚ ವ್ಯಾಕುಲಾಸ್ಸರ್ವಾಃ ಕೃಷ್ಣೇನ ತಮಸಾವೃತಾಃ ।
ಸರ್ವೇ ಚುಕ್ಷುಭಿರೇ ಲೋಕಾ ನಿರ್ಮರ್ಯಾದಾಶ್ಚ ಸಾಗರಾಃ ॥೨೭॥

ಜಗತ್ಸರ್ವಮನಾಲಂಬಮವಿತರ್ಕ್ಯಮಹೇತುಕಮ್ ।
ಅನಿರ್ವಾಚ್ಯಮಚಿಂತ್ಯಂ ಚ ಲಯಕಾಲ ಇವಾಭವನ್ ॥೨೮॥

ಏವಂ ಯುದ್ಧಮಭೂದ್ಘೋರಂ ಭೀಷ್ಮಂ ದ್ವಾದಶವಾರ್ಷಿಕಮ್ ।
ನ ಬಭೂವೋಭಯೇಷಾಂ ಚ ಜಯೋ ವಾಪಿ ಪರಾಜಯಃ ॥೨೯॥

---

೨೪ ರಣ ತೊರೆದ ದೈತ್ಯರೆಲ್ಲ ಮತ್ತೆ ಉತ್ಸಾಹದಿಂದ ಯುದ್ಧಕ್ಕೆ ತೊಡಗಿ, ತೀಕ್ಷ್ಣವಾದ ಆಯುಧಗಳಿಂದ ದೇವತೆಗಳನ್ನು ಆಕ್ರಮಿಸಿದರು.

೨೫ ಇದರಿಂದ ಕ್ರುದ್ಧರಾದ ಮಹಾಬಲಿಗಳಾದ ಅಷ್ಟವಸುಗಳು, ಏಕಾದಶರುದ್ರರು, ದ್ವಾದಶಾದಿತ್ಯರು ಸಿದ್ಧರು ಮುಂತಾದ ದೇವತೆಗಳೆಲ್ಲ ದೈತ್ಯರ ಮೇಲೆ ಮುಗಿಬಿದ್ದರು.

೨೬ ಹಿಂದೆಂದೂ ಕಂಡು ಕೇಳರಿಯದ, ಭಯಂಕರವಾದ ದೇವ ದೈತ್ಯರ ಕದನವು ಮೈನವಿರೇಳಿಸುವಂತೆ ನಡೆಯಿತು.

೨೭ ದಿಕ್ಕುಗಳೆಲ್ಲ ವ್ಯಾಕುಲಗೊಂಡು ಅಂಧಕಾರಮಯವಾದವು. ಲೋಕಗಳೆಲ್ಲ ಕ್ಷೋಭೆಗೊಂಡು ಸಮುದ್ರಗಳು ಉಕ್ಕಿ ಹರಿದವು.

೨೮ ಜಗವೆಲ್ಲ ಅನಾಧಾರವಾಯಿತು. ಈ ಕದನದ ಪ್ರಶಾಂತಿಗೆ ನಿಮಿತ್ತವೇ ಇಲ್ಲವಾಯಿತು. ಲೋಕದಲ್ಲಿಯ ಜನರಿಗೆ ಏನು ಮಾಡಬೇಕೆಂದು ತರ್ಕಿಸಲು ಅಸಾಧ್ಯವಾಯಿತು. ಪ್ರಳಯವೇ ಬಂದೊದಗಿದಂತಾಯಿತು.

೨೯ ಭಯಾನಕ ಕದನವು ಹನ್ನೆರಡು ವರ್ಷಗಳ ಕಾಲ ನಡೆದರೂ, ಯಾರೊಬ್ಬರೂ ಸೋಲರಿಯದಾದರು. ಗೆಲುವು ಕಾಣದಾದರು.

**ತತೋ ಬ್ರಹ್ಮಾ ಮಹಾಭೀತಃ ಸನಕಾದಿಮುನೀಶ್ವರಾಃ ।**
**ನೈಗಮೈರ್ವಿವಿಧೈಃ ಸ್ತೋತ್ರೈರಸ್ತುವನ್ ಶೇಷಶಾಯಿನಮ್ ॥೩೦॥**

**ತತೋ ವಿಷ್ಣುರ್ಮಹಾದೇವಶ್ಚಕ್ರಪಾಣಿಸ್ಸುರೇಶ್ವರಃ ।**
**ನಿರ್ಯಯೌ ಗರುಡಾರೂಢೋ ಬ್ರಹ್ಮಾದಿಮುನಿಭಿಃ ಸ್ತುತಃ ॥೩೧॥**

**ತತೋ ದೇವಾ ಹರಿಂ ದೃಷ್ಟ್ವಾ ತುಷ್ಟಾವ ಜಯಜಯೇತಿ ತೇ ।**
**ತುಷ್ಟುವುಃ ವಿವಿಧೈಃ ಸ್ತೋತ್ರೈಃ ಜಗರ್ಜುಶ್ಚೇಂದ್ರಪೂರ್ವಕಾಃ ॥೩೨॥**

**ಹರಿಂ ದೃಷ್ಟ್ವಾ ಮಹಾದೈತ್ಯಾ ಹಸಂತಶ್ಚ ಮುಹುರ್ಮುಹುಃ ।**
**ಗರ್ಜಂತಶ್ಚ ಮಹಾಭೀಮಾ ಗರುಡಸ್ಥಂ ಸಮದ್ರವನ್ ॥೩೩॥**

**ಏವಂ ಚಕ್ರುರ್ಮಹಾಯುದ್ಧಂ ಕೇಶವೇನಾಸುರೋತ್ತಮಾಃ ।**
**ವ್ಯದ್ರವಂಸ್ತೇ ದಿಶಸ್ಸರ್ವೇ ವಿಷ್ಣುಶಸ್ತ್ರಪ್ರಪೀಡಿತಾಃ ॥೩೪॥**

---

೩೦ ಇದರಿಂದ ಅತಿ ಭೀತರಾದ ಬ್ರಹ್ಮದೇವರು ಹಾಗೂ ಸನಕಾದಿಮುನಿಶ್ರೇಷ್ಠರು ಅನೇಕ ವೇದೋಕ್ತಸ್ತೋತ್ರಗಳಿಂದ ಶೇಷಶಾಯಿಯಾದ ವಿಷ್ಣುವನ್ನು ಮೊರೆ ಹೊಕ್ಕರು.

ವಿಶೇಷ- ಇಲ್ಲಿ ಬ್ರಹ್ಮದೇವರು ಭಯಪಟ್ಟರು ಎಂದು ತಿಳಿಯಬಾರದು. ಅವರಿಗೆ ಎರಡು ಬಾರಿ ಮಾತ್ರ ಭಯವಾಯಿತು. ಆ ಭಯವು ಕೂಡಾ ಅರ್ಧ ಕ್ಷಣ ಮಾತ್ರ ಇತ್ತು. ಅದು ಕೂಡಾ ವಿಷ್ಣುಪ್ರೀತಿಗೆ ಸಾಧನವಾಯಿತೆಂದು ಷಷ್ಠಸ್ಕಂಧ ಒಂಭತ್ತನೆಯ ಅಧ್ಯಾಯದ ಭಾಗವತತಾತ್ಪರ್ಯದಲ್ಲಿ ''ದ್ವಿವಾರಂ ಭಯಮೇವ ಚ'' ಶ್ರೀಮದಾಚಾರ್ಯರು ನಿರೂಪಿಸಿದ್ದಾರೆ. ಆದ್ದರಿಂದ ಸನಕಾದಿಗಳಿಗೆ ಭಯವಾಯಿತೆಂದು ತಿಳಿಯಬಹುದು.

೩೧ ಬ್ರಹ್ಮಾದಿಮುನಿಗಳಿಂದ ಪ್ರಾರ್ಥಿತನಾದ ದೇವದೇವನಾದ ವಿಷ್ಣುವು, ಚಕ್ರಧಾರಿಯಾಗಿ ಗರುಡನ ಹೆಗಲೇರಿ ಯುದ್ಧಭೂಮಿಗೆ ಬಂದೊದಗಿದ.

೩೨ ಅಸುರಾರಿಯ ದರ್ಶನದಿಂದ ಪುಲಕಗೊಂಡ ಸುರರೆಲ್ಲ ಜಯಸೂಚಕ ಗರ್ಜನೆ ಮಾಡಿದರು.

೩೩ ಹರಿಮಹಿಮೆಯನ್ನು ಅರಿಯದ ತಾಮಸರಾದ ದೈತ್ಯರೆಲ್ಲ ಹಕ್ಕಿಯ ಹೆಗಲೇರಿದ ಹರಿಯನ್ನು ಕಂಡು ಅಪಹಾಸ ಮಾಡಿ, ಗರ್ಜಿಸುತ್ತ ವಿಷ್ಣುವನ್ನು ಸುತ್ತಲೂ ಆಕ್ರಮಿಸಿದರು.

೩೪ ಕೇಶವನೊಂದಿಗೆ ಭೀಕರವಾಗಿ ಕಾದಿದ ಅಸುರಯೋಧರೆಲ್ಲ ವಿಷ್ಣುವಿನ ಶಸ್ತ್ರದಿಂದ ಪೀಡೆಯನ್ನು ಹೊಂದಿ ದಿಕ್ಕೆಟ್ಟು ಓಡಿದರು.

ಅರ್ಧರಾತ್ರೇ ಪುನಃ ಪ್ರಾಪ್ಯ ಯುದ್ಧಂ ಚಕ್ರುಶ್ಚ ದಾರುಣಮ್ ।
ವಿಷ್ಣುರೀಶಶ್ಚ ವಿಶ್ವಾತ್ಮಾ ಭಗವಾನ್ ಭಕ್ತವತ್ಸಲಃ ॥೩೫॥

ದೈತ್ಯಾರ್ದಿತಾನ್ ಸುರಾನ್ ವೀಕ್ಷ್ಯ ಗರುಡೋಪರಿ ಸಂಸ್ಥಿತಃ ।
ಶಂಖಚಕ್ರಗದಾಪಾಣಿಃ ಶಾರ್ಙ್ಗಧನ್ವಾ ಚ ಖಡ್ಗಭೃತ್ ॥೩೬॥

ಹೇಮಂತೇ ಪ್ರಥಮೇ ಮಾಸಿ ಯಾಮೇ ಚ ಚರಮೇ ನಿಶಿ ।
ಯುಯೋಧಾಸುರಸಂಘೈಸ್ತು ಲೀಲಯಾ ವಿಶ್ವಭಾವನಃ ॥೩೭॥

ಸಮರ್ಥೋಽಪ್ಯೇಕಬಾಣೇನ ಹಂತುಂ ಸರ್ವಾಸುರಾನ್ ರಣೇ ।
ತದಾ ತು ಲೀಲಯಾ ಯೋದ್ಧುಂ ಉತ್ಸುಕೋಽಭೂದಹರ್ನಿಶಮ್ ॥೩೮॥

॥ ಇತಿ ಶ್ರೀಮದಾಗ್ನೇಯಪುರಾಣೇ
ಧನುರ್ಮಾಸಮಾಹಾತ್ಮ್ಯೇ ತೃತೀಯೋಽಧ್ಯಾಯಃ ॥

★★★

---

೩೫ ಓಡಿಹೋದ ದೈತ್ಯರೆಲ್ಲ ಒಟ್ಟಾಗಿ ಮತ್ತೆ ಅರ್ಧರಾತ್ರಿಯಲ್ಲಿ ಸುರರ ಮೇಲೆ ಆಕ್ರಮಣ ಮಾಡಿ ಘೋರ ಯುದ್ಧವನ್ನಾಡಿದರು. ಸರ್ವಸ್ವಾಮಿಯೂ, ಸರ್ವಾಂತರ್ಯಾಮಿಯೂ ಆದ ಭಕ್ತವತ್ಸಲ ಹರಿಯು,

೩೬ ದೈತ್ಯರ ಆಕ್ರಮಣದಿಂದ ಪೀಡಿತರಾದ ವಿಬುಧರನ್ನು ಕಂಡು ವಿಷ್ಣುವು, ಶಂಖ, ಚಕ್ರ, ಗದೆ, ಧನುಸ್ಸು, ಖಡ್ಗಗಳನ್ನು ಧರಿಸಿ ಗರುಡನ ಹೆಗಲೇರಿದ.

೩೭ ಹೇಮಂತ ಋತುವಿನ ಮೊದಲ ಮಾಸವಾದ ಮಾರ್ಗಶೀರ್ಷ ಮಾಸದ ರಾತ್ರಿಯ ಕೊನೆಯ ಯಾಮದಲ್ಲಿ ಅಂದರೆ ಉಷಃ ಕಾಲದಲ್ಲಿ ಅಸುರರೊಡನೆ ಲೀಲೆಯಿಂದ ಕಾದಿದ.

(ಒಂದು ರಾತ್ರಿಯಲ್ಲಿ ನಾಲ್ಕು ಯಾಮಗಳು. ಒಂದು ಯಾಮವೆಂದರೆ ೩ ತಾಸುಗಳು. ಕೊನೆಯ ಯಾಮವೆಂದರೆ ಸೂರ್ಯೋದಯಕ್ಕಿಂತ ಸುಮಾರು ೩ ತಾಸುಗಳ ಮೊದಲ ಕಾಲ. ಅದು ಸುಮಾರಾಗಿ ೩-೩೦ ಗಂಟೆಗೆ ಆರಂಭವಾಗುತ್ತದೆ.)

೩೮ ಒಂದೇ ಬಾಣದಿಂದ ಅಸುರ ಸಮೂಹವನ್ನೇ ಕೊಲ್ಲುವ ಸಾಮರ್ಥ್ಯವಿದ್ದರೂ ಕೂಡ ಲೀಲೆಯೇ ಸ್ವಭಾವವಾಗುಳ್ಳ ಹರಿಯು ಅವರೊಡನೆ ದೀರ್ಘವಾಗಿ ಸೆಣಸಲು ಉತ್ಸುಕನಾದನು.

॥ ಇಲ್ಲಿಗೆ ಮೂರನೇ ಅಧ್ಯಾಯವು ಮುಗಿಯಿತು ॥

# ಅಥ ಚತುರ್ಥೋಽಧ್ಯಾಯಃ

ಶ್ರೀಕೃಷ್ಣ ಉವಾಚ -

ಇಂದ್ರಾಣೀ ಚ ಮಹಾಭಾಗಾ ಹರಿವಿಶ್ರಾಂತಿಶಾಂತಯೇ ।
ತತ್ರಾಗತ್ಯಾಹವಾತ್ಪೂರ್ವಂ ಭಕ್ತಿಯುಕ್ತಾ ಮನಸ್ವಿನೀ ॥೧॥

ಸಹಾರ್ದ್ರಕಂ ಚ ಮುದ್ಗಾನ್ನಂ ದಧ್ಯಾಜ್ಯೈಲಾಗುಡೋಜ್ವಲಮ್ ।
ಸುಖಂ ಸೋಷ್ಣಂ ಸಕಂದಂ ಚ ವಿಷ್ಣವೇ ಸಮ್ಯಗಾರ್ಪಯತ್ ॥೨॥

ದೃಷ್ಟ್ವಾ ತಚ್ಛುಭಮುದ್ಗಾನ್ನಂ ಸಂತುಷ್ಟೋ ಭಕ್ತವತ್ಸಲಃ ।
ತತ್ಪ್ರೀತಯೇ ಪ್ರಜಗ್ರಾಹ ಬುಭುಕ್ಷಿತ ಇವಾಚರನ್ ॥೩॥

ಇತ್ಥಂ ಮುದ್ಗಾನ್ನಮಿಂದ್ರಾಣೀ ಸಾ ಪುಣ್ಯಮರುಣೋದಯೇ ।
ವ್ಯಂಜನೈಃ ಸಮಲಂಕೃತ್ಯ ಸಮರ್ಪ್ಯ ಹರಯೇ ಶುಚಿ ॥೪॥

ಮುದ್ಗಾನ್ನಂ ಕಾಂಚನೋಪೇತಂ ಸಹಾರ್ದ್ರಕಸಕಂದಕಮ್ ।
ಭಕ್ತ್ಯಾ ಚ ಲಕ್ಷ್ಮೀಹೃದಯಸ್ತೋತ್ರಂ ತಸ್ಯ ಪುರೋಽಜಪತ್ ॥೫॥

---

೧ ಇಂದ್ರಪತ್ನಿಯು ಯುದ್ಧರತನಾದ ಶ್ರೀಹರಿಯ ವಿಶ್ರಾಂತಿಗಾಗಿ, ಮತ್ತು ಶಾಂತಿಗಾಗಿ ಭಕ್ತಿಯುಕ್ತಳಾಗಿ ಸಮರ ದೇಶಕ್ಕೆ ಬಂದಳು.

ವಿಶೇಷ- ಯದ್ಯಪಿ ಭಗವಂತನಿಗೆ ಶ್ರಮ ಎಂಬುದು ಇಲ್ಲವೇ ಇಲ್ಲ. ಆದರೂ ತನ್ನ ಪತಿಯಾದ ಇಂದ್ರನಿಗೆ ಮತ್ತೆ ತ್ರೈಲೋಕ್ಯಾಧಿಪತ್ಯವನ್ನು ಸಂಪಾದಿಸಿಕೊಡಲು ಬಂದಿರುವ ಭಗವಂತನ ಮೇಲಿನ ಭಕ್ತಿಯಿಂದಲೇ ಶಚೀದೇವಿಯು ಹುಗ್ಗಿಯನ್ನು ನಿವೇದಿಸಿ ಶ್ರೀಹರಿಯನ್ನು ಪೂಜಿಸಿದಳು ಎಂದಿಷ್ಟೇ ಇಲ್ಲಿ ತಿಳಿಯಬೇಕು.

೨ ಸಮರಾರಂಭಕ್ಕೆ ಮೊದಲು, ಹಸಿಶುಂಠಿ, ಮೊಸರು, ತುಪ್ಪ, ಏಲಕ್ಕಿ, ಬೆಲ್ಲಗಳಿಂದ ಶೋಭಿತನಾದ ಸುವರ್ಣಗಡ್ಡೆಯ ವ್ಯಂಜನದಿಂದ ಸಹಿತವಾದ ಹಿತಕರವಾದ ಬಿಸಿಬಿಸಿಯಾದ ಮುದ್ಗಾನ್ನ (ಹುಗ್ಗಿ)ವನ್ನು ಹರಿಗೆ ಅರ್ಪಿಸಿದಳು.

೩ ಶುದ್ಧವಾದ ಹುಗ್ಗಿಯನ್ನು ನೋಡಿದ ಭಕ್ತವತ್ಸಲ ಭಗವಂತನು ಸಂತುಷ್ಟನಾದ, ಶಚೀದೇವಿಯನ್ನು ಸಂತೋಷಪಡಿಸಲು ತಾನು ನಿತ್ಯತೃಪ್ತನಾಗಿದ್ದರೂ ಹಸಿದವನಂತೆ ತೋರಿಸುತ್ತ ಅದನ್ನು ಸ್ವೀಕರಿಸಿದ.

೪ ಹೀಗೆ ಇಂದ್ರಪತ್ನಿಯು ಅರುಣೋದಯಕಾಲದಲ್ಲಿ ಪುಣ್ಯಕರವಾದ ಹುಗ್ಗಿಯನ್ನು ವ್ಯಂಜನಗಳಿಂದ ಅಲಂಕರಿಸಿ ಶ್ರೀಹರಿಗೆ ಸಮರ್ಪಿಸಿದಳು.

೫ ವ್ಯಂಜನ ಸಹಿತವಾದ ಹುಗ್ಗಿಯನ್ನು ಸುವರ್ಣಪಾತ್ರೆಯಲ್ಲಿ ಸಮರ್ಪಿಸಿ,

ಮುದ್ಗಾನ್ನಪೂಜಯಾ ಶ್ರೀಮಾನತಿಪ್ರೀತೋ ರಮೇಶ್ವರಃ ।
ಜಘಾನ ಸರ್ವಾನ್ ದೈತ್ಯೇಂದ್ರಾನ್ ಶತಶೋಽಥ ಸಹಸ್ರಶಃ ॥೬॥

ಜಪೇನ ಲಕ್ಷ್ಮೀಸ್ತೋತ್ರಸ್ಯ ಮುದ್ಗಾನ್ನಸ್ಯ ನಿವೇದನಾತ್ ।
ಹರಿಃ ಕೃತಿದಯಾಸ್ಫೀತಃ ಕ್ಷಣೇನೈವ ರಿಪೂನಹನ್ ॥೭॥

ವೃಷಪರ್ವಾದಿಷು ಕ್ಷಿಪ್ರಂ ಸರ್ವೇಷ್ವಪಿ ಹತೇಷು ವೈ ।
ಇಂದ್ರಃ ಸ್ವಸ್ಥಾನಮಾಸಾದ್ಯ ಜಯಶೀಲೈಃ ಸಹಾಮರೈಃ ॥೮॥

ವವೃಧೇಽತೀವ ಭಗವತ್ಕೃಪಯಾ ಸುಸಮೇಧಿತಃ ।
ಸರ್ವೇ ಲೋಕಾಶ್ಚ ಸುಖಿತಾಃ ತುಷ್ಟುವುಶ್ಚಾಮರಾ ಹರಿಮ್ ॥೯॥

ಜಗುರ್ಗಂಧರ್ವಪತ್ನ್ಯಶ್ಚ ಭಗವತ್ಕೀರ್ತಿಮುಜ್ಜ್ವಲಾಮ್ ।
ನನೃತುಶ್ಚಾಪ್ಸರಸ್ಸಂಘಾಃ ತುಷ್ಟುವುಸ್ಸಿದ್ಧಚಾರಣಾಃ ॥೧೦॥

ವವೃಷುಃ ಪುಷ್ಪವರ್ಷಾಣಿ ಗೋವಿಂದೋಪರಿ ತಾಪಸಾಃ ।
ಶ್ರೀಮನ್ ಜಯಜಯೇತ್ಯುಚ್ಚೈಃ ಮಹಾನ್ ಶಬ್ದೋ ವಿಶುಶ್ರುವೇ ॥೧೧॥

---

ಶ್ರೀಹರಿಯ ಎದುರು ಭಕ್ತಿಯುಕ್ತಳಾಗಿ ಲಕ್ಷ್ಮೀಹೃದಯಸ್ತೋತ್ರವನ್ನು ಜಪಿಸಿದಳು.

೬ ಮುದ್ಗಾನ್ನ ಸಮರ್ಪಣೆಯಿಂದ ಅತಿಪ್ರೀತನಾದ ರಮಾಪತಿಯು, ಸಾವಿರಾರು ಸಂಖ್ಯೆಯ ದೈತ್ಯರನ್ನು ಲೀಲೆಯಿಂದ ಸಂಹರಿಸಿದ.

೭ ಲಕ್ಷ್ಮೀಸ್ತೋತ್ರದ ಜಪ ಹಾಗೂ ಹುಗ್ಗಿಯ ನೈವೇದ್ಯದಿಂದ ಪ್ರೀತನಾದ ದಯಾಪೂರ್ಣನಾದ ಹರಿಯು ಕ್ಷಣದಲ್ಲಿಯೇ ಶತ್ರುಗಳನ್ನು ಸಂಹರಿಸಿದನು.

೮ ವೃಷಪರ್ವಾದಿ ದೈತ್ಯರೆಲ್ಲ ಮೃತರಾಗಲು, ಜಯಶೀಲರಾದ ದೇವತೆಗಳೊಡನೆ ಕೂಡಿ ಇಂದ್ರನು ಸ್ವಸ್ಥಾನವೈದಿದನು.

೯ ಸಿಂಹಾಸನವೇರಿದ ಇಂದ್ರನು ಭಗವಂತನ ಅನುಗ್ರಹದಿಂದ ಅತ್ಯಂತ ಅಭಿವೃದ್ಧಿ ಹೊಂದಿದನು. ಎಲ್ಲ ಲೋಕಗಳು ಸುಖಿಸಿದವು. ದೇವತೆಗಳೆಲ್ಲ ಹರಿಯನ್ನು ಸ್ತುತಿಸಿದರು.

೧೦ ಗಂಧರ್ವಪತ್ನಿಯರೆಲ್ಲ ಉಜ್ವಲ ಭಗವಂತನ ಗುಣಗಳನ್ನು ಪಾಡಿದರೆ, ಅಪ್ಸರೆಯರೆಲ್ಲ ನರ್ತಿಸಿದರು. ಸಿದ್ಧ-ಚಾರಣರು ಸ್ತುತಿಸಿದರು.

೧೧ ತಾಪಸರೆಲ್ಲ ಗೋವಿಂದನ ಮೇಲೆ ಹೂಮಳೆಗರೆದರು. ಎಲ್ಲೆಡೆ ಜಯಕಾರವು ಕಿವಿಗಳನ್ನು ತುಂಬಿತು.

ಇಂದ್ರಾಣೀಕೃತಮುದ್ಗಾನ್ನನೈವೇದ್ಯೇನಾರ್ಚಿತೋ ಹರಿಃ ।
ಮುದ್ಗಾನ್ನಸ್ಯಾನಿವೇದ್ಯಸ್ಯ ಭೋಜನಂ ಪಾಪಕೃದ್ಭವೇತ್ ॥೧೨॥

ನಿವೇದಿತಸ್ಯ ಚಾನ್ನಸ್ಯ ಭೋಜನಂ ಪುಣ್ಯಕೃದ್ಭವೇತ್ ।
ಪಿತರೋ ದೇವತಾಸ್ಸರ್ವೇ ತೃಪ್ತಾಃ ಸ್ಯುರ್ನಾತ್ರ ಸಂಶಯಃ ॥೧೩॥

ಭೂಮಿಃ ಸರ್ವಸಮೃದ್ಧಾ ಸ್ಯಾತ್ ಧನಧಾನ್ಯಾದಿಭೂಷಣೈಃ ।
ತತ್ತತ್ಕಾಲೇ ಭವೇದ್ವರ್ಷಂ ಸರ್ವೇ ಲೋಕಾ ನಿರಾಮಯಾಃ ॥೧೪॥

ಶ್ವೇತದ್ವೀಪೋ ಯಥಾ ಸ್ಫೀತಃ ಸರ್ವೋ ಲೋಕಸ್ತಥಾ ಭವೇತ್ ।
ಇತಿ ದೇವಾ ಧನುರ್ಮಾಸಪೂಜನಂ ಪ್ರಶಶಂಸಿರೇ ॥೧೫॥

ಇಂದ್ರಾಣ್ಯೇವಂ ಸಮಭ್ಯರ್ಚ್ಯ ಧನುರ್ಮಾಸೇ ನಿರಂತರಮ್ ।
ತುಷ್ಟಾವ ವಿವಿಧೈಃ ಸ್ತೋತ್ರೈಃ ಹೃಷೀಕೇಶಂ ರಮಾಪತಿಮ್ ॥೧೬॥

---

೧೨ ಇಂದ್ರಾಣಿಯು ಮಾಡಿದ ಮುದ್ಗಾನ್ನನೈವೇದ್ಯದಿಂದ ಶ್ರೀಹರಿಯು ಅತಿಪ್ರೀತನಾದನು. ಶ್ರೀಹರಿಗೆ ಅರ್ಪಣೆ ಮಾಡದ ಮುದ್ಗಾನ್ನದ ಭೋಜನವು ಪಾಪವನ್ನೇ ಮೆದ್ದಂತೆ.

೧೩ ಭಗವಂತನಿಗೆ ಸಮರ್ಪಿಸಿ ಅನ್ನವನ್ನು ಸ್ವೀಕರಿಸುವುದು ಅತ್ಯಂತ ಪುಣ್ಯಕರವಾದುದು. ಶ್ರೀಹರಿಗೆ ಅರ್ಪಿಸಿ ಭುಂಜಿಸಿದಾಗ ದೇವತೆಗಳು ಪಿತೃಗಳು ತೃಪ್ತರಾಗುವರು. ಇದರಲ್ಲಿ ಸಂದೇಹವೇ ಇಲ್ಲ.

೧೪ ಮುದ್ಗಾನ್ನದ ಸಮರ್ಪಣೆಯಿಂದ ಭೂಮಿಯು ಧನಧಾನ್ಯಗಳಿಂದ ಸಮೃದ್ಧವಾಗುವುದು. ಸಕಾಲದಲ್ಲಿ ಮಳೆ ಸುರಿಯುವುದು. ಎಲ್ಲ ಜನಗಳು ರೋಗಾದಿಗಳಿಂದ ಮುಕ್ತರಾಗುವರು.

೧೫ ಶ್ವೇತ ದ್ವೀಪವು (ಶ್ವೇತ ದ್ವೀಪ, ಅನಂತಾಸನ, ವೈಕುಂಠಗಳೆಂಬ ಮೂರು ಧಾಮಗಳಲ್ಲೊಂದು) ಹೇಗೆ ಶುಭ್ರವಾಗಿದೆಯೋ ಹಾಗೆ ಎಲ್ಲ ಲೋಕಗಳು ಶುದ್ಧವಾಗುವವು ಎಂದು ಎಲ್ಲ ದೇವತೆಗಳು ಧನುರ್ಮಾಸ ಪೂಜೆಯನ್ನು ಪ್ರಶಂಸೆ ಮಾಡಿದರು.

೧೬ ಹೀಗೆ ಧನುರ್ಮಾಸದಲ್ಲಿ ನಿರಂತರವಾಗಿ ಸರ್ವೇಂದ್ರಿಯ ನಿಯಾಮಕನಾದ ರಮಾವಲ್ಲಭನನ್ನು ಪೂಜಿಸಿದ ಇಂದ್ರಾಣಿಯು ಅವನನ್ನು ವಿವಿಧ ರೀತಿಯ ಸ್ತೋತ್ರಗಳಿಂದ ಸ್ತುತಿಸಿದಳು.

ಏವಂ ಶಚೀಸ್ತುತಾ ದೇವೀ ಲೋಕಮಾತಾ ರಮಾಽಥ ವೈ ।
ಸ್ವಕಟಾಕ್ಷಾಮೃತಾಸಾರೈಃ ಸರ್ವಾನ್ ಲೋಕಾನಪೂರಯತ್ ॥೧೭॥

ಅಥೇಂದ್ರಾಣೀಮುಪೇಂದ್ರೋಽಸೌ ಶ್ರೀಮತ್ಪಕ್ಷೀಂದ್ರವಾಹನಃ ।
ಮುದ್ಗಾನ್ನಪೂಜಯಾ ಪ್ರೀತಃ ಸ್ಮಯಮಾನ ಉವಾಚ ತಾಮ್ ॥೧೮॥

ಶ್ರೀ ಭಗವಾನುವಾಚ :

ಭದ್ರೇ ಪ್ರೀತೋಽಸ್ಮಿ ತೇ ಸಾಧ್ವಿ ಮುದ್ಗಾನ್ನಸ್ಯ ನಿವೇದನಾತ್ ।
ಯಥಾ ಪ್ರೀತಿರಭೂನ್ಮೇಽದ್ಯ ಮುದ್ಗಾನ್ನೇಽಸ್ಮಿನ್ ಮನೋಹರೇ ॥೧೯॥

ನ ತಥಾಮೃತಪಾನೇ ಚ ತಥಾ ಲಕ್ಷ್ಮ್ಯಾ ಅಪಿ ಧ್ರುವಮ್ ।
ಇತಿ ವಿಷ್ಣೋರ್ವಚಃ ಶ್ರುತ್ವಾ ದೇವದೇವಸ್ಯ ಚಕ್ರಿಣಃ ॥೨೦॥

ಕೃತಾಂಜಲಿರುವಾಚೇದಂ ಸ್ತುತ್ವೇಂದ್ರಾಣೀ ಜನಾರ್ದನಮ್ ।
ತ್ವತ್ಪ್ರೀತಯೇ ಹಿ ಭಗವನ್ ಧರ್ಮಂ ಕುರ್ವಂತಿ ವೈ ಜನಾಃ ॥೨೧॥

---

೧೭ ಹೀಗೆ ಶಚೀದೇವಿಯಿಂದ ಸ್ತುತಳಾದ ಲೋಕಜನನಿ ರಮಾದೇವಿಯು, ತನ್ನ ಕಡೆಗಣ್ಣಿನ ಅಮೃತಮಯ ದೃಷ್ಟಿಯಿಂದ ಲೋಕವನ್ನು ತುಂಬಿಸಿದಳು.

೧೮ ಧನುರ್ಮಾಸಪೂಜನದಿಂದ ಅತಿಪ್ರೀತನಾದ ಗರುಡವಾಹನನಾದ ಉಪೇಂದ್ರನು ಇಂದ್ರಾಣಿಯನ್ನು ಕುರಿತು ಮಂದಸ್ಮಿತನಾಗಿ ಹೇಳಿದನು.

೧೯ ಹೇ ಮಂಗಲೆಯೇ! ಸಾಧ್ವೀಮಣಿಯೇ! ಮುದ್ಗಾನ್ನ ಸಮರ್ಪಣೆಯಿಂದ ನಾನು ಬಹಳ ಪ್ರೀತನಾಗಿದ್ದೇನೆ. ಸಂತೋಷಕರವಾದ ಮುದ್ಗಾನ್ನ ನಿವೇದನೆಯಿಂದ ನನಗೆ ಇಂದು ಬಹು ಪ್ರೀತಿಯಾಗಿದೆ.

೨೦ ಇಂಥ ಪ್ರೀತಿಯು ನನಗೆ ಅಮೃತಪಾನದಿಂದಾಗಲೀ, ಲಕ್ಷ್ಮೀದೇವಿಯಲ್ಲಾಗಲೀ ಆಗಿರಲಿಲ್ಲ. ಹೀಗೆ ನುಡಿದ ಸುದರ್ಶನಧಾರಿಯಾದ, ದೇವದೇವನಾದ ಮಹಾವಿಷ್ಣುವಿನ ಮಾತುಗಳನ್ನು ಕೇಳಿ ಸಂತಸಗೊಂಡ,

ವಿಶೇಷ- ಲಕ್ಷ್ಮೀದೇವಿಯಲ್ಲಿ ಭಗವಂತ ಎಲ್ಲದಕ್ಕಿಂತಲೂ, ಎಲ್ಲರಿಗಿಂತಲೂ ಅಧಿ- ಕವಾದ ಪ್ರೀತಿಯನ್ನು ವಾತ್ಸಲ್ಯವನ್ನು ತೋರುತ್ತಾನೆ. ಆದರೇ ಪ್ರಕೃತ ಧನುರ್ಮಾಸದಲ್ಲಿಯ ಈ ಮುದ್ಗಾನ್ನ (ಹುಗ್ಗಿ) ವನ್ನು ಸ್ತುತಿಸುವುದಕ್ಕಾಗಿ ಹೀಗೆ ಪರಮಾತ್ಮ ಹೇಳುತ್ತಿದ್ದಾನೆ.

೨೧ ಇಂದ್ರಾಣಿಯು ಕೈಜೋಡಿಸಿ ಜನಾರ್ದನನನ್ನು ನಮಸ್ಕರಿಸಿ ಹೇಳುತ್ತಾಳೆ. ಹೇ ಭಗವಂತನೇ! ಜನಗಳೆಲ್ಲ ನಿನ್ನ ಪ್ರೀತಿಗೋಸುಗವಾಗಿಯೇ ಧರ್ಮವನ್ನು ಆಚರಿಸುತ್ತಾರಲ್ಲವೇ?

ತ್ವಯ್ಯದ್ಯ ಮಯಿ ಸಂತುಷ್ಟೇ ಕಿಂ ಶ್ರೇಯಃ ಕಾಂಕ್ಷಿತಂ ಮಯಾ ।
ಕರ್ಮಣಾ ಮನಸಾ ವಾಚಾ ಸರ್ವೇ ಸತ್ಕರ್ಮ ಕುರ್ವತೇ ॥೨೨॥

ಮುಕ್ತಯೇ ಮೋಕ್ಷದಸ್ತ್ವಂ ಮೇ ಪ್ರಸನ್ನೋಽನ್ಯತ್ಫಲಂ ನ ಮೇ ।
ಅಥಾಪಿ ಭಗವನ್ನದ್ಯ ತ್ವದಾಜ್ಞಾಭಂಗವಿಹ್ವಲಾ ॥೨೩॥

ವರಂ ವೃಣೇ ತಪಸ್ವೀ ವಾ ತ್ವದಾಜ್ಞಾವಿಮುಖಃ ಪತೇತ್ ।
ಶ್ರುತಿಸ್ಮೃತ್ಯುದಿತಂ ಕರ್ಮ ತ್ವದಾಜ್ಞೇತಿ ವಿದುರ್ಬುಧಾಃ ॥೨೪॥

ತ್ವದಾಜ್ಞಾಕರ್ಮಸಂತ್ಯಾಗೀ ತಪಸ್ವೀ ವಾ ಭವೇದ್ಧತಃ ।
ತಸ್ಮಾನ್ಮಾಸೇ ತು ಚಾಪಾಖ್ಯೇ ಸ್ನಾನಂ ಕೃತ್ವಾಽರುಣೋದಯೇ ॥೨೫॥

ಮುದ್ಗಾನ್ನಪೂಜಾಂ ಯೇ ಕುರ್ಯುಃ ಭಕ್ತಿಮುಕ್ತಿಪ್ರದೋ ಭವ ।
ಯಥಾ ಪ್ರೀತೋಽಸಿ ಮೇ ವಿಷ್ಣೋ ಮುದ್ಗಾನ್ನಸ್ಯ ನಿವೇದನಾತ್ ॥೨೬॥

ತಥಾ ಪ್ರೀತೋಽರ್ಚಕಸ್ಯ ಸ್ಯಾಃ ಮುದ್ಗಾನ್ನೇನ ತು ಕಾರ್ಮುಕೇ ।
ಇತಿ ನಿಷ್ಕಾಮನಾಂ ಭಕ್ತಿಂ ದೃಷ್ಟ್ವೇಂದ್ರಾಣ್ಯಾಂ ಜನಾರ್ದನಃ ।

---

೨೨ ಇಂತಹ ನೀನು ನನ್ನಲ್ಲಿ ಪ್ರೀತನಾಗಿರುವಾಗ ಮತ್ತೇನು ನನಗೆ ಬೇಕಾಗಿಲ್ಲ. ಎಲ್ಲ ಜನಗಳು ದೇಹ, ಮನಸ್ಸು, ಮಾತುಗಳಿಂದ ಸತ್ಕರ್ಮಗಳನ್ನು ಆಚರಿಸುತ್ತಾರೆ.

೨೩ ಆ ಸತ್ಕರ್ಮಗಳಿಂದ ಮುಕ್ತಿಯನ್ನು ಬಯಸುತ್ತಾರೆ. ಅವರ ಸತ್ಕರ್ಮವನ್ನು ನೋಡಿ ಸಾಧಕರೆಲ್ಲರಿಗೂ ನೀನು ಮುಕ್ತಿಯನ್ನು ನೀಡುತ್ತಿ . ಮುಕ್ತಿಪ್ರದನಾದ ನೀನೇ ನನ್ನಲ್ಲಿ ಪ್ರಸನ್ನನಾಗಿರುವಾಗ ನನಗೆ ಬೇರಾವ ಫಲವೂ ಬೇಕಿಲ್ಲ. ಆದರೆ ನಿನ್ನ ಆಜ್ಞೆಯ ಉಲ್ಲಂಘನೆಯಿಂದ ಭೀತಳಾದ ನಾನು,

೨೪ ವರವನ್ನು ಸ್ವೀಕರಿಸುತ್ತೇನೆ. ತಪಸ್ವಿಯಾದರೂ ಕೂಡ ನಿನ್ನ ಆಜ್ಞಾ ವಿಮುಖನಾದವನು ಪತಿತನಾಗುತ್ತಾನೆ. ಶ್ರುತಿ-ಸ್ಮೃತಿಗಳಲ್ಲಿ ಹೇಳಲ್ಪಟ್ಟ ಕರ್ಮಗಳು ನಿನ್ನ ಆಜ್ಞೆಗಳೆಂದು ಜ್ಞಾನಿಗಳು ತಿಳಿಯುತ್ತಾರೆ.

೨೫ ನಿನ್ನ ಆಜ್ಞಾನುರೂಪವಾದ ಸ್ವಕರ್ಮವನ್ನು ತ್ಯಜಿಸಿದವನು ತಪಸ್ವಿಯಾಗಿದ್ದರೂ ಕೂಡ ಹತನಾಗುತ್ತಾನೆ. ಆದುದರಿಂದ ಹೇ ಭಕ್ತವತ್ಸಲನೇ! ಧನುರ್ಮಾಸದಲ್ಲಿ ಅರುಣೋದಯದ ಕಾಲಕ್ಕೆ ಸ್ನಾನ ಮಾಡಿ,

೨೬ ಯಾರು ಹುಗ್ಗಿಯನ್ನು ಸಮರ್ಪಿಸುವರೋ ಅವರಿಗೆ ಭಕ್ತಿ-ಮುಕ್ತಿಗಳನ್ನೇ ನೀಡುವವನಾಗು. ಧನುರ್ಮಾಸದ ಪೂಜೆಯಿಂದ ಹೇಗೆ ನನ್ನಲ್ಲಿ ಅನುಗ್ರಹಿಸಿರುವೆಯೋ ಇದೇ ರೀತಿ,

ಪುನಃ ಪ್ರಾಹ ಪ್ರಸನ್ನಾತ್ಮಾ ಮುಕ್ತಿಂ ದಿತ್ಸುರಿವಾಥ ತಾಮ್ ॥೨೭॥

ನ ಯಸ್ಯ ಮೋಕ್ಷಂ ತು ದದಾಮಿ ಮಾತಃ
ಸಂಪ್ರಾರ್ಥಯೇತ್ ಕ್ಷುದ್ರಫಲಂ ಸ ಮಾಯಯಾ ।
ಯಸ್ಯೈವ ಮುಕ್ತಿಂ ವಿತರಾಮಿ ದುರ್ಲಭಾಂ
ನಿಷ್ಕಾಮನಾಭಕ್ತಿಯುತಃ ಸ ಮಾಂ ಭಜೇತ್ ॥೨೮॥

ಮಯಿ ನಿಷ್ಕಾಮಯಾ ಭಕ್ತ್ಯಾ ತವ ಪ್ರೀತೋಽಸ್ಮಿ ಶೋಭನೇ ॥೨೯॥

ಅಭೀಷ್ಟಮಪಿ ತೇ ದಾಸ್ಯೇ ವರಂ ಮೋಕ್ಷಸಮಾನಕಮ್ ।
ಭವ ನಿತ್ಯವಿಭೂತಿಸ್ತ್ವಂ ಭವ ನಿತ್ಯಸುಮಂಗಲಾ ॥೩೦॥

---

೨೭ ಧನುರ್ಮಾಸದಲ್ಲಿ ಮುದ್ಗಾನ್ನದಿಂದ ನಿನ್ನನ್ನು ಪೂಜಿಸುವವನಿಗೆ ಅನುಗ್ರಹಿಸಬೇಕು. ಹೀಗೆ ಪ್ರಾರ್ಥಿಸುವ ಇಂದ್ರಾಣಿಯ ಫಲಾಪೇಕ್ಷೆ ಇಲ್ಲದ ಶುದ್ಧ ಭಕ್ತಿಯನ್ನು ಅರಿತ, ಮೋಕ್ಷವನ್ನೀವ ಭಗವಂತನು ಪ್ರೀತನಾಗಿ ಮತ್ತೆ ಹೇಳಿದ.

೨೮ ನಾನು ಯಾರಿಗೆ ಮೋಕ್ಷವನ್ನು ನೀಡಲು ಇಚ್ಛಿಸುವುದಿಲ್ಲವೋ ಅಂಥವರು ನನ್ನ ಇಚ್ಛಾರೂಪವಾದ ಮಾಯೆಯಿಂದ ಮೋಹಿತರಾಗಿ ಕ್ಷುದ್ರವಾದ ಐಹಿಕ ಫಲಗಳನ್ನು ನನ್ನಿಂದ ಪ್ರಾರ್ಥಿಸುತ್ತಾರೆ. ಯಾರಿಗೆ ದುರ್ಲಭವಾದ ಮುಕ್ತಿಯನ್ನು ನಾನು ನೀಡುವೆನೋ, ಅಂಥ ವ್ಯಕ್ತಿಯು ನಿಷ್ಕಾಮ ಭಕ್ತಿಯುಕ್ತನಾಗಿ ನನ್ನನ್ನು ಭಜಿಸುತ್ತಾನೆ.

೨೯ ಸುಮಂಗಲೆಯೇ ನೀನು ನನ್ನಲ್ಲಿ ಮಾಡಿದ ನಿಷ್ಕಾಮವಾದ ಭಕ್ತಿಯಿಂದ ನಾನು ಪ್ರೀತನಾಗಿದ್ದೇನೆ.

**ವಿಶೇಷ :** ಫಲದಾಸೆಯಿಂದ ಮಾಡುವ ಕರ್ಮವು ಬಂಧಕ. ಕೇವಲ ಭಗವಂತನ ಪ್ರೀತಿಗಾಗಿ ಆಚರಿಸುವ ಕರ್ಮವೇ ಮೋಚಕ. ಅದನ್ನು ನಿಷ್ಕಾಮಕರ್ಮ ಎನ್ನುವರು. ಅದೇ ಭಗವಂತನ ಸರ್ವಕರ್ತೃತ್ವ ಸ್ವಾತಂತ್ರ್ಯಾದಿಗಳನ್ನು ತಿಳಿದು ಮಾಡಿದರೆ ನಿವೃತ್ತಕರ್ಮವೆನ್ನುವರು. ॥ ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿಹ ಚೋಚ್ಯತೇ । ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಮ್ ॥ (ಗೀತಾ ಭಾಷ್ಯ-೩-೪) ॥ ಸಕಾಮಕರ್ಮವನ್ನು ಗೀತೆಯಲ್ಲಿ ನಿಂದಿಸಿ, ನಿಷ್ಕಾಮಕರ್ಮವನ್ನು ಬೋಧಿಸಿದ ಭಗವಂತನು ಇಲ್ಲಿ ಮತ್ತೆ ಅದನ್ನೇ ಸ್ತುತಿಸುತ್ತಿದ್ದಾನೆ.

೩೦ ಇಂದ್ರಾಣಿಯೇ! ನಿನಗೆ ಮೋಕ್ಷಸದೃಶವಾದ ಅಭೀಷ್ಟವನ್ನು ನೀಡುತ್ತೇನೆ. ನೀನು ನಿತ್ಯ ಸೌಮಂಗಲ್ಯ ಉಳ್ಳವಳಾಗು. ನಿನಗೆ ಅಕ್ಷಯವಾದ ಸಂಪತ್ತು ದೊರಕಲಿ.

ಭವ ನಿತ್ಯೋತ್ಸವಾ ವತ್ಸೇ ಭವ ತ್ವಂ ನಿತ್ಯಕನ್ಯಕಾ ।
ಉಷಃ ಪಚತಿ ಮುದ್ಗಾನ್ನಮಸ್ಮಿನ್ಮಾಸೇ ಪತಿಪ್ರಿಯಾ ॥೩೧॥

ಮತ್ಪೂಜಾರ್ಥೇ ತು ನಿತ್ಯಂ ಸ್ತ್ರೀ ಭವೇದ್ದೀರ್ಘಸುಮಂಗಲಾ ।
ಇತಿ ದತ್ವಾ ವರಂ ತಸ್ಯೈ ಚಾಪೇ ಮುದ್ಗಾನ್ನಪೂಜನಾತ್ ॥೩೨॥

ಪುನಃ ಪುನಃ ಪ್ರಶಸ್ಯೈನಾಂ ಸಂತುಷ್ಟೋ ವಿಷ್ಟರಶ್ರವಾಃ ।
ಪಶ್ಯತಾಂ ಸರ್ವಭೂತಾನಾಂ ತತ್ರೈವಾಂತರಧೀಯತ ॥೩೩॥

ತತಶ್ಚಾಪಸ್ಥಿತೇ ಭಾನಾವರುಣೋದಯ ಈಶ್ವರಮ್ ।
ನಿವೇದಯೇತ್ತು ಮುದ್ಗಾನ್ನಮರ್ಚಯನ್ ತುಲಸೀದಲೈಃ ॥೩೪॥

ಮುಖ್ಯಾರುಣೋದಯೇ ಪೂಜಾ ಮಧ್ಯಮಾ ಲುಪ್ತತಾರಕಾ ।
ಅಧಮಾ ಸೂರ್ಯಸಹಿತಾ ಮಧ್ಯಾಹ್ನೇ ತ್ವಧಮಾಧಮಾ ॥೩೫॥

ಉತ್ತಮಾ ತಾರಕೋಪೇತಾ ಮಧ್ಯಮಾ ಲುಪ್ತತಾರಕಾ ।
ಅಧಮಾ ಸೂರ್ಯಸಹಿತಾ ಮಧ್ಯಾಹ್ನೇ ನಿಷ್ಫಲಾ ಭವೇತ್ ॥೩೬॥

---

೩೧ ಪುತ್ರಿಯೇ! ನಿನ್ನ ಗೃಹದಲ್ಲಿ ನಿತ್ಯೋತ್ಸವಗಳು ನಡೆಯಲಿ. ನೀನು ಚಿರ ಜವ್ವನೆಯಾಗು. ಧನುರ್ಮಾಸದಲ್ಲಿ ಯಾವ ಸ್ತ್ರೀಯು ಉಷಃಕಾಲದಲ್ಲಿ ಹುಗ್ಗಿಯನ್ನು ತಯಾರಿಸುವಳೋ,

೩೨ ಆಕೆಯು ದೀರ್ಘಸುಮಂಗಲೆಯೂ, ಪತಿಪ್ರಿಯಳೂ ಆಗುವಳು. ಹುಗ್ಗಿಯ ನಿವೇದನೆಯಿಂದ ಪ್ರೀತನಾದ ಶ್ರೀ ಹರಿಯು ಇಂದ್ರಾಣಿಗೆ ಹೀಗೆ ವರವನ್ನು ನೀಡಿ,

೩೩ ಪ್ರೀತನಾದ ಭಗವಂತನು ಇಂದ್ರಾಣಿಯನ್ನು ಮತ್ತೆ ಮತ್ತೆ ಅಭಿನಂದಿಸಿ ಎಲ್ಲರೂ ನೋಡುತ್ತಿರುವಂತೆಯೇ ಅಲ್ಲಿಯೇ ಅಂತರ್ಧಾನ ಹೊಂದಿದನು.

೩೪ ಈ ಕಾರಣದಿಂದ ಸೂರ್ಯನು ಧನುರಾಶಿಯಲ್ಲಿರುವಾಗ ಎಂದರೆ ಧನುರ್ಮಾಸದ ಅರುಣೋದಯದಲ್ಲಿ ಭಗವಂತನನ್ನು ತುಲಸೀದಳಗಳಿಂದ ಪೂಜಿಸಿ, ಹುಗ್ಗಿಯನ್ನು ಸಮರ್ಪಿಸಬೇಕು.

೩೫ ಅರುಣೋದಯದಲ್ಲಿ ಮಾಡಿದ ಪೂಜೆಯು ಅತೀ ಉತ್ತಮವಾದುದು. ನಕ್ಷತ್ರಗಳು ಮರೆಯಾದ ನಂತರದ ಪೂಜೆ ಮಧ್ಯಮ, ಸೂರ್ಯೋದಯದ ನಂತರದ ಪೂಜೆ ಅಧಮ, ಮಧ್ಯಾಹ್ನ ಕಾಲದಲ್ಲಿ ಮಾಡಿದ ಪೂಜೆಯು ಅತ್ಯಂತ ಕನಿಷ್ಠವಾದುದು.

೩೬ ನಕ್ಷತ್ರಗಳು ಇರುವಾಗ ಮಾಡುವ ಪೂಜೆಯು ಉತ್ತಮ, ನಕ್ಷತ್ರಗಳು

ಧನುರ್ಮಾಸೇ ತು ವೈ ಪೂಜಾಂ ಮಧ್ಯಾಹ್ನೇ ನ ತು ಕಾರಯೇತ್ ।
ನ ಪ್ರಸನ್ನೋ ಭವೇತ್ ಶ್ರೀಶಃ ಯದಿ ವಾ ಕಲಹೋನ್ಮುಖಃ ॥೩೭॥

ಮುದ್ಗಂ ತಂಡುಲಮಾನಂ ಸ್ಯಾದುತ್ತಮೋತ್ತಮಮುಚ್ಯತೇ ।
ಮಧ್ಯಮಂ ತಂಡುಲಾರ್ಧಂ ಸ್ಯಾತ್ ತದರ್ಧಮಧಮಂ ಭವೇತ್ ॥೩೮॥

ಮುದ್ಗಂ ತು ದ್ವಿಗುಣಂ ಕೇಚಿತ್ ಪ್ರಶಂಸಂತಿ ಮುನೀಶ್ವರಾಃ ।
ಯಥಾಬಲಂ ಪ್ರಕುರ್ವೀತ ನ ಹೀನಂ ತಂಡುಲಾರ್ಧತಃ ॥೩೯॥

ಯಸ್ತು ದಾರಿದ್ರ್ಯದುರ್ಬುದ್ಧ್ಯಾ ಮುದ್ಗಾನ್ನಂ ನ ನಿವೇದಯೇತ್ ।
ವಿಷ್ಣವೇ ಕಾರ್ಮುಕೇ ಪ್ರಾತಃ ಸಪ್ತಜನ್ಮಸು ನಿರ್ಧನಃ ॥೪೦॥

---

ಕಣ್ಮರೆಯಾದ ನಂತರದ ಪೂಜೆಯು ಮಧ್ಯಮ, ಸೂರ್ಯೋದಯದ ನಂತರದ ಪೂಜೆ ಅಧಮ, ಮಧ್ಯಾಹ್ನದ ಪೂಜೆಯು ನಿಷ್ಫಲವಾದುದು.

೩೭ ಧನುರ್ಮಾಸದಲ್ಲಿ ದೇವನ ಪೂಜೆಯನ್ನು ಮಧ್ಯಾಹ್ನ ಕಾಲದಲ್ಲಿ ಮಾಡಿದರೆ ಭಗವಂತನು ಪ್ರೀತನಾಗುವುದಿಲ್ಲ. ಅವರಿಗೆ ಮನೆಯಲ್ಲಿ ಕಲಹವೇ ಮುಂತಾಗಿ ಮನಃಶ್ಯಾಂತಿ ಇಲ್ಲವಾಗುವುದು.

ವಿಶೇಷ- ಇಲ್ಲಿ ಪ್ರಾತಃಕಾಲದ ಪೂಜೆಯ ಮಹಿಮೆಯನ್ನು ಹೇಳುತ್ತಿದ್ದಾರೆಯೇ ಹೊರತು ಮಧ್ಯಾಹ್ನದ ಪೂಜಾ ನಿಷೇಧವಲ್ಲ. ಪ್ರಾತಃಕಾಲದ ಪೂಜೆಗೆ ಧನುರ್ಮಾಸದಲ್ಲಿ ಮಹಾಫಲವಿದೆ. ಅತಿ ಅನಿವಾರ್ಯ ಕಾರಣಗಳಿಂದ ಪ್ರಾತಃಕಾಲದಲ್ಲಿ ಪೂಜೆಯನ್ನು ಮಾಡಲು ಆಗದವರು, ಮಧ್ಯಾಹ್ನದ ಪೂಜೆಯನ್ನು ತ್ಯಜಿಸಕೂಡದು. ನಿತ್ಯಕರ್ಮವಾದ ದೇವಪೂಜೆಯನ್ನು ಮಧ್ಯಾಹ್ನದಲ್ಲಾದರೂ ಮಾಡಲೇಬೇಕು. ಧನುರ್ಮಾಸದಲ್ಲಿ ಒಂದುದಿನವಾದರೂ ಉಷಃಕಾಲದ ಪೂಜೆಯನ್ನು ಮಾಡಿದರೂ ಸಾಕು. ಈ ವಿಷಯವನ್ನು ಇದೇ ಪುರಾಣವು ಸ್ಪಷ್ಟಪಡಿಸಿದೆ.

೩೮ ಹುಗ್ಗಿಯನ್ನು ತಯಾರಿಸುವಾಗ ಹೆಸರುಬೇಳೆ ಹಾಗೂ ಅಕ್ಕಿ ಸಮ ಪ್ರಮಾಣದಲ್ಲಿದ್ದರೆ ಅತಿ ಉತ್ತಮ. ಅಕ್ಕಿಯ ಪ್ರಮಾಣದ ಅರ್ಧದಷ್ಟು ಹೆಸರುಬೇಳೆ ಇದ್ದರೆ ಮಧ್ಯಮ. ಅಕ್ಕಿಯ ಕಾಲು ಭಾಗದಷ್ಟು ಹೆಸರುಬೇಳೆ ಇದ್ದರೆ ಅಧಮ.

೩೯ ಅಕ್ಕಿಗಿಂತ ಎರಡುಪಟ್ಟು ಹೆಸರುಬೇಳೆಯ ಪ್ರಮಾಣವನ್ನು ಕೆಲವರು ಮುನಿವರೇಣ್ಯರು ಪ್ರಶಂಸೆ ಮಾಡುತ್ತಾರೆ. ತನ್ನ ಸಂಪತ್ತಿಗನುಗುಣವಾಗಿ ಆಚರಿಸಬೇಕು. ಆದರೆ ಯಾವುದೇ ಕಾರಣದಿಂದಲೂ ಅಕ್ಕಿಯ ಪ್ರಮಾಣದ ಅರ್ಧಕ್ಕಿಂತಲೂ ಕಡಿಮೆ ಹೆಸರುಬೇಳೆ ಹಾಕಿ ಹುಗ್ಗಿಯನ್ನು ತಯಾರಿಸಕೂಡದು.

೪೦ ಧನುರ್ಮಾಸದ ಪ್ರಾತಃಕಾಲದಲ್ಲಿ ಯಾವನು ತಾನು ಬಡವನೆಂಬ

**ಯಃ ಕರ್ಮಹಾನಿಮಾಶಂಕ್ಯ ನಾರ್ಚಯೇದುಷಸೀಶ್ವರಮ್ ।**
**ಚಾಪಾರ್ಕೇ ನಿರ್ಧನೋ ರೋಗೀ ವಿಷ್ಣುದ್ರೋಹೀ ಪತೇತಧಃ ॥೪೦॥**

**ಅಯಾಚಿತಂ ಹಸ್ತಗತಂ ಮತ್ಪ್ರಸಾದಂ ಸುಪಾವನಮ್ ।**
**ಉಪವಾಸಛಲಾನ್ನಾತ್ತಿ ತಮಾಹುಃ ಬ್ರಹ್ಮಘಾತಕಮ್ ॥೪೨॥**

**ಉಪೋಷಣೇ ವಾ ಕರ್ಮಾದೌ ಮತ್ಪ್ರಸಾದಂ ಸುಪಾವನಮ್ ।**
**ಅಯಾಚಿತಾಗತಂ ಭೋಜ್ಯಮನಶ್ನನ್ ಪತಿತೋ ಭವೇತ್ ॥೪೩॥**

**ನಾದ್ಯಾದ್ಬುಭುಕ್ಷುರತ್ಯಂತಂ ಸ್ವಯಂ ನ ಪ್ರಾರ್ಥಯೇತ್ ಕ್ಷುಧಾ ।**
**ಯದ್ಯಶ್ನೀಯಾತ್ ಕರ್ಮಕಾಲೇ ಸದ್ಯ ಏವ ಪತೇದಧಃ ॥೪೪॥**

**ಯಥಾ ಸಂಕೋಚ್ಯ ಸತ್ಕರ್ಮ ಭುಂಕ್ತೇಽಲ್ಪದ್ವಾದಶೀದಿನೇ ।**
**ತಥಾ ಪ್ರಾತರ್ಧನುರ್ಮಾಸೇ ತ್ಯಕ್ತ್ವಾ ಕರ್ಮಾರ್ಚಯೇಚ್ಚ ಮಾಮ್ ॥೪೫॥**

---

ದುರ್ಬುದ್ಧಿಯಿಂದ ಮಹಾವಿಷ್ಣುವಿಗೆ ಹುಗ್ಗಿಯ ಸಮರ್ಪಣೆ ಮಾಡುವುದಿಲ್ಲವೋ ಆತನು ಮುಂದೆ ಏಳು ಜನ್ಮಗಳಲ್ಲಿ ಅತಿ ದರಿದ್ರನಾಗಿ ಜನಿಸುವನು.

೪೧ ಯಾವನು ನಿತ್ಯಕರ್ಮ ಲೋಪವಾಗುವುದೆಂಬ ಶಂಕೆಯಿಂದ ಧನುರ್ಮಾಸದ ಉಷಃಕಾಲದಲ್ಲಿ ವಿಷ್ಣುವಿನ ಪೂಜೆಯನ್ನು ಮಾಡುವುದಿಲ್ಲವೋ ಅವನು, ದರಿದ್ರನೂ, ರೋಗಿಯೂ ಆಗುವನಲ್ಲದೇ ವಿಷ್ಣುದ್ರೋಹಿಯಾಗಿ ಅಧಃಪತನ ಹೊಂದುವನು.

೪೨ ಬೇಡದೇ ಕೈಗೆ ಬಂದ ಪಾವನ ಪ್ರಸಾದ (ಮುದ್ಗಾನ್ನ)ವನ್ನು ಉಪವಾಸದ ನೆಪದಿಂದ ತಿನ್ನದಿರುವವನು ಬ್ರಹ್ಮಘಾತಕನೆಂದು ಹೇಳಲ್ಪಡುತ್ತಾನೆ.

೪೩ ಉಪವಾಸದಲ್ಲಾಗಲೀ ಕರ್ಮಾರಂಭದಲ್ಲಾಗಲೀ ಬೇಡದೆ ಬಂದೊದಗಿದ ನನ್ನ ಪುಣ್ಯತಮವಾದ ಪ್ರಸಾದವನ್ನು ಸ್ವೀಕರಿಸಬೇಕು. ತಿರಸ್ಕರಿಸಿದವನು ಪತಿತನಾಗುತ್ತಾನೆ.

೪೪ ಸಂಧ್ಯಾ-ದೇವಪೂಜಾದಿ ಕರ್ಮಗಳನ್ನು ಆಚರಿಸುವ ಕಾಲದಲ್ಲಿ ಬಹಳ ಹಸಿವೆಯಿಂದ ಪೀಡಿತನಾದರೂ ಯಾರನ್ನು ಬೇಡಬಾರದು. ಬೇಡಿದ್ದನ್ನು ತಿನ್ನಬಾರದು. ಬೇಡಿ ತಿಂದರೆ ಕರ್ಮಭ್ರಷ್ಟನಾಗಿ ಪತಿತನಾಗುತ್ತಾನೆ.

೪೫ ಧನುರ್ಮಾಸದಲ್ಲಿ ನಿತ್ಯಕರ್ಮಗಳು ಲೋಪವಾಗುತ್ತವೆ ಎಂಬ ಶಂಕೆಗೆ ಸಮಾಧಾನ ಹೇಳುತ್ತಿದ್ದಾರೆ. ಅಲ್ಪದ್ವಾದಶೀ ಇರುವಾಗ ಎಲ್ಲ ಸತ್ಕರ್ಮಗಳನ್ನು ಸಂಕೋಚದಲ್ಲಿ ಮುಗಿಸಿ ಹೇಗೆ ಭೋಜನ ಮಾಡುವರೋ ಅದೇ ರೀತಿ ಧನುರ್ಮಾಸದಲ್ಲೂ ಕರ್ಮಗಳನ್ನು ಸಂಕೋಚ ಮಾಡಿ ನನ್ನನ್ನು ಪೂಜಿಸಬೇಕು.

ಅತಸ್ತ್ವಮಪಿ ರಾಜೇಂದ್ರ ಚಾಪಸ್ಥೇऽರ್ಕೇऽರುಣೋದಯೇ ।
ಜಪ್ತ್ವಾ ಲಕ್ಷ್ಮೀಸ್ತವಂ ವಿಷ್ಣೋರ್ಮುದ್ಗಾನ್ನಂ ಚ ನಿವೇದಯ ॥೪೭॥

ದ್ವಿಜಾನ್ ಭೋಜಯತೇ ಭಕ್ತ್ಯಾ ಮುದ್ಗಾನ್ನೇನಾತಿಪಾವನಾನ್ ।
ಸದ್ಯ ಏವ ಭವೇತ್ ಶ್ರೀಮಾನ್ ನಾತ್ರ ಕಾರ್ಯಾ ವಿಚಾರಣಾ ॥೪೭॥

ಮತ್ಪೂಜಾನಿರತಸ್ತೂಷ್ಣೀಂ ಮಯಿ ಭಕ್ತಿಂ ಚ ವಿಂದತಿ ।
ಸ ಮದ್ಭಕ್ತೋ ಭವೇತ್ಕುರ್ಯಾತ್ ಯದಿ ಬ್ರಾಹ್ಮಣಪೂಜನಮ್ ॥೪೮॥

ಯೇನ ಕೇನ ಪ್ರಯತ್ನೇನ ಚೈಕಸ್ಮಿನ್ ಪೂಜಿತೇ ದ್ವಿಜೇ ।
ಸಂತುಷ್ಟಃ ಸ್ಯಾಮಹಂ ಸದ್ಯೋ ನಿಂದಿತೇ ನಿಂದಿತೋऽಸ್ಮ್ಯಹಮ್ ॥೪೯॥

ಸ ಧರ್ಮಮುಪದಿಶ್ಯೇತ್ಥಂ ಧರ್ಮಾತ್ಮಾ ಧರ್ಮಸೂನವೇ ।
ಪುನಃ ಪ್ರಾಹ ವಚಃ ಕೃಷ್ಣೋ ದಯಾಲುಃ ಸ್ನೇಹಕಾತರಃ ॥೫೦॥

ಸದಾರ್ಚಯ ಮಹಾರಾಜ ಬ್ರಾಹ್ಮಣಾನ್ ಮಯಿ ಭಕ್ತಿಮಾನ್ ।
ಕರ್ಮಣಾ ಮನಸಾ ವಾಚಾ ಮಾ ವಿದೂಷಯ ಭೂಸುರಾನ್ ॥೫೧॥

---

೪೬ ಆದುದರಿಂದ ಹೇ ಧರ್ಮರಾಜನೇ! ನೀನು ಕೂಡ ಧನುರ್ಮಾಸದ ಅರುಣೋದಯದಲ್ಲಿ ವಿಷ್ಣು ಪೂಜೆ ಮಾಡಿ ಲಕ್ಷ್ಮೀಸ್ತೋತ್ರವನ್ನು ಜಪಿಸಿ ಮುದ್ಗಾನ್ನ ಸಮರ್ಪಣೆ ಮಾಡು.

೪೭ ಧನುರ್ಮಾಸದ ಪ್ರಾತಃಕಾಲದಲ್ಲಿ ಮುದ್ಗಾನ್ನದಿಂದ ಪುಣ್ಯವಂತರಾದ ಬ್ರಾಹ್ಮಣರಿಗೆ ಭೋಜನ ಮಾಡಿಸಿದವನು ಶೀಘ್ರದಲ್ಲಿಯೇ ಬಹಳ ಸಂಪದ್ಭರಿತನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

೪೮ ಏಕಾಂತದಲ್ಲಿ ನನ್ನನ್ನು ಪೂಜಿಸಿದವನು ನನ್ನಲ್ಲಿ ಭಕ್ತಿಯನ್ನು ಹೊಂದುತ್ತಾನೆ. ಯಾವನು ಬ್ರಾಹ್ಮಣರನ್ನು ಪೂಜಿಸುವನೋ ಅವನೇ ನನ್ನ ನಿಜವಾದ ಭಕ್ತನು.

೪೯ ಬಹಳ ಪ್ರಯತ್ನದಿಂದ ಒಬ್ಬ ವಿಪ್ರನನ್ನು ಪೂಜಿಸಿದರೂ ನಾನು ಸದ್ಯದಲ್ಲೇ ಪ್ರೀತನಾಗುತ್ತೇನೆ. ದ್ವಿಜನನ್ನು ನಿಂದಿಸಿದರೆ ನನ್ನನ್ನೇ ನಿಂದಿಸಿದಂತೆ,

೫೦ ಹೀಗೆ ಧರ್ಮಸುತನಾದ ಯುಧಿಷ್ಠಿರನಿಗೆ ಧರ್ಮಾತ್ಮನಾದ ಶ್ರೀಕೃಷ್ಣನು ಧರ್ಮವನ್ನು ತಿಳಿಸಿ ಸ್ನೇಹಯುಕ್ತನಾಗಿ ಮತ್ತೆ ನುಡಿಯುತ್ತಾನೆ.

೫೧ ಹೇ ಮಹಾರಾಜ! ನನ್ನ ಭಕ್ತನಾದ ನೀನು ಯಾವಾಗಲೂ ಬ್ರಾಹ್ಮಣರನ್ನು ಪೂಜಿಸು. ಮಾತಿನಿಂದಾಗಲೀ, ಮನಸ್ಸಿನಿಂದಾಗಲಿ, ಕರ್ಮದಿಂದಾಗಲೀ ಭೂಮಿಯ ದೇವತೆಗಳೆನಿಸಿದ ಬ್ರಾಹ್ಮಣರನ್ನು ನಿಂದಿಸದಿರು.

ವಿಪ್ರಸ್ಯ ರುದತೋ ಬಿಂದುಃ ಯಾವತ್ಸಿಂಚೇನ್ನ ಭೂರಜಃ ।
ತಾವತ್ಪ್ರೀತೋಽಭವಂ ನೂನಂ ನ ತು ಬ್ರಾಹ್ಮಣಪೀಡಕೇ ॥೫೨॥

ಕ್ರುಧ್ಯತಃ ಶಪತೋ ವಾಪಿ ವಿಪ್ರಾನ್ ಪ್ರಹರತೋಽಪಿ ವಾ ।
ನಮಸ್ವ ಶಿರಸಾ ಭಕ್ತ್ಯಾ ವಂಶವೃದ್ಧಿಂ ಯದೀಚ್ಛಸಿ ॥೫೩॥

ಸದಾ ಭೋಜಯ ವಿಪ್ರೇಂದ್ರಾನ್ ಪಾದಕ್ಷಾಲನಪೂರ್ವಕಮ್ ।
ವಿಪ್ರಾಶೀರ್ವಾದತಸ್ತೇ ಸ್ಯುಃ ವಂಶಶ್ರೀಪುತ್ರವೃದ್ಧಯಃ ॥೫೪॥

ಪೃಥಿವ್ಯಾಂ ಯಾನಿ ತೀರ್ಥಾನಿ ಯಾನಿ ತೀರ್ಥಾನಿ ಸಾಗರೇ ।
ತಾನಿ ತೀರ್ಥಾನಿ ವಿಪ್ರಸ್ಯ ಚರಣೇ ಸಂತಿ ದಕ್ಷಿಣೇ ॥೫೫॥

ಯಥಾ ಪುನಾತಿ ವಿಪ್ರಾಂಘ್ರಿಪವಿತ್ರಾಂಭೋಽತಿಪಾಪಿನಮ್ ।
ಯಜ್ಞೇ ಚಾವಭೃತಸ್ನಾನಂ ನ ತಥಾ ಜಾಹ್ನವೀಜಲಮ್ ॥೫೬॥

ಭಜಸ್ವ ಶಿರಸಾ ನಿತ್ಯಂ ಬ್ರಾಹ್ಮಣಾಂಘ್ರಿರಜಃಕಣಮ್ ।
ಯದಿ ವಾಂಛಸಿ ಕಲ್ಯಾಣಂ ಭವಾಬ್ಧಿಂ ತರ್ತುಮಿಚ್ಛಸಿ
ಇತಿ ಪ್ರಾಬೋಧಯದ್ಧರ್ಮಾನ್ ಧರ್ಮರಾಜಾಯ ಕೇಶವಃ ॥೫೭॥

---

೫೨ ಯಾವನ ಕಾರಣದಿಂದ ದುಃಖಿಸುವ ಬ್ರಾಹ್ಮಣನ ಕಣ್ಣೀರು ಭೂಮಿಯ ಮೇಲೆ ಬೀಳುವುದೋ ಅವನು ಎಂದೂ ನನಗೆ ಪ್ರಿಯನಲ್ಲ.

೫೩ ನೀನು ವಂಶವೃದ್ಧಿಯನ್ನು ಬಯಸುವುದಾದರೆ, ಬ್ರಾಹ್ಮಣರು ನಿನ್ನ ಮೇಲೆ ಕೋಪಗೊಳ್ಳಲಿ, ನಿನ್ನ ಶಪಿಸಲಿ, ನಿನಗೆ ಹೊಡೆದರೂ ಕೂಡ ನೀನು ಮಾತ್ರ ಭಕ್ತಿಯಿಂದ ನಮಸ್ಕರಿಸು.

೫೪ ಯಾವಾಗಲೂ ಬ್ರಾಹ್ಮಣರ ಪಾದಗಳನ್ನು ತೊಳೆದು ಅವರಿಗೆ ಭೋಜನ ಮಾಡಿಸು. ವಿಪ್ರರ ಆಶೀರ್ವಾದದಿಂದ ನಿನ್ನ ವಂಶವು ಬೆಳೆಯುವುದು. ನಿನ್ನ ಸಂಪತ್ತು ಬೆಳೆಯುವುದು. ನಿನ್ನ ಪುತ್ರರು ಅಭಿವೃದ್ಧಿ ಹೊಂದುವರು.

೫೫ ಭೂಮಿಯಲ್ಲಿ ಎಷ್ಟು ತೀರ್ಥಗಳಿವೆಯೋ ಸಮುದ್ರದಲ್ಲಿ ಯಾವೆಲ್ಲ ತೀರ್ಥಗಳಿವೆಯೋ ಅವೆಲ್ಲ ತೀರ್ಥಗಳು ಸದ್ಬ್ರಾಹ್ಮಣನ ಬಲಗಡೆಯ ಪಾದದಲ್ಲಿವೆ.

೫೬ ಪವಿತ್ರವಾದ ಬ್ರಾಹ್ಮಣಪಾದೋದಕವು ಹೇಗೆ ಪಾಪಿಯನ್ನು ಶುದ್ಧೀಕರಿಸುವುದೋ ಹಾಗೇ ಯಜ್ಞದ ಅವಭೃತ ಸ್ನಾನವಾಗಲೀ ಸಾಕ್ಷಾತ್ ಗಂಗೆಯ ಜಲವಾಗಲೀ ಶುದ್ಧ ಮಾಡಲಾರದು.

೫೭ ಕೌಂತೇಯ! ನಿನಗೆ ಕಲ್ಯಾಣವಾಗಬೇಕೆಂಬ ಬಯಕೆ ಇದ್ದರೆ, ಸಂಸಾರಸಾಗರ ವನ್ನು ದಾಟುವ ಅಪೇಕ್ಷೆ ಇದ್ದರೆ ಬ್ರಾಹ್ಮಣರ ಪಾದಧೂಳಿಯನ್ನು ಶಿರಸಾ

ಮುದ್ಗಾನ್ನಪೂಜಾಮಹಿಮಾನಮದ್ಭುತಂ
ಶ್ರುತ್ವಾ ಧನುರ್ಮಾಸ್ಯರುಣೋದಯೇ ಹರೇಃ
ಸರ್ವೇऽಪಿ ಬದ್ಧಾಂಜಲಯಃ ಸುವಿಸ್ಮಿತಾಃ
ವಿಶ್ಲೇಷದುಃಖಾದ್ವಿನಿವರ್ತನೋತ್ಸುಕಾಃ ।
ಕಥಾಥಲೇನಾಸ್ಯ ಪುರೋऽವತಸ್ಥಿರೇ
ಪಾಂಡೋಸ್ಸುತಾ ಧರ್ಮವೃಕೋದರಾದಯಃ ॥೫೮॥

ತೇಷಾಂ ಜ್ಞಾತ್ವಾಹ್ಯಭಿಪ್ರಾಯಂ ಭಗವಾನ್ ಭಕ್ತವತ್ಸಲಃ ।
ಮೇಘಗಂಭೀರಯಾ ವಾಚಾ ಸುಸ್ಮಿತಃ ಪ್ರಾಹ ಪಾಂಡವಾನ್ ॥೫೯॥

ಪುನಸ್ತನ್ಮಾಸಮಾಹಾತ್ಮ್ಯಂ ವಿಸ್ತರಾದ್ವ್ಯಾಜಹಾರ ಚ ॥೬೦॥

ಶ್ರೀಕೃಷ್ಣ ಉವಾಚ-

ಪುರಾ ತು ಮಮ ಭಕ್ತಾ ವೈ ಧನುರ್ಮಾಸಪ್ರಭಾವತಃ ।
ಮತ್ಸಾಯುಜ್ಯಮಗುಃ ಕ್ಷಿಪ್ರಂ ತನ್ಮೇ ನಿಗದತಃ ಶೃಣು ॥೬೧॥

ವಿಭೀಷಣೋऽಪಿ ಮುದ್ಗಾನ್ನೈರುಷಃಕಾಲೇ ನಿವೇದನಾತ್ ।
ವಿಷ್ಣುಭಕ್ತೋ ಧನುರ್ಮಾಸೇ ಶ್ರಿಯಂ ಸಂಪ್ರಾಪ್ಯ ಶಾಶ್ವತೀಮ್ ।

---

ಧರಿಸು. ಈ ರೀತಿಯಾಗಿ ಧರ್ಮರಾಜನಿಗೆ ಶ್ರೀಕೃಷ್ಣನು ಧರ್ಮವನ್ನು ಬೋಧಿಸಿದನು.

೫೮ ಧನುರ್ಮಾಸದ ಅರುಣೋದಯದ ಮುದ್ಗಾನ್ನದ ಪೂಜೆಯ ಅದ್ಭುತ ಮಹಿಮೆಯನ್ನು ಕೇಳಿದವರಾದ, ಪಾಂಡುನಂದನರಾದ ಧರ್ಮರಾಜ, ಭೀಮಸೇನ, ಅರ್ಜುನ, ನಕುಲ, ಸಹದೇವರೆಲ್ಲ ಕೈಮುಗಿದು ಕುಂತಿಯೇ ಮೊದಲಾದ ಬಂಧುಗಳ ಅಗಲಿಕೆಯ ದುಃಖವನ್ನು ಕಳೆಯಬೇಕೆಂದು ವಿಸ್ಮಯದಿಂದ ಕಥೆಯ ನಿಮಿತ್ತದಿಂದ ಕೃಷ್ಣನ ಎದುರು ಬಂದು ಕುಳಿತರು.

೫೯ ಪಾಂಡವರ ಅಭಿಪ್ರಾಯವನ್ನರಿತ ಭಕ್ತಪ್ರಿಯ ಭಗವಂತನು ಮೋಡಗಳ ಗರ್ಜನೆಯಂತೆ ಗಂಭೀರವಾದ ಮಾತಿನಿಂದ ಅವರನ್ನು ಕುರಿತು ಹೇಳತೊಡಗಿದ.

೬೦ ಮತ್ತೆ ಧನುರ್ಮಾಸ ಮಾಹಾತ್ಮ್ಯವನ್ನು ವಿಸ್ತಾರವಾಗಿ ವರ್ಣಿಸಿದ.

೬೧ ಹಿಂದೆ ನನ್ನ ಅನೇಕ ಭಕ್ತರು ಧನುರ್ಮಾಸದ ಆಚರಣೆಯ ಪ್ರಭಾವದಿಂದ ನನ್ನ ಸಾಯುಜ್ಯವನ್ನು ಹೊಂದಿದ್ದಾರೆ. ಅದನ್ನು ಹೇಳುವೆನು ಕೇಳು.

ಲಂಕಾಯಾಂ ವರ್ತತೇ ರಾಜನ್ ಚಿರಜೀವೀತಿ ವಿಶ್ರುತಃ ||೬೨||

ಸದಾ ವಿಷ್ಣುಕಥಾಸಕ್ತೋ ಹರಿಪೂಜಾಂ ಕರೋತಿ ಸಃ ।
ಶ್ರೀರಂಗೇ ಸಹ್ಯಜಾತೀರೇ ಶೇಷಪರ್ಯಂಕಶಾಯಿನೇ ||೬೩||

ರಾತ್ರಾವಂತೇ ಚ ಪೂಜಾಂ ವೈ ಕರೋತಿ ಚ ದಿನೇ ದಿನೇ ।
ಪ್ರಹ್ಲಾದೇನ ಚ ವೈ ಕೃತ್ವಾ ಮುದ್ಗಾನ್ನಮರುಣೋದಯೇ ||೬೪||

ಪೂಜಿತೋಽಸ್ಮಿ ಚ ಭಕ್ತೇನ ತಯಾ ಪ್ರೀತಿರ್ಮಮ ಸ್ಥಿರಾ ।
ಪೂಜಾ ಚ ಬಲಿರಾಜೇನ ಕೃತಾ ವೈ ಭಕ್ತಿಪೂರ್ವಿಕಾ ||೬೫||

ತಸ್ಯಾಹಂ ಭಕ್ತಿಪಾಶೇನ ದ್ವಾರೇ ತಿಷ್ಠಾಮಿ ಸರ್ವದಾ ।
ನಲೇನ ಚಾಂಬರೀಷೇಣ ಬಾಲೇನಾಪಿ ಧ್ರುವೇಣ ಚ ||೬೬||

ಮಾರ್ಕಂಡೇಯೋ ಧನುರ್ಮಾಸೇ ಕೃತ್ವಾ ವೈ ಕೇಶವಾರ್ಚನಮ್ ।
ತೇನ ಪುಣ್ಯಪ್ರಭಾವೇನ ಚಿರಜೀವೀ ಬಭೂವ ಹ ||೬೭||

---

೬೨ ವಿಭೀಷಣನು ಧನುರ್ಮಾಸದ ಉಷಃಕಾಲದಲ್ಲಿ ಮುದ್ಗಾನ್ನದ ಸಮರ್ಪಣೆ ಮಾಡಿ, ವಿಷ್ಣುಭಕ್ತನಾದ ಅವನು ಧನುರ್ಮಾಸದ ಪೂಜೆಯಿಂದ ಶಾಶ್ವತವಾದ ಸಂಪತ್ತನ್ನು ಹೊಂದಿ ಚಿರಂಜೀವಿಯೆಂದು ಖ್ಯಾತವಾಗಿ ಇಂದಿಗೂ ಲಂಕೆಯಲ್ಲಿ ವಾಸವಾಗಿದ್ದಾನೆ.

೬೩ ಯಾವಾಗಲೂ ವಿಷ್ಣುಕಥೆಯಲ್ಲಿ ಆಸಕ್ತನಾಗಿ ಹರಿಪೂಜಾರತನಾದ ವಿಭೀಷಣನು ಕಾವೇರೀತೀರದಲ್ಲಿ ಶೇಷನ ಮೇಲೆ ಒರಗಿದ ರಂಗನಾಥನನ್ನು,

೬೪ ಪ್ರತಿದಿನವೂ ರಾತ್ರಿಯ ಕೊನೆಯ ಯಾಮದಲ್ಲಿ ಪೂಜಿಸುತ್ತಾನೆ. ಭಕ್ತಶ್ರೇಷ್ಠನಾದ ಪ್ರಹ್ಲಾದನೂ ಕೂಡ ಅರುಣೋದಯದಲ್ಲಿ ಮುದ್ಗಾನ್ನವನ್ನು ಮಾಡಿ,

೬೫ ನನ್ನನ್ನು ಪೂಜಿಸಿದ. ಆದುದರಿಂದಲೇ ನನಗೆ ಅವನಲ್ಲಿ ಸ್ಥಿರವಾದ ಪ್ರೀತಿ ಇದೆ. ಬಲಿರಾಜನಿಂದಲೂ ಕೂಡ ಭಕ್ತಿಯುಕ್ತ ಪೂಜೆ ಮಾಡಲ್ಪಟ್ಟಿತು.

೬೬ ಬಲಿಯ ಭಕ್ತಿಯಿಂದ ಪ್ರೀತನಾದ ನಾನು ಯಾವಾಗಲೂ ಆತನ ದ್ವಾರದಲ್ಲಿ ನಿಂತಿದ್ದೇನೆ. ಹಾಗೆಯೇ ನಲ, ಅಂಬರೀಷ ಬಾಲ್ಯದಲ್ಲೇ ಭಗವಂತನನ್ನು ಒಲಿಸಿದ ಧ್ರುವ, ಇವರಿಂದಲೂ ಧನುರ್ಮಾಸದಲ್ಲಿ ಅರ್ಚಿತನಾಗಿದ್ದೇನೆ.

೬೭ ಮೃಕಂಡು ತನಯರಾದ ಮಾರ್ಕಂಡೇಯರು ಕೂಡ ಧನುರ್ಮಾಸದಲ್ಲಿ ನನ್ನನ್ನು ಪೂಜಿಸಿ ಆ ಪುಣ್ಯದಿಂದ ಚಿರಂಜೀವಿಗಳಾದರು.

**ಏವಂ ವೈ ಬಹವಃ ಸಂತಿ ಮದ್ಭಕ್ತಾ ಮತ್ಪರಾಯಣಾಃ ।**
**ತೇಷಾಂ ಭುಕ್ತಿಂ ಚ ದಾಸ್ಯಾಮಿ ಪರತ್ರ ಚ ಪರಾಂ ಗತಿಮ್ ॥೬೮॥**

**ಯ ಇದಂ ಪರಮಾಖ್ಯಾನಂ ಇಂದ್ರಾಣೀಕೃತವೈಭವಮ್ ।**
**ಶಚ್ಯಾ ಧನುಷಿ ಮುದ್ಗಾನ್ನೈಃ ಹರೇರರ್ಚಾ ಯದಾ ಕೃತಾ ॥೬೯॥**

**ತತಃ ಪ್ರಭೃತಿ ವಿಖ್ಯಾತಂ ತ್ರಿಷು ಲೋಕೇಷು ಪಾರ್ಥಿವ ।**
**ವಿಷ್ಣುಪ್ರೀತಿಕರಂ ಸದ್ಯಃ ಸರ್ವಲೋಕೈಕಪಾವನಮ್ ॥೭೦॥**

**ಶೃಣುತೇ ಶ್ರದ್ಧಯಾ ಭಕ್ತ್ಯಾ ಭುಕ್ತಿಮುಕ್ತೀ ಚ ವಿಂದತಿ ।**
**ಧನುರ್ಮಾಸೇ ಕೃತಾ ಪೂಜಾ ಮಧ್ಯಾಹ್ನೇ ನಿಷ್ಫಲಾ ಭವೇತ್ ॥೭೦॥**

**ಉಷಃಕಾಲೇ ಕೃತಾ ಪೂಜಾ ಕೋಟಿಕೋಟಿಗುಣಾ ಭವೇತ್ ।**
**ತಸ್ಮಾತ್ ತ್ವಮಪಿ ರಾಜೇಂದ್ರ ಧನುರ್ಮಾಸೇ ಚ ವೈ ಬಹು ॥೭೨॥**

**ನೈವೇದ್ಯಂ ವಿಧಿವತ್ಕೃತ್ವಾ ಪೂಜಯೋಷಸಿ ಚೇಶ್ವರಮ್ ।**
**ಏವಂ ಸಂಬೋಧಯನ್ ಧರ್ಮಂ ಭಗವಾನ್ ದೇವಕೀಸುತಃ ।**
**ಮೇಘಗಂಭೀರಯಾ ವಾಚಾ ಸುಸ್ಮಿತಃ ಪ್ರಾಹ ಪಾಂಡವಾನ್ ॥೭೩॥**

---

೬೮ ಹೀಗೆ ನನ್ನಲ್ಲಿ ಮನಸ್ಸುಳ್ಳ ನನ್ನ ಅನೇಕ ಭಕ್ತರಿದ್ದಾರೆ. ಅವರಿಗೆ ಈ ಲೋಕದಲ್ಲಿ ಸಕಲಸೌಖ್ಯಗಳನ್ನು ಹಾಗೂ ಪರಲೋಕದಲ್ಲಿ ಉತ್ತಮವಾದ ಗತಿಯನ್ನು ಕೊಡುತ್ತೇನೆ.

೬೯ ಇಂದ್ರಾಣಿಯು ಧನುರ್ಮಾಸದಲ್ಲಿ ಭಗವಂತನ ಮುದ್ಗಾನ್ನಪೂಜೆಯನ್ನು ಯಾವಾಗ ಮಾಡಿದಳೋ,

೭೦ ಹೇ ರಾಜನೇ! ಧನುರ್ಮಾಸದ ಮಹಿಮೆಯು ಮೂರುಲೋಕಗಳಲ್ಲಿ ವಿಖ್ಯಾತವಾಯಿತು. ಇದು ಎಲ್ಲ ಲೋಕಗಳನ್ನು ಪಾವನಗೊಳಿಸುವುದೂ ಸದ್ಯದಲ್ಲೇ ವಿಷ್ಣುಪ್ರೀತಿಯನ್ನು ಉಂಟು ಮಾಡುವುದೂ ಆಗಿದೆ.

೭೧ ಇದನ್ನು ಭಕ್ತಿ ಶ್ರದ್ಧೆಗಳಿಂದ ಕೇಳಿದವರು, ಭುಕ್ತಿ ಮುಕ್ತಿ ಎರಡನ್ನು ಹೊಂದುವರು. ಧನುರ್ಮಾಸದಲ್ಲಿ ಮಧ್ಯಾಹ್ನದ ಪೂಜೆಯು ನಿಷ್ಫಲವಾಗುವುದು. (ಅಲ್ಪಫಲ ನೀಡುವುದು)

೭೨ ಉಷಃಕಾಲದ ಪೂಜೆಯು ಕೋಟಿ ಕೋಟಿ ಪುಣ್ಯ ಹೆಚ್ಚಾಗಿ ನೀಡುವುದು. ಆದ್ದರಿಂದ ರಾಜನೇ ನೀನು ಕೂಡ ಧನುರ್ಮಾಸದಲ್ಲಿ,

೭೩ ವಿಧ್ಯುಕ್ತ ರೀತಿಯಿಂದ ನೈವೇದ್ಯವನ್ನು ಮಾಡಿ ಉಷಃಕಾಲದಲ್ಲಿ ಹರಿಯನ್ನು

**ಸೂತ ಉವಾಚ--**

**ಯ ಇದಂ ಪುಣ್ಯಮಾಖ್ಯಾನಂ ಸರ್ವಸೌಭಾಗ್ಯದಾಯಕಮ್ ।**
**ಪುತ್ರಪೌತ್ರಪ್ರದಂ ಚಾಪಿ ಸರ್ವತ್ರ ವಿಜಯಾವಹಮ್ ।**
**ಪಠೇದ್ವಾ ಶ್ರುಣುಯಾದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ॥೭೪॥**

**ಧನುರ್ಮಾಸೇ ವಿಶೇಷೇಣ ಯಃ ಶ್ರುಣೋತಿ ಸಮಾಹಿತಃ ।**
**ಐಶ್ವರ್ಯಮತುಲಂ ಪ್ರಾಪ್ಯ ವಿಷ್ಣುಭಕ್ತಿಂ ಚ ವಿಂದತಿ ॥೭೫॥**

**ಸರ್ವತೀರ್ಥೇಷು ಯತ್ಪುಣ್ಯಂ ಸರ್ವಯಜ್ಞೇಷು ಯತ್ಫಲಮ್ ।**
**ತತ್ಫಲಂ ಸಮವಾಪ್ನೋತಿ ಶ್ರುತ್ವಾ ಪುಣ್ಯಕಥಾಮಿಮಾಮ್ ॥೭೬॥**

**ಯ ಇಮಾಂ ಶ್ರುಣುಯಾದ್ಗಾಥಾಂ ಸನ್ನಿಧೌ ಚ ಹರೇರ್ದಿನೇ ।**
**ಜಾಗ್ರನ್ನಿಶಿ ಸ ಧರ್ಮಾತ್ಮಾ ಪ್ರಾಪ್ನುಯಾದ್ವೈಷ್ಣವಂ ಪದಮ್ ॥೭೭॥**

**॥ ಇತಿ ಶ್ರೀಮದಾಗ್ನೇಯಪುರಾಣೇ**
**ಧನುರ್ಮಾಸಮಾಹಾತ್ಮ್ಯೇ ಚತುರ್ಥೋಽಧ್ಯಾಯಃ ॥**

---

ಪೂಜಿಸು. ಹೀಗೆಂದು ಧರ್ಮಸುತನಿಗೆ ಹೇಳಿದ ಭಗವಾನ್ ದೇವಕಿಪುತ್ರನು, ಮೇಘದಂತೆ ಗಂಭೀರವಾದ ಧ್ವನಿಯಿಂದ ಮುಗುಳು ನಗುತ್ತ ಹೇಳಿದ.

೭೪ ಸಕಲ ಸಂಪತ್ತನ್ನೀಯುವ ಪುಣ್ಯತಮವಾದ, ಎಲ್ಲೆಡೆ ವಿಜಯ, ಮಕ್ಕಳು, ಮೊಮ್ಮಕ್ಕಳು ಇತ್ಯಾದಿ ಸರ್ವ ಅಭೀಷ್ಟಗಳನ್ನು ಪೂರೈಸುವ ಪುಣ್ಯತಮವಾದ ಈ ಇತಿಹಾಸವನ್ನು ಓದುವವರು ಹಾಗೂ ಕೇಳುವವರು ಎಲ್ಲ ಪಾಪಗಳಿಂದ ಮುಕ್ತರಾಗುತ್ತಾರೆ.

೭೫ ವಿಶೇಷವಾಗಿ ಧನುರ್ಮಾಸದಲ್ಲಿ ಶ್ರದ್ಧೆಯಿಂದ ಇದನ್ನು ಕೇಳಿದವನು ಎಣೆಯಿಲ್ಲದ ಐಶ್ವರ್ಯವಂತನಾಗುವನಲ್ಲದೇ ಅತ್ಯಂತ ದುರ್ಲಭವಾದ ವಿಷ್ಣುಭಕ್ತಿಯನ್ನು ಹೊಂದುವನು.

೭೬ ಎಲ್ಲ ತೀರ್ಥಗಳನ್ನು ಸಂಚರಿಸಿ ಪಡೆವ ಫಲ ಯಾವುದೋ, ಎಲ್ಲ ಯಜ್ಞಗಳನ್ನು ಆಚರಿಸಿ ಪಡೆವ ಪುಣ್ಯ ಯಾವುದೋ ಅಂಥ ಫಲವನ್ನು ಈ ಪುಣ್ಯ ಕಥೆಯನ್ನು ಕೇಳಿದವನು ಪಡೆಯುತ್ತಾನೆ.

೭೭ ಈ ಕಥೆಯನ್ನು ಯಾರು ಏಕಾದಶಿಯ ದಿನ ರಾತ್ರಿ ಎಚ್ಚರವಿದ್ದು ಹರಿ ಸನ್ನಿಧಿ ಯಲ್ಲಿ ಶ್ರವಣ ಮಾಡುವರೋ ಅವರು ವೈಷ್ಣವ ಪದವನ್ನು ಹೊಂದುವರು.

**॥ ಇಲ್ಲಿಗೆ ನಾಲ್ಕನೇ ಅಧ್ಯಾಯವು ಮುಗಿಯಿತು ॥**

# ಅಥ ಪಂಚಮೋಽಧ್ಯಾಯಃ

ಯುಧಿಷ್ಠಿರ ಉವಾಚ-

ಕೃಷ್ಣ ಕೃಷ್ಣ ಹೃಷೀಕೇಶ ದಯಾಸಿಂಧೋ ಮಹಾಮತೇ ।
ಧನುರ್ಮಾಸಸ್ಯ ಮಾಹಾತ್ಮ್ಯಂ ತ್ವನ್ಮುಖಾಂಭೋಜನಿಸ್ಸೃತಮ್ ।
ಶ್ರುತಂ ವೈ ನಿಖಿಲಂ ತತ್ತ್ವಂ ವೇತ್ಸಿ ತ್ವಂ ಪುರುಷೋತ್ತಮ । ॥೧॥

ಅತಃ ಪರಂ ಚ ಹೇ ಕೃಷ್ಣ ಹರೇರ್ಭಗವತೋಽರ್ಚನಮ್ ।
ಧನುರ್ಮಾಸೇ ಕಥಂ ಕಾರ್ಯಂ ಕೋ ವಿಧಿಃ ಬ್ರೂಹಿ ಮೇಽನಘ ॥೨॥

ಕೃಷ್ಣ ಉವಾಚ-

ಯುಧಿಷ್ಠಿರ ಮಹಾಭಾಗ ಶೃಣು ಚೈಕಾಗ್ರಮಾನಸಃ ।
ವಕ್ಷ್ಯಾಮಿ ಸಕಲಂ ಧರ್ಮಂ ಲೋಕಾನಾಂ ಹಿತಕಾಮ್ಯಯಾ ॥೩॥

ಮಾರ್ಗಶೀರ್ಷೇ ಚ ದೇವಸ್ತು ಕೀರ್ತಿಯುಕ್ತೋ ಹಿ ಕೇಶವಃ ।
ಪೌಷಮಾಸೇಽಪಿ ದೇವಸ್ತು ನಾರಾಯಣ ಇತಿ ಶ್ರುತಃ ॥೪॥

ಮಾಸದ್ವಯೇ ಧನುಃ ಸೂರ್ಯ ಆಗತೋ ವೈ ಯದಾ ತದಾ
ಧನುರ್ಮಾಸಂ ತದಾ ಪ್ರಾಹುಃ ಮಾಸಾನಾಮುತ್ತಮೋತ್ತಮಮ್ ॥೫॥

---

೧ ಹೇ ಕೃಷ್ಣನೇ! ನೀನು ಸರ್ವಜ್ಞನು, ದಯಾಸಾಗರನು, ಸರ್ವೇಂದ್ರಿಯ ನಿಯಾಮಕನು. ನಿನ್ನ ಮುಖಕಮಲದಿಂದ ಹೊರಸೂಸಿದ ಧನುರ್ಮಾಸದ ಮಹಿಮೆಯನ್ನು, ಕೇಳಿ ತಿಳಿದಿದ್ದೇನೆ. ಹೇ ಕ್ಷರಾಕ್ಷರ ಪುರುಷರಿಂದಲೂ ಉತ್ತಮನಾದವನೇ! ನೀನು ಎಲ್ಲ ತತ್ತ್ವಗಳನ್ನು ತಿಳಿದ ಸರ್ವಜ್ಞ.

೨ ಕೃಷ್ಣನೇ! ಭಗವಂತನ ಪೂಜೆಯನ್ನು, ಧನುರ್ಮಾಸದಲ್ಲಿ ಹೇಗೆ ಮಾಡಬೇಕು? ಪೂಜೆಯ ವಿಧಾನವೇನು? ಎಂಬುದನ್ನು ತಿಳಿಸುವ ಕೃಪೆ ಮಾಡಬೇಕು.

೩ ಕೃಷ್ಣನು ಹೇಳುತ್ತಾನೆ. ಮಹಾಭಾಗ್ಯವಂತನಾದ ಯುಧಿಷ್ಠಿರನೇ! ಮನವಿಟ್ಟು ಕೇಳು. ಲೋಕಗಳ ಹಿತಕ್ಕಾಗಿ ಎಲ್ಲ ಧರ್ಮವನ್ನು ತಿಳಿಸುತ್ತೇನೆ.

೪ ಮಾರ್ಗಶೀರ್ಷ ಮಾಸದಲ್ಲಿ ಕೀರ್ತಿವಂತನಾದ ಕೇಶವನು ಮಾಸನಿಯಾಮಕನಾಗಿದ್ದಾನೆ. ಪೌಷಮಾಸದಲ್ಲಿ ನಾರಾಯಣನು ಮಾಸನಿಯಾಮಕನಾಗಿದ್ದಾನೆ.

೫ ಮಾರ್ಗಶೀರ್ಷ ಹಾಗೂ ಪುಷ್ಯಮಾಸಗಳಲ್ಲಿ ಸೂರ್ಯನು ಯಾವಾಗ ಧನುರಾಶಿಯಲ್ಲಿ ಬರುವನೋ ಆ ಕಾಲವನ್ನು ಉತ್ತಮೋತ್ತಮವಾದ ಧನುರ್ಮಾಸವೆಂದು ಹೇಳುವರು.

ಏತನ್ಮಧ್ಯೇ ವಿಶೇಷೇಣ ಮಾರ್ಗಶೀರ್ಷೇ ಯದಾ ರವಿಃ ।
ಕಾರ್ಮುಕೇ ಕ್ರಮತೇ ತಸ್ಮಿನ್ ಕೋಟಿಕೋಟಿಗುಣಂ ಭವೇತ್ ॥೬॥

ಪುಷ್ಯಮಾಸೇ ತು ಚಾಪಾಖ್ಯೇ ಯದಾ ಸಂಕ್ರಾಂತಿರಾಗತಃ ।
ಸೋಽಪಿ ವಿಜ್ಞೈಃ ಪುಣ್ಯಕಾಲೋ ಧನುರ್ಮಾಸ ಉದೀರಿತಃ ॥೭॥

ಧನುರ್ಮಾಸೇ ಚ ಕರ್ತವ್ಯಂ ಸಂಕ್ಷೇಪೇಣ ಬ್ರವೀಮಿ ತೇ ।
ನಿಶಾಯಾಃ ಪಶ್ಚಿಮೇ ಬುದ್ಧ್ವಾ ಭಾಗೇ ಯಾಮೇ ತೃತೀಯಕೇ ॥೮॥

ಮುಹೂರ್ತೇ ನವಮೇ ಚಾಂತೇ ದ್ವಾವಿಂಶಘಟಿಕಾಂತರೇ ।
ನಿದ್ರಾಮಲಸತಾಂ ತ್ಯಕ್ತ್ವಾ ಉತ್ಥಾಯೈವ ತು ಬುದ್ಧಿಮಾನ್ ॥೯॥

ಸ್ಮರನ್ ವೈ ಹರಿನಾಮಾನಿ ಗಂಗಾದ್ಯಾಃ ಸರಿತಸ್ತದಾ ।
ಸ್ವಕರಂ ಚೈವ ಪಶ್ಯೇತ್ತು ಪರಾಂಶ್ಚಾನವಲೋಕಯನ್ ॥೧೦॥

---

೬ ಇವುಗಳ ಮಧ್ಯದಲ್ಲಿ ಮಾರ್ಗಶೀರ್ಷದಲ್ಲಿ ಯಾವಾಗ ರವಿಯು, ಧನುರಾಶಿ-ಯಲ್ಲಿ ಸಂಚರಿಸುವನೋ ಆಗ ಕೋಟಿ ಕೋಟಿ ಪಟ್ಟಾಗಿ ಪುಣ್ಯ ಲಭಿಸುವುದು.

೭ ಪುಷ್ಯಮಾಸದಲ್ಲಿ ರವಿಯು ಧನುರಾಶಿಯಲ್ಲಿದ್ದಾಗ ಯಾವಾಗ ಸಂಕ್ರಾಂತಿಯು ಬರುವುದೋ, ಆ ಸಂಕ್ರಾಂತಿಯೂ ಕೂಡ ಜ್ಞಾನಿಗಳಿಂದ ಪುಣ್ಯಕಾಲವೆಂದು ಹೇಳಲ್ಪಟ್ಟಿದೆ.

೮ ಧನುರ್ಮಾಸದ ಆಚರಣೆಯನ್ನು ನಿನಗೆ ಸಂಕ್ಷೇಪವಾಗಿ ತಿಳಿಸುತ್ತೇನೆ. ರಾತ್ರಿಯ ಪಶ್ಚಿಮ ಭಾಗದಲ್ಲಿ ಎಂದರೆ ಮೂರನೆಯ ಯಾಮದಲ್ಲಿ,

೯ ಒಂಭತ್ತು ಮುಹೂರ್ತಗಳಾದ ಮೇಲೆ ೨೨ ಘಟಿಕಾಗಳು ಕಳೆದ ನಂತರ, ಬುದ್ಧಿವಂತನಾದವನು,

೧೦ ನಿದ್ರೆಯನ್ನು ಆಲಸ್ಯವನ್ನು ತೊರೆದು ಎಚ್ಚೆತ್ತವನಾಗಿ ಹರಿಯ ಮಂಗಲ-ನಾಮಗಳನ್ನು ಗಂಗಾದಿನದಿಗಳನ್ನು ಸ್ಮರಿಸಬೇಕು. ಎದ್ದ ನಂತರ ಬೇರಾರನ್ನು ನೋಡದೇ ತನ್ನ ಅಂಗೈಗಳನ್ನು ನೋಡಬೇಕು.

ವಿಶೇಷ- ಇಪ್ಪತ್ತೆರಡು ಘಳಿಗೆಗಳು ಕಳೆದ ನಂತರ ಏಳಬೇಕು. ೨೨ ಘಟಿಕಾ ಎಂದರೆ ೫೨೮ ನಿಮಿಷಗಳು. ಎಂದರೆ ೮ ಗಂಟೆ ೪೮ ನಿಮಿಷಗಳು. ಸೂರ್ಯಾಸ್ತದ ನಂತರ ೮ ಗಂಟೆ ೪೮ ನಿಮಿಷಗಳು ಕಳೆದ ನಂತರ ಏಳಬೇಕು. ದಕ್ಷಿಣಾಯನವು ಬರುತ್ತಿರಲು ಬೇಗನೆ ಎಂದರೆ ಸುಮಾರು ೬ ಗಂಟೆಗೆ ಸೂರ್ಯಾಸ್ತವಾಗುತ್ತದೆ ಎಂದರೆ ಬೆಳಗಿನ ಜಾವ ಸುಮಾರು ೩ ಗಂಟೆಗೆ ಏಳಬೇಕು.

**ಕರಾಗ್ರೇ ವಸತೇ ಲಕ್ಷ್ಮೀಃ ಕರಮೂಲೇ ಸರಸ್ವತೀ ।**
**ಕರಮಧ್ಯೇ ವಿಧಿಃ ಪುಣ್ಯಂ ಪ್ರಭಾತೇ ಕರದರ್ಶನಮ್ ॥೧೧॥**

**ಹೃಷೀಕೇಶ ಜಗದ್ರೂಪ ಸರ್ವಸಾಕ್ಷಿನ್ ದಯಾನಿಧೇ ।**
**ಇಂದ್ರಿಯಾಣ್ಯನುಕೂಲಾನಿ ಸದಾ ಧರ್ಮೇಷು ಮೇ ಕುರು ।**
**ತತೋ ಭೂಮಿಂ ಮಹಾದೇವೀಂ ಪ್ರಾರ್ಥಯೇತ ಸಮಾಹಿತಃ ॥೧೨॥**

**ಸಮುದ್ರವಸನೇ ದೇವಿ ಪರ್ವತಸ್ತನಮಂಡಿತೇ ।**
**ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ॥೧೩॥**

**ಭೂಮಿಂ ಚ ಪ್ರಾರ್ಥಯಿತ್ವಾ ತು ತತಃ ಸಂಚಾರಮಾಚರೇತ್ ।**
**ತತಸ್ತು ನೈಋತೇ ದೇಶೇ ಮಲಮೂತ್ರೇ ವಿಸರ್ಜಯೇತ್ ॥೧೪॥**

**ಶೌಚಾದಿಕವಿಧಿಂ ಕೃತ್ವಾ ದಂತಧಾವನಮೇವ ಚ ।**
**ತೃಣಪರ್ಣೈಸ್ಸದಾ ಕುರ್ಯಾದಮಾಮೇಕಾದಶೀಂ ವಿನಾ ॥೧೫॥**

**ತಯೋರಪಿ ಚ ಕುರ್ವಂತಿ ಜಂಬೂಪ್ಲಕ್ಷರಸಾಲಕೈಃ ।**
**ಗಂಡೂಷಂ ಚ ದ್ವಿಷಡ್ವಾರಂ ದಂತಶುದ್ಧಾವಥಾಚರೇತ್ ॥೧೬॥**

---

೧೧ ಕರಗಳ ಮೇಲ್ಭಾಗದಲ್ಲಿ ಲಕ್ಷ್ಮೀದೇವಿಯೂ, ಕರಗಳ ಕೆಳಭಾಗದಲ್ಲಿ ಸರಸ್ವತಿ ದೇವಿಯೂ, ಕರಗಳ ಮಧ್ಯದಲ್ಲಿ ಬ್ರಹ್ಮದೇವರು ಇರುವರು. ಆದುದರಿಂದ ಪ್ರಾತಃಕಾಲದಲ್ಲಿ ಕರದರ್ಶನವು ಪುಣ್ಯಕರವಾದುದು.

೧೨ ಇಂದ್ರಿಯ ನಿಯಾಮಕನೇ! ಜಗದ್ರೂಪನೇ! ಸರ್ವಜ್ಞನೇ! ದಯಾಸಾಗರನೇ! ನನ್ನ ಇಂದ್ರಿಯಗಳು ಧರ್ಮಕಾರ್ಯದಲ್ಲಿ ತೊಡಗುವಂತೆ ಅನುಗ್ರಹಿಸು ಎಂದು ಬೇಡಿಕೊಂಡು ನಂತರ ಭೂದೇವಿಯನ್ನು ಭಕ್ತಿಯಿಂದ ಪ್ರಾರ್ಥಿಸಬೇಕು.

೧೩ ಸಮುದ್ರವೆಂಬ ಸೀರೆ ತೊಟ್ಟ, ಬೆಟ್ಟಗಳೆಂಬ ಕುಚಗಳಿಂದೊಪ್ಪುವ, ವಿಷ್ಣುಪತ್ನಿ ಭೂದೇವಿಯೇ! ನನ್ನ ಪಾದದ ಸ್ಪರ್ಶವನ್ನು ಕ್ಷಮಿಸು.

೧೪ ಭೂಮಿಯನ್ನು ಪ್ರಾರ್ಥಿಸಿದ ನಂತರ ಸಂಚಾರ ಮಾಡಬೇಕು. ನಂತರ ಗ್ರಾಮದ ಹೊರಗೆ ನೈರುತ್ಯಭಾಗದಲ್ಲಿ ಮಲ-ಮೂತ್ರಗಳನ್ನು ವಿಸರ್ಜನೆ ಮಾಡಬೇಕು.

೧೫ ಶೌಚವನ್ನು ಮಾಡಿಕೊಂಡು ಹಲ್ಲುಜ್ಜಬೇಕು. ಅಮಾವಾಸ್ಯೆ ಮತ್ತು ಏಕಾದಶಿಯಂದು ದಂತಧಾವನ ಮಾಡಬಾರದು.

೧೬ ಅಮಾವಾಸ್ಯೆ ಮುಂತಾದ ನಿಷಿದ್ಧದಿವಸಗಳಲ್ಲಿಯೂ ನೇರಳೆ, ಪ್ಲಕ್ಷ, ಮಾವು

**ತತೋ ದೇವೀಂ ಚ ತುಲಸೀಂ ಪ್ರಾರ್ಥಯೇತಾಪಿ ಭಕ್ತಿತಃ ।**
**ತುಲಸಿ ಶ್ರೀಸಖಿ ಶುಭೇ ಪಾಪಹಾರಿಣಿ ಪುಣ್ಯದೇ ॥೧೭॥**

**ನಮಸ್ತೇ ನಾರದನುತೇ ನಾರಾಯಣಮನಃಪ್ರಿಯೇ ।**
**ಪ್ರದಕ್ಷಿಣೀಕೃತ್ಯ ದೇವೀಂ ಸಾಷ್ಟಾಂಗಂ ಪ್ರಣಿಪತ್ಯ ಚ ॥೧೮॥**

**ಏಕಕುಂಭೋದಕೈರ್ವಾಪಿ ಪ್ರೋಕ್ಷಯೇತ್ತುಲಸೀವನಮ್ ।**
**ತಸ್ಯೈವ ಸರ್ವಪಿತರಃ ಸಾನಂದಾಃ ಸ್ವರ್ಗಮಾಪ್ನುಯುಃ ॥೧೯॥**

**ಲಲಾಟೇ ಧಾರಯೇದ್ಯಸ್ತು ತುಲಸೀಮೂಲಮೃತ್ತಿಕಾಮ್ ।**
**ದೀರ್ಘಾಯುರ್ಗುಣಸಂಪನ್ನೋ ಬಲವಾನ್ವಿಜಿತೇಂದ್ರಿಯಃ ॥೨೦॥**

**ತತಃ ಸ್ನಾನಂ ಚ ಕುರ್ಯಾದ್ವೈ ಯಥಾಕಾಲಾನುಸಾರತಃ ।**
**ವಾಪಿಕೂಪತಟಾಕಾದಿತೀರ್ಥೇಷು ಸರಸೀಷು ಚ ॥೨೧॥**

**ಸಮುದ್ರಗಾಮಿನದ್ಯಾಂ ವಾ ತತಃ ಸ್ನಾನಂ ಸಮಾಚರೇತ್ ।**
**ಯಥಾದೇಶಂ ಯಥಾಕಾಲಂ ಕರ್ಮ ಲೌಕಿಕವೈದಿಕಮ್ ॥೨೨॥**

---

ಎಲೆಗಳಿಂದ ದಂತ ಶುದ್ಧಿಯನ್ನು ಮಾಡಬೇಕು. ಏಕಾದಶಿಯ ದಿನದಲ್ಲಿ ದಂತ ಶುದ್ಧಿಗಾಗಿ ಹನ್ನೆರಡು ಬಾರಿ ಬಾಯಿ ಮುಕ್ಕಳಿಸಬೇಕು.

೧೭ ನಂತರದಲ್ಲಿ ತುಲಸೀದೇವಿಯನ್ನು ಭಕ್ತಿಪೂರ್ವಕವಾಗಿ ಪ್ರಾರ್ಥಿಸಬೇಕು. ಹೇ ತುಲಸಿ! ನೀನು ಲಕ್ಷ್ಮೀಯ ಸಖಿ, ಪರಮಮಂಗಲೆ, ಪಾಪವನ್ನು ಕಳೆಯುವವಳು, ಪುಣ್ಯ ನೀಡುವವಳು ಆಗಿರುವಿ.

೧೮ ನೀನು ನಾರದರಿಂದ ವಂದಿತಳು. ನಾರಾಯಣನ ಮನಸ್ಸಿಗೆ ಅತಿ ಪ್ರಿಯಳು ಎಂದು ಸ್ತುತಿಸುತ್ತ ಸಾಷ್ಟಾಂಗ ನಮಸ್ಕಾರ ಮಾಡಿ, ಪ್ರದಕ್ಷಿಣೆಯನ್ನು ಹಾಕಬೇಕು.

೧೯ ಒಂದು ಬಿಂದಿಗೆ ನೀರಿನಿಂದಲಾದರೂ ಸರಿ (ಅಶಕ್ತನಾಗಿದ್ದಲ್ಲಿ) ತುಲಸಿವನಕ್ಕೆ ನೀರೆರೆಯಬೇಕು. ಆತನ ಪಿತೃಗಳು ಸಂತುಷ್ಟರಾಗಿ ಸ್ವರ್ಗ ಹೊಂದುವರು.

೨೦ ತುಲಸಿಯ ಕೆಳಗಿರುವ ಮಣ್ಣನ್ನು ಹಣೆಯಲ್ಲಿ ಧರಿಸಿದವನು, ಜಿತೇಂದ್ರಿಯನೂ, ಬಲವಂತನೂ, ದೀರ್ಘಾಯುವೂ, ಗುಣಸಂಪನ್ನನೂ ಆಗುವನು.

೨೧ ಅನಂತರ ಕಾಲಾನುಸಾರವಾಗಿ ಬಾವಿ, ಸಣ್ಣ ಜಲಾಶಯ, ದೇವ ನಿರ್ಮಿತ ತೀರ್ಥಗಳು, ಸರೋವರ, ನದಿ ಮುಂತಾದವುಗಳಲ್ಲಿ ಸ್ನಾನ ಮಾಡಬೇಕು.

೨೨ ಸಾಕ್ಷಾತ್ತಾಗಿ ಸಮುದ್ರ ಸೇರುವ ಮಹಾನದಿಗಳಲ್ಲಾಗಲೀ ಸ್ನಾನ ಮಾಡಿ ದೇಶ ಕಾಲಗಳಿಗೆ ಅನುಗುಣವಾಗಿ ಲೌಕಿಕ ವೈದಿಕ ಕರ್ಮಗಳನ್ನು ಮಾಡಬೇಕು.

**ದೇಶಕಾಲಾನುಸಾರೇಣ ಕರ್ತವ್ಯಂ ಸ್ನಾನಪೂರ್ವಕಮ್ ॥೨೩॥**

**ಅಶಕ್ತೇನ ನ ಕರ್ತವ್ಯಂ ಬಹಿಃಸ್ನಾನಂ ತಥೈವ ಚ ।**
**ಉಷ್ಣೋದಕೇನ ವೈ ಸ್ನಾನಂ ಕರ್ತವ್ಯಂ ಮಾರ್ಗಶೀರ್ಷಕೇ ॥೨೪॥**

**ಆಪಃ ಸ್ವಭಾವತೋ ಮೇಧ್ಯಾಃ ಕಿಂ ಪುನರ್ವಹ್ನಿಸಂಯುತಾಃ ।**
**ತಸ್ಮಾತ್ಸಂತಃ ಪ್ರಶಂಸಂತಿ ಸ್ನಾನಮುಷ್ಣೇನ ವಾರಿಣಾ ॥೨೫॥**

**ತತ್ರ ಧ್ಯಾತ್ವಾ ಚ ದೇವೇಶಂ ದತ್ತಾತ್ರೇಯಂ ಮಹಾಮುನಿಮ್ ।**
**ತತ್ರಾಗತಾಶ್ಚ ಸರ್ವಾ ವೈ ಗಂಗಾದ್ಯಾಸ್ಸರಿತೋಽಖಿಲಾಃ ॥೨೬॥**

**ವಿಷ್ಣೋರಾಜ್ಞಾಂ ಪುರಸ್ಕೃತ್ಯ ತತ್ರೈವ ತು ಜಲಾಶಯೇ ।**
**ಸ್ಮರ್ತವ್ಯಃ ಸತತಂ ವಿಷ್ಣುಃ ದತ್ತಾತ್ರೇಯೋ ಮಹಾನ್ ಋಷಿಃ ॥೨೭॥**

**ಸಾಕ್ಷಾನ್ನಾರಾಯಣಾಂಶೋ ವೈ ಜ್ಞಾನದಾಯೀ ನ ಸಂಶಯಃ ।**
**ಸ್ನಾನಕಾಲೇ ಚ ವೈ ರಾಜನ್ ತುಲಸೀಮೂಲಮೃತ್ತಿಕಾಮ್ ॥೨೮॥**

---

೨೩ ತಾನು ಮಾಡಬೇಕಾದ ಎಲ್ಲ ಲೌಕಿಕ ವೈದಿಕ ಕರ್ಮಗಳನ್ನು ದೇಶ ಕಾಲಾನುಸಾರವಾಗಿ ಸ್ನಾನಪೂರ್ವಕವಾಗಿ ಮಾಡಬೇಕು.

೨೪ ಅಶಕ್ತನು (ರೋಗಾದಿಗಳಿಂದ ಪೀಡಿತನು) ಜಲಾಶಯಗಳಲ್ಲಿ ಸ್ನಾನ ಮಾಡ-ಕೂಡದು. ಅಂಥವನು ಮಾರ್ಗಶೀರ್ಷ (ಧನು) ಮಾಸದಲ್ಲಿ ಬಿಸಿನೀರಿನಿಂದ ಸ್ನಾನ ಮಾಡಬೇಕು.

೨೫ ಜಲವು ಸ್ವಭಾವದಿಂದಲೇ ಪಾವನವಾದುದು. ಪಾವಕನ (ಅಗ್ನಿ) ಸಂಪರ್ಕದಿಂದ ಇನ್ನಷ್ಟು ಶುದ್ಧವೇ ಸರಿ. ಆದುದರಿಂದಲೇ ಸಜ್ಜನರು ಬಿಸಿ ನೀರಿನ ಸ್ನಾನವನ್ನು ಪ್ರಶಂಸೆ ಮಾಡುವರು.

೨೬ ಆ ಜಲಾಶಯದಲ್ಲಿ ಸರ್ವದೇವೋತ್ತಮ, ಮಹಾಮುನಿ ದತ್ತಾತ್ರೇಯನನ್ನು ಧ್ಯಾನಿಸಬೇಕು. ಆ ಜಲಾಶಯದಲ್ಲಿಯೇ ಗಂಗಾದಿ ಸಕಲ ತೀರ್ಥಗಳೂ ಸನ್ನಿಹಿತವಾಗಿರುವವು.

೨೭ ಮಹಾವಿಷ್ಣುವಿನ ಆಜ್ಞೆಯನ್ನು ಶಿರಸಾವಹಿಸಿ ಆ ಜಲಾಶಯದಲ್ಲಿಯೇ ಸಕಲ ತೀರ್ಥಗಳೂ ಸನ್ನಿಹಿತವಾಗಿವೆ. ಅಲ್ಲಿಯೇ ಮಹಾನ್ ಋಷಿಯಾದ ದತ್ತಾತ್ರೇಯರೂಪಿ ವಿಷ್ಣುವನ್ನು ಸ್ಮರಿಸಬೇಕು.

೨೮ ಸಾಕ್ಷಾತ್ತಾಗಿ ನಾರಾಯಣಾವತಾರನಾದ ದತ್ತಾತ್ರೇಯನು ನಿಸ್ಸಂದೇಹವಾಗಿ ಜ್ಞಾನವನ್ನು ಅನುಗ್ರಹಿಸುತ್ತಾನೆ. ಹೇ ರಾಜನೇ ಸ್ನಾನ ಕಾಲದಲ್ಲಿ ತುಲಸಿಯ ಕೆಳಗಿನ ಮೃತ್ತಿಕೆಯನ್ನು,

ಜಲೇ ನಿಕ್ಷಿಪ್ಯ ವೈ ಸ್ನಾತ್ವಾ ಕೋಟಿತೀರ್ಥಫಲಂ ಲಭೇತ್ ।
ಸ್ನಾನಕಾಲೇಽಪಿ ಚಾರ್ಘ್ಯಂ ವೈ ಮಂತ್ರಾನುಚ್ಚಾರ್ಯ ತತ್ತ್ವತಃ ॥೨೯॥

ಸ್ನಾನಂ ದಶವಿಧಂ ಪ್ರೋಕ್ತಂ ಕರ್ತವ್ಯಂ ವಿಧಿಪೂರ್ವಕಮ್ ।
ತತೋ ದೇವಾನ್ ಋಷಿಪಿತ್ರ್ಯಾನ್ ತರ್ಪಯಿತ್ವಾ ಯಥಾಕ್ರಮಮ್ ॥೩೦॥

ಶಿಖೋದಕಂ ಚ ದತ್ವಾ ವೈ ಪಿತೄಣಾಂ ಮುಕ್ತಿಹೇತವೇ ।
ಜೀವತ್ಪಿತೃಕವಿಪ್ರೋಽಥ ನೋತ್ಸೃಜೇಚ್ಚ ಶಿಖೋದಕಮ್ ॥೩೧॥

ಉತ್ಸೃಜೇದ್ಯೋ ವಿಮೂಢಾತ್ಮಾ ರೌರವಂ ನರಕಂ ವ್ರಜೇತ್ ।
ಅನಂತರಂ ಚ ಕರ್ತವ್ಯಂ ಧೌತವಸ್ತ್ರಸ್ಯ ಧಾರಣಮ್ ॥೩೨॥

ಊರ್ಧ್ವಪುಂಡ್ರದ್ವಾದಶಕಂ ತಥಾ ಮುದ್ರಾಂ ಚ ಧಾರಯೇತ್ ।
ತುಲಸೀಕಾಷ್ಠಜಾಂ ಮಾಲಾಂ ತಥಾ ಪದ್ಮಾಕ್ಷಮಾಲಿಕಾಮ್ ॥೩೩॥

ಧಾತ್ರೀಫಲಾನ್ವಿತಾಂ ಮಾಲಾಂ ಧಾರಯೇತ್ ವೈಷ್ಣವಾಗ್ರಣೀಃ ।
ಸಂಧ್ಯಾಜಪಾದಿಕಂ ಕುರ್ಯಾತ್ ಸಂಕೋಚ್ಯ ವಿಧಿವತ್ತದಾ ॥೩೪॥

---

೨೯ ಜಲದಲ್ಲಿ ಹಾಕಿ ಸ್ನಾನ ಮಾಡಿದವನು, ಕೋಟಿತೀರ್ಥಸ್ನಾನಗಳ ಫಲವನ್ನು ಪಡೆಯುವನು. ಸ್ನಾನ ಕಾಲದಲ್ಲಿ ಮಂತ್ರಗಳನ್ನುಚ್ಚರಿಸಿ ಅರ್ಘ್ಯಗಳನ್ನು ಕೊಡಬೇಕು.

೩೦ ಹತ್ತು ವಿಧವಾದ ಸ್ನಾನಗಳನ್ನು ವಿಧಿಪೂರ್ವಕವಾಗಿ ಮಾಡಿ, ನಂತರದಲ್ಲಿ ಕ್ರಮವಾಗಿ ದೇವತೆಗಳಲ್ಲಿ ಋಷಿಗಳು, ಪಿತೃಗಳು ಹೀಗೆ ತರ್ಪಣ ನೀಡಬೇಕು.

೩೧ ಪಿತೃಗಳ ಮುಕ್ತಿಗೋಸುಗ ಶಿಖೋದಕವನ್ನು ಬಿಡಬೇಕು. ಜೀವತ್ಪಿತೃಕನು (ತಂದೆ ಬದುಕಿರುವ ಪುರುಷ) ಶಿಖೋದಕವನ್ನು ಎಂದಿಗೂ ಬಿಡಬಾರದು.

೩೨ ಜೀವತ್ಪಿತೃಕನು ಶಿಖೋದಕವನ್ನು ಬಿಟ್ಟರೆ ಅಂಥ ಮೂಢನು ರೌರವ ನಕರವನ್ನು ಹೊಂದುವನು. ಅನಂತರದಲ್ಲಿ ಶುದ್ಧವಸ್ತ್ರವನ್ನು ಧರಿಸಬೇಕು.

೩೩ ದ್ವಾದಶ ಊರ್ಧ್ವಪುಂಡ್ರಗಳು ಹಾಗೂ ಪಂಚಮುದ್ರೆಗಳನ್ನು ವಿಧ್ಯುಕ್ತವಾದ ರೀತಿಯಲ್ಲಿ ಧರಿಸಬೇಕು. ತುಲಸೀ ಕಾಷ್ಠದ ಮಾಲೆ, ಪದ್ಮಾಕ್ಷ (ಕಮಲದ ಬೀಜ) ಮಾಲೆ,

೩೪ ನೆಲ್ಲಿಕಾಯಿಗಳಿಂದ (ಬೆಟ್ಟದ ನೆಲ್ಲಿ) ಮಾಡಿದ ಮಾಲೆಗಳನ್ನಾಗಲೀ ಧರಿಸಿದವನು ಉತ್ತಮ ವಿಷ್ಣುಭಕ್ತನೆನಿಸುವನು. ಸಂಧ್ಯಾ-ಜಪಾದಿಗಳನ್ನು ಸಂಕೋಚ ಮಾಡಿಕೊಂಡು ವಿಧಿಪೂರ್ವಕವಾಗಿ ಆಚರಿಸಿ,

ಉಷಃ ಕಾಲೇ ಚ ಪೂಜಾಂ ವೈ ಕೃತ್ವಾ ಶೀಘ್ರಂ ಯಥಾವಿಧಿ।
ಅಥೋ ವಿಧಿಂ ಪ್ರವಕ್ಷ್ಯಾಮಿ ಸಂಕ್ಷೇಪೇಣ ತವಾನಘ ॥೩೫॥

ದೇವಾಗಾರಂ ತತೋ ಗತ್ವಾ ನತ್ವಾ ವೈ ದ್ವಾರಪಾಲಕಾನ್ ।
ಕವಾಟೋದ್ಘಾಟನಂ ಕುರ್ಯಾತ್ ಘಂಟಾನಾದಂ ಚ ಕಾರಯೇತ್ ॥೩೬॥

ದೀಪಂ ಪ್ರಜ್ವಾಲ್ಯ ಶೀಘ್ರಂ ವೈ ದೇವಂ ದೃಷ್ಟ್ವಾ ಪ್ರಸನ್ನ ಧೀಃ ।
ಉತ್ತಿಷ್ಠೋತ್ತಿಷ್ಠ ಮಂತ್ರೇಣ ದೇವಂ ಸಂವೀಕ್ಷ್ಯ ವೈ ತದಾ ॥೩೭॥

ದೇವಂ ಚ ಪೀಠೇ ಸಂಸ್ಥಾಪ್ಯ ಗರುಡೋಪರಿ ವಿನ್ಯಸೇತ್ ।
ಸಾಲಿಗ್ರಾಮಾದಿಕಂ ಪಾತ್ರೇ ನಿಕ್ಷಿಪ್ಯ ವಿಧಿವತ್ತದಾ ॥೩೮॥

ಪೂಜಾಕಾಲೇ ತು ರಾಜೇಂದ್ರ, ಗೀತವಾದಿತ್ರನಿಃಸ್ವನೈಃ ।
ಮೃದಂಗತಾಲಹಿಂತಾಲಟಂಕನಿಸ್ಸಾಣಶಬ್ದಕೈಃ ॥೩೯॥

ಅನ್ಯೈಶ್ಚ ವಿವಿಧೈರ್ವಾದ್ಯೈಃ ಘೋಷಯೇಚ್ಚಾಪಿ ವೈ ತದಾ ।
ವೇದಘೋಷನಿನಾದೈಶ್ಚ ಪುರಾಣಪಠನೈಶ್ಶುಭೈಃ ॥೪೦॥

---

೩೫ ಉಷಃಕಾಲದಲ್ಲಿ ಪೂಜೆಯನ್ನು ವಿಧಿಗನುಸಾರವಾಗಿ ಮಾಡಬೇಕು. ಹೇ ಪಾಪರಹಿತನೇ! ಸಂಕ್ಷೇಪಪೂಜಾ ವಿಧಾನವನ್ನು ನಿನಗೆ ತಿಳಿಸುವೆನು.

೩೬ ದೇವರ ಮನೆಯ ಹತ್ತಿರ ಹೋಗಿ ದ್ವಾರಪಾಲಕರನ್ನು ನಮಸ್ಕರಿಸಬೇಕು. ನಂತರ ದೇವಗೃಹದ ಬಾಗಿಲನ್ನು ತೆರೆದು ಒಳಗೆ ಪ್ರವೇಶಿಸಿ ಘಂಟೆಯನ್ನು ಬಾರಿಸಬೇಕು.

೩೭ ಒಳಗೆ ಪ್ರವೇಶ ಮಾಡಿ ದೀಪವನ್ನು ಹಚ್ಚಬೇಕು. ನಂತರ ಪ್ರಸನ್ನ ಮನಸ್ಸಿನಿಂದ ಉತ್ತಿಷ್ಠೋತ್ತಿಷ್ಠ ಗೋವಿಂದ ಉತ್ತಿಷ್ಠ ಗರುಡಧ್ವಜ ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಲಂ ಕುರು ॥ ಎಂಬ ಮಂತ್ರ ಉಚ್ಚರಿಸುತ್ತ ದೇವನನ್ನು ದರ್ಶಿಸಬೇಕು.

೩೮ ದೇವನನ್ನು ಪೀಠದಲ್ಲಿ ಕೂಡಿಸಬೇಕು. ಗರುಡನ ಮೇಲೆ ಆರೂಢನಾಗಿರುವ-ನೆಂದು ಚಿಂತಿಸಬೇಕು. ಸಾಲಿಗ್ರಾಮಾದಿಗಳನ್ನು ವಿಧಿಪೂರ್ವಕವಾಗಿ ಪಾತ್ರೆಯಲ್ಲಿರಿಸಿ ಪೂಜಿಸಬೇಕು.

೩೯ ಹೇ ರಾಜನೇ! ಪೂಜಾಕಾಲದಲ್ಲಿ, ಹಾಡು, ವಾದ್ಯಗಳು, ಮೃದಂಗ ಮುಂತಾದ ವಾದ್ಯಗಳ ಶಬ್ದದಿಂದ

೪೦ ಇನ್ನು ಅನೇಕ ರೀತಿಯ ವಾದ್ಯಗಳನ್ನು ನುಡಿಸಬೇಕು. ವೇದಘೋಷವನ್ನು ಮಾಡಬೇಕು ಪುರಾಣಗಳನ್ನು ಪಠಿಸಬೇಕು.

ತದಭಾವೇಽಪಿ ರಾಜೇಂದ್ರ ವಿಷ್ಣೋರ್ನಾಮಸಹಸ್ರಕಮ್ ।
ಧನುರ್ಮಾಸಸ್ಯ ಮಾಹಾತ್ಮ್ಯಂ ಪಠನ್ವೈ ಸತತಂ ನರಃ ॥೪೧॥

ಶೃಣುಯಾಚ್ಚಾಪಮಾಹಾತ್ಮ್ಯಂ ದೇವತಾರಾಧನೇ ತದಾ ।
ತೇನ ತುಷ್ಟೋ ಜಗನ್ನಾಥಃ ಪ್ರಸೀದೇತ್ಕಮಲೇಕ್ಷಣಃ ॥೪೨॥

ದೇವಂ ಚಾವಾಹಯನ್ನೇವಮಾಸನಾದ್ಯೈರ್ಯಥಾಕ್ರಮಮ್ ।
ಷೋಡಶೋಪಚಾರಪೂಜಾಂ ಕುರ್ಯಾದ್ವೈ ಭಕ್ತಿಮಾನ್ನರಃ ॥೪೩॥

ಪಂಚಾಮೃತೇನ ಸ್ನಪನಂ ಗಂಧೋದಕಮತಃ ಪರಮ್ ।
ಗಂಧೋದಕಂ ವಿಶೇಷೇಣ ಮಮ ಪ್ರೀತಿಕರಂ ಸದಾ ॥೪೪॥

ಲಕ್ಷಂ ಪಂಚಾಮೃತಸ್ನಾನಮನಂತಂ ಗಂಧವಾರಿಣಾ ।
ಕೃತ್ವಾ ಶುದ್ಧೋದಕಸ್ನಾನಂ ವಸ್ತ್ರೈಶ್ಚ ಪರಿಮಾರ್ಜಯೇತ್ ॥೪೫॥

---

೪೧ ರಾಜನೇ! ಇದಾಗದಿದ್ದರೆ ಪೂಜೆಯ ಸಮಯದಲ್ಲಿ ವಿಷ್ಣುಸಹಸ್ರನಾಮವನ್ನು ಹಾಗೂ ಧನುರ್ಮಾಸಮಾಹಾತ್ಮ್ಯವನ್ನು ನಿರಂತರ ಪಠಿಸಬೇಕು.

೪೨ ಪೂಜಾಕಾಲದಲ್ಲಿ ಧನುರ್ಮಾಸದ ಮಹಿಮೆಯನ್ನು ಕೇಳಬೇಕು. ಕಮಲನಯನನಾದ ಜಗನ್ನಾಥನು ಅದರಿಂದ ಪ್ರೀತನಾಗಿ ಅನುಗ್ರಹಿಸುವನು.

೪೩ ದೇವರನ್ನು ಆವಾಹಿಸಿ ೧) ಅರ್ಘ್ಯ ೨) ಪಾದ್ಯ ೩) ಆಚಮನೀಯ ೪) ಮಧುಪರ್ಕ ೫) ಪುನರಾಚಮನೀಯ ೬)ಸ್ನಾನ ೭) ವಸ್ತ್ರ ೮) ಭೂಷಣ ೯) ಯಜ್ಞೋಪವೀತ ೧೦) ಆಸನ ೧೧) ಗಂಧ ೧೨) ಪುಷ್ಪ ೧೩) ಧೂಪ ೧೪) ದೀಪ ೧೫) ನೈವೇದ್ಯ ೧೬) ನಮಸ್ಕಾರ ರೂಪವಾದ ಷೋಡಶೋಪಚಾರಗಳನ್ನು ಕ್ರಮವಾಗಿ ಭಕ್ತಿಯಿಂದ ಮಾಡಬೇಕು.

೪೪ ಪಂಚಾಮೃತ ಸ್ನಾನವನ್ನು ಮಾಡಿಸಿದ ನಂತರ ಗಂಧೋದಕದ ಅಭಿಷೇಕವನ್ನು ಮಾಡಬೇಕು. ಗಂಧೋದಕವು ನನಗೆ ಅತ್ಯಂತ ಪ್ರಿಯವಾದುದು.

**ವಿಶೇಷ-** ದಶಾಪರಾಧಂ ತೋಯೇನ ಕ್ಷೀರೇಣ ಕ್ಷಮತೇ ಶತಮ್ ।
ಸಹಸ್ರಂ ಕ್ಷಮತೇ ದಧ್ನಾ ಘೃತೇನ ಕ್ಷಮತೇಽಯುತಮ್ ॥
ಮಧುನಾ ಕ್ಷಮತೇ ಲಕ್ಷಮಿಕ್ಷುಣಾ ದಶಲಕ್ಷಕಮ್ ।
ನಾರಿಕೇಲಾಂಬುನಾ ಕೋಟಿಮನಂತಂ ಗಂಧವಾರಿಣಾ ॥ (ಪಂಚಸಂಸ್ಕಾರ ಸಂ)

ಗಂಧೋಧಕದಿಂದ ಅಭಿಷಿಕ್ತನಾದ ದೇವನು ಅಭಿಷೇಕ ಮಾಡಿದವನ ಅನಂತ ಅಪರಾಧಗಳನ್ನು ಕ್ಷಮಿಸುವನು.

೪೫ ಪಂಚಾಮೃತಸ್ನಾನವು ಲಕ್ಷ ಫಲ ನೀಡಿದರೆ ಗಂಧೋದಕದ ಸ್ನಾನವು ಅನಂತ

**ಗಂಧಪುಷ್ಪಾದಿಮಾಲ್ಯೈಸ್ಸಂಪೂಜಯೇತ್ತಂಡುಲಾನ್ವಿತೈಃ ।**
**ಯಜ್ಞೋಪವೀತಂ ದಾತವ್ಯಂ ಕಿರೀಟಂ ಮಹದುಜ್ವಲಮ್ ॥೪೬॥**

**ಬಿಲ್ವಂ ಚ ತುಲಸೀಂ ಧಾತ್ರೀಮರ್ಚಯೇತ್ ಕೇಶವೋಪರಿ ।**
**ತುಲಸೀರಹಿತಾ ಪೂಜಾ ವ್ಯರ್ಥಾ ಭವತಿ ನಾನ್ಯಥಾ ॥೪೭॥**

**ತಸ್ಮಾತ್ಸರ್ವಪ್ರಯತ್ನೇನ ತುಲಸೀಮರ್ಚಯೇತ್ ಸದಾ ।**
**ಧೂಪದೀಪಾದಿಕಂ ಕೃತ್ವಾ ನೈವೇದ್ಯಂ ತದನಂತರಮ್ ॥೪೮॥**

**ನೈವೇದ್ಯಂ ಕಾರಯೇತ್ತತ್ರ ಸ್ವಯಂ ಚಾಪಿ ವಿಶೇಷತಃ ।**
**ಕೇಶಕೀಟಾದಿ ಸಂಶೋಧ್ಯ ಪಕ್ವಂ ಚ ಸುಮನೋಹರಮ್ ॥೪೯॥**

**ಅಪಕ್ವಮತಿಪಕ್ವಂ ಚ ತ್ಯಾಜ್ಯಮೇವ ನ ಸಂಶಯಃ ।**
**ನ ಗೃಹ್ಣೀಯಾಚ್ಚ ನೈವೇದ್ಯಂ ಕ್ಷಾರಾಮ್ಲಕಟುತೀಕ್ಷ್ಣಕಮ್ ॥೫೦॥**

---

ಫಲ ನೀಡುವುದು. ಶುದ್ಧೋದಕದಿಂದ ಅಭಿಷೇಕ ಮಾಡಿ ವಸ್ತ್ರದಿಂದ ಪ್ರತಿಮೆಗಳನ್ನು ಒರೆಸಬೇಕು.

೪೬ ಗಂಧ, ಪುಷ್ಪಗಳು, ಮಾಲೆ ಹಾಗೂ ಮಂತ್ರಾಕ್ಷತೆಗಳಿಂದ ಪೂಜಿಸಬೇಕು. ಯಜ್ಞೋಪವೀತ ಹಾಗೂ ಉತ್ತಮವಾದ ಕಿರೀಟವನ್ನು ಸಮರ್ಪಿಸಬೇಕು.

೪೭ ಬಿಲ್ವಪತ್ರ, ತುಲಸೀಪತ್ರ, ಧಾತ್ರೀ ಪತ್ರ (ಬೆಟ್ಟದನೆಲ್ಲಿ)ಗಳನ್ನು ದೇವರ ಮೇಲೆ ಏರಿಸಬೇಕು. ತುಲಸೀ ಇಲ್ಲದ ಪೂಜೆಯು ವ್ಯರ್ಥವೇ ಸರಿ.

೪೮ ತುಲಸಿ ಇಲ್ಲದ ಪೂಜೆಯು ದೇವನಿಗೆ ಪ್ರಿಯವಲ್ಲ. ಆದುದರಿಂದ ಪ್ರಯತ್ನ ಪೂರ್ವಕವಾಗಿ ತುಲಸಿಯನ್ನು ಅರ್ಪಿಸಬೇಕು. ಧೂಪ, ದೀಪಗಳನ್ನು ಸಮರ್ಪಿಸಿ ನಂತರ ನೈವೇದ್ಯ ಮಾಡಬೇಕು.

೪೯ ಕೂದಲು, ಕೀಟಗಳು ಮೊದಲಾದವನ್ನು ಶೋಧಿಸಿ, ಪಕ್ವವಾದ, ಮನೋಹರವಾದ ತಾನೇ ತಯಾರಿಸಿದ ನೈವೇದ್ಯವನ್ನು ನಿವೇದಿಸಬೇಕು.

೫೦ ಕೂದಲು, ಕ್ರಿಮಿಗಳು, ಕೀಟಗಳಿಂದ ಕೂಡಿದುದು, ಸರಿಯಾಗಿ ಬೇಯದಿರು-ವುದು, ಅತಿ ಹೆಚ್ಚು ಬೆಂದಿರುವುದು, ನೈವೇದ್ಯಕ್ಕೆ ಯೋಗ್ಯವಲ್ಲ. ಅದೇ ರೀತಿ ಅತಿ ಉಪ್ಪು, ಹುಳಿ, ಕಹಿ, ಖಾರಯುಕ್ತವಾದುದನ್ನು ಭಗವಂತ ಸ್ವೀಕರಿಸುವುದಿಲ್ಲ.

ವಿಶೇಷ :- ಅಂಥ ಆಹಾರವು ರಜೋಗುಣಯುಕ್ತವಾದುದು. ರಾಜಸರಿಗೆ ಪ್ರಿಯವಾದುದು ಮತ್ತು ರೋಗಾದಿಗಳಿಗೆ ಕಾರಣವಾಗುವುದು.

**ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥** ಗೀತಾ ೧೭-೯

**ತಸ್ಮಾತ್ ಸರ್ವಪ್ರಯತ್ನೇನ ಪಾಕಂ ಶುದ್ಧಂ ಸಮಾಚರೇತ್ ।**
**ಭಕ್ಷ್ಯಾನ್ ಭೋಜ್ಯಾಂಶ್ಚ ಲೇಹ್ಯಾಂಶ್ಚ ಪೇಯಾಂಶ್ಚಾಪಿ ರಸಾದಿಕಾನ್॥೫೧॥**

**ನಾನಾಶಾಕರಸೋಪೇತಾನ್ ತೈಲಸರ್ಪಿಸ್ಸುವೇಲ್ಲಿತಾನ್ ।**
**ಅನ್ನಂ ಚ ವಿಧಿವತ್ಸರ್ವಂ ದಧ್ಯನ್ನಂ ಚ ವಿಶೇಷತಃ ॥೫೨॥**

**ತಿಲಾನ್ನಂ ಚ ಗುಡಾನ್ನಂ ಚ ಆಮ್ಲಾನ್ನಂ ರುಚಿಸಂಯುತಮ್ ।**
**ಮರೀಚಯುಕ್ತಾನ್ ಚಣಕಾನ್ ತಿಂತ್ರಿಣೀರಸಸಂಯುತಾನ್ ॥೫೩॥**

**ದ್ರಾಕ್ಷಾರಸೈಶ್ಚೂತರಸಾಮಲಕೈರ್ವಾ ವಿಶೇಷತಃ ।**
**ಏತೇಷಾಮಪಿ ಸರ್ವೇಷಾಂ ಮುದ್ಗಾನ್ನಂ ಶ್ರೇಷ್ಠಮುಚ್ಯತೇ ॥೫೪॥**

**ಮುದ್ಗಾನ್ನಂ ಕಾಂಚನಪ್ರಖ್ಯಂ ಲವಣೇನ ಸಮನ್ವಿತಮ್ ।**
**ಅಥವಾ ಶರ್ಕರಾಯುಕ್ತಂ ಘೃತಸೂಪಾದಿಸಂಯುತಮ್ ॥೫೫॥**

**ಮುದ್ಗಾನ್ನಮೇಲಾರ್ಧಗುಡೋದನಂ ಚ**
**ಹೈಯಂಗವೀನಂ ದಧಿಸಾರಯುಕ್ತಮ್ ।**
**ಜಂಬೀರಕಂ ಚಾರ್ದ್ರಕಸಂಯುತಂ ಚ**
**ದಧ್ನಾ ಚ ಮಿಶ್ರಂ ಲವಣಾನ್ವಿತಂ ಚ ॥೫೬॥**

---

೫೧ ಆದುದರಿಂದ ಸಕಲರೀತಿಯಿಂದಲೂ ಯತ್ನಿಸಿ ಅತ್ಯಂತ ಶುದ್ಧವಾದ ಭಕ್ಷ್ಯ-ಭೋಜ್ಯಗಳಿಂದ ಯುಕ್ತವಾದ ಷಡ್ರಸೋಪೇತವಾದ ಆಹಾರವನ್ನು ತಯಾರಿಸಬೇಕು.

೫೨ ಅನೇಕ ಕಾಯಿಪಲ್ಲೆಗಳನ್ನು, ಎಣ್ಣೆ ಹಾಗೂ ತುಪ್ಪದಲ್ಲಿ ಕರಿದ ಪದಾರ್ಥಗಳನ್ನು, ಅನ್ನವನ್ನು ವಿಶೇಷವಾಗಿ ಮೊಸರನ್ನವನ್ನು

೫೩ ಎಳ್ಳಿನಿಂದ ಕೂಡಿದ ಅನ್ನ, ಬೆಲ್ಲದ ಅನ್ನ, ಹುಣಸೆರಸಯುಕ್ತ ಅನ್ನ, ಮೆಣಸು ಇತ್ಯಾದಿಗಳಿಂದ ಕೂಡಿದ ಮೋದಕಗಳು ಜೊತೆಗೆ ಹುಣಸೆ ಗೊಜ್ಜು,

೫೪ ದ್ರಾಕ್ಷಿಯ ರಸ, ಮಾವಿನ ರಸ, ನೆಲ್ಲಿಕಾಯಿಯ ರಸಗಳಿಂದ ಕೂಡಿದ ಈ ಎಲ್ಲ ವಿಧ ಅನ್ನಗಳಿಗಿಂತ ಮುದ್ಗಾನ್ನವೇ ಶ್ರೇಷ್ಠವಾದುದು.

೫೫ ಉತ್ತಮ ಬಂಗಾರವರ್ಣದ ಲವಣಯುಕ್ತ ಮುದ್ಗಾನ್ನ ಅಥವಾ ಸಕ್ಕರೆ ತುಪ್ಪದಿಂದ ಕೂಡಿದ

೫೬ ಮುದ್ಗಾನ್ನ, ಬೆಣ್ಣೆ, ಶುಂಠಿ, ಮೊಸರು, ಉಪ್ಪು ಮೊದಲಾದವುಗಳಿಂದ ಯುಕ್ತವಾದ ಮುದ್ಗಾನ್ನ ಮತ್ತು ತುಪ್ಪ ತೊವ್ವೆ ಸಹಿತವಾದ ಅನ್ನ,

ಶಾಲ್ಯೋದನಂ ಪಾಯಸಂ ಚ ಘೃತಸೂಪಸಮನ್ವಿತಮ್ ।
ಪಂಚಭಕ್ಷ್ಯಸಮೋಪೇತಂ ಚಿತ್ರಾನ್ನಂ ಸುಮನೋಹರಮ್ ॥೫೭॥

ಮುದ್ಗಾನ್ನಂ ಚ ವಿಶೇಷೇಣ ಸ ಸ್ಯಾದಾರ್ದ್ರಕಸಂಯುತಮ್ ।
ಗೋಧೂಮಪಾಯಸಂ ಕೃತ್ವಾ ಗೋಪಯಃಶರ್ಕರಾನ್ವಿತಮ್ ॥೫೮॥

ತಾಮ್ರಪಾತ್ರೇ ನ ಕರ್ತವ್ಯಂ ಪಾಯಸಂ ತು ಸುರಾಸಮಮ್ ।
ಕಾಂಸ್ಯಪಾತ್ರೇ ಮೃಣ್ಮಯೇ ವಾ ಕಾರಯೇದ್ ಬುದ್ಧಿಮಾನ್ನರಃ ॥೫೯॥

ನಾನಾಪಕ್ವಾನ್ನಸಂಯುಕ್ತಂ ನೈವೇದ್ಯಂ ಸುಮನೋಹರಮ್ ।
ಏವಂ ವೈ ಬಹುಶಃ ಕುರ್ಯಾತ್ ಮಾಸೇಽಸ್ಮಿನ್ ಚಾಪಸಂಜ್ಞಕೇ ॥೬೦॥

ತಸ್ಮಾದ್ ರಾಜೇಂದ್ರ ಕರ್ತವ್ಯಮಸ್ಮಿನ್ ಮಾಸೇ ವಿಶೇಷತಃ ।
ಪುನಃ ಪಪ್ರಚ್ಛ ಗೋಪಾಲಂ ಧರ್ಮಂ ಧರ್ಮಭೃತಾಂ ವರಃ ॥೬೧॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ
ಪಂಚಮೋಽಧ್ಯಾಯಃ ॥

---

೫೭ ಪಾಯಸ, ಇತ್ಯಾದಿಗಳು ಮತ್ತು ಪಂಚಭಕ್ಷ್ಯಗಳು ಮನೋಹರವಾದ ಚಿತ್ರಾನ್ನವನ್ನು,

೫೮ ಹಸಿಶುಂಠಿಯಿಂದ ಸಹಿತವಾದ ಮುದ್ಗಾನ್ನ ಹಾಗೂ ಗೋವಿನ ಹಾಲು ಸಕ್ಕರೆಗಳಿಂದ ಕೂಡಿದ ಗೋಧಿಯ ಪಾಯಸವನ್ನು ಮಾಡಬೇಕು.

೫೯ ಪಾಯಸವನ್ನೆಂದೂ ತಾಮ್ರದ ಪಾತ್ರೆಯಲ್ಲಿ ತಯಾರಿಸಕೂಡದು. ತಾಮ್ರಪಾತ್ರೆಯಲ್ಲಿ ತಯಾರಿಸಿದ ಪಾಯಸವು ಸುರೆಗೆ (ಮದ್ಯ) ಸಮನಾದುದು. ಬುದ್ಧಿವಂತನಾದವನು ಕಂಚಿನ ಪಾತ್ರೆಯಲ್ಲಾಗಲೀ ಮಣ್ಣಿನ ಪಾತ್ರೆಯಲ್ಲಾಗಲೀ ಪಾಯಸ ತಯಾರಿಸಬೇಕು.

೬೦ ಅನೇಕರೀತಿಯ ಪಕ್ವಾನ್ನಗಳಿಂದ ಕೂಡಿದ ನೈವೇದ್ಯವನ್ನು ಧನುರ್ಮಾಸದಲ್ಲಿ ಸಮರ್ಪಿಸಬೇಕು.

೬೧ ಈ ಕಾರಣಗಳಿಂದ ಧನುರ್ಮಾಸದಲ್ಲಿ ವಿಶೇಷ ವಿಧಾನದಿಂದ ಆಚರಿಸಬೇಕು. ಇದನ್ನು ಕೇಳಿ ಸಂತುಷ್ಟನಾದ ಧರ್ಮಿಷ್ಠನಾದ ಯುಧಿಷ್ಠಿರನು ಶ್ರೀಕೃಷ್ಣನನ್ನು ಮತ್ತೆ ಪ್ರಶ್ನೆ ಮಾಡಿದನು.

॥ ಇಲ್ಲಿಗೆ ಐದನೇ ಅಧ್ಯಾಯವು ಮುಗಿಯಿತು ॥

# ಅಥ ಷಷ್ಠೋಽಧ್ಯಾಯಃ

ಯುಧಿಷ್ಠಿರ ಉವಾಚ-

ಭಗವನ್ ಸರ್ವಧರ್ಮಜ್ಞ ಪುರಾಣಪುರುಷೋತ್ತಮ ।
ಪಾಕಂ ಶುದ್ಧಂ ಸ್ವಯಂ ಕೃತ್ವಾ ಕುರ್ಯಾತ್ಪೂಜಾಂ ಪರಾತ್ಮನೇ ॥೧॥

ತೇನ ತುಷ್ಟೋ ಜಗನ್ನಾಥೋ ಭಕ್ತಾನಾಂ ಮುಕ್ತಿದಾಯಕಃ ।
ಇತ್ಯಹಂ ಬೋಧಿತೋ ದೇವ ಕೃಪಯಾ ಕೃಷ್ಣ ಯಾದವ ॥೨॥

ಕಥಂ ಪೂಜಾಪಿ ಕರ್ತವ್ಯಾ ಕಥಂ ವಿಷ್ಣುಃ ಪ್ರಸೀದತಿ ।
ಏತನ್ಮೇ ವಿಸ್ತರಾದ್ ಬ್ರೂಹಿ ದೇವದೇವ ಜಗತ್ಪತೇ ॥೩॥

ಶ್ರೀ ಕೃಷ್ಣ ಉವಾಚ-

ರಾಜನ್ ತ್ವಯಾ ಪೃಷ್ಟಮಿದಂ ಯದೇತಲ್ಲೋಕಕಾರಣಮ್ ।
ತತ್ಸರ್ವಮಖಿಲಂ ರಾಜನ್ ವದಾಮಿ ತವ ಸುವ್ರತ ।
ಸರ್ವಮಾಸೇಷು ರಾಜೇಂದ್ರ ಅನ್ನಪಾಕಾದಿ ಕಾರಯೇತ್ ॥೪॥

ಕುರ್ವೀತ ಪಾಕಂ ಸ್ವಯಮೇವ ಶಕ್ತಃ
ದಾರೈಃ ಸುಪುತ್ರೈರಥವಾ ಸುಶಿಷ್ಯೈಃ
ಸುಬಂಧುಭಿಃ ಶ್ರೋತ್ರಿಯಮುಖ್ಯವರ್ಗೈಃ
ಕೃತೋ ಹಿ ಪಾಕಃ ಸ್ವಯಮೇವ ಪಾಕಃ ॥೫॥

---

೧ ಕ್ಷರಾಕ್ಷರ ಪುರುಷಗಿಂತ ಉತ್ತಮನೂ, ಅನಾದಿಯೂ ಆದ, ಸರ್ವಧರ್ಮಗಳನ್ನು ತಿಳಿದ ಹೇ ಭಗವಂತನೇ! ಶುದ್ಧವಾದ ಅಡುಗೆಯನ್ನು ತಾನೇ ಮಾಡಿ ಪರಮಾತ್ಮನ ಪೂಜೆಯನ್ನು ಮಾಡಬೇಕು.

೨ ಆ ಪೂಜೆಯಿಂದ ಪ್ರೀತನಾದ ಜಗನ್ನಾಥನು ಭಕ್ತರಿಗೆ ಮುಕ್ತಿ ನೀಡುತ್ತಾನೆ. ಹೀಗೆಂದು ನೀನು ಉಪದೇಶ ಮಾಡಿರುವಿ.

೩ ಸಮಸ್ತಪ್ರಪಂಚಕ್ಕೆ ಸ್ವಾಮಿಯಾದ, ದೇವತೆಗಳಿಗೆ ಒಡೆಯನಾದ ಪರಮಾತ್ಮನೇ! ನಿನ್ನ ಪೂಜೆ ಹೇಗೆ ಮಾಡಬೇಕು? ವಿಷ್ಣುವಿನ ಒಲುಮೆಯನ್ನು ಹೇಗೆ ಪಡೆಯಬೇಕು? ಇದನ್ನು ನನಗೆ ವಿಶದವಾಗಿ ತಿಳಿಸಬೇಕು.

೪ ರಾಜನೇ! ಲೋಕಕ್ಕೆ ಹಿತವಾಗಲಿ ಎಂಬ ದೃಷ್ಟಿಯಿಂದ ನೀನು ಈ ಪ್ರಶ್ನೆಯನ್ನು ಕೇಳಿರುವಿ. ಆದ್ದರಿಂದ ಅದೆಲ್ಲವನ್ನು ನಿನಗೆ ಹೇಳುವೆನು. ಎಲ್ಲ ಮಾಸಗಳಲ್ಲಿಯೂ ಅನ್ನಾದಿಗಳನ್ನು ಮಾಡಿ ಭಗವಂತನಿಗೆ ನಿವೇದಿಸಬೇಕು.

೫ ರಾಜನೇ! ಶಕ್ತನಾದವನು ತಾನೇ ಪಾಕವನ್ನು ತಯಾರಿಸಬೇಕು. ಅದಾಗದಿದ್ದರೆ

ಸ್ವಹಸ್ತಾತ್ ಪಕ್ವಮಶ್ನೀಯಾತ್ ಪತ್ನ್ಯಾ ವಾ ಯತ್ತು ಪಚ್ಯತೇ ।
ಅನ್ಯೈರ್ನರೈಸ್ತು ಪಕ್ವಾನ್ನಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥೬॥

ಸುಹೃದನ್ನಂ ಗುರೋರನ್ನಂ ಯದನ್ನಂ ಮಾತುಲಸ್ಯ ಚ ।
ಶ್ವಶುರಾನ್ನಂ ಶ್ರೋತ್ರಿಯಾನ್ನಂ ಪರಾನ್ನಂ ನ ವಿದುರ್ಬುಧಾಃ ॥೭॥

ಯಸ್ತು ಸರ್ವಾನ್ ಪರಿತ್ಯಜ್ಯ ಸ್ವಯಂ ಪಾಕಂ ಕರೋತಿ ವೈ ।
ಯಸ್ತು ಸರ್ವತ್ರ ಭುಂಜೀತ ತಾವುಭೌ ಪತಿತೌ ಸ್ಮೃತೌ ॥೮॥

ಪತ್ನೀಪಾಕಂ ಪುತ್ರೀಪಾಕಂ ಸ್ನುಷಾಪಾಕಂ ತಥೈವ ಚ ।
ಗುರುಮಾತುಲಯೋಃ ಪಾಕೌ ಸ್ವಯಂ ಪಾಕಂ ಚ ಪಂಚಧಾ ॥೯॥

ಮಾತಾ ಚ ಭಗಿನೀ ಜ್ಯೇಷ್ಠಾ ಪಿತೃವ್ಯಾನಾಂ ಚ ಪತ್ನಯಃ ।
ಜ್ಯೇಷ್ಠಭ್ರಾತುಶ್ಚ ಪತ್ನೀ ವೈ ಕನಿಷ್ಠಾ ಭಗಿನೀ ತಥಾ ॥೧೦॥

---

ಪತ್ನಿ, ಪುತ್ರರು ಅಥವಾ ಒಳ್ಳೆಯ ಶಿಷ್ಯರಿಂದಾಗಲೀ ಪಾಕವನ್ನು ಸಿದ್ಧಪಡಿಸಬೇಕು. ಒಳ್ಳೆಯ ಬಂಧುವರ್ಗದವರೂ, ಶ್ರೋತ್ರಿಯರೂ ಮಾಡಿದ ಪಾಕವು ತಾನು ಮಾಡಿದ ಪಾಕವೆಂದೇ ತಿಳಿಯಬೇಕು.

೬ ತಾನು ಮಾಡಿದ ಅಡುಗೆಯನ್ನಾಗಲೀ ಅಥವಾ ತನ್ನ ಪತ್ನಿಯು ಮಾಡಿದ ಅಡುಗೆಯನ್ನಾಗಲೀ ಸ್ವೀಕರಿಸಬೇಕು. ಬೇರೆಯವರು ಮಾಡಿದ ಅನ್ನವನ್ನು ಸ್ವೀಕರಿಸಿದವನು ಚಾಂದ್ರಾಯಣವನ್ನು ಆಚರಿಸಬೇಕು.

೭ ಆದರೆ ಗೆಳೆಯನ ಮನೆ, ಗುರುಗಳ ಮನೆ, ಸೋದರಮಾವನ ಮನೆ, ಮಾವನ ಮನೆ (ಹೆಂಡತಿಯ ತಂದೆ), ಶ್ರೋತ್ರಿಯರ ಮನೆಗಳಲ್ಲಿಯ ಅನ್ನವನ್ನು ಪರಾನ್ನವೆಂದು ಜ್ಞಾನಿಗಳು ತಿಳಿಯುವುದಿಲ್ಲ.

೮ ಯಾವನು ಎಲ್ಲರನ್ನು ತ್ಯಾಗ ಮಾಡಿ ತಾನೇ ಪಾಕ ಮಾಡಿ ಕೊಳ್ಳುವನೋ, ಹಾಗೂ ಯಾವನು ವಿಚಾರಿಸದೇ ಎಲ್ಲ ಕಡೆ ಭೋಜನ ಮಾಡುವನೋ ಅವರಿಬ್ಬರೂ ಪತಿತರೇ ಸರಿ.

೯ ಹೆಂಡತಿ, ಮಗಳು, ಸೊಸೆ ಮಾಡಿದ ಅಡುಗೆ ಹಾಗೂ ಗುರುಗಳ ಮನೆಯ ಮತ್ತು ಸೋದರ ಮಾವನ ಮನೆಯ ಪಾಕ ಹೀಗೆ ಐದು ತರಹದ ಪಾಕವನ್ನು ಸ್ವಯಂಪಾಕವೆಂದೇ ತಿಳಿಯಬೇಕು.

೧೦ ತನ್ನ ತಾಯಿ, ಹಿರಿಯ ಸಹೋದರಿ, ತನ್ನ ತಂದೆಯ ಸೋದರರ ಪತ್ನಿಯರು, ತನ್ನ ಹಿರಿಯ ಸೋದರನ ಪತ್ನಿ, ಕಿರಿಯ ಸೋದರಿ,

ಪಿತೃಷ್ವಸಾ ಮಾತೃಷ್ವಸಾ ದೌಹಿತ್ರೀ ಭಾಗಿನೇಯಕಾ ।
ಏತಾಭಿರ್ಜ್ಞಾತಿವರ್ಗೈಶ್ಚ ಪಾಕಂ ಶುದ್ಧಂ ಚ ಕಾರಯೇತ್ ॥೧೧॥

ಸುಮಂಗಲ್ಯಾ ವಿಶೇಷೇಣ ನೈವೇದ್ಯಂ ಪಕ್ವಮುತ್ತಮಮ್ ।
ಸುಮಂಗಲೀ ಸುಶೀಲಾ ಚ ಶೌಚಾಚಾರರತಾ ಸದಾ ॥೧೨॥

ಸುಸ್ನಾತಾ ಸುಭಗಾ ಚೈವ ಹರಿದ್ರಾಲೇಪಿನೀ ಸದಾ ।
ಸಿಂಧೂರಕುಂಕುಮಾದ್ಯೈಸ್ತು ವಿರಾಜಿತಮುಖಾಂಬುಜಾ ॥೧೩॥

ಶುಭ್ರಶುದ್ಧಾಂಬರಧರಾ ಸತ್ಕಂಚುಕವಿರಾಜಿತಾ ।
ನಾಸಾಭರಣಸಂಯುಕ್ತಾ ವೇಣೀಗುಂಫಿತಕೇಶಿಕಾ ॥೧೪॥

ಸರ್ವಾಭರಣಸಂಪನ್ನಾ ಪತಿಭಕ್ತಿಪರಾಯಣಾ ।
ಪತಿವ್ರತಾ ಮಹಾಭಾಗಾ ಪುತ್ರಿಣೀ ಸಸಹೋದರಾ ॥೧೫॥

---

೧೧ ತಂದೆಯ ಸೋದರಿಯರು, ತಾಯಿಯ ಸೋದರಿಯರು, ಮಗಳ ಮಗಳಾಗಲೀ, ಸೋದರ ಸೊಸೆ (ಅಕ್ಕ ತಂಗಿಯರ ಮಗಳು) ಯಾಗಲೀ ಇಂತಹ ಬಂಧುವರ್ಗದಲ್ಲಿ ಸೇರಿದ ಸುಮಂಗಲೀಸ್ತ್ರೀಯರಿಂದ ಪಾಕವನ್ನು ಮಾಡಿಸಿ ನೈವೇದ್ಯವನ್ನು ಮಾಡಬೇಕು.

೧೨ ಸುಮಂಗಲಿಯರಾದ ಸ್ತ್ರೀಯರಿಂದ ಉತ್ತಮ ಪಾಕವನ್ನು ಮಾಡಿಸಿ ನೈವೇದ್ಯ ಮಾಡಬೇಕು. ಆ ಸುಮಂಗಲಿಯು ಒಳ್ಳೆಯ ಸ್ವಭಾವವುಳ್ಳವಳೂ,

೧೩ ಶೌಚಾದಿ ಆಚಾರವುಳ್ಳವಳೂ, ಶಾಸ್ತ್ರೋಕ್ತ ರೀತಿಯಿಂದ ಸ್ನಾನ ಮಾಡಿದವಳೂ, ಸೌಭಾಗ್ಯ ದ್ರವ್ಯಗಳನ್ನು ಧರಿಸಿದವಳೂ, ಯಾವಾಗಲೂ ಅರಿಶಿನವನ್ನು ಧರಿಸಿದವಳೂ ಆಗಿರಬೇಕು. ಸಿಂಧೂರ, ಕುಂಕುಮಗಳಿಂದ ಶೋಭಿಸುವ ಮುಖವುಳ್ಳವಳೂ,

೧೪ ಸ್ವಚ್ಛವಾದ ಮಡಿಯ ವಸ್ತ್ರವನ್ನು ಧರಿಸಿದವಳೂ, ಉತ್ತಮ ಕುಪ್ಪುಸವನ್ನು ಧರಿಸಿದವಳೂ ಆಗಿರಬೇಕು. ಮೂಗುತಿಯನ್ನು ಧರಿಸಿ, ಕೂದಲುಗಳನ್ನು ಹೆರಳು ಹಾಕಿ ಕಟ್ಟಿಕೊಂಡಿರಬೇಕು. ಕೂದಲು ಅಡುಗೆಯಲ್ಲಿ ಬೀಳದಂತೆ ಎಚ್ಚರವಹಿಸಬೇಕು. ಕೂದಲಿನಿಂದ ಕೂಡಿದ ಅಡುಗೆಯು ಭಗವಂತನ ಸಮರ್ಪಣೆಗೆ ನಿಷಿದ್ಧವಾಗಿದೆ.

೧೫ ಎಲ್ಲ ಆಭರಣಗಳನ್ನು ಧರಿಸಿರಬೇಕು. ಪತಿಭಕ್ತಿಯಿಂದ ಕೂಡಿದವಳಾಗಿರಬೇಕು. ಪತಿವ್ರತೆಯೂ, ಪುತ್ರನನ್ನು ಪಡೆದವಳು, ಸಹೋದರ (ಅಣ್ಣ ಅಥವಾ ತಮ್ಮ) ನನ್ನು ಹೊಂದಿದವಳೂ ಆಗಿರಬೇಕು.

**ಹಸನ್ಮುಖೀ ಚಾರುದತೀ ಶಾಂತಾ ಕಮಲಲೋಚನಾ ।**
**ಗುಣಜ್ಞಾ ಸೌಮ್ಯರೂಪಾ ಚ ಸದಾ ಮಂಜುಲಭಾಷಿಣೀ ॥೧೬॥**

**ಧರ್ಮಾಣಾಂ ಸಾನುಕೂಲಾ ಚ ಭರ್ತುಶ್ಚ ಪ್ರಿಯಕಾರಿಣೀ ।**
**ಸತ್ಕಥಾಶ್ರವಣೋಪೇತಾ ಬ್ರಾಹ್ಮಣಪ್ರಿಯವಾದಿನೀ ॥೧೭॥**

**ವಿಷ್ಣುಭಕ್ತ್ಯೈಕಚಿತ್ತಾ ಚ ವಿಷ್ಣುದಾಸ್ಯೈಕಲೋಲುಪಾ ।**
**ಸಮ್ಮಾರ್ಜನ್ಯೈಃ ರಂಗವಲ್ಯಾ ತುಲಸೀಸೇವನೋತ್ಸುಕಾ ॥೧೮॥**

**ಲಕ್ಷವರ್ತಿಕೃತ್ಯೈಃ ದೀಪ್ಯೈಃ ಭಗವದ್‌ವ್ರತಕಾರಿಣೀ ।**
**ಏತಾದೃಶಗುಣೋಪೇತಾ ಸುಮಂಗಲಶುಭಾನನಾ ॥೧೯॥**

**ಏವಂ ಸುಮಂಗಲಾ ಪ್ರೋಕ್ತಾ ಮಮ ಪ್ರೀತಿಕರೀ ಸದಾ ।**
**ತಯೈವ ಕೃತನೈವೇದ್ಯಂ ಪಕ್ವಂ ಚ ಸುಮನೋಹರಮ್ ॥೨೦॥**

---

೧೬ ಶಾಂತಳಾಗಿರಬೇಕು. ರೋದಿಸುತ್ತಿರಬಾರದು. ನಗುಮುಖದಿಂದ ಅಡುಗೆಯನ್ನು ತಯಾರಿಸಬೇಕು. ಸದ್ಗುಣಗಳನ್ನು ಅರಿತವಳೂ, ಸೌಮ್ಯವಾದ ರೂಪವುಳ್ಳವಳೂ, ಯಾವಾಗಲೂ ಹಿತಕರವಾದ ಮಾತನ್ನಾಡುವವಳಾಗಿರಬೇಕು.

೧೭ ಪತಿಗೆ ಪ್ರಿಯವನ್ನು ಆಚರಿಸುವವಳೂ ಹಾಗೂ ಧರ್ಮಾಚರಣೆಯಲ್ಲಿ ಅನುಕೂಲಳೂ ಆಗಿರಬೇಕು. ಭಗವಂತನ ಭಗವದ್ಭಕ್ತರ ಮಹಿಮೆಗಳನ್ನು ತಿಳಿಸುವಂಥ ಶ್ರೇಷ್ಠವಾದ ಕಥೆಗಳನ್ನು ಕೇಳುತ್ತಿರಬೇಕು. ಬ್ರಾಹ್ಮಣರಿಗೆ ಸಂತೋಷವಾಗುವಂತೆ ಮಾತನಾಡಬೇಕು.

೧೮ ಮನಸ್ಸಿನಲ್ಲಿ ವಿಷ್ಣುಭಕ್ತಿ ತುಂಬಿರಬೇಕು. ವಿಷ್ಣುವಿನ ದಾಸ್ಯವನ್ನು ಪಡೆಯಲು ಅತ್ಯಂತ ಆಸಕ್ತಳಾಗಿರಬೇಕು. ಗೋಮಯದಿಂದ ಸಾರಿಸಿ, ರಂಗವಲ್ಲಿಯನ್ನಿಟ್ಟು, ತುಲಸಿಯನ್ನು ಸೇವಿಸಬೇಕು.

೧೯ ಲಕ್ಷದೀಪವೇ ಮೊದಲಾದ ವ್ರತಗಳನ್ನು, ಭಗವಂತನಿಗೆ ಪ್ರಿಯವಾದ ವಿಹಿತವಾದ ವ್ರತಗಳನ್ನು ಆಚರಿಸಬೇಕು. ಈ ರೀತಿಯ ಗುಣವುಳ್ಳವಳು ಹಾಗೂ ಮಂಗಲಕರ ಮುಖವುಳ್ಳವಳು,

೨೦ ಸುಮಂಗಲೆಯೆಂದು ಕರೆಯಲ್ಪಡುತ್ತಾಳೆ. ಅಂಥ ಸುಮಂಗಲಿಯು ನನಗೆ ಯಾವಾಗಲೂ ಪ್ರೀತಿಯನ್ನುಂಟು ಮಾಡುತ್ತಾಳೆ. ಇಂತಹ ಸುಮಂಗಲಿ ಸ್ತ್ರೀಯು ತಯಾರಿಸಿದ ಪಕ್ವವಾದ, ಮನೋಹರವಾದ,

**ಗೃಹ್ಣಾಮಿ ಪ್ರೀತಿಸಂಯುಕ್ತಸ್ತುತುಷ್ಟೋಽಹಂ ನ ಸಂಶಯಃ ।**
**ದದಾಮಿ ವಿಪುಲಾನ್ ಭೋಗಾನ್ ಪುತ್ರಪೌತ್ರಾದಿಸಂಪದಃ ॥೨೦॥**

**ತೇಷಾಂ ಚ ಮುಕ್ತಿಂ ದಾಸ್ಯಾಮಿ ಅಂತೇ ಸಾಯುಜ್ಯಮುತ್ತಮಮ್ ।**
**ತತಸ್ತ್ಯಾಜ್ಯಂ ಚ ವಕ್ಷ್ಯಾಮಿ ಶ್ರುಣು ರಾಜನ್ ಯುಧಿಷ್ಠಿರ ॥೨೨॥**

**ಅಕಂಚುಕೀ ತು ನಾರೀಣಾಂ ಹರಿದ್ರಾಲೇಪವರ್ಜಿತಾ ।**
**ಧೌತದಂತವಿಹೀನಾ ಚ ಅಸ್ನಾತಾ ತ್ವಶುಭಾ ಶಠಾ ॥೨೩॥**

**ಹರಿದ್ರಾಕುಂಕುಮೈರ್ಹೀನಾ ಮಲಿನಾಂಬರಧಾರಿಣೀ ।**
**ಶೌಚಾಚಾರವಿಹೀನಾ ಚ ಭರ್ತೃವಿದ್ವೇಷಿಣೀ ಸದಾ ॥೨೪॥**

**ಅಕ್ಷತಾ ಗರ್ಭಿಣೀ ವಂಧ್ಯಾ ಗತರಕ್ತಾ ರಜಸ್ವಲಾ ।**
**ಅಪತಿಃ ಕುಲಟಾ ಚೈವ ತ್ವೇತಾ ವೈ ಪಾಕದೂಷಿತಾಃ ॥೨೫॥**

**ಯಾ ನಾರೀ ವಿಧವಾ ಶೀರ್ಷಂ ನ ಮುಂಡಯತಿ ಮೂಢಧೀಃ ।**
**ಶುಕ್ಲಾಂಬರಾವೃತಾ ಯಾ ಸಾ ಪಚ್ಯತೇ ನರಕಾಗ್ನಿಷು ॥೨೬॥**

---

೨೦ ನೈವೇದ್ಯವನ್ನೇ ಪ್ರೀತಿಯಿಂದ ಸ್ವೀಕರಿಸಿ ತೃಪ್ತನಾಗುವೆನು. ಇದರಲ್ಲಿ ಸಂದೇಹ-ವಿಲ್ಲ. ಹೀಗಿರುವ ಉತ್ತಮ ಸ್ತ್ರೀಯರಿಗೆ ವಿಪುಲವಾದ ಭೋಗಭಾಗ್ಯಗಳನ್ನು, ಮಕ್ಕಳು, ಮೊಮ್ಮಕ್ಕಳು ಮುಂತಾದ ಸಂತಾನ ಸಂಪತ್ತನ್ನು ನೀಡುವೆನು.

೨೨ ಇಷ್ಟೇ ಅಲ್ಲ, ಕೊನೆಗೆ ನನ್ನ ಸಾಯುಜ್ಯರೂಪ ಮುಕ್ತಿಯನ್ನು ನೀಡುವೆನು. ಹೇ ಮಹಾರಾಜ ಯುಧಿಷ್ಠಿರ! ಇನ್ನು ಯಾರು ಮಾಡಿದ ಪಾಕವು ಅಗ್ರಾಹ್ಯವೆಂದು ಹೇಳುತ್ತೇನೆ ಆಲಿಸು.

೨೩ ಕಂಚುಕ (ಕುಪ್ಪಸ) ವನ್ನು ಧರಿಸದ ಹಾಗೂ ಅರಿಶಿನವನ್ನು ಲೇಪಿಸಿಕೊಳ್ಳದ, ಹಲ್ಲುಗಳನ್ನು ಉಜ್ಜದವಳು, ಸ್ನಾನವನ್ನು ಮಾಡದೇ ಅಮಂಗಳವಾಗಿರುವವಳು, ಅಹಂಕಾರಿಯಾದವಳು,

೨೪ ಅರಿಶಿನ, ಕುಂಕುಮವನ್ನು ಧರಿಸದವಳು, ಹೊಲಸಾದ ಬಟ್ಟೆಗಳನ್ನು ಧರಿಸಿದವಳು, ಶೌಚವಿಧಾನವನ್ನು ಸರಿಯಾಗಿ ಆಚರಿಸದವಳು, ಯಾವಾಗಲೂ ಪತಿಯನ್ನು ದ್ವೇಷಿಸುವವಳು,

೨೫ ಪತಿಯನ್ನು ಸೇರದವಳು, ಗರ್ಭಿಣಿಯಾದವಳು, ಸಂತಾನವಿಲ್ಲದವಳು, ರಜಸ್ವಲೆಯಾದವಳು, ಮದುವೆಯಾಗದವಳು, ವ್ಯಭಿಚಾರಿಣಿಯು, ಇವರು ಮಾಡಿದ ಪಾಕವು ದೂಷಿತವಾದುದು.

೨೬ ಪತಿಯ ಮರಣದ ನಂತರವೂ ಕೇಶವನ್ನು ಧಾರಣ ಮಾಡಿದ, ಬಣ್ಣದ ಅಂಚು

ತದನ್ನಂ ಬ್ರಾಹ್ಮಣೋ ಭುಕ್ತ್ವಾ ಮದ್ಯಪಾನಕೃತಂ ಚರೇತ್ ।
ಸಕೇಶಾ ವಿಧವಾ ಶುಕ್ಲವಸ್ತ್ರಾ ವಾ ಪರಿವೇಷಯೇತ್ ।
ತದನ್ನಂ ಮಾಂಸತುಲ್ಯಂ ಸ್ಯಾತ್ ಪಾನೀಯಂ ಮದಿರಾಸಮಮ್ ॥೨೭॥

ವಿಧವಾ ಧಾರಯೇತ್ ಕೇಶಾನ್ ಶೌಚಂ ಯಾ ತು ನ ಕಾರಯೇತ್ ।
ಸರ್ವಕರ್ಮಸು ಸಾಽನರ್ಹಾ ಚಂಡಾಲೀ ಬ್ರಹ್ಮಘಾತಕೀ ॥೨೮॥

ಸಕಂಚುಕಯತಿಂ ದೃಷ್ಟ್ವಾ ಅಕಂಚುಕಸುವಾಸಿನೀಮ್ ।
ಸಕೇಶಾಂ ವಿಧವಾಂ ದೃಷ್ಟ್ವಾ ಸಚೈಲಂ ಸ್ನಾನಮಾಚರೇತ್ ॥೨೯॥

ವಿಧವಾ ಚೈವ ವಂಧ್ಯಾ ಚ ಅಪುತ್ರಾ ಮೃತಪುತ್ರಿಣೀ ।
ವೃಷಲೀ ಋತುಹೀನಾ ಚ ಕೃದ್ಧಾ ಚ ಪತಿನಿಂದಿತಾ ॥೩೦॥

ದುರ್ಮುಖೀ ನಿಷ್ಠುರೀ ಚೈವ ಸದಾ ರೋದನಕಾರಿಣೀ ।
ಬ್ರಾಹ್ಮಣಾನ್ ದೂಷಯಂತೀ ವೈ ವಿಷ್ಣುನಿಂದಾಂ ಕರೋತಿ ಯಾ ॥೩೧॥

---

ಇಲ್ಲದ ಕೇವಲ ಬಿಳಿ ವಸ್ತ್ರವನ್ನು ಧರಿಸಿದ ಸಧವಾ ಸ್ತ್ರೀ ಇವರೆಲ್ಲರೂ ನರಕದಲ್ಲಿ ಬೀಳುತ್ತಾರೆ.

೨೭ ಇಂಥವರು ತಯಾರಿಸಿದ ಅನ್ನವನ್ನು ಭೋಜನ ಮಾಡಿದ ಬ್ರಾಹ್ಮಣನು ಮದ್ಯಪಾನ ಮಾಡಿದ ಪಾಪವನ್ನು ಹೊಂದುವನು. ಸಕೇಶಳಾದ ವಿಧವಾಸ್ತ್ರೀ, ಕೇವಲ ಬಿಳಿಯ ಬಟ್ಟೆಗಳನ್ನು ಧರಿಸಿದ ಸಧವಾ ಸ್ತ್ರೀ ಬಡಿಸಿದ ಅನ್ನವು ಮಾಂಸಕ್ಕೆ ಸಮಾನವಾಗುತ್ತದೆ. ಅವರು ಬಡಿಸಿದ ನೀರು ಮದ್ಯಕ್ಕೆ ಸಮವಾದುದು.

೨೮ ಸಕೇಶಳಾದ ವಿಧವೆಯು ಚಂಡಾಲ ಸ್ತ್ರೀಯಂತೆ, ಬ್ರಹ್ಮಹತ್ಯೆಯನ್ನು ಮಾಡಿದ ಸ್ತ್ರೀಯಂತೆ, ಎಲ್ಲ ಕರ್ಮಗಳಲ್ಲಿ ಅನರ್ಹಳಾಗುತ್ತಾಳೆ.

೨೯ ಕಂಚುಕ (ಅಂಗಿ) ವನ್ನು ಧರಿಸಿದ ಯತಿ, ಕಂಚುಕ (ಕುಪ್ಪುಸ) ವನ್ನು ಧರಿಸದ ಮುತ್ತೈದೆ, ಕೇಶವನ್ನು ಧರಿಸಿದ ವಿಧವೆ, ಇವರನ್ನು ಕಂಡರೆ ಸಚೈಲ (ಉಟ್ಟ ಬಟ್ಟೆಯ ಮೇಲೆ) ಸ್ನಾನ ಮಾಡಬೇಕು.

೩೦ ವಿಧವೆ, ಮಕ್ಕಳಿಲ್ಲದವಳು, ಪುತ್ರಸಂತಾನವಿಲ್ಲದವಳು, ಮಕ್ಕಳನ್ನು ಕಳೆದು ಕೊಂಡವಳು, ಚಂಡಾಲರ ಸಂಪರ್ಕ ಮಾಡಿದವಳು, ಆರ್ತವವಿಲ್ಲದವಳು, ಕೋಪಿಷ್ಠಳು, ಪತಿಯಿಂದ ನಿಂದಿತಳಾದವಳು,

೩೧ ಅವಲಕ್ಷಣದ ಮುಖವುಳ್ಳವಳು, ನಿಷ್ಠುರವಾಗಿ ಮಾತನಾಡುವವಳು, ಯಾವಾಗಲೂ ಅಳುವವಳು, ಬ್ರಾಹ್ಮಣರನ್ನು ದೂಷಿಸುವವಳು, ವಿಷ್ಣುವನ್ನು ನಿಂದಿಸುವವಳು,

ಸತ್ಕಥಾರಹಿತಾ ನಿತ್ಯಂ ಲೋಕವಾರ್ತಾ ಪ್ರಿಯಂಕರೀ ।
ದೇವಾಲಯಂ ನ ದೃಷ್ಟ್ವಾಪಿ ವೃಥಾ ಗ್ರಾಮಪ್ರದಕ್ಷಿಣಾ ||೩೨||

ಏತಾಭಿಶ್ಚ ಕೃತಂ ಪಾಕಂ ನ ಗೃಹ್ಣಾಮಿ ಕದಾಚನ ।
ಅಪಕ್ವಮತಿಪಕ್ವಂ ಚ ಕಟುಕ್ಷಾರಮಶುದ್ಧಕಮ್ ||೩೩||

ಕೇಶಕೀಟಾದಿಭಿರ್ದುಷ್ಟಂ ನ ಗ್ರಾಹ್ಯಂ ಮಮ ಚಾಪ್ರಿಯಮ್ ।
ಪಾಕಕಾಲೇ ನ ಭಾಷೇತ ಶೂದ್ರಾದೀಂಶ್ಚ ರಜಸ್ವಲಾಮ್ ||೩೪||

ಮ್ಲೇಚ್ಛಾದೀನ್ ಶ್ವಪಚಾನ್ ದುಷ್ಟಾನ್ ಕ್ರೂರಾಂಶ್ಚೈವ ಶಠಾದಿಕನ್ ।
ಸ್ಪರ್ಶಂ ಚೈವ ನ ಕುರ್ವೀತ ಪಾಕಕಾಲೇ ವಿಮೂಢಧೀಃ ||೩೫||

---

೩೨ ಭಗವಂತನ ವಾರ್ತೆಯನ್ನು ಕೇಳದೇ, ಲೋಕದ ಹಾಳುಹರಟೆಯೇ ಪ್ರಿಯವಾದವಳು, ದೇವಾಲಯಗಳಿಗೆ ಎಂದಿಗೂ ಹೋಗದೇ ವ್ಯರ್ಥವಾಗಿ ಊರನ್ನು ಸುತ್ತುವವಳು,

೩೩ ಇಂತಹ ಸ್ತ್ರೀಯರಿಂದ ಮಾಡಲ್ಪಟ್ಟ ಪಾಕವನ್ನು ನಾನೆಂದಿಗೂ ಸ್ವೀಕರಿಸುವುದಿಲ್ಲ. ಬೇಯದಿರುವುದು, ಅತಿಯಾಗಿ ಬೆಂದಿರುವುದು, ಅತಿ ಕಟುವಾದ (ಸಾಸಿವೆ ಮುಂತಾದವುಗಳಿಂದ ಕೂಡಿದ), ಅತ್ಯಂತ ಉಪ್ಪಾದ, ಅಶುದ್ಧವಾದ ಆಹಾರವನ್ನು ನಾನೆಂದಿಗೂ ಸ್ವೀಕರಿಸುವುದಿಲ್ಲ.

**ವಿಶೇಷ :**

ಕಟ್ವಾಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।
ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ ಗೀತಾ - ೧೭-೯

ಅತ್ಯಂತ ಖಾರ, ಹುಳಿ, ಉಪ್ಪಿನಿಂದ ಕೂಡಿದ ಬಹಳ ಸುಡುವ ಅತಿತೀಕ್ಷ್ಣವಾದ ಶೋಕ ರೋಗಾದಿಗಳನ್ನು ಉಂಟು ಮಾಡುವ ಆಹಾರಗಳು, ರಾಜಸ ಸ್ವಭಾವವುಳ್ಳವರಿಗೆ ಪ್ರಿಯವಾದವುಗಳು. ಇಂತಹ ರಾಜಸ ಆಹಾರ ಪದಾರ್ಥಗಳನ್ನು ತ್ರಿಗುಣ ವರ್ಜಿತನಾದ ಭಗವಂತನು ಹೇಗೆ ಸ್ವೀಕರಿಸುವನು?

೩೪ ಕೂದಲು ಮತ್ತು ಹುಳುಗಳು ಇರುವ ಆಹಾರವೂ ಕೂಡ ನನಗೆ ಅಪ್ರಿಯವಾದುದು. ಅದನ್ನು ನಾನೆಂದಿಗೂ ಸ್ವೀಕರಿಸುವುದಿಲ್ಲ. ಅಡುಗೆ ಮಾಡುವಾಗ ಶೂದ್ರರ ಜತೆಗಾಗಲೀ ರಜಸ್ವಲೆಯ ಸಂಗಡವಾಗಲಿ ಮಾತನಾಡಬಾರದು.

೩೫ ಮ್ಲೇಚ್ಛರು, ಶ್ವಪಚರು, ದುಷ್ಟರು, ಕ್ರೂರಿಗಳು, ಅಹಂಕಾರಿಗಳು ಇಂತಹವರನ್ನು ಅಡುಗೆ ಮಾಡುವಾಗ ಮುಟ್ಟಿಸಿಕೊಳ್ಳಬಾರದು.

**ಸಮಾಪ್ನುಯಾದ್ರೌರವಂ ಚ ಅಂಧೇ ತಮಸಿ ಮಜ್ಜತಿ ।**
**ನೈವೇದ್ಯಾಯ ಸುಪಕ್ವಾನ್ನಂ ಕುರ್ವಂತಿ ಸುಮನೋಹರಮ್ ।**
**ತೇಷಾಂ ಮುಕ್ತಿಂ ಪ್ರದಾಸ್ಯಾಮಿ ನಾತ್ರ ಕಾರ್ಯಾ ವಿಚಾರಣಾ ॥೩೬॥**

**ತುಲಸೀಕಾಷ್ಠಮಾದಾಯ ವಹ್ನಿಂ ಕೃತ್ವಾ ಸುಬುದ್ಧಯಃ ।**
**ಪಾಕಂ ಚ ವಿಧಿವತ್ಕುರ್ಯುಃ ತೇ ನರಾಃ ಸ್ವರ್ಗಗಾಮಿನಃ ॥೩೭॥**

**ಏವಂ ಪಕ್ವಂ ಶುದ್ಧಮನ್ನಂ ಚ ರಾಜನ್**
**ತನ್ಮೇ ಗ್ರಾಹ್ಯಂ ಭಕ್ತಿಪಾಶೇನ ಯುಕ್ತೈಃ ।**
**ತೇಷಾಂ ದಾಸ್ಯೇ ಮತ್ಪದಂ ವಿಷ್ಣುಲೋಕಂ**
**ವಶೋಽಹಂ ವೈ ಸರ್ವದಾ ದಾಸವರ್ಯೇ ॥೩೮॥**

**ದೈವಾಧೀನಂ ಜಗತ್ಸರ್ವಂ ಮಂತ್ರಾಧೀನಂ ತು ದೈವತಮ್ ।**
**ತನ್ಮಂತ್ರೋ ಬ್ರಾಹ್ಮಣಾಧೀನಃ ಬ್ರಾಹ್ಮಣೋ ಮಮ ದೈವತಮ್ ॥೩೯॥**

**ತಸ್ಮಾತ್ಪ್ರಿಯತರಂ ರಾಜನ್ ಬ್ರಾಹ್ಮಣೇನ ತು ಕಾರಿತಮ್ ।**
**ಪ್ರೀತ್ಯಾ ನಿವೇದ್ಯಂ ಭೋಕ್ಷ್ಯಾಮಿ ನಾತ್ರ ಕಾರ್ಯಾ ವಿಚಾರಣಾ ॥೪೦॥**

---

೩೬ ಇಂಥವರನ್ನು ಸ್ಪರ್ಶ ಮಾಡಿ ನೈವೇದ್ಯವನ್ನು ತಯಾರಿಸಿದವನು ರೌರವ ನರಕವನ್ನು ಹೊಂದುವನು. ಅಲ್ಲದೇ ಕೊನೆಗೆ ತಮಸ್ಸಿನಲ್ಲೇ ಬೀಳುವನು. ನೈವೇದ್ಯಕ್ಕಾಗಿ ಸುಪಕ್ವವಾದ, ಮನೋಹರವಾದ ಪಾಕವನ್ನು ಮಾಡುವವರ ಪಾಪಗಳನ್ನು ಪರಿಹರಿಸುತ್ತೇನೆ. ಸಂಶಯವಿಲ್ಲ.

೩೭ ತುಲಸಿಯ ಕಾಷ್ಠದಿಂದ ಅಗ್ನಿಯನ್ನು ಸಿದ್ಧಪಡಿಸಿಕೊಳ್ಳಬೇಕು. ಆ ತುಲಸೀಕಾಷ್ಠದ ಅಗ್ನಿಯಲ್ಲಿ ಪಾಕವನ್ನು ಮಾಡಿದವರು ಸ್ವರ್ಗವನ್ನು ಪಡೆಯುವರು.

೩೮ ಹೀಗೆ ನನ್ನಲ್ಲಿ ಭಕ್ತಿಯುಕ್ತರಾದವರು ಮಾಡಿದ ಶುದ್ಧವಾದ ಅನ್ನವು ನನಗೆ ಗ್ರಾಹ್ಯವಾಗಿದೆ. ಅಂತಹ ಭಕ್ತರಿಗೆ ಶಾಶ್ವತವಾದ ವಿಷ್ಣುಲೋಕವನ್ನೇ ನೀಡುವೆನು. ಯಾವಾಗಲೂ ಆ ದಾಸೋತ್ತಮನ ವಶನಾಗಿರುವೆನು.

೩೯ ಈ ಪ್ರಪಂಚವೆಲ್ಲ ದೇವರ ಅಧೀನವಾಗಿದೆ. ಆ ದೈವವು ಮಂತ್ರದ ಅಧೀನವಾಗಿದೆ. ಆ ಮಂತ್ರವು ಬ್ರಾಹ್ಮಣರ ಅಧೀನವಾಗಿದೆ. ಅಂಥ ಬ್ರಾಹ್ಮಣರೇ ನನಗೆ ದೈವವಾಗಿದ್ದಾರೆ.

೪೦ ಆದುದರಿಂದ ಹೇ ರಾಜನೇ! ಬ್ರಾಹ್ಮಣರಿಂದ ತಯಾರಿಸಲ್ಪಟ್ಟ, ಪ್ರೀತಿಪೂರ್ವಕ (ಭಕ್ತಿಯಿಂದ) ನಿವೇದಿಸಿದ ಪಾಕವನ್ನು ಉಣ್ಣುವೆನು. ಇದರಲ್ಲಿ ಸಂದೇಹ ಬೇಡ.

ಪೂರ್ವಂ ವೈ ನಲರಾಜಸ್ತು ಸ್ವಯಂಪಾಕಂ ಚಕಾರ ವೈ ।
ಭೀಮಸೇನೋಽಕರೋತ್ಪಾಕಂ ವಿರಾಟನಗರೇ ಶುಭೇ ।
ಸೂಪಕಾರಸ್ತುವಿಖ್ಯಾತಃ ವಲ್ಲವಶ್ಚೇತಿ ವಿಶ್ರುತಃ ॥೪೦॥

ತಸ್ಮಾತ್ಸರ್ವಪ್ರಯತ್ನೇನ ಬ್ರಾಹ್ಮಣೇನ ತು ಕಾರಿತಮ್ ।
ನೈವೇದ್ಯಂ ಚೈವ ಗೃಹ್ಣಾಮಿ ಸತ್ಯಂ ಸತ್ಯಂ ನ ಸಂಶಯಃ ॥೪೨॥

ನೈವೇದ್ಯಸ್ಥಲಶುದ್ಧಿಶ್ಚ ಕರ್ತವ್ಯಾ ತು ಪ್ರಯತ್ನತಃ ।
ಸಮ್ಮಾರ್ಜನಂ ಚ ಕೃತ್ವಾ ವೈ ಗೋಮಯೇನೋಪಲಿಪ್ಯ ಚ ॥೪೩॥

ರಂಗವಲ್ಯಾ ಚ ಶೋಭಾಢ್ಯಂ ಕಾರಯಿತ್ವಾ ಪ್ರಯತ್ನತಃ ।
ತತ್ರೋಪರಿ ವಿನಿಕ್ಷಿಪ್ಯ ನೈವೇದ್ಯಂ ಸುಮನೋಹರಮ್ ॥೪೪॥

ತುಲಸೀದಲತಃ ಪ್ರೋಕ್ಷ್ಯ ಘೃತೇನ ಚ ಪೃಥಕ್ ಪೃಥಕ್
ತುಲಸೀದಲಂ ಚ ನಿಕ್ಷಿಪ್ಯ ಶುದ್ಧೋದಕಮಥಾರ್ಪಯೇತ್ ॥೪೫॥

ಮೂಲಮಂತ್ರಂ ಜಪೇಚ್ಚಾಪಿ ನಾರಾಯಣಮನುಸ್ಮರನ್ ।
ಪಾಕಕರ್ತ್ರೀಂ ಚ ಭೂದೇವೀಂ ಶ್ರೀದೇವೀಂ ಪರಿವೇಷಿಣೀಮ್ ॥೪೬॥

---

೪೦ ಹಿಂದೆ ನಳ ಮಹಾರಾಜನು ತಾನೇ ಪಾಕವನ್ನು ಮಾಡಿ ನಿವೇದಿಸಿದನು. ವಿರಾಟನಗರದಲ್ಲಿ ವಲ್ಲವನೆಂಬ ಹೆಸರಿನಿಂದ ಅಡುಗೆಯವನೆಂದು ವಿಖ್ಯಾತ-ನಾದ ಭೀಮಸೇನನು ಪಾಕವನ್ನು ತಯಾರಿಸಿದನು.

೪೨ ಆದುದರಿಂದ ಸರ್ವ ರೀತಿಯ ಯತ್ನಗಳಿಂದ ಬ್ರಾಹ್ಮಣರು ತಯಾರಿಸಿದ ನೈವೇದ್ಯವನ್ನೇ ನಾನು ಸ್ವೀಕರಿಸುವೆನು. ಇದು ನಿಶ್ಚಿತವಾದುದು. ಇದರಲ್ಲಿ ಯಾವುದೇ ಸಂದೇಹವಿಲ್ಲ.

೪೩ ನೈವೇದ್ಯವನ್ನು ಇರಿಸುವ ಸ್ಥಲವನ್ನು ಪ್ರಯತ್ನಪೂರ್ವಕವಾಗಿ ಶುದ್ಧಗೊಳಿಸ-ಬೇಕು. ಆ ಸ್ಥಳವನ್ನು ನೀರಿನಿಂದ ಪ್ರೋಕ್ಷಣೆ ಮಾಡಿ, ಗೋಮಯದಿಂದ ಸಾರಿಸಬೇಕು.

೪೪ ಮತ್ತು ರಂಗವಲ್ಲಿಯಿಂದ ಆ ಸ್ಥಳವು ಶೋಭಾಯಮಾನವಾಗುವಂತೆ ಮಾಡಿ ಅದರ ಮೇಲೆ ಶುದ್ಧವಾದ ನೈವೇದ್ಯದ ಪದಾರ್ಥಗಳನ್ನು ಇರಿಸಬೇಕು.

೪೫ ಪದಾರ್ಥಗಳ ಮೇಲೆ ತುಪ್ಪವನ್ನು ಹಾಕಬೇಕು. ತುಲಸೀದಲದ ನೀರಿನಿಂದ ಪ್ರೋಕ್ಷಣೆ ಮಾಡಿ ನೈವೇದ್ಯದ ಮೇಲೆ ತುಲಸಿಯನ್ನು ಹಾಕಿ ಶುದ್ಧೋದಕವನ್ನು ಸಮರ್ಪಿಸಬೇಕು.

೪೬ ನಾರಾಯಣನನ್ನು ಸ್ಮರಿಸುತ್ತ ಮೂಲಮಂತ್ರವನ್ನು ಜಪಿಸಬೇಕು. ಭೂದೇವಿಯು ಪಾಕ ಮಾಡುವಳೆಂದು ಶ್ರೀದೇವಿಯು ಬಡಿಸುವಳೆಂದು,

ಬ್ರಹ್ಮಾಣಂ ಪರಿಚರ್ಯಾರ್ಥಂ ಸರಸ್ವತ್ಯಾ ಚ ಸೇವಿತಮ್ ।
ಮುಖ್ಯಪ್ರಾಣಂ ಚ ತಿಷ್ಠಂತಂ ಸರ್ವಾನೇತಾಂಶ್ಚ ಸಂಸ್ಮರನ್ ॥೪೭॥

ನೈವೇದ್ಯಂ ಗೃಹ್ಯತಾಂ ಸರ್ವಂ ದೇವದೇವ ಜಗತ್ಪತೇ ।
ಏವಂ ವೈ ಪ್ರಾರ್ಥಯೇತಾಪಿ ದೇವದೇವಂ ತು ಶಾರ್ಙ್ಗಿಣಮ್ ॥೪೮॥

ಶ್ರೀನಿವಾಸ ನಮಸ್ತೇಽಸ್ತು ಮಹಾನ್ನೈವೇದ್ಯಮುತ್ತಮಮ್ ।
ಸಂಗೃಹಾಣ ಸುರಶ್ರೇಷ್ಠ ಭುಕ್ತಿಮುಕ್ತಿಪ್ರದೋ ಭವ ॥೪೯॥

ಮೂಲಮಂತ್ರಂ ಚ ವೈ ಜಪ್ತ್ವಾ ಶತಮಷ್ಟೋತ್ತರಂ ಚ ವೈ ।
ಸ್ವಾದೂದಕಂ ಶುಭಂ ದದ್ಯಾತ್ ತತಸ್ತಾಂಬೂಲಮುತ್ತಮಮ್ ॥೫೦॥

ಏಕಂ ತು ಕ್ರಮುಕಂ ಚೈವ ಪಂಚ ಪರ್ಣಾನಿ ವೈ ತಥಾ ।
ನಿಂಬಬೀಜಸಮಂ ಚೂರ್ಣಂ ತಾಂಬೂಲಂ ಪ್ರತಿಗೃಹ್ಯತಾಮ್ ॥೫೧॥

---

೪೭ ಸರಸ್ವತೀ ಸಹಿತರಾದ ಬ್ರಹ್ಮದೇವರು, ಭಾರತೀ ಸಹಿತರಾದ ವಾಯುದೇವರು ಭಗವಂತನ ಸೇವೆಗಾಗಿ ನಿಂತಿರುವರೆಂದು ಚಿಂತಿಸಬೇಕು.

೪೮ ಹೇ ಸಮಸ್ತ ಜಗದೊಡೆಯನೇ, ದೇವತೆಗಳಿಗೂ ದೇವನೆನಿಸಿದವನೇ ಈ ಎಲ್ಲ ನೈವೇದ್ಯ ಪದಾರ್ಥಗಳನ್ನು ಸ್ವೀಕರಿಸು ಎಂದು ಶಾರ್ಙ್ಗ ಧನುಸ್ಸನ್ನು ಧರಿಸಿರುವ ಭಗವಂತನನ್ನು ಪ್ರಾರ್ಥಿಸಬೇಕು.

೪೯ ಹೇ ಶ್ರೀನಿವಾಸನೇ, ಸುರರೊಡೆಯನೇ, ಭುಕ್ತಿ ಹಾಗೂ ಮುಕ್ತಿಯನ್ನು ನೀಡುವವನೇ ಉತ್ತಮವಾದ ಈ ಮಹಾನ್ನೈವೇದ್ಯವನ್ನು ಸ್ವೀಕರಿಸು.

೫೦ ನಂತರ ಪೂಜೆಯ ಸಮಗ್ರತೆಗಾಗಿ ನೂರೆಂಟು ಬಾರಿ ಮೂಲಮಂತ್ರವನ್ನು ಜಪಿಸಬೇಕು. ಮಧುರವಾದ ಜಲವನ್ನು ದೇವನಿಗೆ ಸಮರ್ಪಿಸಿ ನಂತರ ಉತ್ತಮವಾದ ತಾಂಬೂಲವನ್ನು ಸಮರ್ಪಿಸಬೇಕು.

೫೧ ಒಂದು ಅಡಿಕೆ ಐದು ವೀಳ್ಯದ ಎಲೆಗಳು ನಿಂಬೆಯ ಬೀಜದಷ್ಟು ಸುಣ್ಣ ಇವುಗಳಿಂದ ಕೂಡಿದ ತಾಂಬೂಲವನ್ನು ಸ್ವೀಕರಿಸು ಎಂದು ಪ್ರಾರ್ಥಿಸಬೇಕು.

ವಿಶೇಷ- ಇದು ಸಾಮಾನ್ಯವಾಗಿ ಹೇಳಿದ ತಾಂಬೂಲದ ಲಕ್ಷಣ. ಸಂಪತ್ತಿನ ಅನುಕೂಲವುಳ್ಳವರು ಇನ್ನೂ ಅನೇಕ ರೀತಿಯ ಕಾಚು, ಪಚ್ಚಕರ್ಪೂರ, ಸುಣ್ಣ, ಏಲಕ್ಕಿ, ಲವಂಗ, ಜಾಜಿಕಾಯಿ, ಮೊದಲಾದ ಪದಾರ್ಥಗಳನ್ನು ಸಮರ್ಪಿಸಬೇಕು.

**ಕರ್ಪೂರಾರಾರ್ತಿಕಂ ಕುರ್ಯಾತ್ ಪುಷ್ಪಾಂಜಲಿಮಥಾರ್ಪಯೇತ್ ।**
**ಷೋಡಶಾಪ್ಯುಪಚಾರಾಂಶ್ಚ ತಥಾ ರಾಜೋಪಚಾರತಃ ॥೫೨॥**

**ಛತ್ರಂ ಚ ಚಾಮರಂ ಚೈವ ವ್ಯಜನಂ ದರ್ಪಣಂ ತಥಾ**
**ಏವಂ ಪೂಜಾವಿಧಿಂ ಸಮ್ಯಕ್ ಕೃತ್ವಾ ತು ಪ್ರಾರ್ಥಯೇದ್ಧರಿಮ್ ॥೫೩॥**

**ನ ಜಾನೇ ಕರ್ಮ ಯತ್ಕಿಂಚಿನ್ನಾಪಿ ಲೌಕಿಕವೈದಿಕೇ ।**
**ನ ನಿಷೇಧವಿಧೀ ವಿಷ್ಣೋ ತವ ದಾಸೋಽಸ್ಮಿ ಕೇವಲಮ್ ॥೫೪॥**

**ನಮಸ್ಕಾರಂ ಚ ವೈ ಕುರ್ಯಾತ್ ಸ್ತೋತ್ರಾರಾಧನತತ್ಪರಃ ।**

---

ಪೂಗೀಫಲಂ ಸಖದಿರಚೂರ್ಣಕರ್ಪೂರಸಂಯುತಮ್ ।
ನಾಗವಲ್ಲೀದಲೈರ್ಯುಕ್ತಂ ತಾಂಬೂಲಂ ಗೃಹ್ಯತಾಂ ವಿಭೋ ।
ಇತಿ ತಾಂಬೂಲಕಂ ದದ್ಯಾನ್ನಾಕಸ್ಯೇತಿ ಚ ದಕ್ಷಿಣಾಮ್ ॥ ಪದ್ಯಮಾಲಾ ೧೦೮

ಆದರೆ ಸಮರ್ಪಿಸುವ ಯಾವ ಪದಾರ್ಥಗಳೂ ನಿಷಿದ್ಧವಾಗಿರಕೂಡದು. ವಿಹಿತವಾದ ಪದಾರ್ಥಗಳನ್ನು ಮಾತ್ರ ದೇವರಿಗೆ ಸಮರ್ಪಿಸಬೇಕು. ಅವಿಹಿತವಾದ ಪುಷ್ಪ-ಪತ್ರಾದಿಗಳನ್ನು ಸಮರ್ಪಿಸುವುದು ಅಪರಾಧವೆಂದು ವರಾಹಪುರಾಣದಲ್ಲಿ ಹೇಳಲಾಗಿದೆ.

ನತು ಅವಿಹಿತಪತ್ರಾದಿ । ತಸ್ಯಾಪರಾಧತ್ವೋಕ್ತೇರ್ವಾರಾಹಾದೌ ॥ ಗೀ.ಭಾ-೨೯

೫೨ ಅನಂತರ ಬೊಗಸೆಯಿಂದ ಹೂವುಗಳನ್ನು ಸಮರ್ಪಿಸಬೇಕು. ಕರ್ಪೂರ (ಬತ್ತಿ) ಆರತಿ ಹಾಗೂ ಷೋಡಶೋಪಚಾರಗಳು ಹಾಗೂ ಛತ್ರ, ಚಾಮರ, ದರ್ಪಣ, ವಾಹನ, ಗೀತ, ವಾದ್ಯ, ನೃತ್ಯ ಮೊದಲಾದ ರಾಜೋಪಚಾರಗಳಿಂದ ಪರಮಾತ್ಮನನ್ನು ಪೂಜಿಸಬೇಕು.

ನೈವೇದ್ಯಕ್ಕೆ ಮೊದಲು ಮಾಡಿದಂತೆ ನೈವೇದ್ಯದ ನಂತರವೂ ಧೂಪ ದೀಪ (ಮಂಗಳಾರತಿ) ಗಳನ್ನು ಸಮರ್ಪಿಸಬೇಕು.

೫೩ ಛತ್ರ, ಚಾಮರ, ವ್ಯಜನ (ಬೀಸಣಿಕೆ), ಕನ್ನಡಿ ಮುಂತಾದ ಎಲ್ಲ ಪೂಜಾ ವಿಧಿಗಳನ್ನು ಮಾಡಿ ನಂತರ ಶ್ರೀಹರಿಯನ್ನು ಪ್ರಾರ್ಥಿಸಬೇಕು.

೫೪ ಹೇ ಮಹಾ ವಿಷ್ಣುವೇ! ನನಗಾವ ಲೌಕಿಕ ಕರ್ಮಗಳನ್ನು ಮಾಡಲು ಬಾರದು. ವೈದಿಕ ಕರ್ಮಗಳನ್ನಂತೂ ನಾನರಿಯೆ, ನನಗೆ ಯಾವ ವಿಧಿ ಅಥವಾ ನಿಷೇಧಗಳ ಅರಿವಿಲ್ಲ. ನಾನು ಕೇವಲ ನಿನ್ನ ದಾಸನಾಗಿರುವೆ. ಎಂದು ಪ್ರಾರ್ಥಿಸಿ ಭಗವಂತನ ಸ್ತೋತ್ರಗಳನ್ನು ಪಠಿಸುತ್ತ ಭಗವಂತನಲ್ಲೇ ಮನವಿಟ್ಟು ನಮಸ್ಕರಿಸಬೇಕು.

**ಅಪರಾಧಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ ।**
**ತಾನಿ ಸರ್ವಾಣಿ ಮೇ ದೇವ ಕ್ಷಮಸ್ವ ಪುರುಷೋತ್ತಮ ।।೫೫।।**

**ಶಾಠ್ಯೇನಾಪಿ ನಮಸ್ಕಾರಂ ಕುರ್ವತಃ ಶಾರ್ಙ್ಗಪಾಣಯೇ ।**
**ಶತಜನ್ಮಾರ್ಜಿತಂ ಪಾಪಂ ನಶ್ಯತ್ಯೇವ ನ ಸಂಶಯಃ ।।೫೬।।**

**ತೀರ್ಥಕೋಟಿಸಹಸ್ರಾಣಿ ವ್ರತಕೋಟಿಶತಾನಿ ಚ ।**
**ನಾರಾಯಣಪ್ರಣಾಮಸ್ಯ ಕಲಾಂ ನಾರ್ಹಂತಿ ಷೋಡಶೀಮ್ ।।೫೭।।**

**ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।**
**ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣಪದೇ ಪದೇ ।।೫೮।।**

---

೫೫ ಹೇ ಪುರುಷೋತ್ತಮನೇ! ನಾನು ಹಗಲಿರುಳು ಸಾವಿರಾರು ಅಪರಾಧಗಳನ್ನು ಮಾಡುತ್ತಿರುತ್ತೇನೆ. ಆ ಎಲ್ಲ ಅಪರಾಧಗಳನ್ನು ಕ್ಷಮಿಸಿ ನನ್ನನ್ನುದ್ಧರಿಸು.

೫೬ ಕಪಟ, ಅಹಂಕಾರದಿಂದಲಾದರೂ ಸರಿ, ಶಾಂರ್ಜವನ್ನು ಹಿಡಿದ ಹರಿಗೆ ನಮಸ್ಕರಿಸಿದವನ ನೂರಾರು ಜನ್ಮಗಳ ಪಾಪಗಳು ಕೂಡ ಸುಟ್ಟು ಹೋಗುವವು. ಇದರಲ್ಲಿ ಸಂದೇಹವಿಲ್ಲ.

**ವಿಶೇಷ : ಅಭಕ್ತ್ಯೋದಾಹೃತಂ ನೈವ ಫಲದಾತೃ ಭವಿಷ್ಯತಿ । ಭಾಗ.ತಾ**

ಭಕ್ತಿಯಿಲ್ಲದ ಆಚರಣೆಯು ಫಲಿಸದು. ಇದು ಆಚಾರ್ಯರ ನಿರ್ಣಯ. ಇಲ್ಲಿ ಹೇಳಿದುದು ಅರ್ಥವಾದ ಎಂದರೆ ಪ್ರಶಂಸೆಗಾಗಿ ಹೊರಟುದು. ಕಪಟದಿಂದ ಮಾಡಿದ ನಮಸ್ಕಾರಕ್ಕೂ ದೇವರು ಮರುಳಾಗುತ್ತಾನೆ ಎಂದು ತಾತ್ಪರ್ಯವಲ್ಲ. ಭಗವಂತನಿಗೆ ಸುತ್ತು ಬಂದು ಎರಗುವುದು ಪ್ರಶಸ್ತ ಎಂದಷ್ಟೇ ಅದರ ತಾತ್ಪರ್ಯ. ಇದು ಪುರಾಣಗಳ ಭಾಷಾ ರೀತಿ. ಮೊದಲು ಕಪಟದಿಂದಲಾದರೂ ಮಾಡು ಮುಂದೆ ನಿಜವಾದ ಅರಿವು, ಭಕ್ತಿ ಬಂದು ಮಾಡುವುದು ಸಾಧ್ಯವಾಗುತ್ತದೆ ಎಂದು ಇದರ ಉದ್ದೇಶ್ಯ.

೫೭ ಗಂಗೆಯೇ ಮೊದಲಾದ ಸಾವಿರಾರು ಕೋಟಿ ತೀರ್ಥಗಳಾಗಲೀ, ಚಾಂದ್ರಾಯಣವೇ ಮೊದಲಾದ ನೂರಾರು ಕೋಟಿ ವ್ರತಗಳಾಗಲೀ ನಾರಾಯಣ ನಮಸ್ಕಾರದ ಹದಿನಾರನೆಯ ಒಂದು ಭಾಗಕ್ಕೂ ಸರಿಯಾಗಲಾರವು. (ಮೇಲಿನ ಎರಡು ಶ್ಲೋಕಗಳು ಆಚಾರ್ಯರ ಕೃಷ್ಣಾಮೃತ ಮಹಾರ್ಣವದಲ್ಲಿ ಉದ್ಧರಿಸಲ್ಪಟ್ಟ ಶ್ಲೋಕಗಳು)

೫೮ ಪ್ರದಕ್ಷಿಣೆಗಾಗಿ ಹಾಕುವ ಒಂದೊಂದು ಹೆಜ್ಜೆಯೂ ಹಿಂದಿನ ಜನ್ಮಗಳಲ್ಲಿ ಮಾಡಿದ ಎಲ್ಲ ಪಾಪಗಳನ್ನು ನಾಶ ಮಾಡುವುದು.

ಪದಾತ್ಪದಾಂತರಂ ಗತ್ವಾ ಕರೌ ಸಂಪುಟವತ್ ಕೃತೌ ।
ಸ್ತುತಿರ್ವಾಚಿ ಹೃದಿ ಧ್ಯಾನಂ ಪ್ರದಕ್ಷಿಣಮಿತಿ ಶ್ರುತಮ್ ॥೫೯॥

ನರ್ತನಂ ಶ್ರೀಪತೇರಗ್ರೇ ಕರಸಂಸ್ಫೋಟನಾದಿಭಿಃ ।
ನಶ್ಯಂತ್ಯೇವ ತದಾ ನೃಣಾಂ ಮಹಾಪಾತಕಕೋಟಯಃ ॥೬೦॥

ಏವಂ ಪೂಜಾಸಮಾಪ್ತೌ ತು ಮಂತ್ರಪುಷ್ಪಂ ಸಮರ್ಪಯೇತ್ ॥
ಯಸ್ಯ ಸ್ಮೃತ್ಯಾ ಚ ಮಂತ್ರೇಣ ಜಲಾಂಜಲಿಮಥಾರ್ಪಯೇತ್ ॥೬೧॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತಿಸ್ವಭಾವಾತ್ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥೬೨॥

ಏವಂ ವೈ ಕುರುತೇ ಭಕ್ತ್ಯಾ ಹರಿಪೂಜಾಂ ವಿಶೇಷತಃ ।
ತೇನೈವ ಸಕಲಂ ಪ್ರಾಪ್ಯ ಕೃತಕೃತ್ಯೋ ಭವಿಷ್ಯತಿ ॥೬೩॥

ಅನ್ಯೇಷ್ವಪಿ ಚ ಮಾಸೇಷು ಮಧ್ಯಾಹ್ನೇ ದೈವಮಾಹ್ನಿಕಮ್ ।
ಧನುರ್ಮಾಸೇಽಪ್ಯುಷಃಕಾಲೇ ಕೃತ್ವಾ ವೈ ಹರಿಪೂಜನಮ್ ॥೬೪॥

---

೫೯ ನಾಲಿಗೆಯಿಂದ ಭಗವಂತನನ್ನು ಸ್ತುತಿಸುತ್ತ, ಹೃದಯದಲ್ಲಿ ಅವನನ್ನೇ ನೆನೆಸುತ್ತ, ಕೈಗಳನ್ನು ಜೋಡಿಸಿಕೊಂಡು ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತ ಹೋಗುವುದೇ ಪ್ರದಕ್ಷಿಣೆ ಎನಿಸುವುದು.

೬೦ ದೇವನೆದುರು ಚಪ್ಪಾಳೆ ಬಾರಿಸುತ್ತ ನರ್ತಿಸಬೇಕು. ಹೀಗೆ ಮಾಡಿದವನ ಕೋಟಿ ಕೋಟಿ ಮಹಾಪಾತಕಗಳೂ ಕೂಡಲೇ ನಾಶವಾಗುವವು.

೬೧ ಪೂಜಾಸಮಾಪ್ತಿಯ ಕಾಲದಲ್ಲಿ ಮಂತ್ರಪುಷ್ಪವನ್ನು ಸಮರ್ಪಿಸಬೇಕು. ಅಮೇಲೆ 'ಯಸ್ಯ ಸ್ಮೃತ್ಯಾ' ಎಂಬ ಮಂತ್ರವನ್ನು ಪಠಿಸುತ್ತಾ ಬೊಗಸೆಯಿಂದ ನೀರನ್ನು ಬಿಟ್ಟು ಪೂಜೆ ಮುಗಿಸಬೇಕು.

೬೨ ನನ್ನ ದೇಹ, ಮಾತು, ಮನಸ್ಸು, ಇಂದ್ರಿಯಗಳು, ಬುದ್ಧಿ, ಸ್ವಭಾವಗಳಿಂದ ನಾನು ಮಾಡುವ ಎಲ್ಲ ಕರ್ಮಗಳನ್ನು ಸರ್ವೋತ್ತಮನಾದ ನಾರಾಯಣನಿಗೆ ಸಮರ್ಪಿಸುತ್ತೇನೆ.

೬೩ ಈ ರೀತಿಯಾಗಿ ಭಕ್ತಿಯಿಂದ ಹರಿಯನ್ನು ಪೂಜಿಸಿದವನು, ಆ ಪೂಜೆಯ ಪುಣ್ಯದಿಂದಲೇ ಸಕಲ ಭಾಗ್ಯಗಳನ್ನು ಹೊಂದಿ ಕೃತಕೃತ್ಯನೆನಿಸುವನು.

೬೪ ಬೇರೆ ಮಾಸಗಳ ದೇವಪೂಜೆಯನ್ನು ಮಧ್ಯಾಹ್ನ ಕಾಲದಲ್ಲಿ ಮಾಡಬೇಕು.

ಮುದ್ಗಾನ್ನಂ ಚೈವ ದಾತವ್ಯಂ ಕೋಟಿಕೋಟಿಗುಣಂ ಭವೇತ್ ।
ಸರ್ವೇಷ್ವಪಿ ಚ ಮಾಸೇಷು ಮುದ್ಗಾನ್ನಂ ನ ತು ಭಕ್ಷಯೇತ್ ॥೬೫॥

ಜಿಹ್ವಾಚಾಪಲ್ಯದೋಷೇಣ ಭಕ್ಷಯೇದ್ಯದಿ ಮೂಢಧೀಃ ।
ಬ್ರಾಹ್ಮಣ್ಯಂ ನಾಶಯೇತ್ತೋಽಪಿ ರೌರವಂ ನರಕಂ ವ್ರಜೇತ್ ॥೬೬॥

ಧನುರ್ಮಾಸೇ ತು ಭುಂಜಂತಿ ಮುದ್ಗಾನ್ನಂ ಹರಯೇಽರ್ಪಿತಮ್ ।
ತೇಷಾಂ ದಾಸ್ಯಾಮಿ ಸತತಂ ಭುಕ್ತಿಂ ಮುಕ್ತಿಂ ಚ ಶಾಶ್ವತೀಮ್ ॥೬೭॥

॥ ಇತಿ ಶ್ರೀಮದಾಗ್ನೇಯ ಪುರಾಣೇ ಧನುರ್ಮಾಸ ಮಾಹಾತ್ಮ್ಯೇ
ಷಷ್ಠೋಽಧ್ಯಾಯಃ ॥

---

ಧನುರ್ಮಾಸದಲ್ಲಿ ಮಾತ್ರ ಉಷಃಕಾಲದಲ್ಲಿ ದೇವರ ಪೂಜೆಯನ್ನು ಮಾಡಿ,
೬೫ ಮುದ್ಗಾನ್ನವನ್ನು (ಹುಗ್ಗಿ) ಸಮರ್ಪಿಸಿದರೆ ಕೋಟಿಪಟ್ಟು ಫಲವನ್ನು ಪಡೆಯುವನು. ಧನುರ್ಮಾಸವನ್ನು ಬಿಟ್ಟು ಬೇರೆ ಮಾಸಗಳಲ್ಲಿ ಮುದ್ಗಾನ್ನವನ್ನು (ಹುಗ್ಗಿ) ತಿನ್ನಬಾರದು.

೬೬ ಬೇರೆ ಮಾಸಗಳಲ್ಲಿ ನಾಲಿಗೆಯ ಚಪಲದಿಂದ ತಿನ್ನುವ ಮೂಢನು, ಬ್ರಾಹ್ಮಣ್ಯವನ್ನು ಕಳೆದುಕೊಂಡು ರೌರವ ನರಕವನ್ನು ಹೊಂದುವನು.

೬೭ ಧನುರ್ಮಾಸದಲ್ಲಿ ಮಾತ್ರ ಭಗವಂತನಿಗೆ ಅರ್ಪಿತವಾದ ಮುದ್ಗಾನ್ನ (ಹುಗ್ಗಿ) ವನ್ನು ಭುಂಜಿಸಿದವರಿಗೆ ಸತತವಾಗಿ ಭೋಗವನ್ನು ಹಾಗೂ ಶಾಶ್ವತವಾದ ಮುಕ್ತಿಯನ್ನು ನೀಡುವನು.

॥ ಇಲ್ಲಿಗೆ ಆರನೇ ಅಧ್ಯಾಯವು ಮುಗಿಯಿತು ॥

## ಅಥ ಸಪ್ತಮೋಽಧ್ಯಾಯಃ

**ಸೂತ ಉವಾಚ-**

**ಶ್ರುಣುಧ್ವಮೃಷಯಃ ಸರ್ವೇ ವಕ್ಷ್ಯಮಾಣಂ ಮಯಾಧುನಾ ।**
**ಕೃಷ್ಣಸ್ಯ ದಧಿಪಾಲಸ್ಯ ಸಂವಾದಂ ಪರಮಾದ್ಭುತಮ್ ॥೧॥**

**ದಧಿಪಾಲ ಉವಾಚ-**

**ಮಾಸಾನಾಂ ಮಾರ್ಗಶೀರ್ಷೋ ವೈ ಧನುರ್ಮಾಸೋ ವಿಶೇಷತಃ ।**
**ಏತನ್ಮೇ ವಿಸ್ತರಾದ್ ಬ್ರೂಹಿ ಕೃಷ್ಣ ದೇವ ಸಖೇ ಗುರೋ ॥೨॥**

**ಶ್ರೀಕೃಷ್ಣ ಉವಾಚ-**

**ಸಖೇ ಸಖೇ ಭೋ ದಧಿಪಾಲ ಗುಹ್ಯ-**
**ಮನ್ಯಂ ವಿಶೇಷಂ ಶ್ರುಣು ಶಾಸ್ತ್ರಸಾರಮ್ ।**
**ವಶೀಕೃತೋಽಹಂ ತವ ಭಕ್ತಿಪಾಶೈಃ**
**ವದಾಮಿ ಮತ್ಪ್ರೀತಿಕರಂ ಸುಗೋಪ್ಯಮ್ ।**
**ಭಕ್ತ್ಯೋಷಸಿ ಶ್ರೀರಮಣಸ್ಯ ಮೇ ವಿಭೋ**
**ಮತ್ಪ್ರಪ್ತಿಕೃದ್ಭಾಗವತೋತ್ತಮೋತ್ತಮಃ ॥೩॥**

**ಯಃ ಸ್ನಾತ್ವೋಷಸಿ ಚಾಪಸ್ಥೇ ಭಾಸ್ಕರೇ ಭಕ್ತಿಮಾನ್ನರಃ ।**
**ನಿವೇದಯೇನ್ಮೇ ಮುದ್ಗಾನ್ನಂ ಸ ವೈ ಭಾಗವತೋತ್ತಮಃ ॥೪॥**

---

೧ ಹೇ ಋಷಿಗಳೇ! ನಾನೀಗ ಹೇಳುವ ಕೃಷ್ಣ ಹಾಗೂ ದಧಿಪಾಲನ ಅತ್ಯಂತ ಅದ್ಭುತವಾದ ಸಂವಾದವನ್ನು ಗಮನವಿರಿಸಿ ಕೇಳಿ.

೨ ದಧಿಪಾಲನು ಪ್ರಶ್ನೆ ಮಾಡುತ್ತಾನೆ. ಹೇ ನನ್ನ ಗೆಳೆಯನೇ! ಗುರುವೇ! ದೇವನಾದ ಕೃಷ್ಣನೇ! ಮಾಸಗಳಲ್ಲಿ ಮಾರ್ಗಶೀರ್ಷವು ಶ್ರೇಷ್ಠವಾದುದು. ಅದರಲ್ಲೂ ವಿಶೇಷವಾಗಿ ಧನುರ್ಮಾಸವು ಅತಿಶ್ರೇಷ್ಠ. ಏಕೆಂದು ನನಗೆ ವಿಸ್ತಾರವಾಗಿ ತಿಳಿಸಬೇಕು.

೩ ಹೇ ಗೆಳೆಯ ದಧಿಪಾಲನೇ! ಇನ್ನೊಂದು ಶಾಸ್ತ್ರಸಾರವಾದ ಗುಹ್ಯವಿಷಯವನ್ನು ಕೇಳು. ನಾನು ನಿನ್ನ ಭಕ್ತಿಗೆ ವಶನಾಗಿದ್ದೇನೆ. ಆದುದರಿಂದ ನನ್ನನ್ನು ಪ್ರೀತಿಗೊಳಿಸುವ ಅತ್ಯಂತ ರಹಸ್ಯ ಸಾಧನವನ್ನು ನಿನಗೆ ತಿಳಿಸುತ್ತೇನೆ. ಧನುರ್ಮಾಸದ ಉಷಃಕಾಲದಲ್ಲಿ ಶ್ರೀಹರಿಯ ಪೂಜೆಯನ್ನು ಮಾಡಿದವನು ಭಾಗವತೋತ್ತಮ ಎನಿಸುತ್ತದೆ.

೪ ಸೂರ್ಯನು ಧನುರಾಶಿಯಲ್ಲಿರುವಾಗ ಉಷಃಕಾಲದಲ್ಲಿ ಸ್ನಾನ ಮಾಡಿ

ಯಃ ಕಾರ್ಮುಕೇಽರ್ಕೇ ಮುದ್ಗಾನ್ನಂ ಬ್ರಾಹ್ಮಣೇಭ್ಯಃ ಪ್ರಯಚ್ಛತಿ ।
ತಸ್ಯ ಮುಕ್ತಿಂ ಪ್ರದಾಸ್ಯಾಮಿ ಕಿಂ ಪುನರ್ಭೋಗಸಂಪದಃ ॥೫॥

ದಧ್ಯನ್ನದಾನಾದ್ವೈಶಾಖೇ ಚಾಪೇ ಮುದ್ಗಾನ್ನದಾನತಃ ।
ಕಾರ್ತಿಕೇ ದೀಪದಾನಾಚ್ಚ ಮಾಘೇ ಕಂಬಲದಾನತಃ ।
ಮದ್ಭಕ್ತಜನಸತ್ಕಾರಾತ್ ನೃಣಾಂ ದಾಸೋ ಭವಾಮ್ಯಹಮ್ ॥೬॥

ಅದೃಶ್ಯೋಽಹಂ ತು ಮಾಯಾವೀ ಸರ್ವೇಷಾಮಪಿ ಯೋಗಿನಾಮ್ ।
ಮುದ್ಗಾನ್ನದಾನಪಾಶೇನ ಚಾಪಾರ್ಕೇಽಹಂ ಕರೇ ಸ್ಥಿತಃ ॥೭॥

ಅಪರಂ ಚ ರಹಸ್ಯಂ ಮೇ ಸಖೇ ಗೋಪ್ಯಂ ಪ್ರಯತ್ನತಃ ।
ಧರ್ಮಾಣಾಮುತ್ತಮಂ ಧರ್ಮಂ ಶೃಣು ಮಿತ್ರ ಮಹಾಮತೇ ।
ಮದ್ಭಕ್ತೋಽಸಿ ಗುಣಶ್ರೇಷ್ಠ ಶೃಣು ಗುಹ್ಯಂ ಸನಾತನಮ್ ॥೮॥

ಮತ್ತೃಪ್ತಯೇ ಪೂರ್ಣವಿಧಿರ್ನಯಜ್ಞೋ
ಮತ್ಪ್ರೀತಯೇ ಮಂತ್ರತಪೋಽರ್ಚನಾದಿಃ ।

---

ಶ್ರೀಪತಿಯಾದ ನನ್ನನ್ನು ಹುಗ್ಗಿಯ ನೈವೇದ್ಯದಿಂದ ಪ್ರೀತಿಪಡಿಸುವವನು ಭಗವದ್ಭಕ್ತರಲ್ಲೇ ಅತಿ ಉತ್ತಮನೆನಿಸುವನು.

೫ ಧನುರ್ಮಾಸದಲ್ಲಿ ಬ್ರಾಹ್ಮಣರಿಗೆ ಹುಗ್ಗಿಯನ್ನು ಸಮರ್ಪಿಸಿದವನಿಗೆ ಮೋಕ್ಷವನ್ನೇ ನೀಡುವಾಗ ಬೇರೆ ಭೋಗ ಸಾಧನಗಳನ್ನು ನೀಡುವುದೇನು ಆಶ್ಚರ್ಯವಲ್ಲ.

೬ ವೈಶಾಖಮಾಸದಲ್ಲಿ ಮೊಸರನ್ನ, ಧನುರ್ಮಾಸದಲ್ಲಿ ಮುದ್ಗಾನ್ನ (ಹುಗ್ಗಿ), ಕಾರ್ತಿಕ ಮಾಸದಲ್ಲಿ ದೀಪದಾನ, ಮಾಘಮಾಸದಲ್ಲಿ ಕಂಬಳಿಯ ದಾನದಿಂದ ಹಾಗೂ ಎಲ್ಲ ಕಾಲದಲ್ಲೂ ನನ್ನ ಭಕ್ತರ ಸತ್ಕಾರ ಮಾಡುವ ಜನರಿಗೆ ನಾನು ದಾಸನಂತಾಗಿರುತ್ತೇನೆ.

೭ ಮಾಯಾವಿ ಎನಿಸಿದ ನಾನು ಎಲ್ಲ ಯೋಗಿಗಳಿಗೂ ಕಾಣದಂತಿರುವವನು. ಆದರೆ ಧನುರ್ಮಾಸದಲ್ಲಿ ಹುಗ್ಗಿಯನ್ನು ದಾನ ಮಾಡಿರುವವನ ಕೈಗೆ ಅತಿ ಸುಲಭದಲ್ಲಿ ದೊರಕುವೆನು.

೮ ಹೇ ಶ್ರೇಷ್ಠ ಬುದ್ಧಿಯುಳ್ಳ ಗೆಳೆಯನೇ! ಧರ್ಮಗಳಲ್ಲೆಲ್ಲ ಉತ್ತಮ ಧರ್ಮವೆನಿಸಿದ ಮತ್ತೊಂದು ರಹಸ್ಯವನ್ನು ಪ್ರಯತ್ನಪೂರ್ವಕವಾಗಿ ಕೇಳು. ಹೇ ಶ್ರೇಷ್ಠ ಗುಣಗಳಿಂದ ಕೂಡಿದವನೇ! ನೀನು ನನ್ನ ಭಕ್ತನಾಗಿರುವೆ. ಪುರಾತನವಾದ ರಹಸ್ಯವನ್ನು ಹೇಳುತ್ತಿದ್ದೇನೆ.

**ಮುದ್ಗಾನ್ನತೃಪ್ತೇ ಧನುಷಿ ದ್ವಿಜೇಽಹಂ**
**ಯಥಾ ವ್ಯತೀಪಾತದಿನೇ ಸುತೃಪ್ತಃ ॥೯॥**

**ಅಗ್ನಿಷ್ಟೋಮಸಹಸ್ರಾಣಿ ವಾಜಪೇಯಾಯುತಾನಿ ಚ ।**
**ಮುದ್ಗಾನ್ನಸ್ಯ ವ್ಯತೀಪಾತೇ ಚಾಪೇ ನಾರ್ಹಂತಿ ತುಲ್ಯತಾಮ್ ॥೧೦॥**

**ವೇದಭ್ರಷ್ಟೋ ವ್ರತಭ್ರಷ್ಟಃ ಕರ್ಮಭ್ರಷ್ಟಸ್ಸುಹೃದ್ರಿಪುಃ ।**
**ಚಾಪೇ ಪಾತ್ರೇ ಚ ಮುದ್ಗಾನ್ನಂ ದತ್ವಾ ವಿಪ್ರಾಯ ಶುದ್ಧ್ಯತಿ ॥೧೧॥**

**ತೃಪ್ಯಂತಿ ಪಿತರಃ ಸರ್ವೇ ಸರ್ವೇ ಲೋಕಮಹೇಶ್ವರಾಃ ।**
**ಪ್ರಶಂಸಂತಿ ವ್ಯತೀಪಾತೇ ಮುದ್ಗಾನ್ನಂ ಮಾರ್ಗಶೀರ್ಷಕೇ ॥೧೨॥**

**ನಿವೇದಯಿತ್ವಾ ಮುದ್ಗಾನ್ನಂ ಶರ್ಕರಾಜ್ಯಫಲೋಜ್ವಲಮ್।**
**ಉಷಃಕಾಲೇ ಧನುರ್ಮಾಸೇ ಬ್ರಾಹ್ಮಣೇಭ್ಯಃ ಪ್ರಯಚ್ಛತಿ ।**
**ಕಾಯಕ್ಲೇಶಕರೈಃ ತಸ್ಯ ಕಿಂ ತೀರ್ಥವ್ರತಕೋಟಿಭಿಃ ॥೧೩॥**

**ಮಾರ್ಗಶೀರ್ಷೇ ಚ ಹೇಮಂತೇ ಧನುರ್ಮಾಸೇ ವಿಶೇಷತಃ ।**

---

೯ ಪೂರ್ಣವಾಗಿ ವಿಧಿಪೂರ್ವಕವಾಗಿ ಆಚರಿಸಿದ ಯಜ್ಞವಾಗಲೀ, ಮಂತ್ರಜಪಗಳಾಗಲೀ ತಪಸ್ಸಾಗಲೀ ಪೂಜೆಯಾಗಲೀ, ಧನುರ್ಮಾಸದ ವ್ಯತೀಪಾತದ ದಿನದಂದು ಬ್ರಾಹ್ಮಣನು ಮುದ್ಗಾನ್ನದಿಂದ ತೃಪ್ತನಾದರೆ ಆಗುವ ಪ್ರೀತಿಯನ್ನು ತರಲಾರವು.

೧೦ ಸಾವಿರ ಅಗ್ನಿಷ್ಟೋಮ ಯಾಗಗಳಾಗಲೀ, ಹತ್ತು ಸಾವಿರ ವಾಜಪೇಯ ಯಾಗಗಳಾಗಲೀ, ಧನುರ್ಮಾಸದ ವ್ಯತೀಪಾತದ ದಿನದಂದು ಮುದ್ಗಾನ್ನದಾನಕ್ಕೆ ಸಮನಾಗಲಾರವು.

೧೧ ವೇದಭ್ರಷ್ಟನಾಗಲಿ, ವ್ರತಭ್ರಷ್ಟನಾಗಲಿ, ಕರ್ಮಭ್ರಷ್ಟನಾಗಿರಲಿ, ಗೆಳೆಯನಾಗಿರಲಿ, ಶತ್ರುವಾಗಿರಲಿ, ಧನುರ್ಮಾಸದಲ್ಲಿ ಬ್ರಾಹ್ಮಣನಿಗೆ ಹುಗ್ಗಿಯನ್ನು ನೀಡಿದರೆ ಶುದ್ಧನಾಗುತ್ತಾನೆ.

೧೨ ಆತನ ಎಲ್ಲ ಪಿತೃಗಳು ತೃಪ್ತರಾಗುವರು. ಎಲ್ಲ ಲೋಕೇಶ್ವರರು, ಧನುರ್ಮಾಸದ ವ್ಯತೀಪಾತದ ದಿನದಂದು ಮುದ್ಗಾನ್ನದಾನವನ್ನು ಸ್ತುತಿಸುತ್ತಾರೆ.

೧೩ ಸಕ್ಕರೆ, ತುಪ್ಪ, ಹಣ್ಣುಗಳಿಂದ ಕೂಡಿದ ಹುಗ್ಗಿಯನ್ನು, ಧನುರ್ಮಾಸದ ಉಷಃಕಾಲದಲ್ಲಿ ಬ್ರಾಹ್ಮಣರಿಗೆ ಯಾವನು ಭೋಜನ ಮಾಡಿಸುವನೋ ಆತನಿಗೆ ದೇಹವನ್ನು ದಂಡಿಸುವ ಕೋಟಿ ಕೋಟಿ ತೀರ್ಥಗಳು ಹಾಗೂ ವ್ರತಗಳಿಂದ ಆಗಬೇಕಾದುದೇನು?

ಯೇಽರ್ಚಯಂತಿ ಹರಿಂ ಸ್ನಾತ್ವಾ ಪ್ರಾತಶ್ಚಾಪಿ ಬಹಿರ್ಜಲೇ ॥೧೪॥

ಇಂದ್ರಾದ್ಯಾಃ ತಂ ನಮಸ್ಯಂತಿ ಸರ್ವಭೂತಾನಿ ಬಿಭ್ಯತಿ ।
ಭೂತಪ್ರೇತಪಿಶಾಚಾದ್ಯಾಃ ಕೂಷ್ಮಾಂಡಾ ಯಕ್ಷರಾಕ್ಷಸಾಃ ॥೧೫॥

ಉನ್ಮತ್ತಾ ಅಪ್ಯಪಸ್ಮಾರಾ ದೇವತಾಶ್ಚ ವಿನಾಯಕಾಃ ।
ದೂರೇ ಗ್ರಹಾಃ ಪಲಾಯಂತೇ ಯೋಽರ್ಚಯೇದುಷಸೀಶ್ವರಮ್ ॥೧೬॥

ನಿವೇದಯಿತ್ವಾ ಮುದ್ಗಾನ್ನಂ ಧನುಷ್ಯುಷಸಿ ವೈಷ್ಣವಮ್ ।
ಪಿತ್ರರ್ಥೇ ಭೋಜಯೇತ್ ಪ್ರಾತಸ್ತಸ್ಯ ಪುಣ್ಯಫಲಂ ಶ್ರುಣು ॥೧೭॥

ಗಯಾಕ್ಷೇತ್ರೇ ತಥಾ ಸೇತೌ ಸಮ್ಯಕ್ ಶ್ರಾದ್ಧಾಯುತಂ ಭವೇತ್ ।
ತದ್ವಂಶ್ಯಾಶ್ಚಾಪಿ ಪಿತರಃ ಸರ್ವೇ ಯಾಂತಿ ಹರೇಃ ಪದಮ್ ॥೧೮॥

ಧನುರ್ಮಾಸೇ ವ್ಯತೀಪಾತೇ ಭಗವಾನ್ ಹರಿರೀಶ್ವರಃ ।
ದತ್ತಾತ್ರೇಯೋಽಭವದ್ಯೋಗೀ ಯೋಗಿನಾಂ ತತ್ತ್ವದರ್ಶಕಃ ॥೧೯॥

---

೧೪ ಹೇಮಂತ ಋತುವಿನ ಮಾರ್ಗಶೀರ್ಷ ಮಾಸದಲ್ಲಿ ಅದರಲ್ಲೂ ವಿಶೇಷವಾಗಿ ಬೆಳಗುಜಾವ ಉಷಃಕಾಲದಲ್ಲಿ ಜಲಾಶಯಗಳಲ್ಲಿ ಸ್ನಾನ ಮಾಡಿ ಯಾರು ಹರಿಯನ್ನು ಪೂಜಿಸುವರೋ,

೧೫ ಅಂತಹವನಿಗೆ ಇಂದ್ರಾದಿದೇವತೆಗಳೂ ಗೌರವದಿಂದ ನಮಸ್ಕರಿಸುವರು. ಎಲ್ಲ ಪ್ರಾಣಿಗಳು ಅವನಿಗೆ ಭಯಪಡುತ್ತವೆ. ಭೂತ, ಪ್ರೇತ, ಕೂಷ್ಮಾಂಡ, ಯಕ್ಷ, ರಾಕ್ಷಸ,

೧೬ ಉನ್ಮಾದ, ಮೂರ್ಛೆ, ಬೇತಾಳಗಳೇ ಮೊದಲಾದ ಗ್ರಹಪೀಡೆಗಳೆಲ್ಲ ದೂರದಿಂದಲೇ ಅಂತಹವನನ್ನು ನೋಡಿ ಪಲಾಯನ ಮಾಡುವವು.

೧೭ ಧನುರ್ಮಾಸದ ಉಷಃಕಾಲದಲ್ಲಿ ಹುಗ್ಗಿಯನ್ನು ದೇವರಿಗೆ ಸಮರ್ಪಿಸಿ ಪಿತೃಗಳ ಪ್ರೀತಿಗಾಗಿ ವೈಷ್ಣವನಿಗೆ ಭೋಜನ ಮಾಡಿಸಿದರೆ ಒದಗುವ ಪುಣ್ಯಫಲವನ್ನು ಕೇಳು.

೧೮ ಗಯಾ ಕ್ಷೇತ್ರದಲ್ಲಿ ಹಾಗೂ ರಾಮಸೇತುವಿನಲ್ಲಿ ಚೆನ್ನಾಗಿ ಮಾಡಿದ ಹತ್ತು ಸಾವಿರ ಶ್ರಾದ್ಧದ ಫಲವನ್ನು ಪಡೆಯುವನು. ಅವನ ವಂಶದ ಪಿತೃಗಳೆಲ್ಲ ಭಗವಂತನ ಪಾದಗಳನ್ನು ಸೇರುವರು.

೧೯ ಧನುರ್ಮಾಸದ ವ್ಯತೀಪಾತಯೋಗದಲ್ಲಿ ಯೋಗಿಗಳಿಗೆ ತತ್ವವನ್ನು ಉಪದೇಶಿಸಿದ ದತ್ತಾತ್ರೇಯ ನಾಮಕ ಭಗವಂತನು ಸನ್ನಿಹಿತನಾಗಿರುವನು.

**ದತ್ತ ದತ್ತೇತಿ ಯೋ ಬ್ರೂಯಾದಮುಂ ಪ್ರಾತರ್ಮಹಾಮನುಮ್ ।**
**ಸನ್ನಿಧತ್ತೇऽಸ್ಯ ಹೃತ್ಪದ್ಮೇ ತತ್ತ್ವಜ್ಞಾನಂ ಪ್ರದರ್ಶಯನ್ ॥೨೦॥**

**ದತ್ತಾತ್ರೇಯೇತಿ ಕೂಪೇ ವಾ ಸ್ನಾನಕಾಲೇ ಪಠೇತ್ಸಕೃತ್ ।**
**ಸ್ನಾನಸ್ಯ ಸರ್ವತೀರ್ಥೇಷು ಕಾವೇರ್ಯಾದಿನದೀಷು ಚ ॥೨೧॥**

**ಅರ್ಧೋದಯಸಹಸ್ರಾಣಿ ವಾಜಪೇಯಶತಾನಿ ಚ ।**
**ಮಾರ್ಗಶೀರ್ಷೇ ವ್ಯತೀಪಾತೇ ಕಲಾಂ ನಾರ್ಹಂತಿ ಷೋಡಶೀಮ್ ॥೨೨॥**

**ಮಾರ್ಗಶೀರ್ಷೇ ವ್ಯತೀಪಾತೇ ಪಿತೄನುದ್ದಿಶ್ಯ ತರ್ಪಯನ್ ।**
**ಅರ್ಘ್ಯಂ ದದ್ಯಾತ್ ಹರಿಂ ಧ್ಯಾಯನ್ ಮೂಲಮಂತ್ರೇಣ ಮಾನವಃ॥೨೩॥**

**ವ್ಯತೀಪಾತ ಮಹಾಸತ್ತ್ವ ಸರ್ವಪಾಪಪ್ರಣಾಶನ ।**
**ಸಹಸ್ರಬಾಹೋ ವಿಶ್ವಾತ್ಮನ್ ಗೃಹಾಣಾರ್ಘ್ಯಂ ನಮೋऽಸ್ತು ತೇ ॥೨೪॥**

**ವ್ಯತಿಪಾತ ನಮಸ್ತೇऽಸ್ತು ನಮಸ್ತೇ ವಿಶ್ವಮಂಗಳ ।**
**ವಿಷ್ಣುಚಕ್ರಸ್ವರೂಪಾಯ ನಮಸ್ತೇ ದಿವ್ಯತೇಜಸೇ ॥೨೫॥**

---

೨೦ ಪ್ರಾತಃಕಾಲದಲ್ಲಿ ಈ ದತ್ತ ದತ್ತ ಎಂಬ ಶ್ರೇಷ್ಠಮಂತ್ರವನ್ನು ಜಪಿಸುವವನ ಹೃದಯದಲ್ಲಿ ದತ್ತಾತ್ರೇಯನು ತತ್ವಜ್ಞಾನದರ್ಶಕನಾಗಿ ನಿರಂತರ ವಾಸಿಸುವನು.

೨೧ ತೀರ್ಥಗಳಲ್ಲಿ ಸ್ನಾನ ಮಾಡುವಾಗ ಒಮ್ಮೆಯಾದರೂ ದತ್ತಾತ್ರೇಯನನ್ನು ಸ್ಮರಿಸಬೇಕು. ಸರ್ವತೀರ್ಥಗಳಲ್ಲಿ, ಕಾವೇರಿಯೇ ಮೊದಲಾದ ನದಿಗಳಲ್ಲಿ ಮಾಡಿದ ಸ್ನಾನಗಳಾಗಲೀ,

೨೨ ಸಾವಿರಾರು ಅರ್ಧೋದಯ ಪರ್ವಕಾಲಗಳಾಗಲೀ, ನೂರಾರು ವಾಜಪೇಯ ಯಜ್ಞಗಳಾಗಲೀ, ಮಾರ್ಗಶೀರ್ಷ (ಧನುರ್ಮಾಸ) ದ ವ್ಯತೀಪಾತದ ಪುಣ್ಯದ ಹದಿನಾರನೆಯ ಒಂದಂಶಕ್ಕೂ ಸಮನಾಗಲಾರದು.

೨೩ ಮಾರ್ಗಶೀರ್ಷ (ಧನುರ್ಮಾಸ) ಮಾಸದಲ್ಲಿ ಪಿತೃಗಳ ಪ್ರೀತಿಗಾಗಿ ತರ್ಪಣ ನೀಡಬೇಕು ಮತ್ತು ಭಗವಂತನನ್ನು ಧ್ಯಾನಿಸುತ್ತ ಮೂಲಮಂತ್ರದಿಂದ ಅರ್ಘ್ಯವನ್ನು ನೀಡಬೇಕು.

೨೪ ಹೇ ವ್ಯತಿಪಾತ! ನೀನು ಮಹಾಬಲಶಾಲಿಯಾಗಿರುವಿ. ಎಲ್ಲ ಪಾಪಗಳನ್ನು ಕಳೆವವನು. ಅನಂತ ಕೈಗಳುಳ್ಳವನು. ಜಗತ್ತಿನ ಅಂತರ್ಯಾಮಿಯು. ನಿನಗೆ ನಮಸ್ಕಾರಗಳು. ಈ ಅರ್ಘ್ಯವನ್ನು ಸ್ವೀಕರಿಸು.

೨೫ ಹೇ ವ್ಯತೀಪಾತ! ನೀನು ವಿಶ್ವಕ್ಕೆ ಮಂಗಳವುಂಟು ಮಾಡುವವನು. ವಿಷ್ಣು ಚಕ್ರ

**ಏವಂ ಜಪಿತ್ವೈಕಮರ್ಘ್ಯಂ ಸ ದತ್ವಾ ದಕ್ಷಿಣಾಮುಖಃ ।**
**ವಂಶದ್ವಯಪಿತೄನ್ ಧ್ಯಾಯನ್ ಪ್ರಾರ್ಥಯೇತ್ಪಿತೃತೃಪ್ತಯೇ ॥೨೬॥**

**ವಿಷ್ಣುಪ್ರಿಯ ವ್ಯತೀಪಾತ ಪಿತೄಣಾಮಮೃತಪ್ರದ ।**
**ಪಿತೄಣಾಂ ಮಮ ವೈಕುಂಠಂ ಪ್ರಯಚ್ಛ ಭಗವನ್ ಹರೇ ॥೨೭॥**

**ತ್ವತ್ಪ್ರಸಾದೇನ ಮೇ ವಿಷ್ಣೋ ಭಕ್ತಿರಸ್ತ್ವನಪಾಯಿನೀ ।**
**ಜ್ಞಾನವಿಜ್ಞಾನವೈರಾಗ್ಯಂ ದೇಹಿ ಮೇ ಭಗವನ್ಸದಾ ॥೨೮॥**

**ಏವಂ ವರ್ಷತ್ರಯಂ ಕುರ್ಯಾತ್ ವ್ಯತೀಪಾತೇಽರ್ಚನಂ ಮೃಗೇ ।**
**ತೇನಾರ್ಚಿತಾಃ ಸ್ಯುಃ ಕೋಟ್ಯಬ್ದಂ ಸರ್ವಲೋಕಾ ಮದಾಶ್ರಯಾಃ ॥೨೯॥**

**ಏಕಾಬ್ದಂ ವಾ ಮೃಗೇ ಕುರ್ಯಾತ್ ವ್ಯತೀಪಾತೇಽರ್ಚನಂ ಹರೇಃ ।**
**ಭುಕ್ತ್ವೇಹ ಸಕಲಾನ್ ಭೋಗಾನ್ ಉತ್ತಾರ್ಯ ಚ ಪಿತೄನ್ ಶತಮ್ ॥೩೦॥**

---

ಸ್ವರೂಪಿಯಾದವನು, ನಿನ್ನ ತೇಜಸ್ಸು ಅಸಾಧಾರಣವಾದುದು. ನಿನಗೆ ನಮಸ್ಕಾರಗಳು.

೨೬ ಈ ಮಂತ್ರವನ್ನು ಜಪಿಸುತ್ತ ದಕ್ಷಿಣ ದಿಕ್ಕಿಗೆ ಮುಖ ಮಾಡಿ ಕುಳಿತು ಒಂದು ಅರ್ಘ್ಯ ನೀಡಿ ತನ್ನ ತಂದೆ ಮತ್ತು ತಾಯಿಯ ವಂಶದ ಪಿತೃಗಳನ್ನು ನೆನೆಯುತ್ತ ಭಕ್ತಿಯಿಂದ ಪ್ರಾರ್ಥಿಸಬೇಕು.

೨೭ ಹೇ ವ್ಯತೀಪಾತ! ನೀನು ವಿಷ್ಣುಪ್ರಿಯನೆನಿಸಿರುವೆ. ಪಿತೃಗಳಿಗೆ ಸುಖವನ್ನು ನೀಡುವವನು. ಹೇ ಶ್ರೀ ಹರಿಯೇ! ನನ್ನ ಪಿತೃಗಳಿಗೆ ವೈಕುಂಠವನ್ನು ದಯಪಾಲಿಸು.

೨೮ ಹೇ ವಿಷ್ಣುವೇ! ನಿನ್ನ ಪ್ರಸಾದದಿಂದ ನನ್ನ ಭಕ್ತಿಯು ಎಂದಿಗೂ ಬತ್ತದಿರಲಿ. ಜ್ಞಾನ, ವಿರಕ್ತಿ, ವಿಜ್ಞಾನಗಳನ್ನು ನನಗೆ ನಿರಂತರವಾಗಿ ಕರುಣಿಸು ಎಂದು ಪ್ರಾರ್ಥಿಸಬೇಕು.

೨೯ ಮಾರ್ಗಶೀರ್ಷ (ಧನುರ್ಮಾಸ) ಮಾಸದ ವ್ಯತೀಪಾತ ಯೋಗದಲ್ಲಿ ಈ ರೀತಿಯ ಪೂಜೆಯನ್ನು ಮೂರು ವರುಷದವರೆಗೆ ಮಾಡಬೇಕು. ಇದರಿಂದ ನನ್ನನ್ನು ಆಶ್ರಯಿಸಿದ ಭಕ್ತರನ್ನು ಕೋಟಿ ವರುಷಗಳವರೆಗೆ ಪೂಜಿಸಿದ ಫಲವನ್ನು ಹೊಂದುವನು.

೩೦ ಮಾರ್ಗಶೀರ್ಷ (ಧನುರ್ಮಾಸ) ದಲ್ಲಿ ವ್ಯತೀಪಾತದ ಆಚರಣೆಯನ್ನು ಒಂದು ವರುಷವಾದರೂ ಆಚರಿಸಬೇಕು. ಈ ಲೋಕದಲ್ಲಿ ಎಲ್ಲ ಭೋಗಗಳನ್ನು ಅನುಭವಿಸಿ ನೂರು ತಲೆಮಾರಿನ ಪಿತೃಗಳನ್ನು ಉದ್ಧರಿಸುವನು.

ಸ್ಥಿತ್ವಾ ಕಲ್ಪಂ ಸಿತದ್ವೀಪೇ ತತಃ ಸ್ಯಾದಿಹ ವೈಷ್ಣವಃ ।
ಅಪರಂ ಚ ರಹಸ್ಯಂ ಮೇ ಶೃಣು ಮಿತ್ರ ಮಹಾಮತೇ ॥೩೦॥

ಅಹಂ ಭಕ್ತಪರಾಧೀನೋ ರಹಸ್ಯಂ ವಾಚ್ಯಮೇವ ಹಿ ।
ಧನುರ್ಮಾಸೇ ತು ಮುದ್ಗಾನ್ನಂ ತುಲಸ್ಯೈ ಯೋ ನಿವೇದಯೇತ್ ॥೩೧॥

ಭುಕ್ತಿಮುಕ್ತಿಮವಾಪ್ನೋತಿ ಸತ್ಯಂ ಸತ್ಯಂ ನ ಸಂಶಯಃ ।
ಚಾಪಸ್ಥೇ ಪದ್ಮಿನೀನಾಥೇ ಪ್ರತ್ಯೂಷೇ ಪ್ರಯತೋ ನರಃ ॥೩೨॥

ನಿವೇದ್ಯ ದೇವ್ಯೈ ಮುದ್ಗಾನ್ನಂ ಸಾರ್ವಭೌಮಾಧಿಪೋ ಭವೇತ್ ।
ನಿವೇದಯೇತ್ ಸ ಮುದ್ಗಾನ್ನಂ ತುಲಸ್ಯೈ ಕಾರ್ಮುಕೇ ಮೃಗೇ ॥೩೪॥

ದೇವ್ಯೈ ಉಷಸಿ ಮುದ್ಗಾನ್ನಂ ತುಲಸ್ಯೈ ಶತ್ರುಪೀಡಿತಃ ।
ರಾಜಾ ತು ಸಾರ್ವಭೌಮಃ ಸ್ಯಾತ್ ವೈಶ್ಯೋ ಧನಸಮೃದ್ಧಿಮಾನ್ ॥೩೫॥

ಕುಟುಂಬವೃದ್ಧಿಂ ಧನಧಾನ್ಯವೃದ್ಧಿಮಾಯುಷ್ಯವೃದ್ಧಿಂ ಕುಲವೃದ್ಧಿಮೇವ ।
ವಿದ್ಯಾಭಿವೃದ್ಧಿಂ ವಸುಧಾಭಿವೃದ್ಧಿಮಪತ್ಯವೃದ್ಧಿಂ ಪಶುವೃದ್ಧಿಮೇತಿ ॥೩೬॥

---

೩೦ ಒಂದು ಕಲ್ಪದವರೆಗೆ ಪವಿತ್ರವಾದ, ಪರಿಶುದ್ಧವಾದ, ಸ್ವರ್ಗಾದಿಲೋಕಗಳಲ್ಲಿ ವಾಸ ಮಾಡಿ ಮತ್ತೆ ಭೂಲೋಕದಲ್ಲಿ ವೈಷ್ಣವನಾಗಿ ಜನಿಸುವನು. ಶ್ರೇಷ್ಠ ಬುದ್ಧಿಯುಳ್ಳ ಗೆಳೆಯ ದಧಿಪಾಲನೇ! ಇನ್ನೊಂದು ರಹಸ್ಯವನ್ನು ಹೇಳುವೆನು ಕೇಳು.

೩೧ ನಾನು ಭಕ್ತ ಪರಾಧೀನನು, ಆದುದರಿಂದ ರಹಸ್ಯವನ್ನು ಹೇಳಲೇಬೇಕು. ಧನುರ್ಮಾಸದಲ್ಲಿ ಹುಗ್ಗಿಯನ್ನು ತುಲಸಿಗೆ ನಿವೇದಿಸಿದವನು,

೩೨ ಭೋಗಗಳನ್ನು ಹಾಗೂ ಮೋಕ್ಷವನ್ನು ಹೊಂದುವನು. ಇದು ಸತ್ಯವಾದುದು. ಸೂರ್ಯನು ಧನುರಾಶಿಯಲ್ಲಿರುವಾಗ ಮನುಷ್ಯನು ಪ್ರಯತ್ನಪೂರ್ವಕವಾಗಿ, ಪ್ರಾತಃಕಾಲದಲ್ಲಿ

೩೪ ತುಲಸೀದೇವಿಗೆ ಮುದ್ಗಾನ್ನವನ್ನು ನಿವೇದಿಸಿದವನು ಚಕ್ರವರ್ತಿಯಾಗುವನು. ಧನುರ್ಮಾಸದಲ್ಲಿ ಮುದ್ಗಾನ್ನವನ್ನು ತುಲಸಿಗೆ ಸಮರ್ಪಿಸಬೇಕು.

೩೫ ಶತ್ರುಗಳಿಂದ ಪೀಡಿತನಾದವನು ಧನರ್ಮಾಸದಲ್ಲಿ ಉಷಃಕಾಲದಲ್ಲಿ ತುಲಸೀದೇವಿಗೆ ಮುದ್ಗಾನ್ನವನ್ನು ಅರ್ಪಿಸಬೇಕು. ಹೀಗೆ ಅರ್ಪಿಸಿದ ರಾಜನು ಚಕ್ರವರ್ತಿಯಾಗುವನು. ವೈಶ್ಯನು ಧನದ ಸಮೃದ್ಧಿಯನ್ನು ಹೊಂದುವನು.

೩೬ ಹೀಗೆ ಮಾಡುವವನ ಕುಟುಂಬ, ಧನಧಾನ್ಯಗಳು, ಆಯುಷ್ಯ, ಕುಲ, ವಿದ್ಯೆ, ಭೂಮಿ, ಮಕ್ಕಳು, ಪಶುಗಳು ಅಭಿವೃದ್ಧಿ ಹೊಂದುವವು.

ವ್ಯತೀಪಾತೇ ಪ್ರಭಾತೇ ತು ಏಕಂ ವಾ ಭೋಜಯೇತ್ ದ್ವಿಜಮ್ ।
ತಸ್ಯ ಪುಣ್ಯಫಲಂ ವಕ್ತುಂ ನಾಹಂ ಶಕ್ತಃ ಕಥಂಚನ ॥೩೭॥

ತಥಾಪಿ ತತ್ಫಲಂ ತೇಽದ್ಯ ಸಹಸ್ರಾಂಶೇನ ದರ್ಶಯೇ ।
ವಿಪ್ರಬ್ರುವೋ ವಾ ವಿಪ್ರೋ ವಾ ಯದಿ ವಾ ಗೋವಧಾದಿಕೃತ್ ॥೩೮॥

ಸದ್ಯ ಏವ ವಿಶುದ್ಧಾತ್ಮಾ ನಾತ್ರ ಕಾರ್ಯಾ ವಿಚಾರಣಾ ।
ತುಲಸೀಂ ಯೋ ವ್ಯತೀಪಾತೇ ಮುದ್ಗಾನ್ನೈಸ್ತರ್ಪಯೇನ್ಮೃಗೇ ॥೩೯॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ
ಸಪ್ತಮೋಽಧ್ಯಾಯಃ ॥

---

೩೭ ವ್ಯತೀಪಾತಯೋಗದ ಮುಂಜಾವಿನಲ್ಲಿ ಕೇವಲ ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸಿದರೂ ಅದರ ಫಲವನ್ನು ಹೇಳಲು ನಾನು ಶಕ್ತನಲ್ಲ.

೩೮ ಹೀಗಿದ್ದರೂ ಅದರ ಫಲವನ್ನು ಸಾವಿರದ ಒಂದು ಭಾಗದಷ್ಟು ನಿನಗೆ ತಿಳಿಸುವೆನು. ಕೇವಲ ಬ್ರಾಹ್ಮಣನೆಂದು ಕರೆಸಿಕೊಳ್ಳುವನಾಗಲೀ, ಬ್ರಾಹ್ಮಣನಾಗಲೀ ಅಥವಾ ಗೋಹತ್ಯಾದಿಗಳನ್ನು ಮಾಡಿದವನಾಗಲೀ,

೩೯ ಧನುರ್ಮಾಸದ ವ್ಯತೀಪಾತದಂದು ತುಲಸಿಗೆ ಮುದ್ಗಾನ್ನವನ್ನು ಸಮರ್ಪಿಸಿದವನು ಸದ್ಯದಲ್ಲಿಯೇ ಪುಣ್ಯವಂತನಾಗುವನು. ಇದರಲ್ಲಿ ಸಂದೇಹವಿಲ್ಲ.

॥ ಇಲ್ಲಿಗೆ ಏಳನೇ ಅಧ್ಯಾಯವು ಮುಗಿಯಿತು ॥

# ಅಥ ಅಷ್ಟಮೋಽಧ್ಯಾಯಃ

ಕೃಷ್ಣ ಉವಾಚ-

ದಧಿಪಾಲ ಪರಂ ವಚ್ಮಿ ದಧ್ನಃ ಸಾರಮಿವೋದ್ಧೃತಮ್ ।
ಸರ್ವತೀರ್ಥಫಲಂ ಪುಣ್ಯಂ ಸರ್ವಯಜ್ಞಫಲಂ ಮಹತ್ ॥೧॥

ಸರ್ವವೇದಫಲಂ ದಿವ್ಯಂ ಸರ್ವಮಂತ್ರಫಲಂ ಶುಭಮ್ ।
ಯೋ ದ್ವಾದಶ್ಯಾಮುಷಃಕಾಲೇ ಮುದ್ಗಾನ್ನಂ ವಿಷ್ಣವೇಽರ್ಪಯೇತ್ ॥೨॥

ಭೋಜಯೇದ್ವೈಷ್ಣವಂ ವಿಪ್ರಂ ಮನ್ಮಾಯಾಂ ದುಸ್ತರಾಂ ತರೇತ್ ।
ಬ್ರಹ್ಮಘ್ನೋ ವಾ ಕೃತಘ್ನೋ ವಾ ಸರ್ವಕರ್ಮೋಜ್ಝಿತೋಽಪಿ ಚ ।
ಚಾಪೇ ಮುದ್ಗಾನ್ನನೈವೇದ್ಯಾತ್ ದ್ವಾದಶ್ಯಾಂ ಶುದ್ಧ ಏವ ಸಃ ॥೩॥

ಪೂರ್ವಂ ಭರ್ಗೋ ದಕ್ಷಯಜ್ಞೇ ಮಹಾತ್ಮಾ
ಸಂವೀತಃ ಸನ್ ಬ್ರಹ್ಮಹತ್ಯಾದಿದೋಷೈಃ ।
ಚಾಪಸ್ಥೇಽರ್ಕೇ ಮೌದ್ಗಮನ್ನಂ ನಿವೇದ್ಯ
ವಿಷ್ಣೋಃ ಶುದ್ಧಃ ಕರ್ಣಕಾಪತ್ತನೇಽಭೂತ್ ॥೪॥

---

೧ ಹೇ ದಧಿಪಾಲನೇ! ಮೊಸರಿನಿಂದ ತೆಗೆದ ಬೆಣ್ಣೆಯಂತೆ ಸಾರಭೂತವಾದ ಸರ್ವತೀರ್ಥಗಳ ಫಲ ಹಾಗೂ ಸರ್ವಯಜ್ಞಗಳ ಫಲವನ್ನು ನೀಡುವ ಶ್ರೇಷ್ಠವಾದ ಪ್ರಮೇಯವನ್ನು ಹೇಳುವೆನು ಕೇಳು.

೨ ದ್ವಾದಶಿಯ ದಿನ ಉಷಃಕಾಲದಲ್ಲಿ ವಿಷ್ಣುವಿಗೆ ಮುದ್ಗಾನ್ನ ಸಮರ್ಪಣೆಯಿಂದ ಸರ್ವವೇದಗಳ ಅಧ್ಯಯನದ ಫಲ, ಸಕಲ ಮಂತ್ರಗಳನ್ನು ಜಪಿಸಿದ ಫಲ ಬರುವುದು.

೩ ಹಾಗೆಯೇ ದ್ವಾದಶಿಯ ದಿವಸ ವಿಷ್ಣುಭಕ್ತನಾದ ಬ್ರಾಹ್ಮಣನಿಗೆ ಭೋಜನ ಮಾಡಿಸಿದವನು, ದಾಟಲಾರದ ನನ್ನ ವೈಷ್ಣವಮಾಯೆಯನ್ನು ದಾಟುವನು. ಬ್ರಹ್ಮಹತ್ಯೆಯನ್ನು ಮಾಡಿದವನಾಗಲೀ, ಕೃತಘ್ನನಾಗಿರಲಿ, ಸರ್ವಕರ್ಮಗಳನ್ನು ತ್ಯಜಿಸಿದ ಪಾತಕಿಯಾಗಿರಲಿ, ಧನುರ್ಮಾಸದ ದ್ವಾದಶಿಯಂದು ಮುದ್ಗಾನ್ನದ ಸಮರ್ಪಣೆಯಿಂದ ಅವನು ಶುದ್ಧನೇ ಸರಿ.

೪ ಹಿಂದೆ ಮಹಾತ್ಮರಾದ ಭೃಗುಮಹರ್ಷಿಗಳು ದಕ್ಷಯಜ್ಞದಲ್ಲಿ ಬ್ರಹ್ಮಹತ್ಯಾದಿ ದೋಷಗಳಿಂದ ಯುಕ್ತರಾಗಿ, ಕರ್ಣಕಾಪತ್ತನದಲ್ಲಿ ಧನುರ್ಮಾಸದಲ್ಲಿ ವಿಷ್ಣುವಿಗೆ ಮುದ್ಗಾನ್ನವನ್ನು ನಿವೇದಿಸಿ ದೋಷಮುಕ್ತರಾದರು.

ಯಃ ಕರೋತಿ ಮಹಾಯೋಗೀ ಹ್ಯಾಕಲ್ಪಂ ದುಶ್ಚರಂ ತಪಃ ।
ಗೋದ್ವಾದಶ್ಯಾಂ ಹರೇಃ ಪೂಜಾಂ ಲಭತೇ ಹ್ಯರುಣೋದಯೇ । ॥೫॥

ದಧಿಪಾಲ ಮಹಾಭಾಗ ಧರ್ಮಸಾರಮಿದಂ ಶ್ರುಣು ।
ಸರ್ವತೀರ್ಥೇಷು ಯತ್ಪುಣ್ಯಂ ಭುಕ್ತಿಮುಕ್ತಿಫಲಪ್ರದಮ್
ಬ್ರಹ್ಮಹತ್ಯಾದಿಪಾಪಘ್ನಂ ಸರ್ವಧರ್ಮಫಲಪ್ರದಮ್ ॥೬॥

ಚಾಪಾರ್ಕೇ ಮೇ ಪೂಜನಂ ಪ್ರಾತರಿಷ್ಟಂ
ಮುದ್ಗಾನ್ನಂ ಚೇದ್ವಿಪ್ರವರ್ಯಾಯ ದದ್ಯಾತ್ ।
ಏತತ್ಸರ್ವಂ ಯಃ ಕರೋತ್ಯೇಷು ವೈಕಂ
ಸ ವೈ ಪೂತೋ ಬ್ರಹ್ಮಹಾಪಿ ಧ್ರುವಂ ಸ್ಯಾತ್ ॥೭॥

ದೀರ್ಘಾಯುಷ್ಮಾನ್ ಪುತ್ರಪೌತ್ರೈಃ ಸುಭೋಗಾನ್
ಭುಕ್ತ್ವಾ ಚಾಂತೇ ಬ್ರಹ್ಮಲೋಕಂ ಸಮೇತ್ಯ
ತತ್ರ ಸ್ಥಿತ್ವಾ ಬ್ರಹ್ಮಕಲ್ಪಾನ್ ಬಹೂನ್ ವೈ
ಪಶ್ಚಾತ್ ಸ ಸ್ಯಾತ್ ವೈಷ್ಣವಶ್ಚಕ್ರವರ್ತೀ ॥೮॥

---

೫ ಓರ್ವ ಯೋಗಿಯು ಒಂದು ಕಲ್ಪದ ವರೆಗೆ ಕಠಿಣ ತಪವನ್ನು ಆಚರಿಸಿದರೆ ಗೋದ್ವಾದಶಿಯಂದು ಅರುಣೋದಯದಲ್ಲಿ ವಿಷ್ಣುವನ್ನು ಪೂಜಿಸುವ ಯೋಗವನ್ನು ಪಡೆಯುವನು.

೬ ಹೇ ಭಾಗ್ಯವಂತ ದಧಿಪಾಲನೇ! ಇದನ್ನು ಧರ್ಮಸಾರವೆಂದು ತಿಳಿ. ಭೋಗಗಳು ಹಾಗೂ ಮುಕ್ತಿಯನ್ನು ನೀಡುವ ಸರ್ವತೀರ್ಥಯಾತ್ರೆಯ ಪುಣ್ಯವು ಗೋದ್ವಾದಶೀವ್ರತದಿಂದ ಲಭ್ಯವಾಗುತ್ತದೆ. ಈ ವ್ರತವು ಬ್ರಹ್ಮಹತ್ಯಾದಿ ಪಾಪಗಳನ್ನು ನಿವಾರಿಸುವುದು. ಸರ್ವಧರ್ಮಗಳ ಫಲವನ್ನು ನೀಡುವುದು.

೭ ಧನುರ್ಮಾಸದಲ್ಲಿ ಪ್ರಾತಃಕಾಲದಲ್ಲಿ ನನ್ನನ್ನು ಪೂಜಿಸಬೇಕು. ಉತ್ತಮಬ್ರಾಹ್ಮಣನಿಗೆ ಮುದ್ಗಾನ್ನವನ್ನು ನೀಡಬೇಕು. ಧನುರ್ಮಾಸದಲ್ಲಿ ಇದೆಲ್ಲವನ್ನು ಒಮ್ಮೆಯಾದರೂ ಮಾಡಿದವನು ಬ್ರಹ್ಮಹತ್ಯೆಯನ್ನು ಮಾಡಿದವನಾಗಿದ್ದರೂ, ಪೂತಾತ್ಮನೇ ಸರಿ.

೮ ಆತನು ದೀರ್ಘಾಯುಷಿಯಾಗಿ ಮಕ್ಕಳು ಮೊಮ್ಮಕ್ಕಳೊಂದಿಗೆ ಒಳ್ಳೆಯ ಭೋಗ್ಯ ಪದಾರ್ಥಗಳನ್ನು ಭೋಗಿಸಿ ಕೊನೆಗೆ ಬ್ರಹ್ಮಲೋಕವನ್ನು ಹೊಂದಿ, ಬ್ರಹ್ಮಲೋಕದಲ್ಲಿ ಅನೇಕಕಲ್ಪಗಳವರೆಗೆ ವಾಸ ಮಾಡಿ, ನಂತರ ವಿಷ್ಣುಭಕ್ತನಾದ ಚಕ್ರವರ್ತಿಯಾಗುವನು.

ಗೋದ್ವಾದಶ್ಯನ್ನದಾನೇನ ವ್ಯತೀಪಾತೇऽಪಿ ವಾ ತಥಾ ।
ದಧ್ಯನ್ನದಾನಾತ್ ವೈಶಾಖೇ ಹ್ಯಾಕಲ್ಪಂ ಧನವಾನ್ ಭವೇತ್ ॥೯॥

ದರಿದ್ರೋ ರೋಗದುಃಖಾರ್ತೋ ಗೋದ್ವಾದಶ್ಯನ್ನದಾನತಃ ।
ಷಣ್ಮಾಸಾದ್ಧನಮಾಪ್ನೋತಿ ಸತ್ಯಂ ಸತ್ಯಂ ವದಾಮ್ಯಹಮ್ ॥೧೦॥

ಗೋದ್ವಾದಶ್ಯನ್ನದಾನೇನ ತುಲಸೀಪೂಜನೇನ ಚ ।
ಪುರಾ ದಶರಥೋ ರಾಜಾ ಲೇಭೇ ಸಾಕ್ಷಾದ್ಧರಿಂ ಸುತಮ್ ॥೧೧॥

ಶಂಕರೋ ಭಗವಾನ್ವಿಷ್ಣುಂ ಗೋದ್ವಾದಶ್ಯಾಂ ಸಮರ್ಚಯನ್ ।
ಪಾರ್ವತೀಮುಪಯೇಮೇऽಥ ಲೇಭೇ ಸ್ಕಂದಂ ಸುತಂ ತಥಾ ॥೧೨॥

ಗಜಾನನೋऽಪಿ ಚಾಪಾರ್ಕೇ ತುಲಸ್ಯಾಶ್ಚ ಮಮೋಷಸಿ ।
ನಿವೇದಯಿತ್ವಾ ಮುದ್ಗಾನ್ನಂ ವಿಘ್ನೇಶತ್ವಮವಾಪ್ತವಾನ್ ॥೧೩॥

ಪುರಾ ಗಜಾನನೋ ಮತ್ತೋ ವೀರ್ಯಾತ್ ಬ್ರಹ್ಮರ್ಷಿಘಾತಕಃ ।
ರಾಮಾಯಣಸ್ಯ ಶ್ರವಣಾತ್ ಪೂತೋऽಭೂಚ್ಛಂಕರಪ್ರಿಯಃ ॥೧೪॥

---

೯ ಗೋದ್ವಾದಶಿಯಂದು ಅನ್ನದಾನ ಮಾಡುವುದರಿಂದ ಅದೇ ರೀತಿ ಧನುರ್ಮಾಸದ ವ್ಯತೀಪಾತದಂದು ಅನ್ನದಾನ ಮಾಡುವುದರಿಂದ ವೈಶಾಖಮಾಸದಲ್ಲಿ ಮೊಸರು ಅನ್ನವನ್ನು ದಾನ ಮಾಡುವುದರಿಂದ, ಒಂದು ಕಲ್ಪ ಧನವಂತನಾಗುವನು.

೧೦ ದರಿದ್ರನಾಗಲೀ, ರೋಗ-ದುಃಖಗಳಿಂದ ಪೀಡಿತನಾಗಲೀ ಗೋದ್ವಾದಶಿ ಯಂದು ಅನ್ನದಾನ ಮಾಡುವುದರಿಂದ, ಆರು ತಿಂಗಳಲ್ಲಿ ಧನವನ್ನು ಹೊಂದುವನು. ಇದು ಸತ್ಯವಾಗಿದೆ.

೧೧ ಗೋದ್ವಾದಶಿಯಂದು ಅನ್ನದಾನ ಹಾಗೂ ತುಲಸೀ ಪೂಜೆಯಿಂದ, ಹಿಂದೆ ದಶರಥ ಮಹಾರಾಜನು ಸಾಕ್ಷಾತ್ ಹರಿಯನ್ನೇ ಮಗನನ್ನಾಗಿ ಪಡೆದನು.

೧೨ ರುದ್ರದೇವರು ಗೋದ್ವಾದಶಿಯಂದು ಭಗವಂತನಾದ ವಿಷ್ಣುವನ್ನು ಪೂಜಿಸಿ, ಪಾರ್ವತಿದೇವಿಯನ್ನು ಪತ್ನಿಯನ್ನಾಗಿ ಪಡೆದರು. ಸ್ಕಂದನನ್ನು ಮಗನನ್ನಾಗಿ ಪಡೆದರು.

೧೩ ಗಣೇಶನು ಕೂಡ ಧನುರ್ಮಾಸದಲ್ಲಿ ನನಗೆ ಮತ್ತು ತುಲಸಿಗೆ, ಮುದ್ಗಾನ್ನವನ್ನು ಸಮರ್ಪಿಸಿ ವಿಘ್ನೇಶನಾದನು.

೧೪ ಹಿಂದೆ ಗಣೇಶನು ವೀರ್ಯದ ಮದದಿಂದ ಬ್ರಹ್ಮರ್ಷಿಘಾತಕನೆನಿಸಿ, ರಾಮಾಯಣ ವನ್ನು ಶ್ರವಣ ಮಾಡಿ ಶುದ್ಧನೆನಿಸಿ ರುದ್ರದೇವರಿಗೆ ಪ್ರಿಯನೆನಿಸಿದನು.

ಇಂದ್ರೋಽಹಲ್ಯಾಂ ಪುರಾ ಗತ್ವಾ ಸನಕಾದಿನಿಯೋಜನಾತ್ ।
ಧನುರ್ಮಾಸೇ ಚ ಮುದ್ಗಾನ್ನಂ ನಿವೇದ್ಯ ಹರಿಪೂಜನೇ ।
ರಾಮಾಯಣಂ ಗುರೋಃ ಶ್ರುತ್ವಾ ಶುದ್ಧೋಽಭೂಲ್ಲೋಕರಕ್ಷಕಃ ॥೧೫॥

ನಿವೇದಯಿತ್ವಾ ಮುದ್ಗಾನ್ನಂ ಪ್ರಾತಃ ಕಾರ್ಮುಕಮಾಸಿ ಯಃ ।
ಮಯ್ಯಾಸಕ್ತೋ ವಿಭೂತಿಂ ವಾ ವಿಶ್ವರೂಪೋರ್ಧ್ವಮೂಲಕೌ ॥೧೬॥

ಗೀತಾಂ ವಾಪಿ ಪಠೇನ್ಮುಕ್ತಿಃ ಕರಸ್ಥಾ ಕಿಂ ಧನಾದಿಭಿಃ ।
ವಿದ್ಯಾರ್ಥೀ ಚ ಸುತಾರ್ಥೀ ಚ ವಿತ್ತಾರ್ಥೀ ರೂಪಸಂಪದಃ ॥೧೭॥

ನಿವೇದಯಿತ್ವಾ ಮುದ್ಗಾನ್ನಂ ಚಾಪಾರ್ಕೇಽಭೀಷ್ಟಮಶ್ನುತೇ ।
ವಂಧ್ಯಾ ವಾ ಗರ್ಭಿಣೀ ಚಾಪಿ ತುಲಸ್ಯೈ ಪ್ರಾತರಾಪ್ಲುತಾ ॥೧೮॥

---

೧೫ ಹಿಂದೆ ಅಹಲ್ಯೆಯ ಸಂಗವನ್ನು ಮಾಡಿದ ಇಂದ್ರದೇವರು ಸನಕಾದಿಗಳ ಪ್ರೇರಣೆಯಂತೆ, ಧನುರ್ಮಾಸದ ಹರಿಪೂಜೆಯಲ್ಲಿ ಮುದ್ಗಾನ್ನವನ್ನು ಸಮರ್ಪಿಸಿ, ಗುರುಗಳಿಂದ ರಾಮಾಯಣವನ್ನು ಶ್ರವಣ ಮಾಡಿ ಶುದ್ಧರಾಗಿ ಲೋಕರಕ್ಷಕರೆನಿಸಿದರು.

ವಿಶೇಷ- (ಅಹಲ್ಯೆಯ ಸಂಗದಿಂದ ಇಂದ್ರನಿಗೆ ಯಾವುದೇ ವಿಧವಾದ ದೋಷವು ಬರಲಿಲ್ಲ. ಹೀಗಾಗಿ ಆ ದೋಷದ ಪರಿಹಾರದ ಪ್ರಸಕ್ತಿ ಇಲ್ಲ. ಆದರೂ ಆ ನಿಮಿತ್ತವನ್ನು ಮಾಡಿಕೊಂಡು ವಿಶೇಷವಾದ ವ್ರತ-ನಿಯಮಗಳನ್ನು ದೇವತೆಗಳು ಮಾಡಿ ಮತ್ತಿಷ್ಟು ಹೆಚ್ಚಿನ ಪುಣ್ಯವನ್ನು ಸಂಪಾದಿಸುತ್ತಾರೆ.)

೧೬ ಧನುರ್ಮಾಸದ ಉಷಃ ಕಾಲದಲ್ಲಿ ಮುದ್ಗಾನ್ನವನ್ನು ನಿವೇದನ ಮಾಡಿ, ನನ್ನಲ್ಲೇ ಆಸಕ್ತಿಯುಳ್ಳವನಾಗಿ, ವಿಭೂತಿಯೋಗ (ಗೀತಾ ಹತ್ತನೆಯ ಅಧ್ಯಾಯ) ವಿಶ್ವರೂಪದರ್ಶನಯೋಗ (ಗೀತಾ ೧೧ನೆಯ ಅಧ್ಯಾಯ) ಊರ್ಧ್ವಮೂಲ-ವೆಂಬ (ಗೀತಾ ೧೫ನೆಯ ಅಧ್ಯಾಯ) ಅಧ್ಯಾಯಗಳನ್ನು ಅಥವಾ

೧೭ ಶಕ್ತರಾದವರು ಸಂಪೂರ್ಣ ಗೀತೆಯನ್ನು ಪಠಿಸಲು ಮುಕ್ತಿಯು ಆತನ ಕೈಯಲ್ಲೇ ಇರುವುದು. ಹೀಗಿರಲು ಧನಾದಿಗಳಿಂದ ಪ್ರಯೋಜನವೇನು? ವಿದ್ಯಾರ್ಥಿಯಾಗಿರಲಿ, ಪುತ್ರರನ್ನು ಬಯಸುವವನಾಗಲಿ, ಧನ, ರೂಪ, ಸಂಪತ್ತನ್ನು ಬಯಸುವವನಾಗಿರಲಿ,

೧೮ ಧನುರ್ಮಾಸದಲ್ಲಿ ಮುದ್ಗಾನ್ನವನ್ನು ಸಮರ್ಪಿಸಿ ಅಭೀಷ್ಟವನ್ನು ಹೊಂದುವನು. ಸಂತಾನ ಹೀನಳಾಗಿರಲಿ ಅಥವಾ ಗರ್ಭಿಣಿಯಾಗಿರಲಿ, ಧನುರ್ಮಾಸದಲ್ಲಿ ಬೆಳಗ್ಗೆ ಸ್ನಾನ ಮಾಡಿ ತುಲಸಿಗೆ,

ನಿವೇದಯಿತ್ವಾ ಮುದ್ಗಾನ್ನಂ ಏಲಾಶರ್ಕರಗೋಘೃತೈಃ ।
ಮದ್ಭಕ್ತಂ ಭೋಜಯೇದ್ಭಕ್ತ್ಯಾ ಲಭೇತ ತನಯಂ ಪಟುಮ್ ॥೧೯॥

ಆಯುರಾರೋಗ್ಯಮೈಶ್ವರ್ಯಂ ಭುಕ್ತಿಂ ಮುಕ್ತಿಂ ತಥೈವ ಚ ।
ಚಾಪಾರ್ಕೇ ಯೋಽರ್ಚಯೇನ್ಮಾಂ ವೈ ಸರ್ವಾನಿಷ್ಟಾನ್ ಸಮಶ್ನುತೇ ॥೨೦॥

ಯಃ ಪ್ರಭಾತೇ ತು ಮುದ್ಗಾನ್ನೈರ್ನಾರ್ಚಯೇನ್ಮಾಂ ನರಾಧಮಃ ।
ಸ ಹ್ಯಪುತ್ರೋ ದರಿದ್ರಃ ಸ್ಯಾತ್ ರೋಗಾರ್ತಃ ಸಪ್ತಜನ್ಮಸು ॥೨೧॥

ಅರಣ್ಯೇ ಸಂತಿ ಪುಷ್ಪಾಣಿ ನದ್ಯಾಂ ಸ್ವಾದೂದಕಾನಿ ಚ ।
ಸಂತಿ ಹಸ್ತೌ ಚ ಪಾದೌ ಚ ಕಥಂ ನಾರಾಧ್ಯತೇ ಹರಿಃ ॥೨೨॥

ಸ ಚೋರಃ ಸ ತು ಪಾಪಿಷ್ಠೋ ಮಾತೃಗಾಮೀ ಸ ಚಾತ್ಮಹಾ ।
ಪೂರ್ವಜನ್ಮನಿ ವಿಜ್ಞೇಯೋ ಯೋ ನ ಮಾಂ ಕಾರ್ಮುಕೇಽರ್ಚಯೇತ್ ॥೨೩॥

ದ್ವಾವಿಮೌ ಮಾನುಷೇ ಲೋಕೇ ಆಕಲ್ಪಂ ನರಕಾತಿಥೀ ।
ಯೋ ನ ಮಾಮರ್ಚಯೇಚ್ಚಾಪೇ ಯೋ ನಿಂದತಿ ಮದರ್ಚಕಮ್ ॥೨೪॥

---

೧೯ ಯಾಲಕ್ಕಿ, ಸಕ್ಕರೆ, ಗೋವಿನ ತುಪ್ಪದಿಂದ ಕೂಡಿದ ಮುದ್ಗಾನ್ನವನ್ನು ಸಮರ್ಪಿಸಿ, ವೈಷ್ಣವನಿಗೆ ಭೋಜನ ಮಾಡಿಸಿದರೆ ಉತ್ತಮ ಬುದ್ಧಿವಂತನಾದ ಮಗನನ್ನು ಪಡೆಯುವರು.

೨೦ ಧನುರ್ಮಾಸದಲ್ಲಿ ನನ್ನನ್ನು ಭಕ್ತಿಯಿಂದ ಪೂಜಿಸಿದವನು ಆಯುಷ್ಯ, ಆರೋಗ್ಯ, ಐಶ್ವರ್ಯ, ಭೋಗಗಳು, ಇಷ್ಟೇ ಅಲ್ಲದೇ ಮೋಕ್ಷವೇ ಮೊದಲಾದ ಎಲ್ಲ ಅಭೀಷ್ಟಗಳನ್ನು ಹೊಂದುವನು.

೨೧ ಧನುರ್ಮಾಸದ ಪ್ರಾತಃಕಾಲದಲ್ಲಿ ಮುದ್ಗಾನ್ನ ಸಮರ್ಪಣೆಯಿಂದ ನನ್ನನ್ನು ಪೂಜಿಸದ ಮಾನವನು ಏಳು ಜನ್ಮಗಳಲ್ಲಿ, ಸಂತಾನರಹಿತನೂ, ದರಿದ್ರನೂ, ರೋಗಪೀಡಿತನೂ ಆಗುವನು.

೨೨ ಅರಣ್ಯದಲ್ಲಿ ಅನೇಕ ಪುಷ್ಪಗಳಿವೆ. ನದಿಯಲ್ಲಿ ಸಿಹಿಯಾದ ನೀರಿದೆ. ದೇವರೇ ನೀಡಿದ ಹಸ್ತಗಳು ಹಾಗೂ ಪಾದಗಳು ಇರುವಾಗ ಹರಿಯನ್ನು ಏಕೆ ಪೂಜಿಸುವುದಿಲ್ಲ?

೨೩ ಧನುರ್ಮಾಸದಲ್ಲಿ ನನ್ನನ್ನು ಪೂಜಿಸದವನು ಹಿಂದಿನ ಜನ್ಮದಲ್ಲಿ ಕಳ್ಳನೂ, ಪಾಪಿಯೂ, ಮಾತೃಗಮನ ಮಾಡಿದವನೂ, ಆತ್ಮವಿನಾಶಕನೂ ಆದವನೆಂದು ತಿಳಿಯಬೇಕು.

೨೪ ಈ ಲೋಕದ ಇಬ್ಬರು ಮನುಷ್ಯರು ಒಂದು ಕಲ್ಪದ ವರೆಗೆ ನರಕದಲ್ಲಿ ವಾಸ

ತಪಸ್ವೀ ವಾಪಿ ಯೋಗೀ ವಾ ಯಜ್ವಾ ವಾ ಮುಕ್ತ ಏವ ವಾ ।
ಅರ್ಚಯೇನ್ಮಾಂ ಸುಧೀರ್ಭಕ್ತ್ಯಾ ಧನುರ್ಮಾಸೇಽರುಣೋದಯೇ ॥೨೫॥

ಕಿಂ ಹಿ ಜ್ಞಾನಾದ್ಧನುರ್ಮಾಸೇ ನಾರ್ಚತೋ ಮಾಂ ಭವೇತ್ಫಲಮ್ ।
ಜ್ವಲಂತಮಗ್ನಿಮುತ್ಸೃಜ್ಯ ನ ಹಿ ಭಸ್ಮನಿ ಹೂಯತೇ ॥೨೬॥

ಮತ್ಕಥಾಯಾಂ ತುಲಸ್ಯಾಂ ವಾ ಧನುರ್ಮಾಸೇ ಮದರ್ಚನೇ ।
ಮದ್ಭಕ್ತೇ ವಾ ಕೃತದ್ವೇಷೋ ನರೋ ಭವತಿ ಪುಲ್ಕಸಃ ॥೨೭॥

ದೂಷಯೇತ್ ಭಗವದ್ಗೀತಾಂ ಮದನ್ನಂ ಸ ತು ಮಜ್ಜನಮ್ ।
ಮತ್ಕೀರ್ತನಂ ವಾ ವಿಜ್ಞೇಯಃ ಸ ಚಂಡಾಲ ಇತಿ ಧ್ರುವಮ್ ॥೨೮॥

---

ಮಾಡುವರು, ಧನುರ್ಮಾಸದಲ್ಲಿ ನನ್ನನ್ನು ಪೂಜಿಸದವನು ಹಾಗೂ ನನ್ನ ಪೂಜಕರನ್ನು ನಿಂದಿಸಿದವನು,

೨೫ ಮಹಾತಪಸ್ವಿಯಾಗಿರಲಿ, ಯೋಗಿಯಾಗಿರಲಿ, ಯಜ್ಞಶೀಲನಾಗಿರಲಿ, ಮುಕ್ತನಾಗಿರಲಿ (ಅಪರೋಕ್ಷಜ್ಞಾನವನ್ನು ಪಡೆದ ಜೀವನ್ಮುಕ್ತನಾಗಿರಲಿ) ಯಾರೇ ಆಗಿದ್ದರೂ ಧನುರ್ಮಾಸದ ಅರುಣೋದಯದಲ್ಲಿ ನನ್ನನ್ನು ಭಕ್ತಿಯಿಂದ ಅರ್ಚಿಸಲೇಬೇಕು.

೨೬ ಧನುರ್ಮಾಸದಲ್ಲಿ ನನ್ನನ್ನು ಪೂಜಿಸದವನ ಜ್ಞಾನದಿಂದೇನು ಫಲ? ಪ್ರಜ್ವಲಿಸುವ ಅಗ್ನಿಯನ್ನು ಬಿಟ್ಟು ಬೂದಿಯಲ್ಲಿ ಹೋಮಿಸಿ ಫಲವೇನು?

**ವಿಶೇಷ :** ಇದೊಂದು ಅರ್ಥವಾದ, ಎಂದರೆ ಪ್ರಶಂಸಾಪರವಚನ. ಧನುರ್ಮಾಸದ ಭಗವಂತನ ಪೂಜೆ ಶ್ರೇಷ್ಠವಾದುದು ಎಂಬ ಅಭಿಪ್ರಾಯವನ್ನಷ್ಟೇ ಇಲ್ಲಿ ಗ್ರಹಿಸಬೇಕು. ಏಕೆಂದರೆ ಜ್ಞಾನಕ್ಕಿಂತ ಶ್ರೇಷ್ಠವಾದ ಯಾವ ಸಾಧನವೂ ಇಲ್ಲ.

ಜ್ಞಾನೇನೈವ ಪರಂ ಪದಂ। ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋಃ ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ ॥ ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ॥ ಇತ್ಯಾದಿ ಪ್ರಮಾಣಾನುಸಾರವಾಗಿ ಜ್ಞಾನವೇ ಸರ್ವಶ್ರೇಷ್ಠವಾದುದೆಂದು ಶಾಸ್ತ್ರದ ಅಭಿಪ್ರಾಯ.

೨೭ ಭಗವಂತನ ಕಥೆಯನ್ನು, ಧನುರ್ಮಾಸದ ಪೂಜೆಯನ್ನು ಅಥವಾ ವಿಷ್ಣುಭಕ್ತನನ್ನಾಗಲೀ ದ್ವೇಷಿಸಿದವನು ಪುಲ್ಕಸನಾಗುವನು. (ಶೂದ್ರನಿಂದ ಬ್ರಾಹ್ಮಣಸ್ತ್ರೀಯಲ್ಲಿ ಜನಿಸಿದವನು ಚಂಡಾಲ, ಅಂಥ ಚಂಡಾಲನ ಮಗನು ಪುಲ್ಕಸನೆನಿಸುವನು).

೨೮ ಭಗವದ್ಗೀತೆಯನ್ನಾಗಲೀ ನನ್ನ ನೈವೇದ್ಯವನ್ನಾಗಲೀ, ನನ್ನ ಭಕ್ತರನ್ನಾಗಲಿ, ನನ್ನ

ಯಃ ಪುತ್ರಃ ಪಿತರಂ ದ್ವೇಷ್ಟಿ ತಂ ವಿದ್ಯಾದನ್ಯರೇತಸಮ್ ।
ಯಸ್ತು ನಾರಾಯಣಂ ದ್ವೇಷ್ಟಿ ತಂ ವಿದ್ಯಾದಂತ್ಯರೇತಸಮ್ ॥೨೯॥

ಯಸ್ತು ಭಾಗವತಂ ಗೀತಾಂ ಶ್ರೀರಾಮಚರಿತಂ ತಥಾ ।
ದದಾತಿ ವೈಷ್ಣವಾಗ್ರ್ಯಾಯ ತಸ್ಯ ಪುಣ್ಯಫಲಂ ಶೃಣು ॥೩೦॥

ತತ್ಕುಲೀನಾಸ್ತು ಸರ್ವೇಽಪಿ ಧನಧಾನ್ಯಾದಿಸಂಯುತಾಃ ।
ದೀರ್ಘಾಯುಷೋ ದಯಾವಂತೋ ನೀರೋಗಾಃ ಶತಪೂರುಷಮ್ ॥೩೧॥

ಏತತ್ಸರ್ವಂ ದ್ವಾದಶಾಬ್ದಂ ವ್ರತಸ್ಥಃ
ಶಾಂತಃ ಕುರ್ಯಾತ್ ಭಾಸ್ಕರೇ ಕಾರ್ಮುಕಸ್ಥೇ ।
ಯಸ್ಯ ಶ್ರದ್ಧಾ ಸತ್ಕಥಾಯಾಂ ಹರೇಃ ಸ್ಯಾತ್
ಜೀವನ್ಮುಕ್ತೋ ಮತ್ಕಥಾಯಾ ರಸಜ್ಞಃ ॥೩೨॥

ಮತ್ಪೂಜಕಃ ಸ್ಯಾತ್ ಮನ್ಮೈತ್ರಃ ಮತ್ಕಥಾಮೃತಭೋಜನಃ ।
ಮದ್ಗಾನಾಮೃತಪುಷ್ಟಾಂಗಃ ಪುನಾತಿ ಭುವನತ್ರಯಮ್ ॥೩೩॥

---

ಗುಣಕೀರ್ತನೆಯನ್ನಾಗಲೀ ನಿಂದಿಸಿದವನು ನಿಶ್ಚಿತವಾಗಿ ಚಂಡಾಲನೆಂದು ತಿಳಿಯಬೇಕು.

೨೯ ತಂದೆಯನ್ನು ದ್ವೇಷಿಸುವ ಮಗನು, ಅನ್ಯಪುರುಷನಿಗೆ ಜನಿಸಿದವನೆಂದು, ಹಾಗೆಯೇ ನಾರಾಯಣನನ್ನು ದ್ವೇಷಿಸುವವನು, ಅಂತ್ಯಜನಿಗೆ ಜನಿಸಿದವನೆಂದು ತಿಳಿಯಬೇಕು.

೩೦ ಯಾರು ಉತ್ತಮ ವಿಷ್ಣುಭಕ್ತನಿಗೆ ಶ್ರೀಮದ್ಭಾಗವತವನ್ನಾಗಲೀ, ರಾಮಾಯಣವನ್ನಾಗಲೀ ಅಥವಾ ಭಗವದ್ಗೀತೆಯನ್ನಾಗಲೀ ದಾನ ಮಾಡುವರೋ ಆ ದಾನದ ಪುಣ್ಯಫಲವನ್ನು ಹೇಳುವೆನು ಕೇಳು.

೩೧ ಹೀಗೆ ದಾನ ಮಾಡಿದವನ ಕುಲದಲ್ಲಿ ಜನಿಸಿದವರು ಒಂದು ನೂರು ತಲೆಮಾರಿನ ವರೆಗೆ, ಧನ, ಧಾನ್ಯ, ಸಂಪತ್ತುಳ್ಳವರೂ, ದೀರ್ಘಾಯುಷಿಗಳು, ದಯಾಯುತರೂ, ರೋಗಾದಿರಹಿತರೂ ಆಗುವರು.

೩೨ ಈ ರೀತಿಯ ವ್ರತಾಚರಣೆಯನ್ನು ಧನುರ್ಮಾಸದಲ್ಲಿ ಹನ್ನೆರಡು ವರ್ಷ ಆಚರಿಸಬೇಕು. ಭಗವಂತನ ಕಥಾಶ್ರವಣ ಮಾಡುವಲ್ಲಿ ಶ್ರದ್ಧೆ ಹೊಂದಿದ ಭಗವತ್ಕಥಾ ರಸಿಕನಾದವನು ಜೀವನ್ಮುಕ್ತನೇ ಸರಿ.

೩೩ ನನ್ನನ್ನು ಪೂಜಿಸುವವನು, ನನ್ನಲ್ಲಿ ಸ್ನೇಹ (ಭಕ್ತಿ) ಉಳ್ಳವನು, ನನ್ನ

**ಮತ್ಕಥಾಮೃತಮತ್ತಸ್ಯ ನಿಸ್ಪೃಹಸ್ಯ ಸದಾ ಸಖೇ ।**
**ಕಿಂವಾವಶಿಷ್ಟಂ ಕೃತ್ಯಂ ಸ್ಯಾತ್ ಯೋ ಮುಕ್ತಿಂ ಚಾಪಿ ನೇಚ್ಛತಿ ॥೩೪॥**

**॥ ಇತಿ ಶ್ರೀ ಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ ಅಷ್ಟಮೋऽಧ್ಯಾಯಃ ॥**

---

ಕಥಾಮೃತವನ್ನು ಭುಜಿಸುವವನು, ನನ್ನ ನಾಮವನ್ನು ಹಾಡುತ್ತ (ಸ್ಮರಿಸುತ್ತ) ಪುಷ್ಟನಾದ ವ್ಯಕ್ತಿಯು ಮೂರು ಲೋಕಗಳನ್ನು ಪಾವನಗೊಳಿಸುವನು.

೩೪ ಹೇ ಗೆಳೆಯ ದಧಿಪಾಲನೇ! ನನ್ನ ಕಥಾಮೃತಪಾನದಿಂದ ತೃಪ್ತನಾದ, ಸರ್ವತ್ರ ಆಸೆಯನ್ನು ತೊರೆದ ವಿರಕ್ತನಿಗೆ ಮತ್ತೆ ಮಾಡಬೇಕಾದ ಕೃತ್ಯವೇನೂ ಇಲ್ಲ. ಅಂಥ ಭಕ್ತನು ಮುಕ್ತಿಯನ್ನು ಕೂಡ ಅಪೇಕ್ಷಿಪಡುವುದಿಲ್ಲ.

**ವಿಶೇಷ** : ಏಕಾಂತಭಕ್ತರು ಭಗವಂತನ ಪ್ರೀತಿಯನ್ನಲ್ಲದೇ ಮುಕ್ತಿಯನ್ನು ಕೂಡ ಇಚ್ಛಿಸುವುದಿಲ್ಲ. ಮೋಕ್ಷವನ್ನು ಕೂಡ ಭಗವಂತನ ಆಜ್ಞೆಯೆಂದು ಸ್ವೀಕರಿಸುತ್ತಾರೆ.

**॥ ಇಲ್ಲಿಗೆ ಎಂಟನೇ ಅಧ್ಯಾಯವು ಮುಗಿಯಿತು ॥**

# ಅಥ ನವಮೋಽಧ್ಯಾಯಃ

**ದಧಿಪಾಲ ಉವಾಚ-**

**ಭಗವನ್ ದೇವಕೀಪುತ್ರ ವ್ಯತೀಪಾತಕಥಾಮಿಮಾಮ್ ।**
**ಕಥಂ ಜಾತೋ ವ್ಯತೀಪಾತಃ ಕಸ್ಯ ಪುತ್ರೋ ವದ ಪ್ರಭೋ ॥೧॥**

**ತ್ವಂ ವೇತ್ಸಿ ಸರ್ವಮಾಖ್ಯಾತುಂ ಶ್ರೋತುಮಿಚ್ಛಾ ಮಮಾಪಿ ಚ ।**
**ಏತನ್ಮೇ ವಿಸ್ತರಾದ್ ಬ್ರೂಹಿ ಕೃಪಯಾ ಭಕ್ತವತ್ಸಲ ॥೨॥**

**ಶ್ರೀಕೃಷ್ಣ ಉವಾಚ-**

**ಏತತ್ಪ್ರಶ್ನಃ ಪುರಾ ಸರ್ವೋ ಧರ್ಮರಾಜಸ್ಯ ಪೃಚ್ಛತಃ ।**
**ಮಾರ್ಕಂಡೇಯೇನ ಸಕಲೋ ಬೋಧಿತೋ ಧರ್ಮಸಂಗ್ರಹಃ ॥೩॥**

**ತತ್ತೇಽಹಂ ಸಂಪ್ರವಕ್ಷ್ಯಾಮಿ ವಿಸ್ತರಾದ್ಗೋಪಸತ್ತಮ ।**
**ಶೃಣುಷ್ವೈಕಮನಾ ಭೂತ್ವಾ ಸರ್ವಪಾಪೈಃ ಪ್ರಮುಚ್ಯಸೇ ॥೪॥**

**ಯುಧಿಷ್ಠಿರ ಉವಾಚ-**

**ಕೇನ ವ್ರತೇನ ಚೀರ್ಣೇನ ನ ಪಶ್ಯೇತ್ ಯಮಶಾಸನಮ್ ।**
**ಪರಿಪೃಚ್ಛಾಮ್ಯಹಂ ಬ್ರಹ್ಮನ್ ಪಾಪಘ್ನಂ ವ್ರತಮುತ್ತಮಮ್ ।**
**ತದ್ ವ್ರತಂ ಬ್ರೂಹಿ ದೇವರ್ಷೇ ಕೃತ್ವಾ ಜಯತಿ ಸರ್ವದಾ ॥೫॥**

---

೧ ದೇವಕೀಪುತ್ರನಾದ ಶ್ರೀಕೃಷ್ಣನೇ! ಭಗವಂತನೇ, ವ್ಯತೀಪಾತವು ಜನಿಸಿದ ಬಗೆ ಏನು? ಇವನು ಯಾರ ಪುತ್ರ? ಎನ್ನುವ ಈ ಕಥೆಯನ್ನು ವಿಸ್ತಾರವಾಗಿ ಹೇಳಬೇಕು.

೨ ಸರ್ವಜ್ಞನಾದ ನೀನು ಇದೆಲ್ಲವನ್ನು ಹೇಳಲು ಬಲ್ಲವನು. ನಾನೂ ಕೂಡ ಕೇಳುವ ಉತ್ಸಾಹದಿಂದ ಕೂಡಿದವನು. ಆದುದರಿಂದ ಭಕ್ತಪ್ರಿಯನೇ! ಕೃಪೆ ಮಾಡಿ ವಿಸ್ತಾರವಾಗಿ ತಿಳಿಸು.

೩ ಹೇ, ದಧಿಪಾಲನೇ! ಹಿಂದೆ ಈ ಪ್ರಶ್ನೆಯನ್ನು ಕೇಳಿದ ಧರ್ಮರಾಜನಿಗೆ ಮಾರ್ಕಂಡೇಯ ಋಷಿಗಳು ಎಲ್ಲ ಧರ್ಮಗಳನ್ನು ವಿಸ್ತಾರವಾಗಿ ತಿಳಿಸಿದರು.

೪ ಭೂಮಿಗೆ ಒಡೆಯನಾದ ಹೇ ಧರ್ಮರಾಜನೇ! ನಿನಗೆ ನಾನು ಅದನ್ನೇ ವಿಸ್ತಾರವಾಗಿ ತಿಳಿಸುವೆನು. ಏಕಾಗ್ರಚಿತ್ತದಿಂದ ಆಲಿಸು. ಇದನ್ನು ಕೇಳುವುದರಿಂದ ಎಲ್ಲ ಪಾಪಗಳಿಂದ ಮುಕ್ತನಾಗುವಿ.

೫ ಮಾರ್ಕಂಡೇಯಋಷಿಗಳೇ! ಯಾವ ವ್ರತದ ಆಚರಣೆಯಿಂದ ಯಮಶಾಸನಕ್ಕೆ

**ಮಾರ್ಕಂಡೇಯ ಉವಾಚ-**

ಶೃಣು ರಾಜನ್ ವ್ರತಮಿದಂ ಹರ್ಯಶ್ವೇನ ಪುರಾ ಕೃತಮ್ ।
ತೇನೈವ ರಾಜ್ಞಾ ತದ್ದತ್ತಂ ಸೂಕರಾಯ ಚ ದುಃಖಿನೇ
ತೇನ ಪುಣ್ಯಪ್ರಭಾವೇನ ಸೂಕರೋ ಮುಕ್ತಿಮಾಪ್ತವಾನ್ ॥೬॥

**ಯುಧಿಷ್ಠಿರ ಉವಾಚ-**

ಕಥಂ ಸೂಕರಮುಕ್ತಿಃ ಸ್ಯಾತ್ ತನ್ಮೇ ಬ್ರೂಹಿ ಸುವಿಸ್ತರಾತ್ ॥೭॥

**ಮಾರ್ಕಂಡೇಯ ಉವಾಚ-**

ಪುರಾ ಕೃತಯುಗಸ್ಯಾದೌ ಹರ್ಯಶ್ವೋ ರಾಜಸತ್ತಮಃ ।
ಏಕದಾ ಮೃಗಯಾಂ ಗತ್ವಾ ಸಾಮಾತ್ಯಸ್ಸೇನಯಾ ಸಹ ॥೮॥

ಅರಣ್ಯೇ ನಿರ್ಜಲೇ ದೇಶೇ ನಾನಾಮೃಗಸಮಾವೃತೇ ।
ತತ್ರ ದೃಷ್ಟ್ವಾ ಸೂಕರಂ ಚ ಕ್ಷುತ್ಪಿಪಾಸಾಪ್ರಪೀಡಿತಮ್ ॥೯॥

ದಗ್ಧಪಾದಂ ದಗ್ಧಕಟಿಂ ದಗ್ಧಗ್ರೀವಮುಖೋದರಮ್ ।
ದೃಷ್ಟ್ವಾ ವನೇ ವರಾಹಂ ತು ಕೃಪಾಂ ಚಕ್ರೇ ದಯಾಪರಃ ॥೧೦॥

---

ಒಳಗಾಗುವುದಿಲ್ಲವೋ ನರಕವಾಗುವುದಿಲ್ಲವೋ ಅಂತಹ ಪಾಪನಾಶಕವಾದ ಉತ್ತಮ ವ್ರತವನ್ನು ಉಪದೇಶಿಸಲು ಪ್ರಾರ್ಥಿಸುತ್ತಿದ್ದೇನೆ. ಹೇ, ದೇವರ್ಷಿಗಳೇ! ಯಾವ ವ್ರತದ ಆಚರಣೆಯಿಂದ ಯಾವಾಗಲೂ ಜಯವು ದೊರಕುವುದೋ ಅಂತಹ ವ್ರತವನ್ನು ಹೇಳಿರಿ.

೬ ಹೇ, ರಾಜನೇ! ಕೇಳು. ಹಿಂದೆ ಈ ವ್ರತವನ್ನು ಹರ್ಯಶ್ವರು ಆಚರಿಸಿ, ಆ ವ್ರತದ ಪುಣ್ಯವನ್ನು ದುಃಖಪೀಡಿತ ಸೂಕರ (ಹಂದಿ) ಕ್ಕೆ ನೀಡಿದರು. ಆ ಪುಣ್ಯದ ಪ್ರಭಾವದಿಂದ ಆ ಸೂಕರವು ದುರ್ಯೋನಿಯಿಂದ ಮುಕ್ತವಾಯಿತು.

೭ ಸೂಕರದ ಮುಕ್ತಿಯು ಹೇಗೆ ಆಯಿತು? ಎಂಬುದನ್ನು ನನಗೆ ವಿಸ್ತಾರವಾಗಿ ಹೇಳಬೇಕು.

೮ ಹಿಂದೊಮ್ಮೆ ಕೃತಯುಗದ ಪ್ರಾರಂಭ ಕಾಲದಲ್ಲಿ ರಾಜಶ್ರೇಷ್ಠನಾದ ಹರ್ಯಶ್ವ ಮಹಾರಾಜನು ಮಂತ್ರಿಗಳು ಹಾಗೂ ಸೇನೆಯೊಂದಿಗೆ ಸಹಿತನಾಗಿ ಬೇಟೆಗೆ ಹೊರಟನು.

೯ ನೀರಿಲ್ಲದ ಅರಣ್ಯಪ್ರದೇಶದಲ್ಲಿ ನಾನಾ ಮೃಗಗಳ ಮಧ್ಯದಲ್ಲಿ ಹಸಿವು ನೀರಡಿಕೆಗಳಿಂದ ಪೀಡಿತವಾದ ಸೂಕರವನ್ನು ಕಂಡನು.

೧೦ ಕಾಲು, ಶರೀರ, ಕುತ್ತಿಗೆ, ಮುಂತಾದ ಶರೀರವೆಲ್ಲ ಸುಟ್ಟು ಹೋದ ಆ

ಕೇನ ಕರ್ಮವಿಪಾಕೇನಾದ್ಯಾವಸ್ಥಾಂ ಪ್ರಾಪ್ತವಾನಯಮ್ ।
ಅಹೋ ಕಷ್ಟಮಹೋ ಕರ್ಮ ಸೂಕರೇಣೇಹ ಭುಜ್ಯತೇ ॥೧೧॥

ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಮ್ ।
ಇತ್ಯುಕ್ತ್ವಾ ಕರುಣಾಯುಕ್ತೋ ರಾಜಾ ತಂ ಪ್ರಾಹ ಸೂಕರಮ್ ॥೧೨॥

ಜಾನಾಸಿ ಚೇತ್ಕರ್ಮ ಪೂರ್ವಂ ತನ್ಮಮಾಚಕ್ಷ್ವ ಸೂಕರ ।
ತಚ್ಛ್ರುತ್ವಾ ನೃಪತೇರ್ವಾಕ್ಯಂ ಪ್ರತ್ಯುವಾಚ ತತೋ ನೃಪ ॥೧೩॥

ವರಾಹ ಉವಾಚ-

ಶ್ರುಣು ರಾಜನ್ನಹಂ ಪೂರ್ವಂ ವೈಶ್ಯೋ ವಿಶ್ವಸಖೋऽಭವಮ್ ।
ಆಶಾಕೃದ್ಯೋ ನ ದಾತಾಹಂ ಆಶ್ರಿತೇಭ್ಯಶ್ಚ ಕಿಂಚನ ॥೧೪॥

ಶ್ರುತಾ ಬಹುವಿಧಾ ಧರ್ಮಾಃ ಪುರಾಣಾನಿ ಬಹೂನಿ ಚ ।
ಮಯಾ ತು ಧನಲೋಭೇನ ನ ಕೃತೋ ಧರ್ಮಸಂಗ್ರಹಃ ॥೧೫॥

---

ಸೂಕರವನ್ನು ಕಂಡು ದಯಾಳುವಾದ ರಾಜನು ಅದರ ಮೇಲೆ ಕೃಪೆ ಮಾಡಿದನು.

೧೧ ಯಾವ ಕರ್ಮದ ಫಲದಿಂದ ಈ ಅವಸ್ಥೆಯನ್ನು ಈ ವರಾಹವು ಹೊಂದಿದೆ? ಎಂಥ ಕಷ್ಟವನ್ನು ಏನು ಕರ್ಮವನ್ನು ಈ ಸೂಕರವು ಭೋಗಿಸುತ್ತಿದೆ?

೧೨ ಪ್ರತಿಯೊಬ್ಬರೂ ತಾನು ಮಾಡಿದ ಪಾಪ, ಪುಣ್ಯ ಕರ್ಮಗಳನ್ನು ಅವಶ್ಯವಾಗಿ ಭೋಗಿಸಲೇಬೇಕು. ಹೀಗೆಂದು ಆ ಹರ್ಯಶ್ವರಾಜನು ಕರುಣೆಯಿಂದ ಆ ವರಾಹವನ್ನು ಕೇಳಿದನು.

೧೩ ಹೇ, ಸೂಕರನೇ! ನಿನ್ನ ಈ ರೀತಿಯ ದುರ್ಗತಿಗೆ ಕಾರಣವಾದ ಪೂರ್ವಕರ್ಮವನ್ನು ಬಲ್ಲೆಯಾದರೆ ನನಗೆ ಹೇಳು. ಹೀಗೆಂದ ರಾಜನ ಮಾತನ್ನು ಕೇಳಿ ಆ ವರಾಹವು ಹೇಳತೊಡಗಿತು.

೧೪ ಹೇ ರಾಜನೇ! ಕೇಳು, ಹಿಂದೆ ನಾನು ವಿಶ್ವಸಖನೆಂಬ ಹೆಸರಿನ ವೈಶ್ಯನಾಗಿದ್ದೆ. ದುರಾಶೆಯವನಾದ ನಾನು ನನ್ನನ್ನು ಆಶ್ರಯಿಸಿದವರಿಗೂ ಏನನ್ನೂ ದಾನ ಮಾಡುತ್ತಿರಲಿಲ್ಲ.

೧೫ ಅನೇಕ ಪುರಾಣಗಳನ್ನು ಕೇಳಿದ್ದೆ. ಬಹುವಿಧ ಧರ್ಮಗಳನ್ನು ಅರಿತವನಾಗಿದ್ದೆ. ಹೀಗಿದ್ದರೂ ಧನಲೋಭದಿಂದ ನಾನು ಧರ್ಮಸಂಗ್ರಹವನ್ನು ಮಾಡಲಿಲ್ಲ.

**ಏಕದಾ ತು ದ್ವಿಜಃ ಕಶ್ಚಿತ್ ವ್ಯತೀಪಾತದಿನೇ ನೃಪ ।**
**ಯಾಚತೇ ಸ್ಮ ಧನಂ ಕಿಂಚಿತ್ ದರಿದ್ರೋ ಮಾಂ ಪುನಃ ಪುನಃ ॥೧೬॥**

**ಧನಲೋಭೇನ ಮಹತಾ ನ ಕಿಂಚಿದ್ದತ್ತವಾನಹಮ್ ।**
**ತತಸ್ಸ ಕುಪಿತೋ ರಾಜನ್ ವಿಪ್ರಃ ಶಾಪಮಥಾವದತ್ ॥೧೭॥**

**ಯದ್ವದ್ದಹತಿ ಚಾಶಾಗ್ನಿರ್ಮಮಾಂಗಾನಿ ನರಾಧಮ ।**
**ತಥೈವ ತವ ಚಾಂಗಾನಿ ದಾವಾಗ್ನಿರ್ದಹತಾದ್ ಭೃಶಮ್ ॥೧೮॥**

**ಅರಣ್ಯೇ ನಿರ್ಜಲೇ ದೇಶೇ ಜನಸಂಚಾರವರ್ಜಿತೇ ।**
**ತತ್ರ ಸೂಕರಜಾತಿಸ್ತ್ವಂ ಭವ ವೈಶ್ಯೇತಿ ಶಪ್ತವಾನ್ ॥೧೯॥**

**ಪ್ರಸಾದಿತೋ ಮಯಾ ವಿಪ್ರೋ ಪುನರಪ್ಯುಕ್ತವಾನ್ ತದಾ ।**
**ಜಾತಿಸ್ಮರತ್ವಮಥ ತೇ ಭವಿಷ್ಯತಿ ಜಗಾದ ಸಃ ॥೨೦॥**

**ತೇನ ಶಾಪೇನ ರಾಜೇಂದ್ರ, ಸೂಕರತ್ವಮುಪಾಗತಮ್ ।**
**ಅಹಂ ದುಃಖೀಹ ಸಂಜಾತೋ ನಿರ್ಜನೇ ನಿರ್ಜಲೇ ವನೇ।**
**ದಾವದಗ್ಧಶರೀರಸ್ಸನ್ನಿಹ ತಿಷ್ಠಾಮಿ ಪಾಪಕೃತ್ ॥೨೧॥**

---

೧೬ ಒಂದು ಸಾರಿ ವ್ಯತೀಪಾತದ ದಿನದಂದು ದರಿದ್ರನಾದ ಓರ್ವ ಬ್ರಾಹ್ಮಣನು ನನ್ನಲ್ಲಿ ಬಂದು ಸ್ವಲ್ಪ ಧನವನ್ನು ನೀಡುವಂತೆ ಮತ್ತೆ ಮತ್ತೆ ನನ್ನನ್ನು ಬೇಡುತ್ತಿದ್ದ.

೧೭ ಅತಿಯಾದ ಧನಲೋಭದಿಂದ ನಾನು ಆತನಿಗೆ ಏನನ್ನೂ ದಾನ ಮಾಡಲಿಲ್ಲ. ನಿರಾಶೆಯಿಂದ ಕ್ರುದ್ಧನಾದ ಆ ಬ್ರಾಹ್ಮಣನು ಶಾಪವನ್ನು ನೀಡಿದನು.

೧೮ ಅಯೋಗ್ಯ ಮನುಷ್ಯನೇ! ನನ್ನ ಅಂಗಗಳನ್ನು ಆಶೆಯೆಂಬ ಅಗ್ನಿಯು ಸುಡುತ್ತಿರುವಂತೆ, ನಿನ್ನ ಎಲ್ಲ ಅಂಗಗಳನ್ನು ಕಾಡ್ಗಿಚ್ಚು ಚೆನ್ನಾಗಿ ಸುಟ್ಟು ಹಾಕಲಿ.

೧೯ ಜನಸಂಚಾರವಿಲ್ಲದ, ನೀರು ದೊರೆಯದ ಘೋರ ಅರಣ್ಯದಲ್ಲಿ ನೀನು ಸೂಕರನಾಗಿ ಜನಿಸು ಎಂದು ಶಾಪವಿತ್ತನು.

೨೦ ನನ್ನ ಪ್ರಾರ್ಥನೆಯಿಂದ ಪ್ರಶಾಂತನಾದ ಬ್ರಾಹ್ಮಣನು ಮತ್ತೆ ಹೇಳಿದನು. ನಿನಗೆ ಜಾತಿಸ್ಮರತ್ವವು (ಜನ್ಮಾಂತರದ ಸ್ಮರಣೆಯು) ಇರುತ್ತದೆ ಎಂದು ಹೇಳಿದನು.

೨೧ ರಾಜಶ್ರೇಷ್ಠನೇ! ಆ ಶಾಪದ ಪ್ರಭಾವದಿಂದ ನಾನಿಲ್ಲಿ ಜನಸಂಚಾರ ರಹಿತವಾದ, ನೀರಿಲ್ಲದ ಅರಣ್ಯದಲ್ಲಿ ಸೂಕರನಾಗಿ ಹುಟ್ಟಿ ದುಃಖವನ್ನು ಹೊಂದಿದ್ದೇನೆ. ಕಾಡ್ಗಿಚ್ಚಿನಿಂದ ಶರೀರವೆಲ್ಲ ಸುಟ್ಟು ಹೋದವನಾಗಿ ಪಾಪಿಯಾದ ನಾನು ಇಲ್ಲಿ ವಾಸವಾಗಿದ್ದೇನೆ.

ರಾಜೋವಾಚ :

ಕೇನ ತ್ವಂ ಮುಚ್ಯಸೇ ಪಾಪಾತ್ತನ್ಮಮಾಚಕ್ಷ್ವ ಸೂಕರ ।
ಯೇನ ಶಕ್ಯೋ ಮಯಾ ಕರ್ತುಂ ತವ ಪಾಪಸ್ಯ ಸಂಕ್ಷಯಃ ॥೨೨॥

ವರಾಹ ಉವಾಚ-

ಶ್ರೂಯತಾಂ ತನ್ಮಹಾರಾಜ ಭುಕ್ತಿಮುಕ್ತಿಪ್ರದಾಯಕಮ್ ।
ವ್ಯತೀಪಾತವ್ರತಂ ನಾಮ ಕೃತಂ ರಾಜನ್ ತ್ವಯಾ ಪುರಾ ॥೨೩॥

ಯಥಾ ಮಾತಾ ಸುತಸ್ಯೇಹ ಸರ್ವತ್ರ ಸುಖಕಾರಿಣೀ ।
ತಥಾ ವ್ರತಮಿದಂ ರಾಜನ್ನಿಹಲೋಕೇ ಪರತ್ರ ಚ ॥೨೪॥

ಯಥೈವಾಭ್ಯುದಿತಃ ಸೂರ್ಯಸ್ತ್ವಶೇಷಂ ಚ ತಮೋ ಹರೇತ್ ।
ಇದಂ ವ್ರತಂ ತಥೈವೇಹ ಸರ್ವಪಾಪಂ ವ್ಯಪೋಹತಿ ॥೨೫॥

ಯಥಾ ವಿಷ್ಣುರ್ದದಾತೀಹ ನೃಣಾಂ ಪರಮನಿರ್ವೃತಿಮ್ ।
ದದಾತ್ಯೇವ ನ ಸಂದೇಹಃ ತಥಾ ವ್ರತಮಿದಂ ಶುಭಮ್ ॥೨೬॥

ಶತಮಿಂದುಕ್ಷಯೇ ದಾನಂ ಸಹಸ್ರಂ ತು ದಿನಕ್ಷಯೇ ।
ವಿಷುವೇ ಶತಸಾಹಸ್ರಂ ವ್ಯತಿಪಾತೇ ತ್ವನಂತಕಮ್ ॥೨೭॥

---

೨೨ ರಾಜನು ಕೇಳಿದನು. ಹೇ ಸೂಕರನೇ! ಏನು ಮಾಡುವುದರಿಂದ ನೀನು ಪಾಪ ಮುಕ್ತನಾಗುವೆ? ಯಾವ ರೀತಿಯಿಂದ ನಾನು ನಿನ್ನ ಪಾಪವನ್ನು ಕಡಿಮೆಗೊಳಿಸಬಲ್ಲೆ? ಎಂಬುದನ್ನು ನೀನು ನನಗೆ ತಿಳಿಸು.

೨೩ ಸೂಕರವು ಹೇಳತೊಡಗಿತು. ಹೇ ರಾಜನೇ! ಭುಕ್ತಿ ಹಾಗೂ ಮುಕ್ತಿಗಳನ್ನು ನೀಡುವ ಸಾಮರ್ಥ್ಯ ವ್ಯತೀಪಾತವ್ರತಕ್ಕೆ ಇದೆ. ಮಹಾರಾಜನೇ! ಹಿಂದೆ ನೀನು ಈ ವ್ರತವನ್ನು ಮಾಡಿರುವಿ.

೨೪ ಯಾವ ರೀತಿಯಾಗಿ ತಾಯಿಯು ಮಗನಿಗೆ ಎಲ್ಲೆಡೆ ಸುಖವನ್ನುಂಟು ಮಾಡುವಳೋ, ಅದೇ ರೀತಿ ಈ ವ್ರತವು ಇಹಲೋಕದಲ್ಲೂ ಮತ್ತು ಪರಲೋಕದಲ್ಲೂ ಹಿತಕಾರಿಯಾಗಿದೆ.

೨೫ ಉದಯಿಸಿದ ಸೂರ್ಯನು ಎಲ್ಲೆಡೆಯ ಕತ್ತಲೆಯನ್ನು ಪರಿಹರಿಸುವಂತೆ, ಈ ವ್ಯತೀಪಾತ ವ್ರತವು ಎಲ್ಲ ಪಾಪಗಳನ್ನು ನಾಶಗೊಳಿಸುವುದು.

೨೬ ವಿಷ್ಣುವು ತನ್ನ ಭಕ್ತರಿಗೆ ಶ್ರೇಷ್ಠವಾದ ಮೋಕ್ಷವನ್ನು ನೀಡುವಂತೆ ಈ ವ್ರತವು ಕೂಡ ಶ್ರೇಷ್ಠವಾದ ಫಲವನ್ನು ನೀಡುವುದು. ಸಂದೇಹವಿಲ್ಲ.

೨೭ ಅಮವಾಸ್ಯೆಯಂದು ಮಾಡಿದ ದಾನಕ್ಕೆ ನೂರು ಪಟ್ಟು ಫಲವಾದರೆ, ದಿನಕ್ಷಯ

ವ್ಯತೀಪಾತವ್ರತಸ್ಯಾಸ್ಯ ವಿಧಾನಂ ಶೃಣು ತತ್ತ್ವತಃ ।
ಮಾಘೇ ವಾ ಫಾಲ್ಗುನೇ ಮಾಸಿ ಧನುರ್ಮಾಸಿ ವಿಶೇಷತಃ ॥೨೮॥

ವ್ಯತೀಪಾತೋ ದಿನೇ ಯಸ್ಮಿನ್ ಪ್ರಾರಭೇತ ವ್ರತೋತ್ತಮಮ್ ।
ಮೌನೀ ಜಿತೇಂದ್ರಿಯಃ ಪ್ರಾತಸ್ತಟಾಕಂ ವಾ ನದೀಂ ವ್ರಜೇತ್ ॥೨೯॥

ಸ್ವಶಾಖೋಕ್ತವಿಧಾನೇನ ಸ್ನಾತ್ವಾ ನಿಯತಮಾನಸಃ ।
ವಿಷ್ಣೋಃ ಪೂಜಾಂ ಪ್ರಕುರ್ವೀತ ವಿತ್ತಶಾಠ್ಯವಿವರ್ಜಿತಃ ॥೩೦॥

ತಿಲೈಃ ಪೂರ್ಣಂ ಕಾಂಸ್ಯಪಾತ್ರಂ ದತ್ವಾ ಪೂಜಾಂ ಸಮಾರಭೇತ್ ।
ಪ್ರತಿಮಾಂ ಕಾರಯೇದ್ರಾಜನ್ ಚಕ್ರಪಾಣೇರ್ಮನೋಹರಮ್ ॥೩೧॥

ಪಲೇನ ವಾ ತದರ್ಧೇನ ತದರ್ಧಾರ್ಧೇನ ವಾ ಪುನಃ ।
ಶಂಖಚಕ್ರಗದಾಪಾಣಿಂ ಪದ್ಮಹಸ್ತಂ ಹಿರಣ್ಮಯಮ್ ॥೩೨॥

---

(ಕ್ಷಯ ತಿಥಿ) ದಂದು ಸಾವಿರಪಟ್ಟು ಫಲ, ವಿಷುವದಲ್ಲಿ ಲಕ್ಷಪಟ್ಟು ಫಲವಾದರೆ ವ್ಯತೀಪಾತದಂದು ನೀಡಿದ ದಾನವು ಅನಂತಫಲವನ್ನು ನೀಡುವುದು.

೨೮ ವ್ಯತೀಪಾತವ್ರತದ ವಿಧಾನವನ್ನು ಚೆನ್ನಾಗಿ ಕೇಳು. ಮಾಘ ಅಥವಾ ಫಾಲ್ಗುಣ ಮಾಸದಲ್ಲಿ ಅದರಲ್ಲೂ ವಿಶೇಷವಾಗಿ ಧನುರ್ಮಾಸದಲ್ಲಿ

೨೯ ವ್ಯತೀಪಾತವಿರುವ ದಿನದಂದು ಈ ವ್ರತವನ್ನು ಆರಂಭಿಸಬೇಕು. ಪ್ರಾತಃಕಾಲದಲ್ಲೆದ್ದು ಮಾತನಾಡದೇ ಇಂದ್ರಿಯಗಳನ್ನು ಬೇರೆತ್ತಲೂ ಹರಿಸದೇ ಭಗವಂತನನ್ನು ಸ್ಮರಿಸುತ್ತ ಸರೋವರಕ್ಕಾಗಲೀ ಅಥವಾ ನದಿಯ ಬಳಿಗಾಗಲಿ ಹೋಗಬೇಕು.

೩೦ ತಾನು ಸೇರಿದ ವೇದದ ಶಾಖೆಗೆ ಅನುಸರಿಸಿ ಸ್ನಾನವನ್ನು ಮಾಡಿ ಮನಸ್ಸನ್ನು ಭಗವಂತನಲ್ಲಿ ನೆಲೆಗೊಳಿಸಿ, ಶ್ರೀಮಂತಿಕೆಯ ಗರ್ವವನ್ನು ತೋರಿಸದೇ ದೇವ ದೇವನಾದ ವಿಷ್ಣುವಿನ ಪೂಜೆಯನ್ನು ಮಾಡಬೇಕು.

೩೧ ಎಳ್ಳು ತುಂಬಿದ ಕಂಚಿನ ಪಾತ್ರೆಯನ್ನು ದಾನ ನೀಡಿ ಪೂಜೆಯನ್ನು ಆರಂಭಿಸಬೇಕು. ಸುಂದರವಾದ ವಿಷ್ಣುವಿನ ಪ್ರತಿಮೆಯನ್ನು ಮಾಡಿಸಬೇಕು.

೩೨ ಒಂದು ಪಲ ಪರಿಮಾಣವಾಗಲೀ ಅಥವಾ ಅದರ ಅರ್ಧವಾಗಲೀ, ಕಾಲುಭಾಗವಾಗಲೀ, ಸುವರ್ಣದಿಂದ ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿದ ಬಂಗಾರಮಯವಾದ

ಲಕ್ಷ್ಮ್ಯಾ ಸಮನ್ವಿತಂ ದೇವಂ ಪೂಜಯೇದ್ಗರುಡಧ್ವಜಮ್ ।
ಕಪಿಲಾಕ್ಷೀರಪೂರ್ಣಂ ತು ಕಾಂಸ್ಯಭಾಜನಮುತ್ತಮಮ್ ॥೩೩॥

ಸ್ಥಾಪಯೇದ್ದೇವದೇವಸ್ಯ ಸ್ನಾನಂ ತತ್ರ ಪ್ರಕಲ್ಪಯೇತ್ ।
ಶಯ್ಯಾಂ ಚ ಸನ್ನಿಧೌ ತಸ್ಯ ಸಂಸ್ಥಾಪ್ಯ ಚ ಮನುಂ ಸ್ಮರನ್ ॥೩೪॥

ಅನಂತಶಯನಂ ದೇವಮನಂತಫಲದಂ ಹರಿಮ್ ।
ಲಕ್ಷ್ಮ್ಯಾ ಸಮನ್ವಿತಂ ವಿಷ್ಣುಂ ಭಕ್ತ್ಯಾ ಸಂಪೂಜಯೇನ್ನೃಪ ॥೩೫॥

ವೈದಿಕೈಸ್ತಾಂತ್ರಿಕೈರ್ಮಂತ್ರೈಃ ನಾನಾಪುಷ್ಪೈರ್ವಿಧಾನತಃ ।
ಮುದ್ಗಾನ್ನಂ ಪಾಯಸಂ ಚೈವ ಶರ್ಕರಾಘೃತಸಂಯುತಮ್ ॥೩೬॥

ನಾನಾಶಾಖೈರ್ವ್ಯಂಜನೈಶ್ಚ ಭಕ್ಷ್ಯಭೋಜ್ಯಾದಿತಕ್ರಕೈಃ ।
ದಧ್ಯನ್ನಂ ಲವಣೋಪೇತಂ ನಿವೇದ್ಯಂ ಸುಮನೋಹರಮ್ ॥೩೭॥

ನಿವೇದ್ಯ ದೇವದೇವಾಯ ಪ್ರಾರ್ಥಿತಂ ಪ್ರಾರ್ಥಯೇದ್ ವ್ರತೀ ।
ದೇವ ದೇವ ಹೃಷಿಕೇಶ ಪುರಾಣಪುರುಷೋತ್ತಮ ॥೩೮॥

---

೩೩ ಲಕ್ಷ್ಮೀಯಿಂದೊಡಗೂಡಿದ ಗರುಡನ ಮೇಲೆ ಕುಳಿತ ವಿಷ್ಣುವನ್ನು ಪೂಜಿಸಬೇಕು. ಕಪಿಲಗೋವಿನ ಹಾಲಿನಿಂದ ತುಂಬಿದ ಕಂಚಿನ ಪಾತ್ರೆಯನ್ನು,

೩೪ ಸ್ಥಾಪಿಸಬೇಕು. ಅ ಪ್ರತಿಮೆಯಲ್ಲಿ ದೇವರನ್ನು ಪೂಜಿಸಬೇಕು. ಸ್ನಾನ ಮುಂತಾದ ಉಪಚಾರಗಳನ್ನು ಸಮರ್ಪಿಸಬೇಕು. ದೇವರ ಸನ್ನಿಧಿಯಲ್ಲಿ ಶಯ್ಯೆಯ ವ್ಯವಸ್ಥೆಯನ್ನು ಮಾಡಬೇಕು.

೩೫ ಹೇ ರಾಜನೇ! ಶೇಷನ ಮೇಲೆ ಒರಗಿರುವ ಭಕ್ತರಿಗೆ ಅನಂತಫಲಗಳನ್ನು ನೀಡುವ ಲಕ್ಷ್ಮೀ ಸಹಿತನಾದ ವಿಷ್ಣುವನ್ನು ಭಕ್ತಿಯಿಂದ ಪೂಜಿಸಬೇಕು.

೩೬ ವೇದೋಕ್ತ ಹಾಗೂ ಪಂಚರಾತ್ರಗಳಲ್ಲಿ ಹೇಳಿದ ಮಂತ್ರಗಳು ಹಾಗೂ ಅನೇಕ ರೀತಿಯ ವಿಹಿತವಾದ ಪುಷ್ಪಗಳಿಂದ ವಿಧಿಪೂರ್ವಕವಾಗಿ ಪೂಜಿಸಬೇಕು. ಸಕ್ಕರೆ, ತುಪ್ಪಗಳಿಂದ ಕೂಡಿದ ಹುಗ್ಗಿ ಹಾಗೂ ಪಾಯಸವನ್ನು,

೩೭ ಅನೇಕ ರೀತಿಯ ಪಲ್ಯಗಳು, ವ್ಯಂಜನಗಳು, ಭಕ್ಷ್ಯ ಭೋಜ್ಯಗಳು, ಮಜ್ಜಿಗೆ ಹಾಗೂ ಉಪ್ಪಿನಿಂದ ಕೂಡಿದ ಮೊಸರನ್ನವನ್ನು ನಿವೇದಿಸಬೇಕು.

೩೮ ಇದೆಲ್ಲವನ್ನು ದೇವ ದೇವನಾದ ಭಗವಂತನಿಗೆ ನಿವೇದಿಸಿ ವ್ರತ ಮಾಡುವವನು ದೇವನನ್ನು ಪ್ರಾರ್ಥಿಸಬೇಕು. ದೇವತೆಗಳಿಗೂ ದೇವನಾದ ಪರಮಾತ್ಮನೇ! ಇಂದ್ರಿಯನಿಯಾಮಕನೇ! ಅನಾದಿಯಾದವನೇ! ಕ್ಷರಾಕ್ಷರ ಪುರುಷರಿಗಿಂತಲೂ ಉತ್ತಮನಾದ,

ವ್ಯತೀಪಾತದಿನೇ ದೇವ ಮಯಾ ತೇ ಪೂಜನಂ ಕೃತಮ್ ।
ಭವತ್ವನಂತಫಲದಂ ಪ್ರಾರ್ಥಿತಂ ದೇಹಿ ಮೇ ವಿಭೋ ॥೩೯॥

ಇತಿ ಸಂಪ್ರಾರ್ಥ್ಯ ದೇವೇಶಮರ್ಘ್ಯಂ ದದ್ಯಾದ್ವಿಚಕ್ಷಣಃ ।
ಗೃಹಾಣಾರ್ಘ್ಯಂ ವ್ಯತೀಪಾತ ಸೋಮಸೂರ್ಯಸುತ ಪ್ರಭೋ ॥೪೦॥

ಸಪ್ತಜನ್ಮ ಕೃತಂ ಪಾಪಂ ತ್ವತ್ಪ್ರಸಾದಾತ್ ಪ್ರಣಶ್ಯತು ।
ವಿಷ್ಣುಮಂತ್ರೇಣ ದೇವಾಯ ದದ್ಯಾದರ್ಘ್ಯಂ ಸಮಾಹಿತಃ ॥೪೧॥

ಹೋಮಂ ವ್ಯಾಹೃತಿಭಿಃ ಕುರ್ಯಾತ್ ತಿಲೈರಷ್ಟೋತ್ತರಂ ಶತಮ್ ।
ಬ್ರಾಹ್ಮಣಾನ್ ಭೋಜಯೇದಷ್ಟೌ ಮುದ್ಗಾನ್ನಂ ಪಾಯಸಂ ಚ ವೈ ॥೪೨॥

ವ್ರತೋಪದೇಷ್ಟ್ರೇ ವಿಪ್ರಾಯ ಶ್ರೋತ್ರಿಯಾಯ ಕುಟುಂಬಿನೇ ।
ಸಪರ್ಯಾಸಹಿತಾಂ ತಾಂ ತು ಪ್ರತಿಮಾಂ ಗುರವೇಽರ್ಪಯೇತ್ ॥೪೩॥

ಶಯ್ಯಾಂ ಚ ಗುರವೇ ದದ್ಯಾತ್ ಭಕ್ತ್ಯಾ ಸಂತುಷ್ಟಮಾನಸಃ ।
ಭೂಮಿರ್ವಾಥ ಸುವರ್ಣಂ ವಾ ದಕ್ಷಿಣಾಽತ್ರ ವಿಧೀಯತೇ ॥೪೪॥

---

೩೯ ದೇವನೇ! ವ್ಯತೀಪಾತದಿನದಂದು ನಾನು ನಿನ್ನ ಪೂಜೆಯನ್ನು ಮಾಡಿದ್ದೇನೆ. ಆ ಪೂಜೆಯು ಅನಂತಫಲದಾಯಕವಾಗಲಿ. ಹೇ ಭಗವಂತನೇ! ನಾನು ಇಚ್ಛಿಸಿದ ವರವನ್ನು ನೀಡು.

೪೦ ಜ್ಞಾನಿಯಾದವನು ಹೀಗೆ ದೇವರನ್ನು ಪ್ರಾರ್ಥಿಸಿ ಅರ್ಘ್ಯವನ್ನು ನೀಡಬೇಕು. ಹೇ ಸೂರ್ಯ ಚಂದ್ರರ ಪುತ್ರನಾದ ವ್ಯತೀಪಾತನೇ! ಈ ಅರ್ಘ್ಯವನ್ನು ಸ್ವೀಕರಿಸು.

೪೧ ನನ್ನ ಏಳು ಜನುಮಗಳ ಪಾಪವು ನಿನ್ನ ಅನುಗ್ರಹದಿಂದ ನಾಶವಾಗಲಿ. ಅದೇ ರೀತಿ ವಿಷ್ಣುಮಂತ್ರದಿಂದ (ಓಂ ವಿಷ್ಣವೇ ನಮಃ) ಭಗವಂತನಿಗೆ ಅರ್ಘ್ಯವನ್ನು ನೀಡಬೇಕು.

೪೨ 'ಭೂಃ ಭುವಃ ಸುವಃ' ಎಂಬ ವ್ಯಾಹೃತಿಮಂತ್ರಗಳಿಂದ ನೂರೆಂಟು ಬಾರಿ ತಿಲಹೋಮ ಮಾಡಬೇಕು. ಹುಗ್ಗಿ ಮತ್ತು ಪಾಯಸದಿಂದ ಎಂಟು ಜನ ಬ್ರಾಹ್ಮಣರನ್ನು ಭೋಜನ ಮಾಡಿಸಬೇಕು.

೪೩ ಈ ವ್ರತೋಪದೇಶವನ್ನು ಮಾಡಿದ ಗುರುವಾದ ಒಳ್ಳೆಯ ಕುಲದಲ್ಲಿ ಹುಟ್ಟಿದ, ಸದಾಚಾರ, ಅಧ್ಯಯನಗಳಲ್ಲಿ ನಿರತನಾದ ಸಕುಟುಂಬಿಯಾದ ಬ್ರಾಹ್ಮಣನಿಗೆ ಅಲಂಕಾರ ಸಹಿತವಾದ ಪ್ರತಿಮೆಯನ್ನು ದಾನ ಮಾಡಬೇಕು.

೪೪ ಶಯ್ಯಾದಾನವನ್ನು ಭಕ್ತಿಯಿಂದ ಮನಃಪೂರ್ವಕವಾಗಿ ಗುರುಗಳಿಗೆ ದಾನ

ವ್ಯತೀಪಾತದಿನೇ ಪ್ರಾಪ್ತೇ ಸ್ವರ್ಣದಾನಂ ಕರೋತಿ ಯಃ ।
ಸಂವತ್ಸರಕೃತಂ ಪಾಪಂ ತತ್‌ಕ್ಷಣಾದೇವ ನಶ್ಯತಿ ॥೪೫॥

ನಮಸ್ತೇಽಸ್ತು ವ್ಯತೀಪಾತ ಸೋಮಸೂರ್ಯಸುತ ಪ್ರಭೋ ।
ಯತ್ಕಿಂಚಿದ್ದೀಯತೇ ದ್ರವ್ಯಂ ತದಕ್ಷಯಮಿಹಾಸ್ತು ಮೇ ॥೪೬॥

ಗುಂಜಾಮಾತ್ರಮಿದಂ ಸ್ವರ್ಣಂ ದೇಯಂ ವಿಪ್ರಕರಾರ್ಪಿತಮ್ ।
ಹೇಮಾದ್ರಿಸದೃಶಂ ಭೂಯಾತ್ ಪ್ರೀಯತಾಂ ಮೇ ಜನಾರ್ದನಃ ॥೪೭॥

ಶಂಕುಕರ್ಣ ಪ್ರಲಂಬೋಷ್ಠ ಪಿಂಗದೃಕ್ ತುಂಗನಾಸಿಕ ।
ಅಷ್ಟಬಾಹೋ ಚತುರ್ವಕ್ತ್ರ ಶತಯೋಜನಮಾಯತ ॥೪೮॥

ವ್ಯತೀಪಾತಪ್ರಸಾದೇನ ಮಮ ಸಂತು ಮನೋರಥಾಃ ।
ಮಂತ್ರೇಣಾನೇನ ವಿಪ್ರಾಯ ದದ್ಯಾತ್ಸ್ವರ್ಣಂ ಸ್ವಶಕ್ತಿತಃ ॥೪೯॥

ಏವಂ ಸಂವತ್ಸರೇ ಪೂರ್ಣೇ ವ್ರತಸ್ಯೋದ್ಯಾಪನಂ ಚರೇತ್ ।
ಆದೌ ಚಾಂತೇ ಚ ಮಧ್ಯೇ ಚ ಕುರ್ಯಾದುದ್ಯಾಪನಂ ಬುಧಃ ॥೫೦॥

---

ಮಾಡಬೇಕು. ಈ ವ್ರತದಲ್ಲಿ ಭೂಮಿಯನ್ನಾಗಲೀ, ಸುವರ್ಣವನ್ನಾಗಲೀ ದಕ್ಷಿಣೆಯನ್ನಾಗಿ ನೀಡಬೇಕು.

೪೫ ವ್ಯತೀಪಾತದಿನದಂದು ಸುವರ್ಣದಾನ ಮಾಡಬೇಕು. ಇದರಿಂದ ಇಡಿಯ ವರ್ಷದಲ್ಲಿ ಮಾಡಿದ ಪಾಪವೆಲ್ಲವೂ ದೂರವಾಗುತ್ತದೆ.

೪೬ ವ್ಯತೀಪಾತದೇವತೆಯನ್ನು ಈ ರೀತಿಯಾಗಿ ಪ್ರಾರ್ಥಿಸಬೇಕು. ಚಂದ್ರ-ಸೂರ್ಯರ ಸುತನೆನಿಸಿದ ವ್ಯತಿಪಾತನೇ! ನಿನಗೆ ನಮಸ್ಕಾರಗಳು. ನಾನು ದಾನ ಮಾಡುವ ಅತ್ಯಲ್ಪ ದ್ರವ್ಯವೂ ಅಕ್ಷಯ ಫಲವನ್ನು ನೀಡಲಿ.

೪೭ ಬ್ರಾಹ್ಮಣನ ಹಸ್ತದಲ್ಲಿರಿಸಿದ ಈ ಗುಲಗಂಜಿ ಗಾತ್ರದ ಬಂಗಾರವು ಬಂಗಾರದ ಬೆಟ್ಟವಾಗಲಿ. ಜನಾರ್ದನನು ನನ್ನಲ್ಲಿ ಪ್ರೀತನಾಗಲಿ.

೪೮ ಶಂಖದಂತೆ ಕಿವಿಯುಳ್ಳ, ಉದ್ದಾದ ತುಟಿಗಳ, ಕೆಂಪು ಕಣ್ಣುಳ್ಳ, ಎತ್ತರವಾದ ಮೂಗಿನ, ಎಂಟು ಕೈಗಳು, ನಾಲ್ಕು ಮುಖದಿಂದ ಕೂಡಿದ, ನೂರು ಯೋಜನ ವಿಸ್ತಾರವಾದ ಸ್ವರೂಪವುಳ್ಳ

೪೯ ವ್ಯತೀಪಾತದ ಅನುಗ್ರಹದಿಂದ ನನ್ನೆಲ್ಲ ಕಾಮನೆಗಳು ಪೂರ್ಣಗೊಳ್ಳಲಿ. ಎಂದು ಪ್ರಾರ್ಥಿಸುತ್ತಾ ಈ ಶ್ಲೋಕಗಳನ್ನು ಪಠಿಸಿ ಬ್ರಾಹ್ಮಣನಿಗೆ ತನ್ನ ಶಕ್ತಿಗನುಸಾರವಾಗಿ ಸ್ವರ್ಣವನ್ನು ದಾನ ಮಾಡಬೇಕು.

೫೦ ಹೀಗೆ ವರುಷವು ಪೂರ್ಣವಾಗಲು ವ್ರತದ ಉದ್ಯಾಪನೆಯನ್ನು ಮಾಡಬೇಕು.

ನಿಷ್ಕತ್ರಯೇಣ ವಾರ್ಧೇನ ತದರ್ಧಾರ್ಧೇನ ವಾ ಪುನಃ ।
ವ್ಯತೀಪಾತಸ್ವರೂಪಂ ತು ಕುರ್ಯಾದಷ್ಟಭುಜಂ ನೃಪ ॥೫೦॥

ಪಿಂಗಲಶ್ಮಶ್ರುಕೇಶಾಂತಂ ಲಂಬಕೂರ್ಚಂ ಕೃಶೋದರಮ್ ।
ದೀರ್ಘಜಿಹ್ವಕರಾಲಾಸ್ಯಂ ಸೂರ್ಯಾಗ್ನಿಸಮತೇಜಸಮ್ ॥೫೧॥

ತ್ರೈಲೋಕ್ಯಂ ಭೋಕ್ತುಕಾಮಂ ಚ ರವೀಂದುಭ್ಯಾಂ ನಿವಾರಿತಮ್ ।
ಗೃಹಮಧ್ಯೇಽಥವಾ ಗೋಷ್ಠೇ ಶರ್ಕರಾಪೂರಿತೇ ಘಟೇ ॥೫೨॥

ಪ್ರತಿಷ್ಠಾಪ್ಯ ವ್ಯತೀಪಾತಮರ್ಚಯೇದ್ಭಕ್ತಿಸಂಯುತಃ ।
ಗಂಧಪುಷ್ಪಾಕ್ಷತೈರ್ಧೂಪೈಃ ವಸ್ತ್ರೈರ್ಮಾಲ್ಯೈರ್ಮನೋರಮೈಃ ॥೫೪॥

ಗೋದಾನಂ ತು ತತಃ ಕುರ್ಯಾದುದ್ಯಾಪನಫಲಾಪ್ತಯೇ ।
ಪಯಸ್ವಿನೀಂ ಸವತ್ಸಾಂ ಗಾಂ ಮನೋನಯನಹಾರಿಣೀಮ್ ॥೫೫॥

---

ವ್ರತದ ಪ್ರಾರಂಭದಲ್ಲಿ, ಮಧ್ಯದಲ್ಲಿ ಅಥವಾ ಕೊನೆಯಲ್ಲಿ ಉದ್ಯಾಪನೆಯನ್ನು ಮಾಡಬಹುದು.

೫೦ ಮೂರು ನಿಷ್ಕಗಳು ಅಥವಾ ಒಂದೂವರೆ ನಿಷ್ಕಗಳು ಅಥವಾ ನಿಷ್ಕದಿಂದ ಎಂಟು ಭುಜಗಳ ವ್ಯತೀಪಾತದ ವಿಗ್ರಹವನ್ನು ಮಾಡಿಸಬೇಕು.

೫೧ ಕೆಂಪಾದ ಮೀಸೆ ಕೂದಲುಗಳು, ಉದ್ದನೆಯ ಗಡ್ಡ, ತೆಳುವಾದ ಹೊಟ್ಟೆ ಉದ್ದನೆಯ ಚಾಚಿದ ನಾಲಿಗೆ, ಕರಾಲವಾದ ಮುಖ ಸೂರ್ಯ ಮತ್ತು ಅಗ್ನಿಯಂತೆ ಜ್ವಲಿಸುವ ತೇಜಸ್ಸು,

೫೨ ಮೂರು ಲೋಕಗಳನ್ನೇ ತಿನ್ನಲು ಹೊರಟು ಸೂರ್ಯ-ಚಂದ್ರರಿಂದ ತಡೆಯಲ್ಪಟ್ಟ ವ್ಯತೀಪಾತನ ವಿಗ್ರಹವನ್ನು ಮನೆಯ ಮಧ್ಯದಲ್ಲಾಗಲೀ ಅಥವಾ ಕೊಟ್ಟಿಗೆಯಲ್ಲಾಗಲೀ (ಗೋವುಗಳನ್ನು ಕಟ್ಟುವ ಜಾಗೆ) ಸಕ್ಕರೆಯಿಂದ ತುಂಬಿದ ಕಲಶದಲ್ಲಿ,

೫೪ ವ್ಯತೀಪಾತನನ್ನು ಪ್ರತಿಷ್ಠಾಪಿಸಿ ಮನೋಹರವಾದ ಗಂಧ, ಹೂವುಗಳು, ಅಕ್ಷತೆ, ಧೂಪ, ವಸ್ತ್ರಗಳು, ಮಾಲೆಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಬೇಕು.

೫೫ ಪೂಜೆಯ ನಂತರ ಉದ್ಯಾಪನೆಯ ಫಲಪ್ರಾಪ್ತಿಗೋಸುಗ ಗೋವನ್ನು ದಾನ ಮಾಡಬೇಕು. ಚೆನ್ನಾಗಿ ಹಾಲುಕರೆಯುವ, ಸರ್ವಾಂಗ ಸುಂದರವಾದ, ಕರುವಿನಿಂದ ಕೂಡಿದ, ಮನವನ್ನು ಆಕರ್ಷಿಸುವ ಸುಂದರರೂಪವುಳ್ಳ,

ಸ್ವರ್ಣಶೃಂಗೀಂ ರೂಪ್ಯಖುರಾಂ ಮುಕ್ತಾಮಾಲಾವಿಭೂಷಿತಾಮ್ ।
ಸುವರ್ಣತಿಲಕೋಪೇತಾಂ ಕಾಂಸ್ಯದೋಹಸಮನ್ವಿತಾಮ್ ॥೩೬॥

ಇತ್ಥಂ ವ್ರತಂ ತು ಯಃ ಕುರ್ಯಾತ್ ಶ್ರದ್ಧಾಭಕ್ತಿಸಮನ್ವಿತಃ ।
ಕೋಟಿಜನ್ಮಕೃತೈಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ॥೩೭॥

ಇದಂ ವ್ರತಂ ತ್ವಯಾ ರಾಜನ್ ಕೃತಂ ವೈ ಪೂರ್ವಜನ್ಮನಿ ।
ತತ್ಫಲಂ ದೇಹಿ ಮೇ ತ್ವಂ ತು ಮುಕ್ತ್ಯೈ ಸೂಕರಜನ್ಮತಃ ।
ಏವಮುಕ್ತೋ ನೃಪಶ್ರೇಷ್ಠಃ ಸೂಕರಾಯ ಫಲಂ ದದೌ ॥೩೮॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ
ನವಮೋಽಧ್ಯಾಯಃ ॥

---

೩೬ ಕೋಡುಗಳಿಗೆ ಬಂಗಾರದಿಂದ ಹಾಗೂ ಕಾಲಿನ ಗೊರಸುಗಳಿಗೆ ಬೆಳ್ಳಿಯಿಂದ ಅಲಂಕರಿಸಲ್ಪಟ್ಟ, ಮುತ್ತಿನ ಮಾಲೆಗಳಿಂದ ಶೋಭಿಸುವ, ಸುವರ್ಣದ ತಿಲಕದಿಂದ ಅಲಂಕೃತವಾದ, ಹಾಲು ಕರೆಯಲು ಕಂಚಿನ ಪಾತ್ರೆಯಿಂದೊಡಗೂಡಿದ ಹಸುವನ್ನು ದಾನ ಮಾಡಬೇಕು.

೩೭ ಈ ರೀತಿಯಾಗಿ ಶ್ರದ್ಧೆ, ಭಕ್ತಿಗಳಿಂದ ಈ ವ್ರತವನ್ನು ಆಚರಿಸಿದ ಮನುಜನು, ಕೋಟಿಜನ್ಮಗಳ ಪಾಪದಿಂದ ನಿಸ್ಸಂದೇಹವಾಗಿ ಮುಕ್ತನಾಗುವನು.

೩೮ ಹೇ ರಾಜನೇ! ಈ ವ್ರತವನ್ನು ನೀನು ಪೂರ್ವಜನ್ಮದಲ್ಲಿ ಮಾಡಿರುವೆ. ಈ ಸೂಕರಜನ್ಮದಿಂದ ಮುಕ್ತಿ ಹೊಂದಲು ಆ ವ್ರತದ ಪುಣ್ಯವನ್ನು ನನಗೆ ನೀಡು. ಸೂಕರನಿಂದ ಹೀಗೆ ಹೇಳಲ್ಪಟ್ಟ ರಾಜನು ಆ ಸೂಕರನಿಗೆ ತಾನು ಆಚರಿಸಿದ ವ್ರತದ ಫಲವನ್ನು ನೀಡಿದನು.

॥ ಇಲ್ಲಿಗೆ ಒಂಭತ್ತನೇ ಅಧ್ಯಾಯವು ಮುಗಿಯಿತು ॥

# ಅಥ ದಶಮೋಽಧ್ಯಾಯಃ

**ರಾಜೋವಾಚ :**

**ಯಸ್ತ್ವಯೋಕ್ತೋ ವ್ಯತೀಪಾತಃ ಕಸ್ಯ ಪುತ್ರೋ ಕದಾಽಜನಿ ।**
**ಏತನ್ಮೇ ವಿಸ್ತರಾದ್ ಬ್ರೂಹಿ ಸೂಕರ ಜ್ಞಾನಿಸತ್ತಮ ॥೧॥**

**ವರಾಹ ಉವಾಚ-**

**ಕದಾಚಿತ್ ಗೀಷ್ಪತೇರ್ಭಾರ್ಯಾಂ ಬಲಾಜ್ಜಗ್ರಾಹ ಚಂದ್ರಮಾಃ ।**
**ಮಿತ್ರತ್ವಾತ್ ಪ್ರಾಹ ತಂ ಸೂರ್ಯಃ ತ್ಯಜ ಭಾರ್ಯಾಂ ಬೃಹಸ್ಪತೇಃ ॥೨॥**

**ಶ್ರುತ್ವಾ ಚಂದ್ರೇಣ ತದ್ವಾಕ್ಯಂ ಸೂರ್ಯಂ ಕ್ರೋಧಾದವೈಕ್ಷತ ।**
**ತಂ ಸೂರ್ಯೋಽಪಿ ತಥಾಽಪಶ್ಯತ್ ಪರದಾರಪ್ರಧರ್ಷಕಮ್ ॥೩॥**

**ಉಭಯೋರ್ದೃಷ್ಟಿಸಂಪಾತೇ ಕ್ರುದ್ಧಯೋಶ್ಚಂದ್ರಸೂರ್ಯಯೋಃ ।**
**ಉತ್ಪನ್ನೋಽಯಂ ವ್ಯತೀಪಾತಃ ಪೂಜ್ಯೋಽಭೀಷ್ಟಫಲಾಪ್ತಯೇ ॥೪॥**

**ಇತ್ಯುಕ್ತಃ ಸೂಕರೇಣಾಸೌ ರಾಜಾ ಹರ್ಷಸಮನ್ವಿತಃ ।**
**ಮಯಾ ಪುರಾ ಕೃತಂ ಪುಣ್ಯಂ ಸೂಕರ ಪ್ರತಿಗೃಹ್ಯತಾಮ್ ॥೫॥**

---

೧ ಹರ್ಯಶ್ವರಾಜನು ಕೇಳುತ್ತಾನೆ. ಜ್ಞಾನಿಶ್ರೇಷ್ಠನಾದ ಸೂಕರನೇ! ನೀನು ಹೇಳಿದ ಈ ವ್ಯತೀಪಾತನು ಯಾರ ಮಗನು, ಯಾವಾಗ ಜನಿಸಿದನು ಎಂಬುದನ್ನು ನನಗೆ ವಿಸ್ತಾರವಾಗಿ ಹೇಳು.

೨ ಹರ್ಯಶ್ವನ ಮಾತನ್ನು ಕೇಳಿ ಸೂಕರನು ಹೇಳಿದನು. ಒಂದು ಸಾರಿ ಬೃಹಸ್ಪತ್ಯಾಚಾರ್ಯರ ಪತ್ನಿಯನ್ನು ಚಂದ್ರನು ಬಲಾತ್ಕಾರದಿಂದ ಗ್ರಹಣ ಮಾಡಿದನು. ಚಂದ್ರನ ಗೆಳೆಯನಾದ ಸೂರ್ಯನು ಬೃಹಸ್ಪತಿಯ ಪತ್ನಿಯನ್ನು ಬಿಟ್ಟು ಬಿಡುವಂತೆ ಸಲಹೆ ನೀಡಿದನು.

೩ ಇದರಿಂದ ಕುಪಿತನಾದ ಚಂದ್ರನು ಸೂರ್ಯನನ್ನು ಕೋಪದಿಂದ ನೋಡಿದನು. ಪರಪತ್ನಿಯನ್ನು ಗ್ರಹಿಸಿದ ಚಂದ್ರನನ್ನು ಸೂರ್ಯನು ಕೂಡ ಕ್ರೋಧದಿಂದ ಕೆಂಪಾದ ಕಣ್ಣುಗಳಿಂದ ನೋಡಿದನು.

೪ ಕ್ರುದ್ಧರಾದ ಸೂರ್ಯ ಚಂದ್ರರ ದೃಷ್ಟಿಯು ಸಂಗಮಿಸಲು ಅಭೀಷ್ಟಗಳನ್ನು ನೀಡುವ ಪೂಜ್ಯನಾದ ವ್ಯತೀಪಾತನ ಜನ್ಮವಾಯಿತು.

೫ ಸೂಕರನು ಹೇಳಿದುದನ್ನು ಕೇಳಿ ಸಂಪ್ರೀತನಾದ ರಾಜನು ಸೂಕರನೇ! ನಾನು ಹಿಂದೆ ಮಾಡಿದ ಪುಣ್ಯವನ್ನು ನಿನಗೆ ನೀಡುವೆನು ಎಂದನು.

ತೇನೈವಮುಕ್ತೋ ಹರ್ಯಶ್ವಾತ್ ಸೂಕರೋ ಪುಣ್ಯಮಗ್ರಹೀತ್ ।
ತತ್ಕ್ಷಣಾತ್ತೇನ ಪುಣ್ಯೇನ ಸೂಕರೋ ಮುಕ್ತಕಿಲ್ಬಿಷಃ ॥೬॥

ದಿವ್ಯಂ ವಿಮಾನಮಾಸ್ಥಾಯ ವಾಕ್ಯಂ ಚೇದಮುವಾಚ ಹ ।
ಹೇ ಜನಾಃ ಕಿಂ ನ ಜಾನೀಥ ವ್ಯತೀಪಾತವ್ರತೋತ್ತಮಮ್ ॥೭॥

ಇಹೈವ ಸುಖದಂ ಪುಸಾಂ ಪರತ್ರ ಚ ಸುಖಾವಹಮ್ ।
ದೃಷ್ಟ್ವಾ ಮಾಂ ಪಾಪನಿರ್ಮುಕ್ತಂ ವ್ರತಸ್ಯಾಸ್ಯ ಪ್ರಭಾವತಃ ॥೮॥

ವಿಶ್ವಾಸಃ ಕ್ರಿಯತಾಮಸ್ಮಿನ್ ವ್ಯತೀಪಾತವ್ರತೇ ಶುಭೇ ।
ಇತ್ಯುಕ್ತ್ವಾ ಸ ಯಯೌ ವೈಶ್ಯೋ ವೈಕುಂಠಭವನಂ ಪ್ರತಿ ॥೯॥

ತಂ ದೃಷ್ಟ್ವಾ ಸ್ವರ್ಗತಃ ಸೋಽಥ ರಾಜ್ಞೋ ವೈ ಪಶ್ಯತಸ್ತದಾ ।
ಆಶ್ಚರ್ಯಸಹಿತೋ ಭೂತ್ವಾ ದೇವರಾಜೋಽಕರೋದ್ ವ್ರತಮ್ ॥೧೦॥

ತತೋ ರಾಜಾ ಪುರೀಂ ಗತ್ವಾ ವ್ರತಂ ಚಕ್ರೇ ವಿಧಾನತಃ ।
ಸರ್ವಸ್ವಂ ದತ್ತವಾಂಸ್ತತ್ರ ವ್ಯತೀಪಾತವ್ರತೇ ಶುಭೇ ॥೧೧॥

ತತೋ ರಾಜ್ಯಂ ಚಿರಂ ಭುಕ್ತ್ವಾ ದೇವದೇವಸ್ಯ ಪೂಜನಾತ್ ।
ಹರ್ಯಶ್ವಃ ಪ್ರಾಪ್ತವಾನಂತೇ ವಿಷ್ಣೋಸ್ತತ್ಪರಮಂ ಪದಮ್ ॥೧೨॥

---

೬ ರಾಜನಿಂದ ಹೀಗೆ ಹೇಳಲ್ಪಟ್ಟ ಸೂಕರವು ಪುಣ್ಯವನ್ನು ಸ್ವೀಕರಿಸಿತು. ಆ ಕ್ಷಣದಲ್ಲಿಯೇ ಆ ಪುಣ್ಯಪ್ರಭಾವದಿಂದ ಪಾಪಮುಕ್ತವಾದ ಆ ಸೂಕರವು,

೭ ದೇವತೆಗಳು ಕಳಿಸಿದ ವಿಮಾನವನ್ನೇರಿ ಹೀಗೆ ಹೇಳಿತು. ಹೇ ಜನಗಳೇ! ಉತ್ತಮವಾದ ವ್ಯತೀಪಾತವ್ರತವು ನಿಮಗೆ ತಿಳಿದಿಲ್ಲವೇ?

೮ ಇದು ಮಾನವರಿಗೆ ಈ ಲೋಕದಲ್ಲೂ ಹಾಗೂ ಪರಲೋಕದಲ್ಲೂ ಸುಖವನ್ನು ನೀಡುವುದು. ಈ ವ್ರತದ ಪ್ರಭಾವದಿಂದ ಪಾಪಮುಕ್ತನಾದ ನನ್ನನ್ನು ನೋಡಿರಿ.

೯ ಹಾಗೂ ಶುಭತಮ ವ್ಯತೀಪಾತವ್ರತದಲ್ಲಿ ವಿಶ್ವಾಸ ಮಾಡಿರಿ. ಹೀಗೆಂದು ಹೇಳಿದ ಆ ಪೂರ್ವಜನ್ಮದ ವೈಶ್ಯನು ವೈಕುಂಠವನ್ನು ಕುರಿತು ಹೋದನು.

೧೦ ರಾಜನ ಎದುರಿನಲ್ಲೇ ಸ್ವರ್ಗಕ್ಕೆ ಹೋದ ಸೂಕರನನ್ನು ನೋಡಿ ಆಶ್ಚರ್ಯ ಚಕಿತನಾದ ಇಂದ್ರದೇವನು ಈ ವ್ಯತೀಪಾತವ್ರತವನ್ನು ಆಚರಿಸಿದನು.

೧೧ ನಂತರ ರಾಜನು ತನ್ನ ನಗರವನ್ನು ಸೇರಿ, ವಿಧಿಪೂರ್ವಕವಾಗಿ ವ್ಯತೀಪಾತ ವ್ರತವನ್ನು ಆಚರಿಸಿ ತನ್ನ ಸರ್ವಸ್ವವನ್ನು ದಾನ ನೀಡಿದನು.

೧೨ ನಂತರ ಆ ವ್ರತದ ಪ್ರಭಾವದಿಂದ ಬಹುಕಾಲದ ವರೆಗೆ ರಾಜ್ಯವನ್ನಾಳಿ ಕೊನೆಗೆ ವಿಷ್ಣುವಿನ ಪರಮಪದವನ್ನು ಹೊಂದಿದನು.

**ಅತಸ್ತ್ವಂ ಕುರು ರಾಜೇಂದ್ರ ವ್ಯತೀಪಾತದಿನೇ ಶುಭೇ ।**
**ಮಾರ್ಗಶೀರ್ಷೇ ವಿಶೇಷೇಣ ಮುದ್ಗಾನ್ನೈರ್ಹರಿಪೂಜನಮ್ ||೧೩||**

**ವ್ಯತೀಪಾತದಿನೇ ರಾಜನ್ ಬ್ರಾಹ್ಮಣಾನ್ ಭೋಜಯಸ್ವ ಚ ।**
**ಗುಂಜಾಮಾತ್ರಂ ಸ್ವರ್ಣದಾನಂ ವಿತ್ತಶಾಠ್ಯವಿವರ್ಜಿತಃ ||೧೪||**

**ಸರ್ವಪಾಪಕ್ಷಯಕರಂ ನೃಣಾಮಿಹ ಸುಖಪ್ರದಮ್ ।**
**ಇದಂ ಯಃ ಕುರುತೇ ಮರ್ತ್ಯಃ ಶ್ರದ್ಧಾಭಕ್ತಿಸಮನ್ವಿತಃ ||೧೫||**

**ಸರ್ವಪಾಪವಿನಿರ್ಮುಕ್ತೋ ವಿಷ್ಣುಸಾಯುಜ್ಯಮಾಪ್ನುಯಾತ್ ।**
**ಧರ್ಮಾರ್ಥೀ ಪ್ರಾಪ್ನುಯಾತ್ ಧರ್ಮಂ ಜ್ಞಾನಾರ್ಥೀ ಜ್ಞಾನವಾನ್ ಭವೇತ್ ||೧೬||**

**ಪುತ್ರಾರ್ಥೀ ವಾ ಲಭೇತ್ಪುತ್ರಂ ಧನಾರ್ಥೀ ಲಭತೇ ಧನಮ್ ।**
**ಸ್ತ್ರೀಕಾಮಃ ಸುಂದರೀಂ ನಾರೀಂ ವ್ರತಸ್ಯಾಸ್ಯ ಪ್ರಭಾವತಃ ||೧೭||**

**ವ್ಯತೀಪಾತವ್ರತಕಥಾಂ ವ್ಯತೀಪಾತದಿನೇ ಪಠನ್ ।**
**ಜ್ಞಾನವಾನ್ ಧನವಾನ್ ಶ್ರೀಮಾನ್ ಪರತ್ರೇಹ ಸುಖೀ ಭವೇತ್ ||೧೮||**

**|| ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ ದಶಮೋಽಧ್ಯಾಯಃ ||**

---

೧೩ ಆದುದರಿಂದ ಧರ್ಮರಾಜನೇ! ನೀನು ಧನುರ್ಮಾಸದ ವ್ಯತೀಪಾತ ದಿನದಂದು ಮುದ್ಗಾನ್ನದಿಂದ ಶ್ರೀಹರಿಯನ್ನು ವಿಶೇಷವಾಗಿ ಪೂಜಿಸು.

೧೪ ವ್ಯತೀಪಾತ ದಿನದಂದು ಬ್ರಾಹ್ಮಣರ ಭೋಜನ ಮಾಡಿಸು. ಧನಮದವಿಲ್ಲದೆ ಗುಲಗಂಜಿಯಷ್ಟು ಬಂಗಾರವನ್ನಾದರೂ ದಾನ ಮಾಡು.

೧೫ ಆ ದಾನವು ಎಲ್ಲ ಪಾಪಗಳನ್ನು ಕಳೆದು ಇಲ್ಲಿ ಮನುಜರಿಗೆ ಸುಖ ನೀಡುವುದು. ಯಾವ ಮಾನವನು ಇದನ್ನು ಶ್ರದ್ಧೆ-ಭಕ್ತಿಗಳಿಂದ ಆಚರಿಸುವನೋ,

೧೬ ಅಂಥ ಮಾನವನು ಪಾಪದೂರನಾಗಿ ವಿಷ್ಣುವಿನ ಸಾಯುಜ್ಯವನ್ನು ಹೊಂದುವನು. ಧರ್ಮವನ್ನು ಅಪೇಕ್ಷಿಸುವವನು ಧಾರ್ಮಿಕನಾಗುವನು. ಜ್ಞಾನವನ್ನು ಬೇಡುವವನು ಜ್ಞಾನವಂತನಾಗುವನು.

೧೭ ಮಕ್ಕಳ ಬಯಕೆ ಇದ್ದವರು ಸತ್ಸಂತಾನವನ್ನು, ಹಣದ ಅಭಿಲಾಷೆ ಇದ್ದವರು ಧನವನ್ನು, ಸ್ತ್ರೀಕಾಮನೆ ಇದ್ದವರು ಸುಂದರಿಯಾದ ಸ್ತ್ರೀಯನ್ನು ಈ ವ್ರತದ ಪ್ರಭಾವದಿಂದ ಪಡೆಯುತ್ತಾರೆ.

೧೮ ಈ ವ್ಯತೀಪಾತವ್ರತದ ಕಥೆಯನ್ನು ವ್ಯತೀಪಾತ ದಿನದಂದು ಪಠಿಸಿದವನು, ಜ್ಞಾನಿಯೂ, ಧನಿಕನೂ, ಶ್ರೀಮಂತನೂ, ಕಾಂತಿಯುಕ್ತನೂ ಆಗಿ ಈ ಲೋಕದಲ್ಲೂ ಹಾಗೂ ಪರಲೋಕದಲ್ಲೂ ಸುಖಿಯಾಗುವನು.

# ಅಥ ಏಕಾದಶೋಽಧ್ಯಾಯಃ

ದಧಿಪಾಲ ಉವಾಚ-

ಕೃಷ್ಣ ಕೃಷ್ಣ ದಯಾಸಿಂಧೋ ಯದೂನಾಂ ಕುಲವರ್ಧನ ।
ತೃಪ್ತಿರ್ನ ಜಾಯತೇಽಸ್ಮಾಕಂ ಧನುರ್ಮಾಸಸ್ಯ ವೈಭವಮ್ ॥೧॥

ಶೃಣ್ವತಾಂ ವಿಸ್ಮಯಕರಂ ದೇವದೇವ ಜಗತ್ಪತೇ ।
ತ್ವಂ ವೇತ್ಸಿ ಸರ್ವಧರ್ಮಾನ್ವೈ ತನ್ಮಹ್ಯಂ ವದ ವಿಸ್ತರಾತ್ ॥೨॥

ಕೋದಂಡಸ್ಥೇ ತು ಮಾರ್ತಾಂಡೇ ಮುದ್ಗಾನ್ನಂ ಯೋ ನಿವೇದಯೇತ್ ।
ಸಹಸ್ರವಾರ್ಷಿಕೀ ಪೂಜಾ ದಿನೇನೈಕೇನ ಲಭ್ಯತೇ ॥೩॥

ಜನ್ಮಾಂತರಸಹಸ್ರೇಷು ಯೇನ ತಪ್ತಂ ಮಹತ್ತಪಃ ।
ಪೂಜಾರುಣೋದಯೇ ಭಾನೌ ಚಾಪಸ್ಥೇ ಘಟತೇ ಹರೇಃ ॥೪॥

ನ ದಾನೇನ ನ ಯಜ್ಞೇನ ನ ತಪೋಭಿಃ ವ್ರತಾದಿನಾ ।
ಮುದ್ಗಾನ್ನೇನ ಧನುರ್ಮಾಸೇ ಯಥಾ ಪ್ರೀಣಾತಿ ಕೇಶವಃ ॥೫॥

---

೧ ಹೇ ದಯಾಸಾಗರನೇ! ಯದುಕುಲವರ್ಧನನೇ! ಧನುರ್ಮಾಸದ ವೈಭವವನ್ನು ಕೇಳುತ್ತಿರುವ ನನಗೆ ತೃಪ್ತಿಯಾಗುತ್ತಿಲ್ಲ.

೨ ಕೇಳುಗರಿಗೆ ಆಶ್ಚರ್ಯವುಂಟು ಮಾಡುವ ಈ ಧನುರ್ಮಾಸದ ಮಹಿಮೆಯನ್ನು ನೀನು ಚೆನ್ನಾಗಿ ಬಲ್ಲೆ. ಅದನ್ನು ನನಗೆ ವಿಸ್ತಾರವಾಗಿ ಹೇಳು.

೩ ಸೂರ್ಯನು ಧನುರಾಶಿಯಲ್ಲಿರುವಾಗ (ಧನುರ್ಮಾಸದಲ್ಲಿ) ಭಗವಂತನಿಗೆ ಮುದ್ಗಾನ್ನವನ್ನು ನಿವೇದಿಸಿದವನು ಸಾವಿರ ವರುಷದ ಪೂಜೆಯ ಫಲವನ್ನು ಒಂದೇ ದಿನದ ಪೂಜೆಯಿಂದ ಪಡೆಯುವನು.

೪ ಸಾವಿರಾರು ಜನ್ಮಗಳಲ್ಲಿ ಮಹತ್ತಾದ ತಪವನ್ನು ಆಚರಿಸಿದವನಿಗೆ ಮಾತ್ರ ಧನುರ್ಮಾಸದ ಅರುಣೋದಯದಲ್ಲಿ ಭಗವಂತನ ಪೂಜೆ ಮಾಡುವ ಸೌಭಾಗ್ಯವು ದೊರಕುವುದು.

೫ ಧನುರ್ಮಾಸದಲ್ಲಿ ಮುದ್ಗಾನ್ನ ಸಮರ್ಪಣೆಯಿಂದ ದೇವನು ಪ್ರೀತನಾಗುವಂತೆ ದಾನದಿಂದಾಗಲೀ, ಯಜ್ಞದಿಂದಾಗಲೀ, ತಪಸ್ಸಿನಿಂದಾಗಲೀ ಅಥವಾ ಬೇರೆ ವ್ರತಗಳಿಂದಾಗಲೀ ಪ್ರೀತನಾಗುವುದಿಲ್ಲ.

**ಕೋಟಿಯಜ್ಞಾಯುತೈಃ ಪುಣ್ಯಂ ತೀರ್ಥಕೋಟಿನಿಷೇವಣಾತ್ ।**
**ಗವಾಂ ಕೋಟಿಪ್ರದಾನಾಚ್ಚ ಕನ್ಯಾದಾನಾದನಂತಕಮ್ ॥೬॥**

**ಏಭಿಃ ಪುಣ್ಯೈಃ ಸಮಂ ಪುಣ್ಯಂ ಚಾಪಸ್ಥೇ ಹರಿಪೂಜನಾತ್ ।**
**ಪ್ರಾತಃ ಪೂಜಾಂ ಧನುರ್ಮಾಸೇ ತ್ಯಕ್ತ್ವಾ ವಿಷ್ಣೋರಭೀಷ್ಟದಾಮ್ ॥೭॥**

**ತೀರ್ಥಯಾತ್ರಾಪರೋ ಯಸ್ತು ತದರ್ಧಫಲಭಾಗ್ಭವೇತ್ ।**
**ಭಾನೌ ಧನುಃಸ್ಥಿತೇ ವಿಷ್ಣೋಃ ಮುದ್ಗಾನ್ನಂ ಯೋ ನಿವೇದಯೇತ್ ॥೮॥**

**ತತ್ಸಂತತೌ ನ ದಾರಿದ್ರ್ಯಂ ನಾಪಮೃತ್ಯುರ್ನ ಬಾಧಯಃ ।**
**ಕಾರ್ಮುಕಸ್ಥೇ ಕಠೋರಾಂಶೌ ಮುದ್ಗಾನ್ನಂ ಪರಮಾತ್ಮನೇ ॥೯॥**

**ನ ನಿವೇದಯತೇ ಪ್ರಾತಃ ದರಿದ್ರಃ ಸಪ್ತಜನ್ಮಸು ।**
**ನಿತ್ಯತ್ವಾದ್ವಿಷ್ಣುಪೂಜಾಯಾಃ ನಿತ್ಯತ್ವಾತ್ ಬ್ರಹ್ಮಕರ್ಮಣಃ ॥೧೦॥**

**ಸಂಧ್ಯಾತಿಕ್ರಮಣೋ ದೋಷೋ ನಾಸ್ತೀತಿ ಮನುರಬ್ರವೀತ್**
**ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಸ್ನಾತ್ವಾ ಸೂರ್ಯೋದಯಾತ್ ಪುರಾ ॥೧೧॥**

---

೬ ಕೋಟಿ ಕೋಟಿ ಯಜ್ಞಗಳಿಗಿಂತಲೂ, ಕೋಟ್ಯಂತರ ತೀರ್ಥಸ್ನಾನದಿಂದಲೂ, ಕೋಟಿ ಗೋದಾನದಿಂದಲೂ, ಅನಂತ ಕನ್ಯಾದಾನದಿಂದಲೂ,

೭ ಬರುವ ಪುಣ್ಯಕ್ಕೆ ಸಮವಾದ ಪುಣ್ಯ ಧನುರ್ಮಾಸದ ಹರಿಪೂಜೆಯಿಂದ ಲಭ್ಯವಾಗುತ್ತದೆ. ವಿಷ್ಣುವಿಗೆ ಅತಿ ಪ್ರಿಯವಾದ ಧನುರ್ಮಾಸದ ಪ್ರಾತಃಪೂಜೆಯನ್ನು ಬಿಟ್ಟು,

೮ ತೀರ್ಥಯಾತ್ರೆಯನ್ನು ಮಾಡಿದವನು ಯಾತ್ರೆಯ ಅರ್ಧಫಲವನ್ನು ಮಾತ್ರ ಪಡೆಯುವನು. ಧನುರ್ಮಾಸದಲ್ಲಿ ವಿಷ್ಣುವಿಗೆ ಮುದ್ಗಾನ್ನವನ್ನು ಯಾರು ನಿವೇದಿಸುವರೋ,

೯ ಅಂತಹವರ ವಂಶದಲ್ಲಿ ದಾರಿದ್ರ್ಯವಾಗಲೀ, ಅಪಮೃತ್ಯುವಾಗಲೀ, ಮಾನಸಿಕ ಕ್ಲೇಶವಾಗಲಿ ಇರುವುದಿಲ್ಲ. ಧನುರ್ಮಾಸದಲ್ಲಿ ಪರಮಾತ್ಮನಿಗೆ ಮುದ್ಗಾನ್ನವನ್ನು,

೧೦ ಪ್ರಾತಃಕಾಲದಲ್ಲಿ ನಿವೇದನೆ ಮಾಡದ ಮಾನವನು ಏಳು ಜನ್ಮಗಳಲ್ಲಿ ದರಿದ್ರನಾಗುವನು.

೧೧ ಮುದ್ಗಾನ್ನವನ್ನು ಪ್ರಾತಃಕಾಲದಲ್ಲಿ ನಿವೇದನೆ ಮಾಡದ ಮಾನವನು ಏಳು ಜನ್ಮಗಳಲ್ಲಿ ದರಿದ್ರನಾಗುವನು. ವಿಷ್ಣುಪೂಜೆ ಹಾಗೂ ಸಂಧ್ಯಾವಂದನೆ ಎರಡೂ ನಿತ್ಯ ಕರ್ಮಗಳಾಗಿವೆ.

ಪೂಜಯಿತ್ವಾ ಹರಿಂ ಸಮ್ಯಕ್ ತತಃ ಸಂಧ್ಯಾಂ ಸಮಾಚರೇತ್ ।
ಯಃ ಪದ್ಮಮಣಿಸಂಯುಕ್ತಾಂ ತುಲಸೀಕಂಠಮಾಲಿಕಾಮ್ ।
ನ ಬಿಭ್ರದರ್ಚಯೇದ್ವಿಷ್ಣುಂ ವಿಷ್ಣುದ್ರೋಹೀ ಪತೇದಧಃ ॥೧೨॥

ಶ್ರೀಕೃಷ್ಣ ಉವಾಚ-

ದಧಿಪಾಲ ಮಹಾಭಾಗ ಧರ್ಮಸಾರಮಿದಂ ಶ್ರುಣು ।
ಸರ್ವತೀರ್ಥೇಷು ಯತ್ಪುಣ್ಯಂ ಭುಕ್ತಿಮುಕ್ತಿಫಲಪ್ರದಮ್ ॥೧೩॥

ಬ್ರಹ್ಮಹತ್ಯಾದಿಪಾಪಘ್ನಂ ಸರ್ವಧರ್ಮಫಲಪ್ರದಮ್ ।
ಮತ್ಪೂಜಕಶ್ಚ ಮನ್ಮಂತ್ರೀ ಮತ್ಕಥಾಮೃತಭೋಜನಃ ॥೧೪॥

ಮನ್ನಾಮಾಸ್ವಾದಪುಷ್ಟಾಂಗಃ ಪುನಾತಿ ಭುವನತ್ರಯಮ್ ।
ಯೋಽರ್ಚಯೇದ್ ಬ್ರಾಹ್ಮಣಂ ಭಕ್ತ್ಯಾ ಸೂಪಾನ್ನೈಃ ಕ್ಷುತ್ಪಿಪಾಸಿತಮ್ ॥೧೫॥

ಅರ್ಚಿತೋಽಹಂ ಪ್ರತಿಗ್ರಾಸಂ ತ್ವನ್ನಾದ್ಯೈರಯುತಂ ಸಮಾಃ ।
ತೃಪ್ತೇ ದ್ವಿಜೇ ಸುತೃಪ್ತೋಽಹಂ ಪೂಜಿತೇ ಪೂಜಿತೋಽಸ್ಮ್ಯಹಮ್ ॥೧೬॥

---

೧೨ ಆದ್ದರಿಂದ ಧನುರ್ಮಾಸದಲ್ಲಿ ಸಂಧ್ಯಾವಂದನವನ್ನು ಸಂಕ್ಷೇಪವಾಗಿ ಮುಗಿಸಬೇಕು. ಚೆನ್ನಾಗಿ ಹರಿಯನ್ನು ಪೂಜಿಸಿ ನಂತರ ಹೆಚ್ಚಿನ ಜಪ ಮುಂತಾದವುಗಳನ್ನು ಆಚರಿಸಬೇಕು. ಕಮಲಾಕ್ಷ (ಕಮಲದ ಬೀಜ) ಹಾಗೂ ತುಲಸಿಯ ಮಣಿಗಳ ಮಾಲೆಯನ್ನು, ಧರಿಸದೇ ವಿಷ್ಣುವನ್ನು ಪೂಜಿಸುವವನು, ವಿಷ್ಣುದ್ರೋಹಿಯೆನಿಸಿ ಅಧಃಪತನವನ್ನು ಹೊಂದುವನು.

೧೩ ಭಾಗ್ಯವಂತನಾದ ದಧಿಪಾಲನೇ! ಈ ಧರ್ಮಸಾರವನ್ನು ಕೇಳು. ಭುಕ್ತಿಯನ್ನು ಮೋಕ್ಷವನ್ನು ನೀಡುವ ಎಲ್ಲ ತೀರ್ಥಗಳಿಂದ ಲಭಿಸುವ ಪುಣ್ಯವು ಹಾಗೂ

೧೪ ಬ್ರಹ್ಮಹತ್ಯಾದಿ ಸಕಲ ಪಾಪಗಳನ್ನು ನಾಶ ಮಾಡುವ ಪುಣ್ಯವು ಬ್ರಾಹ್ಮಣ ಪೂಜೆಯಿಂದ ದೊರಕುವುದು. ನನ್ನನ್ನು ಪೂಜಿಸುವವನು, ನನ್ನ ಮಂತ್ರಗಳನ್ನು ಜಪಿಸುವವನು, ನನ್ನ ಕಥಾಮೃತವನ್ನೇ ಭುಜಿಸುವವನು,

೧೫ ನನ್ನ ನಾಮದ ಆಸ್ವಾದನೆಯಿಂದ ಬದುಕುವ ಬ್ರಾಹ್ಮಣನು ಮೂರು ಲೋಕಗಳನ್ನು ಪಾವನಗೊಳಿಸುವನು. ಹಸಿವೆ ಬಾಯಾರಿಕೆಗಳಿಂದ ಬಳಲಿದ ಬ್ರಾಹ್ಮಣನನ್ನು ತೊವ್ವೆ ಅನ್ನ ಮುಂತಾದ ಪದಾರ್ಥಗಳಿಂದ ಯಾರು ಪೂಜಿಸಿ ತೃಪ್ತಿಪಡಿಸುವರೋ,

೧೬ ಅಂತಹ ಭೋಜನದ ಒಂದು ತುತ್ತಿನಿಂದ ನಾನು ಹತ್ತು ಸಾವಿರ ವರುಷ ಪೂಜೆಗೊಂಡಂತೆಯೇ ಸರಿ. ಬ್ರಾಹ್ಮಣನು ತೃಪ್ತಿಹೊಂದಲು ನಾನು ತೃಪ್ತನು. ಬ್ರಾಹ್ಮಣನು ಪೂಜಿತನಾಗಲು ನಾನು ಪೂಜಿತನು.

ಬ್ರಾಹ್ಮಣ್ಯಂ ಸಮನುಪ್ರಾಪ್ಯ ಮಾನುಷೇऽಪ್ಯತಿದುರ್ಲಭಮ್ ।
ನಾರ್ಚಯೇಚ್ಚ ಧನುರ್ಮಾಸೇ ಯೋ ಜೀವಚ್ಛವ ಏವ ಸಃ ॥೧೭॥

ದುರ್ಲಭಂ ಮಾನುಷಂ ದೇಹಂ ಬ್ರಾಹ್ಮಣ್ಯಂ ಚಾತಿದುರ್ಲಭಮ್ ।
ದುರ್ಲಭಂ ಸಹ್ಯಜಾತೀರ್ಥಂ ದುರ್ಲಭಂ ಸೇತುದರ್ಶನಮ್ ॥೧೮॥

ದುರ್ಲಭಂ ತು ಕುರುಕ್ಷೇತ್ರಂ ದುರ್ಲಭಂ ವಿಪ್ರಪೂಜನಮ್ ।
ಯೋ ವಿಪ್ರಂ ಪೂಜಯೇನ್ಮರ್ತ್ಯಃ ಧನುರ್ಮಾಸೇ ತು ವೈಷ್ಣವಮ್ ॥೧೯॥

ತೇನಾಹಂ ವಲ್ಲಭಶ್ರೇಷ್ಠ ಪಾವಿತೋऽಸ್ಮಿ ಮಹಾತ್ಮನಾ ।
ಯತ್ಪಾದತೀರ್ಥಸಂಸ್ಪರ್ಶಾತ್ ನಶ್ಯೇತ್ ಪಾಪಂ ದ್ವಿಜನ್ಮನಃ ॥೨೦॥

ಋಷಯಃ ಪಿತರೋ ದೇವಾಃ ಸರ್ವೇ ಲೋಕಮಹೇಶ್ವರಾಃ ।
ನಮಂತಿ ಶಿರಸಾ ನಿತ್ಯಂ ಕೃತಾರ್ಥಂ ದ್ವಿಜಪೂಜಕಮ್ ॥೨೧॥

ದ್ವಿಜೋऽಪಿ ಬುದ್ಧಿಮಾನ್ ವಿದ್ವಾನವಿಶ್ವಾಸಾದ್ದ್ವಿಜಾರ್ಚನಮ್ ।
ಅಕೃತ್ವಾ ದೂರಗಂ ತೀರ್ಥಂ ಸೇವತೇ ಗರ್ದಭೋ ಹಿ ಸಃ ॥೨೨॥

---

೧೭ ದುರ್ಲಭವಾದ ಮನುಷ್ಯ ಜನ್ಮವನ್ನು ಅದರಲ್ಲೂ ಅತಿ ದುರ್ಲಭವಾದ ಬ್ರಾಹ್ಮಣ್ಯವನ್ನು ಹೊಂದಿಯೂ ಕೂಡ ಧನುರ್ಮಾಸದಲ್ಲಿ ಹರಿ ಪೂಜೆಯನ್ನು ಮಾಡದವನು ಬದುಕಿಯೂ ಮೃತನಂತೆಯೇ ಸರಿ.

೧೮ ಮನುಷ್ಯ ಶರೀರವು ದುರ್ಲಭವಾದುದು. ಬ್ರಾಹ್ಮಣಶರೀರವು ಅತಿ ದುರ್ಲಭವಾದುದು. ಕಾವೇರಿ ತೀರ್ಥವು ಹಾಗೂ ರಾಮಸೇತುದರ್ಶನವು ಅತಿ ಅಲಭ್ಯವಾದುದು.

೧೯ ಕುರುಕ್ಷೇತ್ರವು ಕಷ್ಟಸಾಧ್ಯವಾದುದು. ವಿಪ್ರಪೂಜನವು ಸುಲಭದಲ್ಲಿ ದೊರೆಯದು. ಧನುರ್ಮಾಸದಲ್ಲಿ ವಿಷ್ಣುಭಕ್ತನಾದ ಬ್ರಾಹ್ಮಣನನ್ನು ಯಾವ ವ್ಯಕ್ತಿಯು ಪೂಜಿಸುವನೋ,

೨೦ ಹೇ ಗೋಪಶ್ರೇಷ್ಠನೇ! ನಾನು ಅವನಿಂದ ಪುನೀತನಾಗಿದ್ದೇನೆ. ಯಾವ ಬ್ರಾಹ್ಮಣನ ಪಾದ ತೊಳೆದ ನೀರಿನಿಂದ ಪಾಪವು ನಾಶವಾಗುವುದೋ,

೨೧ ಪುಣ್ಯವಂತನಾದ ಅಂತಹ ಬ್ರಾಹ್ಮಣ ಪೂಜಕನನ್ನು ಋಷಿಗಳು, ಪಿತೃಗಳು, ದೇವತೆಗಳು, ಲೋಕಪಾಲಕರು ನಿತ್ಯದಲ್ಲಿ ಶಿರಬಾಗಿ ನಮಸ್ಕರಿಸುವರು.

೨೨ ಯಾವ ಬ್ರಾಹ್ಮಣನು ಬುದ್ಧಿವಂತನೂ, ವಿದ್ವಾಂಸನೂ ಆಗಿದ್ದರೂ ಅವಿಶ್ವಾಸದಿಂದ ಬ್ರಾಹ್ಮಣ ಪೂಜೆಯನ್ನು ಮಾಡದೇ ದೂರದಲ್ಲಿರುವ ತೀರ್ಥಗಳನ್ನು ಸೇವಿಸುವನೋ ಅವನು ಕತ್ತೆಯಂತೆಯೇ ಸರಿ.

ಸ ಏವ ಪುರುಷೋ ಮೂಢಃ ಪರಿಹಾಸ್ಯೋ ನರಾಧಮಃ ।
ತಸ್ಮಾತ್ಸರ್ವಪ್ರಯತ್ನೇನ ಬ್ರಾಹ್ಮಣಂ ಪೂಜಯೇತ್ಸದಾ ॥೨೩॥

ತಥಾಪಿ ಚ ಧನುರ್ಮಾಸೇ ಏಕಂ ವಾ ವಿಪ್ರಭೋಜನಮ್ ।
ಕರೋತಿ ಶ್ರದ್ಧಯಾ ಭಕ್ತ್ಯಾ ಮುಕ್ತಿಮೇತಿ ನ ಸಂಶಯಃ ।
ಅನ್ನಭೋಕ್ತಾ ಸ್ವಯಂ ನಷ್ಟೋ ದಾತಾ ತು ಸ್ವರ್ಗಭಾಗ್ಭವೇತ್ ॥೨೪॥

ದಾತುಃ ಸ್ವರ್ಗಸ್ತ್ವನ್ನದಾನೇ ಪ್ರಸಿದ್ಧಃ
ಭೋಕ್ತುರ್ನಷ್ಟಃ ಸ್ವರ್ಗಲೋಕಃ ಪರಾನ್ನಾತ್ ।
ದಾತುರ್ಭೋಕ್ತುಶ್ಚೋಭಯೋಸ್ತಂಡುಲಸ್ಯ
ದಾನೇ ಪುಣ್ಯಂ ವೈಶ್ವದೇವಾದಿತುಲ್ಯಮ್ ॥೨೫॥

ಚಾಪಾರ್ಕೇ ಯಚ್ಛತೋ ಮುದ್ಗಂ ತಂಡುಲಂ ಚಾರ್ಚಕಾಯ ಚ ।
ಪ್ರಾತರ್ಮುದ್ಗಾನ್ನನೈವೇದ್ಯಾತ್ ಪುಣ್ಯಂ ದ್ವಿಗುಣಮುಚ್ಯತೇ ॥೨೬॥

ಯೋ ನ ಪೂಜಯತೇ ಮರ್ತ್ಯೋ ಧನುರ್ಮಾಸ್ಯುಷಸೀಶ್ವರಮ್
ಸ ಬ್ರಹ್ಮಘ್ನಸ್ಸ ಚಂಡಾಲೋ ನಾತ್ರ ಕಾರ್ಯಾ ವಿಚಾರಣಾ ॥೨೭॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ ಏಕಾದಶೋಽಧ್ಯಾಯಃ ॥

---

೨೩ ಆ ವ್ಯಕ್ತಿಯು ಮೂರ್ಖನು. ಅವನು ಅಪಹಾಸಕ್ಕೀಡಾಗುವನು. ಆದುದರಿಂದ ಪ್ರಯತ್ನಪೂರ್ವಕವಾಗಿ ಬ್ರಾಹ್ಮಣನನ್ನು ಪೂಜಿಸಬೇಕು

೨೪ ಧನುರ್ಮಾಸದಲ್ಲಿ ಶ್ರದ್ಧೆಯಿಂದ ಒಬ್ಬ ಬ್ರಾಹ್ಮಣನ ಭೋಜನ ಮಾಡಿಸಿದರೂ ನಿಸ್ಸಂಶಯವಾಗಿ ಮುಕ್ತನಾಗುವನು. ಅನ್ನವನ್ನುಣ್ಣುವವನು ಸ್ವಯಂ ನಾಶ ಹೊಂದುವನು. ಅನ್ನವನ್ನು ದಾನ ಮಾಡಿದವನು ಸ್ವರ್ಗವನ್ನು ಹೊಂದುವನು.

೨೫ ಅನ್ನದಾನ ಮಾಡಿದವನಿಗೆ ಸ್ವರ್ಗ ದೊರಕುವುದು ಪ್ರಸಿದ್ಧವಾಗಿದೆ. ಕೇವಲ ಪರಾನ್ನ ಭೋಜನ ಮಾಡುವವನಿಗೆ ಪರಾನ್ನದಿಂದ ಸ್ವರ್ಗವು ನಷ್ಟವಾಗುವುದು. ಅಕ್ಕಿಯನ್ನು ದಾನ ಮಾಡಿದರೆ ದಾನಿಗೂ, ಸ್ವೀಕರಿಸಿದವನಿಗೂ, ವೈಶ್ವದೇವನನ್ನು ಆಚರಿಸಿದ್ದಕ್ಕೆ ಸಮಾನ ಪುಣ್ಯ ಬರುವುದು.

೨೬ ಧನುರ್ಮಾಸದಲ್ಲಿ ದೇವ ಪೂಜಕನಿಗೆ ಹೆಸರುಬೇಳೆ ಹಾಗೂ ಅಕ್ಕಿಯನ್ನು ದಾನ ಮಾಡಿದವನಿಗೆ, ಪ್ರಾತಃಕಾಲದಲ್ಲಿ ಹುಗ್ಗಿಯನ್ನು ನೈವೇದ್ಯ ಮಾಡಿದ್ದಕ್ಕಿಂತ ಎರಡುಪಟ್ಟು ಹೆಚ್ಚಿನ ಪುಣ್ಯವು ಹೇಳಲ್ಪಟ್ಟಿದೆ.

೨೭ ಧನುರ್ಮಾಸದ ಪ್ರಾತಃ ಕಾಲದಲ್ಲಿ ಯಾವ ಮನುಜನು ಶ್ರೀಹರಿಯನ್ನು ಪೂಜಿಸುವುದಿಲ್ಲವೋ, ಆತನು ಬ್ರಹ್ಮಹತ್ಯೆಯನ್ನು ಮಾಡಿದವನು ಹಾಗೂ ಚಂಡಾಲನೇ ಸರಿ. ಇದರಲ್ಲಿ ಸಂದೇಹ ಬೇಡ.

# ಅಥ ದ್ವಾದಶೋಽಧ್ಯಾಯಃ

**ಸೂತ ಉವಾಚ-**

**ಇತಿ ವೈ ಬೋಧಿತಃ ಸರ್ವಂ ದಧಿಪಾಲಸ್ತು ಕೇಶವಾತ್ ।**
**ಪುನಃ ಪಪ್ರಚ್ಛ ದೇವೇಶಂ ದಧಿಪಾಲೋ ಮಹಾಯಶಾಃ ॥೧॥**

**ದಧಿಪಾಲ ಉವಾಚ-**

**ಕೀದೃಕ್ ಕೃಷ್ಣ ಮಹಾಭಾಗ ಧನುರ್ಮಾಸಸ್ಯ ವೈಭವಮ್ ।**
**ಕೇನ ಮುಕ್ತಿಮವಾಪ್ನೋತಿ ತನ್ಮೇ ಬ್ರೂಹಿ ಮಮಾಧುನಾ ॥೨॥**

**ಶ್ರೀಕೃಷ್ಣ ಉವಾಚ-**

**ಸಖೇ ಸರ್ವತ್ರ ಸಿದ್ಧಾರ್ಥೋ ಮದ್ಬುದ್ಧ್ಯಾ ಯಸ್ತು ಪಶ್ಯತಿ ।**
**ಸ ಏವ ಭಕ್ತಿಯೋಗಸ್ಯ ತತ್ತ್ವಜ್ಞಾನಮಿದಂ ಸ್ಮೃತಮ್ ॥೩॥**

**ಸರ್ವತ್ರ ವ್ಯಾಪಕೋ ವಿಷ್ಣುರಂಗಮೇತಜ್ಜಗದ್ಧರೇಃ ।**
**ಇತಿ ಮತ್ವಾ ನಮೇದ್ಯೋಗೀ ಹ್ಯಾಶ್ವಚಂಡಾಲಗೋಖರಮ್ ॥೪॥**

**ಮದ್ಭಾವನಾಯುತೋ ವಾಪಿ ಸರ್ವತ್ರ ಸಮದೃಗ್ಯದಿ ।**
**ವಿಶೇಷೇಣೈವ ಮದ್ದಾಸಮರ್ಚಯೇತ್ ಮತ್ಪ್ರಿಯಂ ಸುಧೀಃ ॥೫॥**

---

೧ ಈ ರೀತಿಯಾಗಿ ಕೃಷ್ಣನಿಂದ ಉಪದೇಶವನ್ನು ಹೊಂದಿದ ಕೀರ್ತಿವಂತನಾದ ದಧಿಪಾಲನು ದೇವೋತ್ತಮನಾದ ಶ್ರೀಕೃಷ್ಣನನ್ನು ಮತ್ತೆ ಪ್ರಶ್ನೆ ಮಾಡಿದನು.

೨ ಹೇ ಕೃಷ್ಣ ಪರಮಾತ್ಮನೇ, ಧನುರ್ಮಾಸದ ಮಹಿಮೆ ಯಾವ ರೀತಿಯಾಗಿದೆ ಮತ್ತು ಮುಕ್ತಿಯನ್ನು ಹೊಂದುವ ಉಪಾಯವೇನೆಂಬುದನ್ನು ನನಗೆ ತಿಳಿಸಬೇಕು.

೩ ಗೆಳೆಯ ದಧಿಪಾಲನೇ, ನಾನು ನೀಡಿದ್ದರಲ್ಲೇ ತೃಪ್ತನಾಗಿ ಎಲ್ಲವೂ ನನ್ನ ಅಧಿಷ್ಠಾನವೆಂದು ಯಾರು ತಿಳಿಯುವರೋ ಅದೇ ಭಕ್ತಿಯೋಗವನ್ನು ನೀಡುವ ತತ್ವಜ್ಞಾನವೆಂದು ತಿಳಿ.

೪ ವಿಷ್ಣುವು ಸರ್ವತ್ರ ವ್ಯಾಪಕನಾಗಿದ್ದಾನೆ. ಈ ಜಗವೆಲ್ಲ ವಿಷ್ಣುವಿನ ಅಂಗವಾಗಿದೆ ಎಂದರೆ ವಿಷ್ಣುವಿನ ಪ್ರತಿಮಾ ರೂಪವಾಗಿದೆ (ಈ ಜಗವೆಲ್ಲ ವಿಷ್ಣುವಿನ ಒಂದೊಂದು ಅವಯವವನ್ನು ಆಧರಿಸಿ ನಿಂತಿದೆ) ಎಂದು ತಿಳಿದು ನಾಯಿ, ಚಂಡಾಲ, ಕತ್ತೆ ಮುಂತಾದ ಪ್ರಾಣಿಗಳನ್ನು ಭಗವಂತನ ಆವಾಸಸ್ಥಾನವೆಂದು ತಿಳಿಯಬೇಕು.

೫ ಸರ್ವಪ್ರಾಣಿಗಳಲ್ಲಿ ಸಮದೃಷ್ಟಿಯುಳ್ಳವನಾಗಿದ್ದರೂ (ಎಲ್ಲ ಪ್ರಾಣಿಗಳಲ್ಲಿರುವ

ನಾರ್ಚಯೇದ್ಯದಿ ಮೂಢಾತ್ಮಾ ಧನುರ್ಮಾಸೇ ಕಲಾಯುತಃ ।
ವಿದ್ವಾನಪಿ ವಿಶೇಷೇಣ ಮಮ ದ್ವೇಷ್ಯೋ ಭವೇದ್ಗುಣೀ ॥೬॥

ಅಹಂ ಭಕ್ತಪರಾಧೀನಃ ಸರ್ವಪೂಜ್ಯೋಹಿ ಮಜ್ಜನಃ ।
ಮದ್ಭಕ್ತೋ ಯತ್ರ ವರ್ತೇತ ತತ್ರ ತಿಷ್ಠಾಮಿ ಸರ್ವದಾ ॥೭॥

ಯೋಽವಮನ್ಯೇತ ಮದ್ಭಕ್ತಂ ಮೂಢಾತ್ಮಾ ಸಮದರ್ಶನಮ್ ।
ಮಾಮೇವ ದ್ವೇಷ್ಟಿ ಸೋಽಧಸ್ತು ಪತೇಜ್ಜಾತ್ಯಂಧವದ್ಧ್ರುವಮ್ ॥೮॥

ಮನ್ನಾಮಕೀರ್ತನಾದೇವ ಸರ್ವಪಾಪಂ ವಿನಶ್ಯತಿ ।
ಮದ್ದಾಸಜನನೈವೇದ್ಯವಿಪ್ರನಿಂದಾ ಕೃತಾ ಯದಿ ॥೯॥

ಕೃಷ್ಣೋ ನಾಸ್ತ್ಯತ್ರ ನಾಸ್ತ್ಯತ್ರ ಸಖೇ ಬ್ರೂಹಿ ಬಹುವ್ರಜೇ ।
ಮಮಾಪಿ ತವ ಸೌಹಾರ್ದಂ ಯಾವಜ್ಜೀವಂ ಪ್ರವರ್ಧತಾಮ್ ॥೧೦॥

ಪರರಕ್ಷಣತಸ್ತೇ ಸ್ಯಾದ್ಬಹುಪುಣ್ಯಮನಂತಕಮ್ ।
ಇತಿ ತಸ್ಯ ವಚಃ ಶ್ರುತ್ವಾ ದಧಿಪಾಲೋ ಮಹಾಯಶಾಃ ।

---

ಭಗವಂತನು ಒಬ್ಬನೇ ಎಂಬ ಜ್ಞಾನವನ್ನು ಹೊಂದಿದ್ದರೂ) ವಿಶೇಷವಾಗಿ ವಿಷ್ಣು ಭಕ್ತನನ್ನು ಪೂಜಿಸಬೇಕು.

೬ ಧನುರ್ಮಾಸದಲ್ಲಿ ವೈಷ್ಣವನಾದ ವಿಪ್ರನನ್ನು ಪೂಜೆ ಮಾಡದವನು, ಅರವತ್ನಾಲ್ಕು ಕಲೆಗಳನ್ನು ಬಲ್ಲವನಾಗಿದ್ದರೂ, ಗುಣವಂತನಾಗಿದ್ದರೂ ನನಗೆ ದ್ವೇಷಿಯೇ ಆಗಿದ್ದಾನೆ.

೭ ನನ್ನ ಭಕ್ತರು ಎಲ್ಲರಿಂದಲೂ ಪೂಜ್ಯರಾಗಿದ್ದಾರೆ. ನಾನು ಭಕ್ತರ ಅಧೀನ-ನಾಗಿದ್ದೇನೆ (ಭಕ್ತಿಯಿಂದ ವಶನಾಗಿದ್ದೇನೆ) ನನ್ನ ಭಕ್ತರು ಇರುವೆಡೆ ನಾನು ಯಾವಾಗಲೂ ವಾಸ ಮಾಡುವೆನು.

೮ ಎಲ್ಲೆಡೆ ನನ್ನನ್ನು ಕಾಣುವ ನನ್ನ ಭಕ್ತನನ್ನು ಯಾರು ಅಪಮಾನಿಸುವರೋ ಅವರು ನನ್ನನ್ನೇ ದ್ವೇಷಿಸಿದಂತೆ. ಅಂಥವರು ಹುಟ್ಟು ಕುರುಡನಂತೆ ಕೆಳಗೆ ಬೀಳುವುದು ನಿಶ್ಚಿತ.

೯ ನನ್ನ ಭಕ್ತರ, ನನ್ನ ನೈವೇದ್ಯದ ಹಾಗೂ ವಿಪ್ರರ ನಿಂದೆಯನ್ನು ಮಾಡಿದವನು ಪತನ ಹೊಂದುವನು. ನನ್ನ ನಾಮದ ಕೀರ್ತನದಿಂದ ಸರ್ವಪಾಪಗಳು ನಾಶ ಹೊಂದುವವು.

೧೦ ಮಿತ್ರನೇ! ಕೃಷ್ಣನು ಗೋಕುಲದಲ್ಲಿ ಇಲ್ಲವೆಂದು ಮತ್ತೆ ಮತ್ತೆ ಹೇಳು. ನನ್ನ ನಿನ್ನ ಸ್ನೇಹವು ಜೀವನಪೂರ್ತಿಯಾಗಿ ವೃದ್ಧಿಸಲಿ.

**ದಿವ್ಯಜ್ಞಾನಾಕೃತಿಂ ಪಶ್ಯನ್ ಮಂದಂ ಪ್ರಾಹ ಹಸನ್ ಹರಿಮ್ ||೧೧||**

**ಕುತ್ರ ನಾಸ್ತೀತ್ಯಹಂ ಬ್ರೂಯಾಮನೃತಂ ವಚನಂ ಸಖೇ |**
**ಸರ್ವತ್ರ ವಸಸಿ ವ್ಯಾಪ್ಯ ಜಗದೇತಚ್ಚರಾಚರಮ್ ||೧೨||**

**ಅಂತರ್ಬಹಿಶ್ಚ ತ್ವಂ ವಿಷ್ಣೋ ವ್ಯಾಪ್ಯ ತಿಷ್ಠಸಿ ಸರ್ವದಾ |**
**ಬಹಿರಂತಶ್ಚ ಭೂತಾನಾಂ ಸಾಕ್ಷೀ ನಾರಾಯಣೋ ಭವಾನ್ |**
**ತ್ವನ್ಮಾಯಾ ಮಮ ನಾಸ್ತ್ಯೇವ ವೇದ್ಮ್ಯಹಂ ತ್ವದನುಗ್ರಹಾತ್ ||೧೩||**

**ಶ್ರೀಕೃಷ್ಣ ಉವಾಚ-**

**ಅಹಂ ನಂದಾತ್ಮಜಃ ಕೃಷ್ಣಃ ಸಖೇ ಹವ್ಯಂಗಲೋಲುಪಃ |**
**ಮುಷ್ಣನ್ ದೃಷ್ಟೋಽದ್ಯ ಗೇಹಿನ್ಯಾ ನವನೀತಂ ಪರಾಲಯೇ ||೧೪||**

**ತಸ್ಮಾದ್ವದ ತ್ವಂ ನಾಸ್ತೀತಿ ಬಹುಶ್ರೇಯೋ ಭವೇತ್ತದಾ |**
**ದರಿದ್ರಂ ಯೋಷಿತಂ ದೀನಂ ರೋಗಸ್ಥಂ ಶರಣಾಗತಮ್ |**
**ಶ್ರೋತ್ರಿಯಂ ಪಾತಿ ಯೋ ಭಕ್ತ್ಯಾ ವಿಷ್ಣುಭಕ್ತಾಗ್ರಣೀರ್ಭವೇತ್ ||೧೫||**

---

೧೧ ಹೀಗೆ ಹೇಳುವುದರಿಂದ ನನ್ನನ್ನು ರಕ್ಷಿಸಿದಂತೆ ಆಗುತ್ತದೆ. ನನ್ನ ರಕ್ಷಣೆಯಿಂದ ನಿನಗೆ ಅನಂತಪುಣ್ಯವು ಬರುತ್ತದೆ. ಹೀಗೆಂದ ಕೃಷ್ಣನ ಮಾತನ್ನು ಕೇಳಿ ಪುಣ್ಯವಂತನಾದ ದಧಿಪಾಲನು ಜ್ಞಾನಾನಂದಾತ್ಮಕ ಶರೀರಿಯಾದ ಕೃಷ್ಣನನ್ನು ನೋಡಿ ಮುಗುಳು ನಗುತ್ತ ಹೇಳಿದನು.

೧೨ ಗೆಳೆಯನೇ! ನೀನು ಯಾವ ಸ್ಥಳದಲ್ಲಿ ಇಲ್ಲವೆಂದು ನಾನು ಸುಳ್ಳು ನುಡಿಯಲಿ. ನೀನು ಈ ಚೇತನಾಚೇತನಾತ್ಮಕ ಪ್ರಪಂಚವನ್ನು ವ್ಯಾಪಿಸಿ ಸರ್ವತ್ರ ನೆಲೆಸಿರುವೆ.

೧೩ ಹೇ ವಿಷ್ಣುವೇ! ನೀನು ಯಾವಾಗಲೂ ಎಲ್ಲೆಡೆ, ಒಳಗೆ, ಹೊರಗೆ ವ್ಯಾಪಿಸಿರುವೆ. ಎಲ್ಲ ಜೀವಿಗಳ ಒಳಗೂ ಹೊರಗೂ ನೀನು ಸಾಕ್ಷಿಯಾಗಿ ನೆಲೆಸಿರುವೆ. ನಿನ್ನ ಮಾಯೆಯ ಬಂಧನವೆನಗಿಲ್ಲ, ನಿನ್ನನ್ನು ನಿನ್ನ ಅನುಗ್ರಹದಿಂದಲೇ ಅರಿತಿದ್ದೇನೆ.

೧೪ ಹೇ ಸಖನೇ! ನಾನು ನಂದಗೋಪನ ಮಗನು. ಬೆಣ್ಣೆಯಲ್ಲಿ ಲೋಲುಪನು. ಇಂದು ಬೇರೆಯವರ ಮನೆಯಲ್ಲಿ ಬೆಣ್ಣೆಯನ್ನು ಕದಿಯುತ್ತಿರಲು ಆ ಗೃಹಿಣಿಯಿಂದ ನೋಡಲ್ಪಟ್ಟಿದ್ದೇನೆ.

೧೫ ಆದುದರಿಂದ ನಾನು ಇಲ್ಲಿ ಇಲ್ಲವೆಂದು ಹೇಳು. ನಿನಗೆ ಬಹಳ ಶ್ರೇಯಸ್ಸಾಗುವುದು. ಬಡವನನ್ನು, ಸ್ತ್ರೀಯನ್ನು, ದೈನ್ಯದಿಂದ ಕೂಡಿದವನನ್ನು, ರೋಗಿಯನ್ನು ಶರಣಾಗತನಾದವನನ್ನು ಶ್ರೋತ್ರಿಯನಾದ ಬ್ರಾಹ್ಮಣನನ್ನು ಯಾರು ರಕ್ಷಿಸುವರೋ ಅವರು ವಿಷ್ಣುಭಕ್ತರಲ್ಲಿ ಶ್ರೇಷ್ಠನೆನಿಸುವರು.

**ದಧಿಪಾಲ ಉವಾಚ- -**

**ನಂದಾತ್ಮಜಃ ಕೃಷ್ಣ ಇತಿ ಸತ್ಯಮುಕ್ತಂ ತ್ವಯಾ ಸಖೇ ।**
**ಸ ಏವ ತು ಭವಾನ್ ವಿಷ್ಣುಃ ಭಗವಾನ್ ಪ್ರಕೃತೇಃ ಪರಃ ॥೧೬॥**

**ಮಾದೃಶಾನಾಂ ತು ದಾಸಾನಾಂ ಸತ್ಯಸಂಕಲ್ಪ ಈಶ್ವರಃ ।**
**ಉಪಾಸನಾಯ ಸರ್ವತ್ರ ಕೃಷ್ಣ ಇತ್ಯಭಿಧೀಯತೇ ॥೧೭॥**

**ಇತಿ ತಸ್ಯ ವಚಃ ಶ್ರುತ್ವಾ ಮಂದಂ ಮಂದಂ ಹಸನ್ ಹರಿಃ ।**
**ಆಸ್ಯಂ ಪಿಧಾಯ ಹಸ್ತೇನ ಶನೈಃ ಪ್ರಾಹ ಪುನಶ್ಚ ತಮ್ ॥೧೮॥**

**ಶ್ರೀಕೃಷ್ಣ ಉವಾಚ -**

**ತರ್ಹಿ ಮೋಕ್ಷಂ ಪ್ರದಾಸ್ಯಾಮಿ ಮಮ ದಾಸಸ್ಯ ತೇ ಸಖೇ ।**
**ಮತ್ಸ್ವರೂಪಂ ನ ವಕ್ತವ್ಯಂ ಮದಾಜ್ಞಾಪಾಲಕೋ ಭವ ॥೧೯॥**

**ದಧಿಪಾಲ ಉವಾಚ-**

**ಚೋರೋಽಸಿ ನವನೀತಾನಾಂ ಜಾರೋಽಸಿ ವ್ರಜಯೋಷಿತಾಮ್ ।**
**ಧ್ಯೇಯೋಽಸಿ ಯಮಿನಾಂ ಕೃಷ್ಣ ಜಾರಚೋರಶಿಖಾಮಣೇ ॥೨೦॥**

**ಜಗನ್ಮೋಹನ ಮಾಯಾ ತೇ ಯೋಗಿನಾಮಪಿ ಮೋಹಿನೀ ।**

---

೧೬ ಮಿತ್ರನೇ! ನೀನು ನಂದನ ಮಗನಾದ ಕೃಷ್ಣ ಎಂದು ಹೇಳಿದುದು ಸತ್ಯವಾಗಿದೆ. ನಂದ ಪುತ್ರನಾದ ನೀನೇ ಪ್ರಕೃತಿ ಬಂಧವಿಲ್ಲದ ಷಡ್ಗುಣೈಶ್ವರ್ಯಯುತನಾದ ಸಾಕ್ಷಾತ್ ವಿಷ್ಣುವೇ ಆಗಿರುವೆ.

೧೭ ನನ್ನಂಥ ಭಕ್ತರಿಗೆ ನೀನು ಸತ್ಯಸಂಕಲ್ಪನಾದ ಈಶ್ವರನೇ ಆಗಿರುವೆ. ಪೂಜೆಗೋಸುಗ ಎಲ್ಲೆಡೆ ಕೃಷ್ಣನೆಂದು ಹೆಸರಾಗಿರುವೆ.

೧೮ ಹೀಗೆಂದ ದಧಿಪಾಲನ ಮಾತನ್ನು ಕೇಳಿ ಮೆಲ್ಲನೆ ಮುಸಿ ನಗುತ್ತ ಕೈಯಿಂದ ವದನವನ್ನು ಮುಚ್ಚಿಕೊಂಡು ಮೆಲ್ಲಗೆ ಆತನಿಗೆ ಹೇಳಿದನು.

೧೯ ಹಾಗಾದರೆ ನನ್ನ ಗೆಳೆಯನಾದ ನಿನಗೆ ಮೋಕ್ಷ ನೀಡುವೆನು. ನನ್ನ ಆಜ್ಞೆಯನ್ನು ಪಾಲಿಸುವವನಾಗು. ನನ್ನ ಸ್ವರೂಪವನ್ನೆಲ್ಲೂ ಹೇಳಬೇಡ.

೨೦ ನೀನು ಬೆಣ್ಣೆಯ ಚೋರನೂ, ಗೋಕುಲದ ಗೋಪಿಯರಿಗೆ ಜಾರನೂ, ಯೋಗಿಗಳಿಗೆ ಧ್ಯೇಯನೂ ಆಗಿರುವೆ. ಆದುದರಿಂದಲೇ ನೀನು ಜಾರ ಚೋರ ಶಿಖಾಮಣಿಯಾಗಿರುವೆ.

**ಇತ್ಥಂ ತು ದಧಿಪಾಲೇನ ಸಂಸ್ತುತಃ ಕೇಶವಸ್ತದಾ ॥೨೧॥**

**ಹಸ್ತಮಾಲಂಬ್ಯ ಹಸ್ತೇನ ಪ್ರೀತ್ಯಾ ಮಂದಮುವಾಚ ಹ ।**
**ಭಕ್ತಂ ಭಕ್ತಪರಾಧೀನಃ ಸ್ವಸ್ಯ ಮಾಯಾಂ ಪ್ರದರ್ಶಯನ್ ॥೨೨॥**

**ಶ್ರೀಕೃಷ್ಣ ಉವಾಚ-**

**ಕಿಮಭೀಷ್ಟಂ ತೇ ದದಾಮಿ ಸಖೇ ಸತ್ಯಂ ವೃಣೀಷ್ವ ಭೋಃ ।**
**ಗೋಪ್ಯೋ ಗೃಹ್ಣಂತಿ ಮಾಮತ್ರ ಕೃಷ್ಣೋ ನಾಸ್ತೀತಿ ಭೋ ವದ ॥೨೩॥**

**ದಧಿಪಾಲ ಉವಾಚ-**

**ಕೃಷ್ಣ ಕೃಷ್ಣ ದಯಾಸಿಂಧೋ ಭಕ್ತಾರ್ತಿಭಯಭಂಜನ ।**
**ತ್ವದ್ಭಕ್ತಲಕ್ಷಣಂ ಬ್ರೂಹಿ ಸತ್ಯಮೇವ ಹಿ ಕೇಶವ ॥೨೪॥**

**ಇತಿ ತಸ್ಯ ವಚಃ ಶ್ರುತ್ವಾ ಭಗವಾನ್ ಭಕ್ತವತ್ಸಲಃ ।**
**ಶ್ರುಣು ಸರ್ವಂ ಪ್ರವಕ್ಷ್ಯಾಮಿ ಮದ್ಭಕ್ತಸ್ಯ ಹಿ ಲಕ್ಷಣಮ್ ॥೨೫॥**

**ಯಸ್ತು ಮದ್ವೀಕ್ಷಯಾ ಯುಕ್ತೋ ಮದರ್ಚನಪರಃ ಸದಾ ।**
**ಮತ್ಕಥೈಕಪರೋ ನಿತ್ಯಂ ಸ ವೈ ಭಾಗವತೋತ್ತಮಃ ॥೨೬॥**

---

೨೧ ಜಗವನ್ನೇ ಮೋಹನಗೊಳಿಸಿದ ನಿನ್ನ ಮಾಯೆಯು (ಇಚ್ಛೆ) ಯೋಗಿಗಳಿಗೂ ಮೋಹಕವಾದುದು. ಹೀಗೆ ದಧಿಪಾಲನಿಂದ ಸ್ತೋತ್ರ ಮಾಡಲ್ಪಟ್ಟ

೨೨ ಭಕ್ತ ಪರಾಧೀನನಾದ ಕೃಷ್ಣನು ತನ್ನ ಕೈಯಲ್ಲಿ ದಧಿಪಾಲನ ಹಸ್ತವನ್ನು ಹಿಡಿದು ಪ್ರೀತಿಯಿಂದ ತನ್ನ ಮಾಯೆಯನ್ನು ಪ್ರದರ್ಶಿಸುತ್ತ ನುಡಿದನು.

೨೩ ಮಿತ್ರನೇ! ನಿನ್ನ ಮನದ ಇಚ್ಛೆಯನ್ನು ಹೇಳು. ನಿಶ್ಚಯವಾಗಿ ಪೂರೈಸುವೆನು. ಗೋಪಿಕೆಯರು ನನ್ನನ್ನು ಇಲ್ಲಿ ಬೆನ್ನಟ್ಟುವರು. ಆದುದರಿಂದ ಇಲ್ಲಿ ಕೃಷ್ಣನಿಲ್ಲವೆಂದು ಹೇಳು.

೨೪ ಹೇ ಕರುಣಾ ಸಮುದ್ರನೇ, ಭಕ್ತರ ದುಃಖ ಭಯಗಳನ್ನು ನಾಶ ಮಾಡುವವನೇ ನಿನ್ನ ಭಕ್ತರ ಲಕ್ಷಣಗಳನ್ನು ಹೇಳು.

೨೫ ಹೀಗೆಂದ ದಧಿಪಾಲನ ಮಾತುಗಳನ್ನು ಕೇಳಿದ ಭಕ್ತವತ್ಸಲನಾದ ಭಗವಾನ್ ಶ್ರೀಕೃಷ್ಣನು ನನ್ನ ಭಕ್ತನ ಲಕ್ಷಣಗಳನ್ನು ಹೇಳುವೆನು ಎಂದು ಹೇಳಲು ಉಪಕ್ರಮಿಸಿದನು.

೨೬ ನಿರಂತರವಾಗಿ ನನ್ನನ್ನೇ ನೋಡುವವನು, ನನ್ನನ್ನೇ ಪೂಜಿಸುವವನು, ನನ್ನ ಚರಿತೆಯಲ್ಲೇ ಆಸಕ್ತನಾದವನು ಉತ್ತಮ ಭಾಗವತನು.

ಮನ್ನಾಮರಸಿಕೋ ನಿತ್ಯಂ ಮತ್ಪ್ರಸಾದೈಕಭಕ್ಷಕಃ ।
ಮದ್ಭಕ್ತದರ್ಶನಾಮೋದಃ ಸ ವೈ ಭಾಗವತೋತ್ತಮಃ ॥೨೭॥

ಮದನ್ನಮುದರೇ ಯಸ್ಯ ಶಿಖಾಯಾಂ ತುಲಸೀದಲಮ್ ।
ಯಃ ಕಂಠೇ ಕರ್ಣಯೋರ್ಹಸ್ತೇ ಬಿಭರ್ತಿ ತುಲಸೀಮಣಿಮ್ ॥೨೮॥

ಮದುತ್ಸವೈಕನಿಷ್ಠೋ ಯೋ ಗೃಹೇ ವಾ ದೇವತಾಲಯೇ ।
ಮತ್ಕಥಾಲೋಲುಪೋ ಧರ್ಮೀ ಸ ವೈ ಭಾಗವತೋತ್ತಮಃ ॥೨೯॥

ಮದಾಲಯೇಷು ಹಸ್ತಾದ್ಯೈಃ ಸಮ್ಮಾರ್ಜನಪರೋ ಹಿ ಯಃ ।
ರಂಗವಲ್ಲೀಂ ಸದಾ ಕುರ್ಯಾತ್ ಸ ವೈ ಭಾಗವತೋತ್ತಮಃ ॥೩೦॥

ಮದರ್ಥಮೇವ ಸತ್ಕರ್ಮಾ ಮದ್ಭಕ್ತೋ ವಿಜಿತೇಂದ್ರಿಯಃ ।
ಉಪೋಷ್ಯ ಯಸ್ತು ಹೃಷ್ಟಾತ್ಮಾ ಮದ್ದಿನೇಷು ಮದರ್ಚಕಃ ॥೩೧॥

ಪರೇದ್ಯುರ್ಭೋಜಯೇದ್ಭಕ್ತಾನ್ ಸ ವೈ ಭಾಗವತೋತ್ತಮಃ ।
ಸರ್ವತ್ರ ನಿಸ್ಪೃಹೋ ಯಸ್ತು ಸ ವೈ ಭಾಗವತೋತ್ತಮಃ ॥೩೨॥

---

೨೭ ನನ್ನ ನಾಮಸ್ಮರಣೆಯ ರಸವನ್ನು ಆಸ್ವಾದಿಸುವವನು, ನನ್ನ ಪ್ರಸಾದವನ್ನು ಮಾತ್ರ ಭಕ್ಷಿಸುವವನು ನನ್ನ ಭಕ್ತರ ದರ್ಶನದಿಂದ ಸಂತುಷ್ಟನಾಗುವವನು ಉತ್ತಮ ಭಗವದ್ಭಕ್ತನು.

೨೮ ಹೊಟ್ಟೆಯಲ್ಲಿ ನನಗೆ ನಿವೇದಿಸಿದ ಅನ್ನವುಳ್ಳವನು, ಶಿಖೆಯಲ್ಲಿ ನನ್ನ ನಿರ್ಮಾಲ್ಯವಾದ ತುಲಸಿಯನ್ನು ಧರಿಸಿದವನು, ಕುತ್ತಿಗೆ, ಕಿವಿಗಳು ಹಾಗೂ ಕೈಗಳಲ್ಲಿ ತುಲಸೀಮಣಿಯನ್ನು ಧರಿಸಿದವನು,

೨೯ ಮನೆಯಲ್ಲಾಗಲೀ ದೇವಾಲಯದಲ್ಲಾಗಲೀ ನನ್ನ ಉತ್ಸವಗಳನ್ನು ಮಾಡಿಸುವ-ವನು, ನನ್ನ ಕಥೆಯನ್ನು ಆಸ್ವಾದಿಸುವವನು, ಧರ್ಮಾಚರಣಯುಕ್ತನಾದವನು ಭಾಗವತೋತ್ತಮನೆಂದು ಕರೆಯಲ್ಪಡುವನು.

೩೦ ನನ್ನ ಆಲಯಗಳನ್ನು ಕೈಗಳಿಂದ ಸಾರಿಸಿ ರಂಗವಲ್ಲಿಯಿಂದ ಅಲಂಕರಿಸುವವನು ಭಾಗವತೋತ್ತಮನು.

೩೧ ನನ್ನ ಪ್ರೀತಿಗಾಗಿಯೇ ಸತ್ಕರ್ಮಗಳನ್ನು ಆಚರಿಸುವವನು, ನನ್ನ ಭಕ್ತ-ನಾಗಿರುವವನು, ಇಂದ್ರಿಯಗಳನ್ನು ಗೆದ್ದವನು, ಏಕಾದಶಿಯಂದು ಉಪವಾಸ ಮಾಡಿ ಸಂತುಷ್ಟನಾದವನು, ಅಂದು ನನ್ನನ್ನು ಪೂಜಿಸುವವನು,

೩೨ ಮರುದಿನ ದ್ವಾದಶಿಯಂದು ಬ್ರಾಹ್ಮಣರ ಭೋಜನ ಮಾಡಿಸುವವನು ಎಲ್ಲ ವಿಷಯಗಳಲ್ಲಿ ಆಶಾರಹಿತನಾದವನು ಭಾಗವತರಲ್ಲಿ ಉತ್ತಮನು.

ಇತ್ಯುಕ್ತ್ವಾ ಕೇಶವಃ ಕಿಂಚಿತ್ ವಿಮೃಶ್ಯ ಪುನರದ್ಭುತಮ್ ।
ಮದ್ಭಕ್ತಜನಸತ್ಕಾರಾದ್‌ಋಣದಾಸೋ ಭವಾಮ್ಯಹಮ್ ॥೩೩॥

ಅದೃಶ್ಯೋಽಹಂ ತು ಮಾಯಾವೀ ಸರ್ವೇಷಾಮಪಿ ಯೋಗಿನಾಮ್ ।
ಮುದ್ಗಾನ್ನದಾನಪಾಶೇನ ಚಾಪಾರ್ಕೇಽಹಂ ಪುರಃಸ್ಥಿತಃ ॥೩೪॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ
ದ್ವಾದಶೋಽಧ್ಯಾಯಃ ॥

---

೩೩ ಎಂದು ಭಕ್ತರ ಲಕ್ಷಣವನ್ನು ಹೇಳಿದ ಶ್ರೀಕೃಷ್ಣನು ಮತ್ತೆ ಅದ್ಭುತವಾದುದನ್ನು ವಿಚಾರ ಮಾಡಿ ಹೇಳಿದನು. ನನ್ನ ಭಕ್ತರನ್ನು ಸತ್ಕಾರ ಮಾಡಿದವರಿಗೆ ಆ ಋಣಭಾರದಿಂದ ನಾನು ದಾಸನಾಗುವೆನು.

೩೪ ಮಾಯಾ ನಿಯಾಮಕನಾಗಿ ಮಾಯಾವಿಯೆನಿಸಿದ ನಾನು ಎಲ್ಲ ಯೋಗಿಗಳಿಗೂ ಕೂಡ ಅದೃಶ್ಯನೆನಿಸಿದವನು. ಆದರೆ ಮುದ್ಗಾನ್ನ ದಾನವೆಂಬ ಪಾಶದಿಂದ ಬದ್ಧನಾಗಿ ಮುದ್ಗಾನ್ನ ದಾನ ಮಾಡಿದವನ ಎದುರು ನಿಲ್ಲುವೆನು.

॥ ಇಲ್ಲಿಗೆ ಹನ್ನೆರಡನೇ ಅಧ್ಯಾಯವು ಮುಗಿಯಿತು ॥

# ಅಥ ತ್ರಯೋದಶೋಽಧ್ಯಾಯಃ

ಶ್ರೀಕೃಷ್ಣ ಉವಾಚ-

ಅಸ್ಮಿನ್ನರ್ಥೇ ಪುರಾವೃತ್ತಮಿತಿಹಾಸಮಿದಂ ಶ್ರುಣು ।
ಭವಾನೇವ ಹಿ ದೃಷ್ಟಾಂತೋ ಮದ್ಭಕ್ತಸ್ಯೇಹ ನಿಂದನೇ ॥೧॥

ಪುರಾ ಕಶ್ಚಿದ್ ದ್ವಿಜೋ ಯೋಗೀ ವಿದ್ವಾನ್ ವೇತ್ರವತೀತಟೇ ।
ಶ್ರುತಕೀರ್ತಿರಿತಿ ಖ್ಯಾತಃ ಶ್ರುತಿಸ್ಮೃತಿವಿಶಾರದಃ ॥೨॥

ಜಿತೇಂದ್ರಿಯೋ ಜಿತಕ್ರೋಧೋ ವಾಜಪೇಯಾದಿಯಜ್ಞಕೃತ್ ।
ಸರ್ವಶಾಸ್ತ್ರಾರ್ಥತತ್ವಜ್ಞಃ ಪಂಚಯಜ್ಞಪರಾಯಣಃ ॥೩॥

ಮತ್ಪೂಜಾನಿರತೋ ನಿತ್ಯಂ ನಿತ್ಯಂ ಚಾತಿಥಿಪೂಜಕಃ ।
ಶಾಂತೋ ದಾಂತೋ ದಯಾಲುಶ್ಚ ಸರ್ವಭೂತಹಿತೇ ರತಃ ॥೪॥

ಗಾಯತ್ರೀನಿರತೋ ನಿತ್ಯಂ ಪಂಚಾಗ್ನಿನಿರತಃ ಸದಾ ।
ಅನೃಣೋಽಭೂತ್ಸದಾ ವಿಪ್ರೋ ದೇವರ್ಷಿಪಿತೃತರ್ಪಣಾತ್ ॥೫॥

---

೧ ಹೇ ದಧಿಪಾಲ! ಈ ವಿಷಯದಲ್ಲಿ ಹಿಂದೆ ನಡೆದ ಇತಿಹಾಸವನ್ನು ಕೇಳು. ವಿಷ್ಣುಭಕ್ತರನ್ನು ನಿಂದಿಸಿದರೆ ಆಗುವ ಪರಿಣಾಮಕ್ಕೆ ನೀನೇ ಉದಾಹರಣೆ ಯಾಗಿರುವೆ.

೨ ಹಿಂದೆ ವೇತ್ರವತೀ ನದೀ ತೀರದಲ್ಲಿ ಯೋಗಿಯೂ, ವಿದ್ವಾಂಸನೂ, ಶ್ರುತಿಸ್ಮೃತಿಗಳಲ್ಲಿ ಪರಿಣತನೂ ಆದ ಶ್ರುತಕೀರ್ತಿಯೆಂಬ ಬ್ರಾಹ್ಮಣನಿದ್ದನು.

೩ ಆ ಬ್ರಾಹ್ಮಣನು ಇಂದ್ರಿಯಗಳನ್ನೆಲ್ಲ ವಶದಲ್ಲಿರಿಸಿಕೊಂಡವನೂ, ಕೋಪವನ್ನು ಜಯಿಸಿದವನೂ, ವಾಜಪೇಯಾದಿ ಅನೇಕ ಯಜ್ಞಗಳನ್ನು ಮಾಡಿದವನೂ, ನಿತ್ಯ ಪಂಚಯಜ್ಞಶೀಲನೂ, ಸರ್ವಶಾಸ್ತ್ರಗಳನ್ನು ಅರಿತವನೂ ಆಗಿದ್ದನು.

೪ ನಿತ್ಯದಲ್ಲಿ ನನ್ನನ್ನು ಪೂಜಿಸುವವನೂ, ನಿತ್ಯ ಅತಿಥಿ ಪೂಜಕನೂ, ನನ್ನಲ್ಲೇ ಮನವಿಟ್ಟವನೂ, ಇಂದ್ರಿಯ ಚಾಪಲ್ಯರಹಿತನೂ ಎಲ್ಲ ಪ್ರಾಣಿಗಳಿಗೆ ಲೇಸನ್ನು ಬಯಸುವವನೂ ಆಗಿದ್ದನು.

೫ ನಿತ್ಯ ಗಾಯತ್ರಿ ಜಪದಲ್ಲಿ ಆಸಕ್ತನೂ, ಪಂಚಾಗ್ನಿ ಪೂಜಕನೂ, ದೇವ, ಋಷಿ, ಪಿತೃಗಳನ್ನು ತೃಪ್ತಪಡಿಸುವ ಮೂಲಕ ಋಣತ್ರಯಗಳಿಂದ ಮುಕ್ತನೂ ಆಗಿದ್ದನು.

ಚತುರ್ವೇದೇಷು ಚತುರಃ ಶಾಸ್ತ್ರವಾದಪಟುಃ ಶುಚಿಃ ।
ಇತ್ಥಂ ಗೃಹೇ ವಸನ್ನಿತ್ಯಂ ಬ್ರಹ್ಮಚರ್ಯವ್ರತೋಽನಿಶಮ್ ॥೬॥

ತಸ್ಮಿನ್ನೇವಾಗ್ರಹಾರೇಽಭೂತ್ಸುಬಂಧುರಿತಿ ವಿಶ್ರುತಃ ।
ಮಹಾಭಾಗವತೋ ಯೋಗೀ ವೇದಾಂತನಿರತಃ ಸದಾ ॥೭॥

ಮಿತಾಶೀ ಜಿತನಿದ್ರಶ್ಚ ನಿವೃತ್ತಸ್ಸರ್ವಬಂಧುಷು ।
ವಿಷ್ಣುಪೂಜಾರತೋ ನಿತ್ಯಂ ಪಂಚಾಗ್ನಿರ್ಬ್ರಾಹ್ಮಣೋತ್ತಮಃ ॥೮॥

ನಿತ್ಯಾನಂದೋ ನಿತ್ಯತೃಪ್ತೋ ಭಗವದ್ಗುಣವರ್ಣನಾತ್ ।
ಯದೃಚ್ಛಾಲಾಭಸಂತುಷ್ಟಃ ಸದಾ ಸ್ವಸ್ಥಾನವೃತ್ತಿಮಾನ್ ।
ವಿರಕ್ತಃ ಸರ್ವಕಾಮೇಷು ದ್ವಂದ್ವಾತೀತೋ ವಿಮತ್ಸರಃ ॥೯॥

ಯಜ್ವಾ ವಶೀ ಮೃದುರ್ದಾಂತಃ ತ್ರಿಕಾಲೇಽಪ್ಯರ್ಚಯನ್ ಹರಿಮ್ ।
ಅತಿಥೇಯೋ ಬಹಿರ್ಮೌನೀ ಶತ್ರುಮಿತ್ರಸುಹೃತ್ಸಮಃ ॥೧೦॥

ರಾಮಾಯಣಪರೋ ನಿತ್ಯಂ ನಿತ್ಯಂ ಭಾಗವತಾರ್ಚಕಃ ।
ಭಾರತೇ ಚಾಪಿ ಗೀತಾಯಾಂ ಧರ್ಮಶಾಸ್ತ್ರೇಷು ಕೋವಿದಃ ॥೧೧॥

---

೬ ನಾಲ್ಕು ವೇದಗಳನ್ನು ಅರಿತವನೂ, ವಾಕ್ಯಾರ್ಥಕುಶಲನೂ, ಅತಿಶುದ್ಧನೂ ನಿರಂತರ ಬ್ರಹ್ಮಚರ್ಯವನ್ನು ಪಾಲಿಸುತ್ತ ವಾಸಿಸುತ್ತಿದ್ದನು.

೭ ಅದೇ ಅಗ್ರಹಾರದಲ್ಲಿ ಭಾಗವತೋತ್ತಮನಾದ, ಯಾವಾಗಲೂ ವೇದಾಂತ ವಿಚಾರದಲ್ಲಿ ತೊಡಗಿದ, ಸುಬಂಧು ಎಂಬ ಹೆಸರಿನ ಯೋಗಿಯೊಬ್ಬನಿದ್ದ.

೮ ಆ ಬ್ರಾಹ್ಮಣನು, ಮಿತವಾಗಿ ತಿನ್ನುವವನೂ, ಅಲ್ಪ ನಿದ್ರಾಯುತನೂ, ಎಲ್ಲ ಬಂಧುಗಳಲ್ಲಿ ವಿರಕ್ತನೂ ನಿತ್ಯ ವಿಷ್ಣು ಪೂಜಕನೂ, ಪಂಚಾಗ್ನಿ ಪೂಜಕನೂ ಆಗಿದ್ದನು.

೯ ಹರಿಯ ಇಚ್ಛೆಯಿಂದ ದೊರೆತುದರಲ್ಲೇ ಸಂತೃಪ್ತನು, ಸದಾ ವಿಹಿತ ವೃತ್ತಿಯಲ್ಲಿ ರತನೂ, ಎಲ್ಲ ಕಾಮನೆಗಳನ್ನು ತೊರೆದವನೂ, ಸುಖ ದುಃಖಗಳನ್ನು ಸಮಾನವಾಗಿ ನೋಡುತ್ತಿದ್ದ ಅವನು ಮಾತ್ಸರ್ಯರಹಿತನಾಗಿದ್ದನು.

೧೦ ಯಜ್ಞಶೀಲನು, ಮೃದು ಸ್ವಭಾವನೂ, ಇಂದ್ರಿಯ ಅಲೋಲುಪನೂ, ತ್ರಿಕಾಲದಲ್ಲಿ ವಿಷ್ಣು ಪೂಜಕನೂ, ಅತಿಥಿಪೂಜಕನೂ, ಶತ್ರು, ಮಿತ್ರ, ಆಪ್ತರಲ್ಲಿ ಸಮದೃಷ್ಟಿಯುಳ್ಳವನಾಗಿದ್ದನು.

೧೧ ನಿತ್ಯದಲ್ಲಿ ರಾಮಾಯಣ ಭಾಗವತಗಳನ್ನು ಪಠಿಸುತ್ತಿದ್ದ ಅವನು ಮಹಾಭಾರತ, ಭಗವದ್ಗೀತೆ, ಧರ್ಮಶಾಸ್ತ್ರಗಳನ್ನು ಚೆನ್ನಾಗಿ ಅರಿತ ವಿದ್ವಾಂಸನಾಗಿದ್ದ.

ಅಸಕ್ತಃ ಪುತ್ರದಾರಾದಾವುದಾಸೀನೋಽಂಗರಕ್ಷಣೇ ।
ವಿಷ್ಣುಲೀಲೈಕಸದ್ಧರ್ಮಃ ಸರ್ವತ್ರ ಹರಿಭಾವನಃ ॥೧೨॥

ಏವಂ ಗಾರ್ಹಸ್ಥ್ಯನಿರತೋ ನಿತ್ಯನೈಮಿತ್ತಿಕೋತ್ಸುಕಃ ।
ಪ್ರತ್ಯಬ್ದಂ ಕಾರ್ಮುಕೇ ಮಾಸೇ ಸ್ನಾತ್ವೋಷಸ್ಯರ್ಚಯನ್ ಹರಿಮ್ ॥೧೩॥

ಕುರ್ವನ್ ಮುದ್ಗಾನ್ನನೈವೇದ್ಯಂ ವಿಷ್ಣವೇ ಪರಮಾತ್ಮನೇ ।
ವೈಶ್ವದೇವಂ ತತಃ ಕೃತ್ವಾ ಬ್ರಾಹ್ಮಣಾನ್ ಭೋಜಯನ್ಸುಧೀಃ ॥೧೪॥

ಸ್ವೀಕುರ್ವನ್ ಮತ್ಪ್ರಸಾದಂ ಚ ಕೃತ್ವಾಮಲಕಮಾತ್ರಕಮ್ ।
ಜುಹೋತಿ ಶ್ರದ್ಧಯಾ ಪಶ್ಚಾದಗ್ನಿಹೋತ್ರಂ ಯಥಾವಿಧಿ ॥೧೫॥

ಏವಂ ಗೃಹೇ ವರ್ತಮಾನಂ ಸುಬಂಧುಂ ವೈಷ್ಣವೋತ್ತಮಮ್ ।
ವೃದ್ಧಂ ಶುದ್ಧಂ ಮಹಾತ್ಮಾನಂ ವಿನೀತಂ ನಿರಹಂಕೃತಿಮ್ ॥೧೬॥

ಶ್ರುತಕೀರ್ತಿರಥೋ ದೃಷ್ಟ್ವಾ ತ್ಯಕ್ತ್ವಾ ಕರ್ಮ ತು ವೈದಿಕಮ್ ।
ಕ್ರಿಯಮಾಣಾಂ ತು ಹರ್ಯರ್ಚಾಂ ಜಗಾದ ಪ್ರಹಸನ್ ದ್ವಿಜಮ್ ॥೧೭॥

---

೧೨ ಪುತ್ರ, ಮಡದಿಯಲ್ಲಿ ನಿರಾಸಕ್ತನಾದ ಅವನು, ದೇಹಾಭಿಮಾನವನ್ನು ತೊರೆದಿದ್ದ. ಎಲ್ಲೆಡೆ ಹರಿಯನ್ನೇ ಕಾಣುತ್ತಿದ್ದ ಅವನು ಭಗವಂತನ ಲೀಲೆಯನ್ನು ಕೇಳುವ ಶ್ರೇಷ್ಠ ಧರ್ಮದಲ್ಲೇ ಆಸಕ್ತನಾಗಿದ್ದ.

೧೩ ಈ ರೀತಿ ನೀರಲ್ಲಿನ ತಾವರೆಯ ಎಲೆಯಂತೆ ವಿಷಯಗಳಲ್ಲಿ ಆಸಕ್ತನಾಗದೇ ಗೃಹಸ್ಥಧರ್ಮರತನಾಗಿದ್ದನು. ನಿತ್ಯ-ನೈಮಿತ್ತಿಕಕರ್ಮಗಳನ್ನು ತಪ್ಪದೇ ಆಚರಿಸುತ್ತಿದ್ದನು. ಪ್ರತಿವರ್ಷ ಧನುರ್ಮಾಸದಲ್ಲಿ ಉಷಃಕಾಲದಲ್ಲಿ ಸ್ನಾನಮಾಡಿ ಭಗವಂತನನ್ನು ಪೂಜಿಸಿ,

೧೪ ಪರಮಾತ್ಮನಿಗೆ ಮುದ್ಗಾನ್ನವನ್ನು ನಿವೇದಿಸಿ ನಂತರ ವೈಶ್ವದೇವನನ್ನು ಮಾಡಿ ಬ್ರಾಹ್ಮಣರಿಗೆ ಭೋಜನ ಮಾಡಿಸುತ್ತಿದ್ದನು.

೧೫ ಬ್ರಾಹ್ಮಣ ಭೋಜನವಾದ ನಂತರ ನೆಲ್ಲಿಕಾಯಿ ಗಾತ್ರದಷ್ಟು ನನ್ನ ಪ್ರಸಾದವನ್ನು ಸೇವಿಸಿ ನಂತರ ವಿಧಿಪೂರ್ವಕವಾಗಿ ಶ್ರದ್ಧೆಯಿಂದ ಅಗ್ನಿಹೋತ್ರವನ್ನಾ-ಚರಿಸುತ್ತಿದ್ದನು.

೧೬ ಈ ರೀತಿಯಾಗಿ ಮನೆಯಲ್ಲಿ ವಾಸಿಸುತ್ತಿದ್ದ, ವೃದ್ಧನೂ, ಶುದ್ಧನೂ, ಮಹಾತ್ಮನೂ, ವಿನಯಶಾಲಿಯೂ, ಗರ್ವರಹಿತನೂ, ವೈಷ್ಣವನೂ ಆದ ಸುಬಂಧುವನ್ನು

೧೭ ವೈದಿಕ ಕರ್ಮಗಳನ್ನು ಬಿಟ್ಟು ಪ್ರಾತಃಕಾಲದಲ್ಲಿ ವಿಷ್ಣುಪೂಜೆ ಮಾಡುವುದನ್ನು

ಸುಬಂಧೋ ಉಷಸಿ ಪ್ರಾಪ್ತಂ ಶ್ರೌತಂ ನಿತ್ಯಾಗ್ನಿಹೋತ್ರಕಮ್ ।
ತ್ಯಕ್ತ್ವಾ ಹರ್ಯರ್ಚನಂ ಸಮ್ಯಕ್ ಕರೋಷಿ ತ್ವಂ ಕಥಂ ಸುಧೀಃ ॥೧೮॥

ಅನ್ನಸ್ವೀಕರಣಂ ಕೃತ್ವಾ ಅಗ್ನಿಹೋತ್ರಂ ಕಥಂ ಭವೇತ್ ।
ಶ್ರುತಿಸ್ಮೃತ್ಯರ್ಥವೇತ್ತಾ ಚ ಸರ್ವಶಾಸ್ತ್ರವಿಶಾರದಃ ॥೧೯॥

ದ್ವಿಜಶ್ರೇಷ್ಠೋ ಭವಾನ್ಯೋಗೀ ಶ್ರುತ್ಯರ್ಥಮವಮನ್ಯಸೇ ।
ಶ್ರುತಿರ್ಗತಿರ್ದ್ವಿಜಾತೀನಾಂ ಸ್ಮೃತಿಃ ಶ್ರುತ್ಯನುಸಾರಿಣೀ ॥೨೦॥

ಶ್ರುತಿಸ್ಮೃತಿವಿರೋಧೇ ತು ಶ್ರುತಿರೇವ ಬಲೀಯಸೀ ।
ವಿಹಾಯ ಕರ್ಮ ಶ್ರೌತಂ ಯಃ ಸ್ಮಾರ್ತಂ ಧರ್ಮಂ ಸಮಾಚರೇತ್ ॥೨೧॥

ವೇದರಂಡ ಇತಿ ಪ್ರೋಕ್ತಃ ಸರ್ವಕರ್ಮಬಹಿಷ್ಕೃತಃ ।
ವಿದ್ವಾನಪಿ ದ್ವಿಜಶ್ರೇಷ್ಠಃ ಕುರ್ಯಾತ್ಕರ್ಮೇದೃಶಂ ಬತ ॥೨೨॥

ಲೋಕೇ ಸಾಂಕರ್ಯಮೇವ ಸ್ಯಾತ್ ಕಲೌ ಯತ್ ಪ್ರಾಪ್ಯತೇ ಜನೈಃ ।

---

ನೋಡಿದ ಶ್ರುತಕೀರ್ತಿಯು ಅಪಹಾಸದಿಂದ ನಗುತ್ತ ನುಡಿದನು.

೧೮ ಹೇ ಸುಬಂಧುವೇ! ಜ್ಞಾನಿಯಾದ ನೀನು ಪ್ರಾತಃಕಾಲದಲ್ಲಿ ಮಾಡಬೇಕಾದ ವೇದೋಕ್ತವಾದ ಅಗ್ನಿಕಾರ್ಯವನ್ನು ಬಿಟ್ಟು ಹರಿಯ ಪೂಜೆಯನ್ನು ಹೇಗೆ ಮಾಡುವಿ.

೧೯ ಅನ್ನ ಸ್ವೀಕಾರದ ನಂತರ ಅಗ್ರಿಹೋತ್ರವನ್ನು ಹೇಗೆ ಮಾಡುವೆ? ನೀನು ಶ್ರುತಿ ಸ್ಮೃತಿಗಳ ಅರ್ಥವನ್ನು ಅರಿತವನು ಸರ್ವಶಾಸ್ತ್ರಗಳಲ್ಲಿ ಪರಿಣಿತನು.

೨೦ ನೀನು ಯೋಗಿಯೂ ಬ್ರಾಹ್ಮಣೋತ್ತಮನೂ ಆಗಿದ್ದು ವೇದವನ್ನು ಅವಮಾನಿಸುತ್ತಿರುವೆ. ಬ್ರಾಹ್ಮಣರಿಗೆ ವೇದವೇ ಆಶ್ರಯವಾಗಿದೆ. ಸ್ಮೃತಿಯು ವೇದವನ್ನು ಅನುಸರಿಸುವುದು.

೨೧ ಶ್ರುತಿಸ್ಮೃತಿಗಳ ಮಧ್ಯೆ ವಿರೋಧ ತೋರಿದಾಗ ಶ್ರುತಿಯೇ ಬಲವತ್ತರವೆನಿಸುವುದು. ವೇದೋಕ್ತವಾದ ಕರ್ಮವನ್ನು ತ್ಯಜಿಸಿ ಸ್ಮೃತಿಗಳಲ್ಲಿ ಹೇಳಿದ ಕರ್ಮಗಳನ್ನು ಆಚರಿಸುವವನು,

೨೨ ವೇದರಂಡನೆನಿಸಿಕೊಂಡು ಎಲ್ಲ ಕರ್ಮಗಳಲ್ಲೂ ತಿರಸ್ಕೃತನಾಗುವನು. ಬ್ರಾಹ್ಮಣ ಶ್ರೇಷ್ಠನೂ, ಉತ್ತಮ ವಿದ್ವಾಂಸನೂ ಆಗಿರುವ ನೀನು ಇಂತಹ ಕಾರ್ಯವನ್ನು ಹೇಗೆ ಮಾಡುವೆ?

ಪ್ರಾಕೃತಾಶ್ಚಾಪಿ ವಿದ್ವಾಂಸಃ ಕಥಂ ಸ್ಯುಃ ಧರ್ಮಸಂಗ್ರಹೇ ॥೨೩॥

ಲೋಕಸಂಕರಕರ್ತಾ ಚ ಶ್ರೌತಧರ್ಮವಿನಿಂದಕೌ ।
ಡಾಂಭಿಕಃ ಪಿಶುನೋ ಲುಬ್ಧಃ ಷಡೇತೇऽಪ್ಯಾತತಾಯಿನಃ ॥೨೪॥

ಆತತಾಯಿಮುಖಂ ದೃಷ್ಟ್ವಾ ಕುರ್ಯಾತ್ ಸೂರ್ಯಾವಲೋಕನಮ್ ।
ಇತಿ ತಂ ದೂಷಯನ್ ಮರ್ತ್ಯೋ ಮದ್ಭಕ್ತಂ ಬ್ರಾಹ್ಮಣೋತ್ತಮಮ್ ॥೨೫॥

ತದಾರಭ್ಯಾಭವನ್ಮೌನೀ ತಸ್ಯ ಸಂಭಾಷಣೇ ತು ಸಃ ।
ಸುಬಂಧುಶ್ಚ ಮಹಾಮೌನೀ ನಿಂದಾಂ ವಿಸ್ಮೃತ್ಯ ಕರ್ಮಕೃತ್ ॥೨೬॥

ನಿಷ್ಕಾಮಃ ಸರ್ವಧರ್ಮೇಭ್ಯೋ ಮಮ ಲೋಕಮುಪೇಯಿವಾನ್ ।
ತನ್ನಿಂದಯಾ ಕ್ಷೀಣಪುಣ್ಯಃ ಕಂಠರೋಗಾರ್ದಿತೋ ಭೃಶಮ್ ॥೨೭॥

ಶ್ಲೇಷ್ಮಪ್ರಪೀಡಿತಶ್ಚಾಪಿ ಶ್ವಾಸಕಾಸಪ್ರಪೀಡಿತಃ ।
ದಹ್ಯಮಾನೋ ಯಾತನಯಾ ಷಡಬ್ದಂ ತ್ವತಿಮಾತ್ರಯಾ ॥೨೮॥

---

೨೩ ಕಲಿಯುಗದಲ್ಲಿ ಒದಗುವ ಧರ್ಮಸಂಕರವು ಈಗಲೇ ಒದಗುತ್ತದೆ. ಸಾಮಾನ್ಯ ವಿದ್ವಾಂಸರು ಧರ್ಮಸಂಗ್ರಹದಲ್ಲಿ ಹೇಗೆ ತೊಡಗುವರು ?

೨೪ ಲೋಕವನ್ನು ಸಂಕರಗೊಳಿಸುವವನು, ವೇದನಿಂದಕನು, ಧರ್ಮನಿಂದಕನು, ಡಂಭಾಚಾರಯುಕ್ತನು, ಚಾಡಿ ಹೇಳುವವನು, ಲೋಭಿಯು ಈ ಆರು ಜನರಿಗೆ ಆತತಾಯಿಗಳೆಂದು ಕರೆಯುವರು.

೨೫ ಆತತಾಯಿಗಳ ಮುಖವನ್ನು ನೋಡಿದರೆ ಸೂರ್ಯನನ್ನು ನೋಡಿ ಶುದ್ಧನಾಗುವನು. ಹೀಗೆಂದು ನನ್ನ ಭಕ್ತನಾದ ಬ್ರಾಹ್ಮಣಶ್ರೇಷ್ಠನನ್ನು ನಿಂದಿಸಿದನು.

೨೬ ಆ ದಿನದಿಂದ ಸುಬಂಧುವು ಮೌನಿಯಾದನು. ಶ್ರುತಕೀರ್ತಿಯೊಂದಿಗಂತೂ ಆತನು ಮಾತನಾಡುತ್ತಿರಲಿಲ್ಲ. ಆದರೆ ಆತನು ಮಾಡಿದ ನಿಂದೆಯನ್ನು ಮರೆತು ವಿಹಿತಕರ್ಮಗಳನ್ನು ಆಚರಿಸುತ್ತ ಇರುತ್ತಿದ್ದನು.

೨೭ ಸರ್ವಧರ್ಮಗಳನ್ನು ನಿಷ್ಕಾಮವಾಗಿ ಆಚರಿಸಿದ ಸುಬಂಧುವು ನನ್ನ ಲೋಕವನ್ನು ಹೊಂದಿದನು. ಸುಬಂಧುವನ್ನು ನಿಂದಿಸಿದ ಕಾರಣದಿಂದ ಪುಣ್ಯವನ್ನು ಕಳೆದುಕೊಂಡ ಶ್ರುತಕೀರ್ತಿಯು ಕುತ್ತಿಗೆಯ ರೋಗದಿಂದ ಅತ್ಯಂತ ಪೀಡಿತನಾಗಿ,

೨೮ ಕಫದಿಂದಲೂ ಉಸಿರಾಟದ ತೊಂದರೆಯಿಂದಲೂ ಅತ್ಯಂತ ಪೀಡಿತನಾಗಿ ಆರು ವರುಷಗಳವರೆಗೆ ಬಹಳ ಯಾತನೆಯಲ್ಲಿ ದಗ್ಧನಾದನು.

ಸನ್ನಿಂದಯಾ ಗತಾಯುಶ್ಚ ಶ್ರುತಕೀರ್ತಿರ್ಮೃತಃ ಶಠಃ ।
ಮದರ್ಚನಾನುಭಾವೇನ ವಿಲಂಘ್ಯ ನರಕಾರ್ಣವಮ್ ॥೨೯॥

ರಾಜಾऽಭೂತ್ಕೀರ್ತಿಮಾನ್ನಾಮ ಬಹ್ಮಣ್ಯಃ ಸತ್ಯಸಂಗರಃ ।
ಯಜ್ವಾ ದಂಡಧರಃ ಶಾಸ್ತಾ ಸ್ವರ್ಗಾರ್ಥೇ ಧರ್ಮತತ್ಪರಃ ॥೩೦॥

ವಿಷ್ಣುಭಕ್ತಿವಿಹೀನೋऽಭೂತ್ ವೈಷ್ಣವಾಗ್ರ್ಯ ವಿನಿಂದಯಾ ।
ಇಚ್ಛನ್ ಪುಣ್ಯಫಲಂ ಮೂಢಃ ಪೂರ್ವವಾಸನಯಾ ಸಖೇ ॥೩೧॥

ದಶವರ್ಷಸಹಸ್ರಾಣಿ ಧರ್ಮಿಷ್ಠಃ ಪಾಲಯನ್ಮಹೀಮ್ ।
ವೈಶಾಖಧರ್ಮಂ ಕೃತವಾನನ್ನದಾನರತಃ ಸದಾ ॥೩೨॥

ಜಲದಾನಂ ವಿಶೇಷೇಣ ಕರೋತಿ ಚ ದಿನೇ ದಿನೇ ।
ತತಃ ಸ್ವರ್ಗಮನುಪ್ರಾಪ್ತಸ್ತತ್ರ ಮನ್ವಂತರತ್ರಯಮ್ ॥೩೩॥

ಸ್ಥಿತ್ವಾऽಪ್ಸರೋಭಿರ್ದಿವ್ಯಾಭಿಃ ಕ್ರೀಡಿತ್ವಾ ನಂದನೇ ವನೇ ।
ಶಬರತ್ವಂ ತತಃ ಪ್ರಾಪ್ತಃ ಕ್ಷೀಣಪುಣ್ಯಃ ಸುಧಾರ್ಮಿಕಃ ॥೩೪॥

---

೨೯ ಉತ್ತಮರ ನಿಂದೆಯಿಂದ ಆಯುಷ್ಯವನ್ನು ಕಳೆದುಕೊಂಡ ಶಠನಾದ ಶ್ರುತಕೀರ್ತಿಯು ಮರಣ ಹೊಂದಿದನು. ನನ್ನನ್ನು ಪೂಜಿಸಿದ ಪುಣ್ಯದಿಂದ ನರಕಸಮುದ್ರವನ್ನು ದಾಟಿ,

೩೦ ಕೀರ್ತಿಮಾನ್ ಎಂಬ ಹೆಸರಿನ ರಾಜನಾದನು. ಬ್ರಾಹ್ಮಣಭಕ್ತನೂ, ಸತ್ಯವಾದಿಯೂ, ಯಜ್ಞಶೀಲನೂ, ಅಧಾರ್ಮಿಕರನ್ನು ದಂಡಿಸುವವನೂ, ಸ್ವರ್ಗದ ಉದ್ದೇಶದಿಂದ ಧರ್ಮಾಚರಣತತ್ಪರನೂ ಆಗಿದ್ದನು.

೩೧ ವಿಷ್ಣುಭಕ್ತಾಗ್ರಣಿಯನ್ನು ನಿಂದಿಸಿದ ಕಾರಣದಿಂದ ವಿಷ್ಣುಭಕ್ತಿರಹಿತನಾದನು. ಪೂರ್ವ ಜನ್ಮದ ಸಂಸ್ಕಾರದಿಂದ ಆ ಮೂಢನು ಪುಣ್ಯವನ್ನು ಅಪೇಕ್ಷಿಸುತ್ತ,

೩೨ ಹತ್ತು ಸಾವಿರ ವರ್ಷಗಳವರೆಗೆ ವೈಶಾಖಮಾಸ ಧರ್ಮವನ್ನು ಆಚರಿಸುತ್ತ, ಅನ್ನದಾನವನ್ನು ಮಾಡುತ್ತ ಧಾರ್ಮಿಕನಾಗಿ ರಾಜ್ಯಪಾಲನೆ ಮಾಡಿದನು.

೩೩ ಪ್ರತಿದಿನವೂ ವಿಶೇಷವಾಗಿ ಜಲದಾನವನ್ನು ಮಾಡುತ್ತಿದ್ದನು. ನಂತರದಲ್ಲಿ ಸ್ವರ್ಗವನ್ನು ಹೊಂದಿ ಅಲ್ಲಿ ಮೂರು ಮನ್ವಂತರಗಳ ಕಾಲ,

೩೪ ವಾಸ ಮಾಡಿ ಅಪ್ಸರೆಯರೊಡನೆ ನಂದನವನದಲ್ಲಿ ಕ್ರೀಡಿಸಿ, ಪುಣ್ಯವೆಲ್ಲ ತೀರಿದ ಬಳಿಕ ಒಳ್ಳೆಯ ಧಾರ್ಮಿಕನಾದ ಆತನು ಬೇಡನಾಗಿ ಹುಟ್ಟಿದನು.

**ಗಂಗಾತೀರೇ ಗುಹೋ ನಾಮ ಸರ್ವಭೂತಹಿತೇ ರತಃ ।**
**ಮಹಾಭಾಗವತಃ ಶ್ರೀಮಾನ್ ಶೃಂಗಿಬೇರಪುರೇ ವಸನ್ ॥೩೫॥**

**ಜಿತೇಂದ್ರಿಯೋ ಜಿತಕ್ರೋಧೋ ಬ್ರಹ್ಮಣ್ಯೋ ಬ್ರಹ್ಮವಿತ್ತಮಃ ।**
**ಉಪಶಾಂತೋ ಮಹಾಯೋಗೀ ವಿಷ್ಣುಭಕ್ತಪ್ರಿಯಃ ಸದಾ ।**
**ವಿಷ್ಣುಪೂಜಾರತೋ ನಿತ್ಯಮಷ್ಟಾಕ್ಷರಪರಾಯಣಃ ॥೩೬॥**

**॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ**
**ತ್ರಯೋದಶೋಽಧ್ಯಾಯಃ ॥**

೩೫ ಗಂಗಾನದಿಯ ತೀರದಲ್ಲಿ ಗುಹನೆಂಬ ಹೆಸರಿನಿಂದ ಬೇಡನಾಗಿ ಜನಿಸಿದ ಅವನು ಅತ್ಯಂತ ವಿಷ್ಣುಭಕ್ತನಾಗಿ ಎಲ್ಲ ಪ್ರಾಣಿಗಳ ಹಿತವನ್ನೇ ಬಯಸುತ್ತ ಶೃಂಗಿಬೇರಪುರದಲ್ಲಿ ವಾಸಿಸಿದನು.

೩೬ ಅವನು ಇಂದ್ರಿಯಗಳನ್ನು ಗೆದ್ದವನು, ಕ್ರೋಧವರ್ಜಿತನೂ, ಬ್ರಾಹ್ಮಣ ಭಕ್ತನೂ, ಬ್ರಹ್ಮಜ್ಞಾನಿಯೂ, ಯೋಗಿಯೂ ವಿಷ್ಣುಭಕ್ತರಲ್ಲಿ ಪ್ರೀತಿಯುಳ್ಳವನೂ ಆಗಿದ್ದನು. ಹಾಗೂ ನಿತ್ಯದಲ್ಲೂ ವಿಷ್ಣು ಪೂಜೆಯನ್ನು ಮಾಡುವವನೂ ಅಷ್ಟಾಕ್ಷರದಲ್ಲಿ ನಿರತನೂ ಆಗಿದ್ದನು.

**॥ ಇಲ್ಲಿಗೆ ಹದಿಮೂರನೇ ಅಧ್ಯಾಯ ಮುಗಿಯಿತು ॥**

# ಅಥ ಚತುರ್ದಶೋಽಧ್ಯಾಯಃ

**ದಧಿಪಾಲ ಉವಾಚ-**

**ಕಥಂ ಕೃಷ್ಣ ದ್ವಿಜಶ್ರೇಷ್ಠಃ ಪೂರ್ವಜನ್ಮನಿರೀಕ್ಷಕಃ ।**
**ಆತಿಥೇಯೋ ಮಹಾಯೋಗೀ ನಿಂದ್ಯಂ ವ್ಯಾಧತ್ವಮಾಪ ಸಃ ॥೧॥**

**ತ್ವದರ್ಚನಾ ವೃಥಾ ಕಿಂ ಸ್ಯಾತ್ ಕುತೋ ಯಜ್ಞಫಲಂ ಗತಮ್ ।**
**ಕಿಂ ಹಿ ನಿಂದ್ಯೋ ಭವೇದ್ವ್ಯಾಧೋ ಭಗವನ್ ಬ್ರಾಹ್ಮಣಪ್ರಿಯಃ ॥೨॥**

**ನಿಸ್ಸಂದೇಹಮಿದಂ ಬ್ರೂಹಿ ಧರ್ಮತತ್ತ್ವಂ ಸಖೇ ಮಮ ।**
**ಇತಿ ತಸ್ಯ ವಚಃ ಶ್ರುತ್ವಾ ದಧಿಪಾಲಸ್ಯ ಯೋಗಿರಾಟ್ ।**
**ಭಕ್ತಾಧೀನೋ ಹಸನ್ಮಂದಂ ಬಭಾಷೇ ಭಗವಾನ್ಸ ತಮ್ ॥೩॥**

**ಶ್ರೀಕೃಷ್ಣ ಉವಾಚ -**

**ಪರನಿಂದಾ ಪರದ್ರೋಹಃ ಪರಸ್ತ್ರೀದ್ರವ್ಯಚಿಂತನಮ್ ।**
**ಪ್ರತಿಗ್ರಹಃ ಪರಾನ್ನಂ ಚ ಮಹಾಪಾಪಕರಾಣಿ ಷಟ್ ॥೪॥**

**ಸರ್ವೇಷ್ವಪಿ ಚ ಪಾಪೇಷು ಪ್ರೋಕ್ತಮೇಷಾಂ ತು ಪಾಪ್ಮನಾಮ್ ।**
**ಪ್ರಾಯಶ್ಚಿತ್ತಂ ಮಹಾಕೃಚ್ಛ್ರಮಪಿ ಶುದ್ಧಾತ್ಮನಃ ಸಖೇ ॥೫॥**

---

೧ ಹೇ ಕೃಷ್ಣನೇ! ಬ್ರಾಹ್ಮಣಶ್ರೇಷ್ಠನೂ, ಮಹಾಯೋಗಿಯೂ, ಅತಿಥಿಪೂಜಕನೂ ಆದ ಶ್ರುತಕೀರ್ತಿಯು ಹೇಗೆ ಬೇಡನಾಗಿ ಜನಿಸಿದನು.

೨ ಹೇ ಭಗವಂತನೇ! ಬ್ರಾಹ್ಮಣಪ್ರಿಯನಾದ ಅವನು ಹೇಗೆ ನಿಂದ್ಯನಾದ ವ್ಯಾಧನಾಗಿ ಜನಿಸಿದನು? ನಿನ್ನ ಪೂಜೆಯು ಹೇಗೆ ವ್ಯರ್ಥವಾಯಿತು? ಯಜ್ಞದ ಪುಣ್ಯವೆಲ್ಲಿ ಹೋಯಿತು?

೩ ಈ ಧರ್ಮರಹಸ್ಯವನ್ನು ಸಂದೇಹವಿಲ್ಲದಂತೆ ಮಿತ್ರನಾದ ನೀನು ನನಗೆ ತಿಳಿಸಬೇಕು. ಹೀಗೆ ಪ್ರಾರ್ಥಿಸಿದ ದಧಿಪಾಲನ ಮಾತನ್ನು ಕೇಳಿ ಯೋಗಿವಂದ್ಯನಾದ, ಭಕ್ತಾಧೀನನಾದ ಕೃಷ್ಣನು ಮೆಲ್ಲಗೆ ನಗುತ್ತ ಅವನಿಗೆ ಹೇಳಿದನು.

೪ ಪರರನ್ನು ನಿಂದಿಸುವುದು, ಮತ್ತೊಬ್ಬರಿಗೆ ದ್ರೋಹ ಮಾಡುವುದು, ಬೇರೊಬ್ಬರ ದ್ರವ್ಯವನ್ನು, ಸ್ತ್ರೀಯನ್ನು ಬಯಸುವುದು, ದಾನ ಸ್ವೀಕಾರ, ಪರಾನ್ನ ಭಕ್ಷಣ ಈ ಆರು ಮಹಾ ಪಾಪಕರವಾದವುಗಳು.

೫ ಶುದ್ಧ ಮನಸ್ವಿಯಾದವನು ಮಾಡಿದ ಈ ಆರು ಪಾಪಗಳಿಗೆ ಮಹಾಕೃಚ್ಛ್ರವೇ ಪ್ರಾಯಶ್ಚಿತ್ತವೆಂದು ಹೇಳಲ್ಪಟ್ಟಿದೆ.

ಮದ್ಭಕ್ತನಿಂದಾ ಯತ್ರ ಸ್ಯಾನ್ನಿಷ್ಕೃತಿರ್ನೈವ ವಿದ್ಯತೇ ।
ಮದ್ದಾಸನಿಂದಕಃ ಪಾಪೀ ಯಾವದಾಚಂದ್ರತಾರಕಮ್ ॥೬॥

ನರಕಾನನುಭೂಯೈವ ವಿಷ್ಠಾಯಾಂ ಜಾಯತೇ ಕ್ರಿಮಿಃ ।
ತಾದೃಶೀಂ ಸ ಇಮಾಂ ಘೋರಾಂ ಮಹಾನರಕಯಾತನಾಮ್ ॥೭॥

ಅಭುಕ್ತ್ವಾ ಶ್ರುತಕೀರ್ತಿಸ್ತು ಉಪಶಾಂತೋ ಮಮ ಪ್ರಿಯಃ ।
ಮದರ್ಚನಪ್ರಭಾವೇನ ರಾಜಾಽಭೂತ್ಪುಣ್ಯವರ್ಧನಃ ॥೮॥

ಜಾತಿಮಾತ್ರಾತ್ಪುಲಿಂದತ್ವಂ ಪ್ರಾಪ್ತೋ ಮದ್ಭಕ್ತನಿಂದಯಾ ।
ಸತ್ಕರ್ಮಾಣ್ಯಕರೋದ್ಭಕ್ತ್ಯಾ ನ ತ್ವಸೌ ವ್ಯಾಧಚೇಷ್ಟಿತಮ್ ॥೯॥

ಶ್ರುತಕೀರ್ತಿರಯಂ ಪೂರ್ವಮಷ್ಟಾಕ್ಷರಪರಸ್ಸದಾ ।
ಅಷ್ಟಾಕ್ಷರವಿಧಾನೇನ ಮತ್ಪೂಜಾನಿರತೋಽನಿಶಮ್ ॥೧೦॥

ಸಹಸ್ರನಾಮಭಿರ್ನಿತ್ಯಂ ವಿಷ್ಣೋರಮಿತತೇಜಸಃ ।
ಕೋಮಲೈಸ್ತುಲಸೀಪತ್ರೈರ್ಮಾಮರ್ಚಯದಹರ್ನಿಶಮ್ ॥೧೧॥

---

೬ ನನ್ನ ಭಕ್ತನ ನಿಂದನೆಗೆ ಪ್ರಾಯಶ್ಚಿತ್ತವಿಲ್ಲ. ವಿಷ್ಣುಭಕ್ತನನ್ನು ನಿಂದಿಸಿದವನು ಸೂರ್ಯಚಂದ್ರರು ಇರುವವರೆಗೆ ಪಾಪಿಯಾಗುವನು.

೭ ಅನೇಕ ನರಕಗಳನ್ನು ಅನುಭವಿಸಿ ಮಲದಲ್ಲಿ ಹುಳುವಾಗಿ ಜನಿಸುವನು. ಶ್ರುತಕೀರ್ತಿಯು ಅಂಥ ಘೋರ ನರಕಯಾತನೆಯನ್ನು ನನ್ನ ಪೂಜೆಯ ಪ್ರಭಾವದಿಂದ ಅನುಭವಿಸಲಿಲ್ಲ.

೮ ನನ್ನ ಪ್ರಿಯನಾದ ಅವನು ಪುಣ್ಯವನ್ನು ಗಳಿಸುವ ರಾಜನಾಗಿ ಜನ್ಮ ತಾಳಿದನು.

೯ ನನ್ನ ಭಕ್ತನನ್ನು ನಿಂದಿಸಿದ ಪಾಪದಿಂದ ಕೇವಲ ಬೇಡ ಜಾತಿಯಲ್ಲಿ ಹುಟ್ಟಿದನು. ಆದರೂ ಅವನು ಭಕ್ತಿಯಿಂದ ಪುಣ್ಯಕರ್ಮಗಳನ್ನು ಆಚರಿಸುತ್ತಿದ್ದನೇ ಹೊರತು ಬೇಡನಂತೆ ಕ್ರೂರಕರ್ಮಿಯಾಗಿರಲಿಲ್ಲ.

೧೦ ಶ್ರುತಕೀರ್ತಿಯು ಹಿಂದೆ ಅಷ್ಟಾಕ್ಷರಪರಾಯಣನಾಗಿದ್ದು ಅಷ್ಟಾಕ್ಷರ-ವಿಧಾನವನ್ನು ಅನುಸರಿಸಿ ನಿತ್ಯದಲ್ಲೂ ನನ್ನ ಪೂಜೆಯನ್ನು ಮಾಡುತ್ತಿದ್ದನು.

೧೧ ಅನಂತಸೂರ್ಯರ ತೇಜಸ್ಸುಳ್ಳ ಭಗವಂತನನ್ನು ವಿಷ್ಣುಸಹಸ್ರನಾಮಗಳನ್ನು ಪಠಿಸುತ್ತ ಮೃದುವಾದ ತುಲಸೀಪತ್ರಗಳಿಂದ ನಿತ್ಯದಲ್ಲೂ ಪೂಜೆ ಮಾಡುತ್ತಿದ್ದನು.

ತೇನ ಪುಣ್ಯಪ್ರಭಾವೇನ ವ್ಯಾಧಜನ್ಮನ್ಯಪೀಹ ಸಃ ।
ಮದ್ದಾಸೋಽಭೂದ್ಗುಹೋ ನಾಮ ಮನ್ನಾಮೈಕಪರಾಯಣಃ ॥೧೨॥

ರಾವಣಾರ್ಥೇಽವತೀರ್ಣಸ್ಯ ರಾಮಾಖ್ಯಸ್ಯ ಹರೇಃ ಪುನಃ ।
ಸಾಹಾಯ್ಯಕೃನ್ಮಹಾಯೋಗೀ ರಾಮಪಾದೈಕಸಂಶ್ರಯಃ ॥೧೩॥

ದುರಾಚಾರೋಽಪಿ ಮೂರ್ಖೋ ವಾ ಮುಕ್ತಃ ಸ್ಯಾನ್ಮಯಿ ಭಕ್ತಿಮಾನ್ ।
ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ ॥೧೪॥

ಮಯಾ ಸಹ ವಿನೋದಾರ್ಥಂ ಯಾತ್ರಾಯಾಂ ರಾಮಶಾಸನಾತ್ ।
ಸ ಗುಹಸ್ತ್ವಂ ಸಖೇಹಾಭೂತ್ ಬ್ರಹ್ಮಜ್ಞಾನ್ಯತ್ರ ಗೋಕುಲೇ ॥೧೫॥

ದಧಿಪಾಲೇತಿ ನಾಮ್ನಾ ವೈ ಸಖಾಭೂದ್ದಾಸವರ್ಯಕಃ ।
ಇತಃ ಪರಂ ಮಯಾ ಸಾಕಂ ಮಮ ಲೋಕಂ ಗಮಿಷ್ಯಸಿ ॥೧೬॥

ಅಹಮೇವ ಭವಾನ್ಯೋಗೀ ತ್ವಮೇವಾಹಂ ನ ಸಂಶಯಃ ।
ಸುಬಂಧುರ್ವಿಪ್ರವರ್ಯೋಽಸೌ ಮದ್ಭಕ್ತೋ ವಿಜಿತೇಂದ್ರಿಯಃ ॥೧೭॥

---

೧೨ ಆ ಪೂಜೆಯ ಪುಣ್ಯದ ಪ್ರಭಾವದಿಂದ ಅವನು ವ್ಯಾಧನಾದಾಗಲೂ ಕೂಡ ನನ್ನ ನಾಮವನ್ನೇ ಜಪಿಸುತ್ತ ಗುಹನೆಂಬ ಹೆಸರಿನಿಂದ ನನ್ನ ದಾಸನಾದನು.

೧೩ ರಾವಣನ ಸಂಹಾರಕ್ಕಾಗಿ ಶ್ರೀಹರಿ ರಾಮನಾಗಿ ಅವತರಿಸಿದ್ದಾನೆ. ಅದನ್ನು ಗುಹನು ತಿಳಿದ. ರಾಮನ ಪಾದಗಳಲ್ಲಿಯೇ ಆಸಕ್ತಿಯನ್ನು ಬೆಳೆಸಿಕೊಂಡ. ರಾಮನ ಸೇವೆಯನ್ನೇ ನಿತ್ಯವೂ ಬಯಸುತ್ತಿದ್ದ. ಶ್ರೀರಾಮಚಂದ್ರನ ಸೇವೆಯನ್ನು ಮಾಡಿದ.

೧೪ ದುರಾಚಾರಿಯಾಗಲೀ, ಮೂರ್ಖನಾಗಲೀ, ನನ್ನಲ್ಲಿ ಭಕ್ತನಾದವನು ಮುಕ್ತನಾಗುವನು. ಹೇ ದಧಿಪಾಲ! ಪುಣ್ಯಕರ್ಮಗಳನ್ನು ಮಾಡಿದವನೆಂದೂ ದುರ್ಗತಿಯನ್ನು ಹೊಂದುವುದಿಲ್ಲ.

೧೫ ನಾನು ರಾಮನಾಗಿರುವಾಗ ನನ್ನ ಪಯಣದಲ್ಲಿ ಸೇವೆ ಸಲ್ಲಿಸಿದ ಗುಹನೇ ನೀನು. ಈಗ ಬ್ರಹ್ಮಜ್ಞಾನಿಯಾಗಿ ಗೋಕುಲದಲ್ಲಿ ಜನಿಸಿರುವೆ.

೧೬ ದಧಿಪಾಲನೆಂಬ ಹೆಸರಿನಿಂದ ನನ್ನ ಗೆಳೆಯನೂ ದಾಸಶ್ರೇಷ್ಠನೂ ಆಗಿರುವೆ. ಇನ್ನು ಮುಂದೆ ನನ್ನ ಜೊತೆ ನನ್ನ ಲೋಕವನ್ನು ಹೊಂದುವೆ.

೧೭ ದಧಿಪಾಲನೇ! ನೀನು ನನಗೆ ಅತ್ಯಂತ ಪ್ರಿಯನು. ನಿನಗೆ ಅತ್ಯಂತ ಪ್ರಿಯನೂ ನಾನೇ. ನನ್ನ ಭಕ್ತನಾದ ಸುಬಂಧುವು ಬ್ರಾಹ್ಮಣಶ್ರೇಷ್ಠನು. ಎಲ್ಲ ಇಂದ್ರಿಯಗಳನ್ನು ಗೆದ್ದವನು.

**ಮತ್ಕಥಾಶ್ರವಣೇ ಸಕ್ತೋ ಮತ್ಪೂಜಾಕರಣೇ ರತಃ ।**
**ಧನುರ್ಮಾಸೇ ಹ್ಯುಷಃಕಾಲೇ ಮುದ್ಗಾನ್ನಂ ಮೇ ನ್ಯವೇದಯತ್ ।**
**ತತೋ ಬ್ರಾಹ್ಮಣಪೂಜಾಂ ಚ ಅನ್ನದಾನಂ ತಥಾऽಕರೋತ್ ॥೧೮॥**

**ದಾರಾನ್ಸುತಾನ್ ಪ್ರಿಯಾನ್ ಪ್ರಾಣಾನ್ ಮದರ್ಥೇ ತು ಸಮರ್ಪಯನ್ ।**
**ಅತಿಥೀನ್ ಭೋಜಯಾಮಾಸ ಹ್ಯಭ್ಯಾಗತಪುರಸ್ಸರಮ್ ॥೧೯॥**

**ಅನ್ನಪಾನಾದಿದಾನೇಷು ನೈವ ಪಾತ್ರವಿಚಾರಣಾ ।**
**ಅನ್ನಸ್ಯ ಕ್ಷುಧಿತಂ ಪಾತ್ರಂ ಪ್ರಾಣಿಮಾತ್ರಂ ಹಿ ಕೇವಲಮ್ ॥೨೦॥**

**ಇತಿ ಜ್ಞಾತ್ವಾ ಹರೇಃ ಪೂಜಾಂ ಪ್ರತ್ಯಹಂ ಚ ದಿನೇ ದಿನೇ ॥೨೧॥**

**ತಥಾ ಕುರ್ವನ್ ವಿಶೇಷೇಣ ಚಾಪಾರ್ಕೇ ಹರಿಪೂಜನಮ್ ।**
**ಪ್ರತ್ಯಹಂ ಚಾಪ್ಯುಷಃಕಾಲೇ ಮುದ್ಗಾನ್ನಂ ಹರಯೇಽರ್ಪಯೇತ್ ॥೨೨॥**

**ವೈಶಾಖೇ ಛತ್ರದಾನಂ ಚ ಸಾಯಾಹ್ನೇ ಚ ಗುಡೋದಕಮ್ ।**
**ಅನ್ನದಾನಂ ವಿಶೇಷೇಣ ದಧ್ಯನ್ನಂ ಚ ದಿನೇ ದಿನೇ ॥೨೩॥**

---

೧೮ ನನ್ನ ಕಥೆಯನ್ನು ಕೇಳಲು ಆಸಕ್ತನು, ನನ್ನ ಪೂಜೆಯಲ್ಲಿ ನಿರತನು, ಧನುರ್ಮಾಸದ ಉಷಃಕಾಲದಲ್ಲಿ ಮುದ್ಗಾನ್ನವನ್ನು ನನಗೆ ನಿವೇದಿಸಿದನು. ನಂತರದಲ್ಲಿ ಬ್ರಾಹ್ಮಣರನ್ನು ಪೂಜಿಸಿ ಅನ್ನದಾನವನ್ನು ಮಾಡುತ್ತಿದ್ದನು.

೧೯ ಪತ್ನಿ, ಮಕ್ಕಳು, ಪ್ರಿಯರು, ಕೊನೆಗೆ ಪ್ರಾಣವನ್ನೂ ಸಹ ನನಗೋಸುಗ ಸಮರ್ಪಿಸಿದನು. ಅಭ್ಯಾಗತರೊಡನೆ, ಅತಿಥಿಗಳನ್ನು ಭೋಜನ ಮಾಡಿಸಿದನು.

೨೦ ಅನ್ನ ನೀರುಗಳನ್ನು ದಾನ ಮಾಡಲು ಪಾತ್ರಾಪಾತ್ರ ವಿಚಾರಣೆ ಬೇಕಿಲ್ಲ. (ಆಮಂತ್ರಣ ಪಡೆದು ಬಂದವರು ಅಭ್ಯಾಗತರು, ಆಮಂತ್ರಣವಿಲ್ಲದೇ ಆಕಸ್ಮಿಕವಾಗಿ ಆಗಮಿಸಿದವರು ಅತಿಥಿಗಳು) ಹಸಿವೆಯಿಂದ ಬಳಲಿದ ಎಲ್ಲ ಪ್ರಾಣಿಗಳೂ ಅನ್ನದಾನಕ್ಕೆ ಯೋಗ್ಯವಾಗಿವೆ. ॥

೨೧ ಹೀಗೆಂದು ತಿಳಿದು ಪ್ರತಿದಿನದಲ್ಲೂ ಹರಿಯ ಪೂಜೆಯನ್ನು ಮಾಡುತ್ತ

೨೨ ವಿಶೇಷವಾಗಿ ಧನುರ್ಮಾಸದಲ್ಲಿ ಹರಿಪೂಜೆಯನ್ನು ಪ್ರತಿದಿನ ಉಷಃಕಾಲದಲ್ಲಿ ಮಾಡಿ ಮುದ್ಗಾನ್ನವನ್ನು ಶ್ರೀಹರಿಗೆ ಅರ್ಪಿಸುತ್ತಿದ್ದನು.

೨೩ ವೈಶಾಖಮಾಸದಲ್ಲಿ ಛತ್ರಿಯನ್ನು, ಸಾಯಂಕಾಲ ಗುಡೋದಕ (ಬೆಲ್ಲದ ಪಾನಕ ಅಥವಾ ಬೆಲ್ಲ ಮತ್ತು ನೀರು) ವಿಶೇಷವಾಗಿ ಅನ್ನದಾನ ಮತ್ತು ಪ್ರತಿದಿನ ಮೊಸರು ಬುತ್ತಿಯನ್ನು ದಾನ ಮಾಡಿದನು.

ಜಲದಾನಂ ಚಕಾರಾಪಿ ಮಧ್ಯಾಹ್ನೇ ಘರ್ಮಪೀಡಿತೇ ।
ಕಾರ್ತಿಕ್ಯಾಂ ದೀಪದಾನಂ ಚ ಮಾಘಸ್ನಾನೈಕತತ್ಪರಃ ।
ಸಾಲಿಗ್ರಾಮಶಿಲಾದಾನಂ ಪಾತ್ರಾಪಾತ್ರವಿಚಕ್ಷಣಃ ॥೨೪॥

ಏವಂ ದತ್ವಾ ವಿಪ್ರವರ್ಯೋ ದ್ವಿಜೇಭ್ಯಃ
ಭಕ್ತೋ ಗತ್ವಾ ಮತ್ಪದಂ ಯೋಗಿಗಮ್ಯಮ್ ।
ಮತ್ಸಾಯುಜ್ಯಂ ಶಂಖಚಕ್ರಾದಿಚಿಹ್ನಂ
ವಿಪ್ರಾಗ್ರ್ಯೋऽಗಾದ್ದುರ್ಲಭಂ ತ್ವನ್ಯಪುಂಭಿಃ ॥೨೫॥

ಸುಬಂಧುನಾಮಾ ಮಮ ವಿಪ್ರವರ್ಯೋ
ಭಕ್ತಃ ಪ್ರಸಿದ್ಧಸ್ಸ ಗುಣಾಭಿರಾಮಃ ।
ಯಥಾ ಗಜೇಂದ್ರೋऽಪಿ ಚ ನಾರದಾದ್ಯಾಃ
ರುಕ್ಮಾಂಗದಶ್ಚಾಂಬರೀಷಃ ಕಿರೀಟೀ ॥೨೬॥

ಶ್ರುತಕೀರ್ತೇಃ ಸುಬಂಧೋಶ್ಚ ಇದಮಾಖ್ಯಾನಮುತ್ತಮಮ್ ।
ಪಠತಾಂ ಶೃಣ್ವತಾಂ ಚಾಪಿ ಭುಕ್ತಿಮುಕ್ತಿಫಲಪ್ರದಮ್ ।
ಏತತ್ತೇ ಸರ್ವಮಾಖ್ಯಾತಂ ಯನ್ಮಾಂ ತ್ವಂ ಪರಿಪೃಷ್ಟವಾನ್ ॥೨೭॥

---

೨೪ ಮಧ್ಯಾಹ್ನದ ಬಿಸಿಲಿನಿಂದ ಬಸವಳಿದವರಿಗೆ ಜಲದಾನವನ್ನು ಮಾಡಿದನು. ಕಾರ್ತಿಕ ಮಾಸದಲ್ಲಿ ದೀಪದಾನವನ್ನು ಮಾಘಮಾಸದಲ್ಲಿ ಪ್ರಾತಃಸ್ನಾನವನ್ನು ಶ್ರದ್ಧೆಯಿಂದ ಮಾಡಿದನು. ದಾನ ಪಡೆಯಲು ಯೋಗ್ಯರಾದವರನ್ನು ಚೆನ್ನಾಗಿ ಅರಿತಿದ್ದ ಆತನು ಉತ್ತಮ ಪಾತ್ರರಿಗೆ ಸಾಲಿಗ್ರಾಮಗಳನ್ನು ದಾನ ಮಾಡಿದನು.

೨೫ ಯೋಗಿಗಳು ಹೊಂದುವ ನನ್ನ ಸ್ಥಾನವನ್ನು ಹೊಂದಿದನು. ಶಂಖ-ಚಕ್ರ ಚಿಹ್ನೆಗಳಿಂದ ಯುಕ್ತವಾದ ಬೇರೆಯವರಿಂದ ಹೊಂದಲು ಕಷ್ಟಸಾಧ್ಯವಾದ ನನ್ನ ಸಾಯುಜ್ಯವನ್ನು ಆ ಬ್ರಾಹ್ಮಣಶ್ರೇಷ್ಠನಾದ ಸುಬಂಧುವು ಹೊಂದಿದನು.

೨೬ ಗುಣಗಳಿಂದ ಕೂಡಿದ ಸುಬಂಧುವೆಂಬ ಆ ಬ್ರಾಹ್ಮಣನು ಭಕ್ತನೆಂದು ಪ್ರಸಿದ್ಧನಾದನು. ಗಜೇಂದ್ರ, ನಾರದ, ರುಕ್ಮಾಂಗದ, ಅಂಬರೀಷ, ಅರ್ಜುನ, ಮೊದಲಾದವರಂತೆ ಸುಬಂಧುವು ಖ್ಯಾತನಾದನು.

೨೭ ಶ್ರುತಕೀರ್ತಿ ಮತ್ತು ಸುಬಂಧುಗಳ ಉತ್ತಮ ಇತಿಹಾಸವನ್ನು ಹೇಳುವವರೂ ಕೇಳುವವರೂ ಇಹಲೋಕದಲ್ಲಿ ಸುಖವನ್ನು ಅನುಭವಿಸಿ ಕೊನೆಗೆ ಮುಕ್ತಿಯನ್ನು ಪಡೆಯುತ್ತಾರೆ. ನೀನು ಕೇಳಿದ ಎಲ್ಲವನ್ನು ನಾನು ನಿನಗೆ ಹೇಳಿದ್ದೇನೆ.

ಮದ್ದಾಸೇ ನಿಸ್ಪೃಹೇ ಶಾಂತೇ ಮಯಾ ಗೋಪ್ಯಂ ನ ವಿದ್ಯತೇ ॥ ೨೮॥

ಆಯಾಸ್ಯಂತೀಹ ಗೋಪ್ಯಸ್ತು ಮಮ ಮಾರ್ಗಪರಾಃ ಸಖೇ ।
ಇತಃ ಪರಂ ನ ವಾಚ್ಯಂ ಹಿ ಮಮ ಲೀಲಾಽತಿಗೂಹನಮ್ ॥೨೯॥

**ಸೂತ ಉವಾಚ-**

ಸರ್ವಂ ತತ್ತ್ವರಹಸ್ಯಂ ಚ ನಿಶಮ್ಯ ಭಗವನ್ಮುಖಾತ್ ।
ತತ್ಸಮಾಗಮವಿಶ್ಲೇಷಕಾತರೋಽಂತರ್ಗತವ್ಯಥಃ ।
ಬಹಿರ್ಹಸನ್ ಶನೈಃ ಪ್ರಾಹ ದಧಿಪಾಲೋ ಹರಿಂ ಮುದಾ ॥೩೦॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ
ಚತುರ್ದಶೋಽಧ್ಯಾಯಃ ॥

---

೨೮ ಆಶಾರಹಿತನೂ ಶಾಂತನೂ ಆದ ನನ್ನ ದಾಸನಲ್ಲಿ ನಾನು ಏನನ್ನೂ ಬಚ್ಚಿಡುವುದಿಲ್ಲ.

೨೯ ನನ್ನನ್ನು ಹುಡುಕುತ್ತಿರುವ ಗೋಪಿಯರು ಇಲ್ಲಿಗೆ ಬರುವರು. ಅತಿರಹಸ್ಯವಾದ ನನ್ನ ಲೀಲೆಯನ್ನು ಇನ್ನೂ ಹೆಚ್ಚು ಹೇಳಲಾಗದು.

೩೦ ಎಲ್ಲ ರಹಸ್ಯತತ್ತ್ವಗಳನ್ನು ಭಗವಂತನ ಮುಖದಿಂದಲೇ ಕೇಳಿ ಭಗವಂತನ ವಿಯೋಗದಿಂದ ಮನಸ್ಸಿನಲ್ಲಿ ದುಃಖಿಸುತ್ತಿರುವ ದಧಿಪಾಲನು ಹೊರಗೆ ತೋರುವಂತೆ ನಗುತ್ತಲೇ ಮೆಲ್ಲಗೆ ಹರಿಯನ್ನು ಕುರಿತು ಹೇಳಿದನು.

**॥ ಇಲ್ಲಿಗೆ ಹದಿನಾಲ್ಕನೇ ಅಧ್ಯಾಯವು ಮುಗಿಯಿತು ॥**

# ಅಥ ಪಂಚದಶೋಽಧ್ಯಾಯಃ

ದಧಿಪಾಲ ಉವಾಚ-

ಧನ್ಯೋಽಹಂ ಕೃತಕೃತ್ಯೋಽಹಂ ಪೂಜ್ಯೋಽಹಂ ಪುರುಷೋತ್ತಮ ।
ವೇದಾಂತವೃಗ್ಯಪಾದಾಬ್ಜೋ ಯನ್ಮೇ ಜಾತಸ್ಸುಹೃದ್ಭವಾನ್ ॥೧॥

ಪಾಪಾನಾಮಪಿ ಪಾಪಸ್ಯ ದಯಾ ಸತ್ಯಂ ನ ನಿಷ್ಕೃತಿಃ ।
ತವ ಭಾವಂ ಕಥಂ ಬ್ರೂಯಾಂ ಪರಿಪೂರ್ಣಸ್ಯ ಸರ್ವತಃ ॥೨॥

ತತ್ರಾಪ್ಯತೀವ ಭಗವಾನ್ ಯೋಗಿನಾಮಪಿ ಮೋಹಿನೀ ।
ಅಹೋ ಹರೇರ್ಮಹಾಮಾಯಾ ದುಸ್ತ್ಯಜಾ ತ್ವಕೃತಾತ್ಮಭಿಃ ॥೩॥

ಶ್ರೀಕೃಷ್ಣ ಉವಾಚ-

ದಯಯಾ ಸಮದೃಷ್ಟ್ಯಾ ಚ ಸರ್ವಭೂತೇಷ್ವಹಿಂಸಯಾ ।
ಯಥಾ ಪ್ರೀಣಾತಿ ಗೋವಿಂದೋ ನ ತಥಾರ್ಚಾತಪೋವ್ರತೈಃ ॥೪॥

ಅಹಿಂಸಾ ಪರಮಂ ಪುಣ್ಯಮಹಿಂಸಾ ಪರಮಂ ತಪಃ ।
ಅಹಿಂಸಾ ಪರಮಂ ತೀರ್ಥಮಹಿಂಸಾ ಪರಮಂ ಪದಮ್ ॥೫॥

---

೧ ಹೇ ಪುರುಷೋತ್ತಮನಾದ ಕೃಷ್ಣನೇ! ವೇದೈಕವೇದ್ಯಸ್ವರೂಪನಾದ ನೀನು ನನ್ನ ಗೆಳೆಯನೆನಿಸಿದುದರಿಂದ ನಾನು ಧನ್ಯನೂ, ಕೃತಕೃತ್ಯನೂ ಪೂಜ್ಯನೂ ಆಗಿದ್ದೇನೆ.

೨ ನಾನು ಪಾಪಿಗಳಲ್ಲಿಯೇ ಪಾಪಿಯಾಗಿದ್ದೇನೆ. ಇದು ಸತ್ಯ . ನಾನು ಮಾಡಿದ ಪಾಪಕ್ಕೆ ಪರಿಹಾರವಿಲ್ಲ. ನಿನ್ನ ದಯೆಯಿಂದಲೇ ನನ್ನ ಪಾಪದ ಪರಿಹಾರವಾಗಬೇಕು. ನನ್ನ ಪುಣ್ಯದಿಂದಲ್ಲ. ನನ್ನ ಸಾಮರ್ಥ್ಯದಿಂದ ಅಲ್ಲವೇ ಅಲ್ಲ. ಸರ್ವರೀತಿಯಿಂದ (ದೇಶ, ಕಾಲ, ಗುಣಗಳಿಂದ) ಪರಿಪೂರ್ಣನಾದ ನಿನ್ನ ಮಹಿಮೆಯನ್ನು ನಾನೆಂತು ವರ್ಣಿಸಲಿ?

೩ ಅದರಲ್ಲೂ ಯೋಗಿಗಳಿಗೂ ಅತ್ಯಂತಮೋಹಕವಾದ ಭಗವಂತನ ಮಹಾಮಾಯೆಯು ಭಗವಂತನನ್ನರಿಯದವರಿಂದ ದಾಟಲಾಗದು.

೪ ಎಲ್ಲ ಪ್ರಾಣಿಗಳಲ್ಲಿ ದಯೆಯಿಂದ, ಎಲ್ಲೆಡೆ ಭಗವಂತನನ್ನು ತಿಳಿಯುವುದರಿಂದ ಯಾವ ಜೀವಿಯನ್ನು ಹಿಂಸಿಸದೇ ಇರುವುದರಿಂದ, ವೇದಪ್ರತಿಪಾದ್ಯನಾದ ಶ್ರೀಹರಿಯು ಪ್ರೀತನಾಗುವಂತೆ ಪೂಜೆ-ತಪಸ್ಸು-ವ್ರತಗಳಿಂದ ಪ್ರೀತನಾಗುವುದಿಲ್ಲ.

೫ ಅಹಿಂಸೆಯೇ ಪರಮ ಪುಣ್ಯವಾಗಿದೆ. ಅಹಿಂಸೆಯೇ ಶ್ರೇಷ್ಠ ತಪವಾಗಿದೆ.

ಅಹಿಂಸಾ ಪರಮಂ ದಾನಮಹಿಂಸಾ ಪರಮೋ ಮಖಃ ||೬||

ಯಜ್ಞದಾನತಪಸ್ತೀರ್ಥಪೂಜಾಚಾಂದ್ರಾಯಣಾದಿಕಮ್ ।
ಹಿಂಸಕಸ್ಯಾಪಿ ಲುಬ್ಧಸ್ಯ ಸರ್ವಂ ನಿಷ್ಫಲಮೇವ ಹಿ ||೭||

ಶ್ರೀ ಸೂತ ಉವಾಚ-

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ ।
ಶ್ರೂಣ್ವತಾಂ ಸರ್ವಪಾಪಘ್ನಂ ಭುಕ್ತಿಮುಕ್ತಿಫಲಪ್ರದಮ್ ||೮||

ಆಸೀತ್ ಕಶ್ಚಿದ್ ದ್ವಿಜಶ್ರೇಷ್ಠಃ ಶ್ರುತಿಸ್ಮೃತಿವಿಚಕ್ಷಣಃ ।
ನಿರ್ಮಮೋ ನಿಸ್ಪೃಹಃ ಶಾಂತೋ ದ್ವಂದ್ವಾತೀತೋ ಜಿತೇಂದ್ರಿಯಃ ||೯||

ಶಿವಪೂಜಾಪರೋ ನಿತ್ಯಂ ಕಾವೇರೀಸ್ನಾನತತ್ಪರಃ ।
ಚಾತುರ್ಮಾಸ್ಯಾದಿಧರ್ಮಾಂಶ್ಚ ಕಾರ್ತಿಕೇ ದೀಪದಾನಕಮ್ ||೧೦||

ಮಾಘೇ ತು ಮಕರೇ ಸ್ನಾನಂ ವೈಶಾಖೇ ಜಲದಾನಕಮ್ ।
ಏತಾನಪಿ ಚ ಧರ್ಮಾಂಸ್ತು ನ ಕರೋತಿ ದ್ವಿಜಾಧಮಃ ||೧೧||

---

ಅಹಿಂಸೆಯೇ ಉತ್ತಮೋತ್ತಮ ತೀರ್ಥವಾಗಿದೆ. ಅಹಿಂಸೆಯೇ ಉತ್ತಮ ಆಶ್ರಯವಾಗಿದೆ.

೬ ಅಹಿಂಸೆಯೇ ಉತ್ತಮ ದಾನವಾಗಿದೆ. ಅಹಿಂಸೆಯೇ ಯಜ್ಞವಾಗಿದೆ.

೭ ಪ್ರಾಣಿಗಳನ್ನು ಹಿಂಸಿಸುವವನು ಮಾಡಿದ ಯಜ್ಞ, ದಾನ, ತಪಸ್ಸು, ತೀರ್ಥಯಾತ್ರೆ, ದೇವರಪೂಜೆ, ಚಾಂದ್ರಾಯಣಾದಿ ವ್ರತಗಳೆಲ್ಲ ವ್ಯರ್ಥವೇ ಸರಿ.

೮ ಕೇಳುಗರ ಪಾಪಗಳೆಲ್ಲವನ್ನು ನಾಶಮಾಡಿ ಭೋಗವನ್ನು, ಮುಕ್ತಿಯನ್ನು ನೀಡುವ ಇತಿಹಾಸವೊಂದನ್ನು ಈ ವಿಷಯದಲ್ಲಿ ಹೇಳುವೆನು ಗಮನವಿರಿಸಿ ಕೇಳು.

೯ ವೇದಗಳನ್ನು, ಸ್ಮೃತಿಗಳನ್ನು ಚೆನ್ನಾಗಿ ಅರಿತ, ಸರ್ವತ್ರ ಅಭಿಮಾನ, ಆಸೆಗಳನ್ನು ತೊರೆದ, ಸುಖದುಃಖಗಳನ್ನು ಸಮನಾಗಿ ಕಾಣುವ, ಅಸೂಯಾರಹಿತನಾದ ಬ್ರಾಹ್ಮಣಶ್ರೇಷ್ಠನೊಬ್ಬನಿದ್ದನು.

೧೦ ನಿತ್ಯದಲ್ಲಿ ಶಿವಪೂಜೆಯಲ್ಲಿ ನಿರತನಾದ ಆ ಬ್ರಾಹ್ಮಣನು ಕಾವೇರೀನದಿಯಲ್ಲಿ ಸ್ನಾನವನ್ನು ಮಾಡುತ್ತಿದ್ದನು. ಆದರೆ ಚಾತುರ್ಮಾಸ್ಯವ್ರತವನ್ನಾಗಲೀ, ಕಾರ್ತಿಕದಲ್ಲಿ ದೀಪದಾನವನ್ನಾಗಲೀ ಮಾಡುತ್ತಿರಲಿಲ್ಲ.

೧೧ ಮಾಘಸ್ನಾನ ಮಕರಸ್ನಾನಗಳನ್ನು, ವೈಶಾಖಮಾಸದಲ್ಲಿ ಜಲದಾನ ಮುಂತಾದ ಧರ್ಮಗಳನ್ನು ಆ ಬ್ರಾಹ್ಮಣನು ಆಚರಿಸುತ್ತಿರಲಿಲ್ಲ.

# ಅಥ ಪಂಚದಶೋಽಧ್ಯಾಯಃ

ದಧಿಪಾಲ ಉವಾಚ-

ಧನ್ಯೋಽಹಂ ಕೃತಕೃತ್ಯೋಽಹಂ ಪೂಜ್ಯೋಽಹಂ ಪುರುಷೋತ್ತಮ ।
ವೇದಾಂತಮೃಗ್ಯಪಾದಾಬ್ಜೋ ಯನ್ಮೇ ಜಾತಸ್ಸುಹೃದ್ಭವಾನ್ ॥೧॥

ಪಾಪಾನಾಮಪಿ ಪಾಪಸ್ಯ ದಯಾ ಸತ್ಯಂ ನ ನಿಷ್ಕೃತಿಃ ।
ತವ ಭಾವಂ ಕಥಂ ಬ್ರೂಯಾಂ ಪರಿಪೂರ್ಣಸ್ಯ ಸರ್ವತಃ ॥೨॥

ತತ್ರಾಪ್ಯತೀವ ಭಗವಾನ್ ಯೋಗಿನಾಮಪಿ ಮೋಹಿನೀ ।
ಅಹೋ ಹರೇರ್ಮಹಾಮಾಯಾ ದುಸ್ತ್ಯಜಾ ತ್ವಕೃತಾತ್ಮಭಿಃ ॥೩॥

ಶ್ರೀಕೃಷ್ಣ ಉವಾಚ-

ದಯಯಾ ಸಮದೃಷ್ಟ್ಯಾ ಚ ಸರ್ವಭೂತೇಷ್ವಹಿಂಸಯಾ ।
ಯಥಾ ಪ್ರೀಣಾತಿ ಗೋವಿಂದೋ ನ ತಥಾರ್ಚಾತಪೋವ್ರತೈಃ ॥೪॥

ಅಹಿಂಸಾ ಪರಮಂ ಪುಣ್ಯಮಹಿಂಸಾ ಪರಮಂ ತಪಃ ।
ಅಹಿಂಸಾ ಪರಮಂ ತೀರ್ಥಮಹಿಂಸಾ ಪರಮಂ ಪದಮ್ ॥೫॥

---

೧ ಹೇ ಪುರುಷೋತ್ತಮನಾದ ಕೃಷ್ಣನೇ! ವೇದೈಕವೇದ್ಯಸ್ವರೂಪನಾದ ನೀನು ನನ್ನ ಗೆಳೆಯನೆನಿಸಿದುದರಿಂದ ನಾನು ಧನ್ಯನೂ, ಕೃತಕೃತ್ಯನೂ ಪೂಜ್ಯನೂ ಆಗಿದ್ದೇನೆ.

೨ ನಾನು ಪಾಪಿಗಳಲ್ಲಿಯೇ ಪಾಪಿಯಾಗಿದ್ದೇನೆ. ಇದು ಸತ್ಯ . ನಾನು ಮಾಡಿದ ಪಾಪಕ್ಕೆ ಪರಿಹಾರವಿಲ್ಲ. ನಿನ್ನ ದಯೆಯಿಂದಲೇ ನನ್ನ ಪಾಪದ ಪರಿಹಾರವಾಗಬೇಕು. ನನ್ನ ಪುಣ್ಯದಿಂದಲ್ಲ. ನನ್ನ ಸಾಮರ್ಥ್ಯದಿಂದ ಅಲ್ಲವೇ ಅಲ್ಲ. ಸರ್ವರೀತಿಯಿಂದ (ದೇಶ, ಕಾಲ, ಗುಣಗಳಿಂದ) ಪರಿಪೂರ್ಣನಾದ ನಿನ್ನ ಮಹಿಮೆಯನ್ನು ನಾನೆಂತು ವರ್ಣಿಸಲಿ?

೩ ಅದರಲ್ಲೂ ಯೋಗಿಗಳಿಗೂ ಅತ್ಯಂತಮೋಹಕವಾದ ಭಗವಂತನ ಮಹಾಮಾಯೆಯು ಭಗವಂತನನ್ನರಿಯದವರಿಂದ ದಾಟಲಾಗದು.

೪ ಎಲ್ಲ ಪ್ರಾಣಿಗಳಲ್ಲಿ ದಯೆಯಿಂದ, ಎಲ್ಲೆಡೆ ಭಗವಂತನನ್ನು ತಿಳಿಯುವುದರಿಂದ ಯಾವ ಜೀವಿಯನ್ನು ಹಿಂಸಿಸದೇ ಇರುವುದರಿಂದ, ವೇದಪ್ರತಿಪಾದ್ಯನಾದ ಶ್ರೀಹರಿಯು ಪ್ರೀತನಾಗುವಂತೆ ಪೂಜೆ-ತಪಸ್ಸು-ವ್ರತಗಳಿಂದ ಪ್ರೀತನಾಗುವುದಿಲ್ಲ.

೫ ಅಹಿಂಸೆಯೇ ಪರಮ ಪುಣ್ಯವಾಗಿದೆ. ಅಹಿಂಸೆಯೇ ಶ್ರೇಷ್ಠ ತಪವಾಗಿದೆ.

**ಅಹಿಂಸಾ ಪರಮಂ ದಾನಮಹಿಂಸಾ ಪರಮೋ ಮಖಃ ॥೬॥**

**ಯಜ್ಞದಾನತಪಸ್ತೀರ್ಥಪೂಜಾಚಾಂದ್ರಾಯಣಾದಿಕಮ್ ।**
**ಹಿಂಸಕಸ್ಯಾಪಿ ಲುಬ್ಧಸ್ಯ ಸರ್ವಂ ನಿಷ್ಫಲಮೇವ ಹಿ ॥೭॥**

**ಶ್ರೀ ಸೂತ ಉವಾಚ-**

**ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ ।**
**ಶೃಣ್ವತಾಂ ಸರ್ವಪಾಪಘ್ನಂ ಭುಕ್ತಿಮುಕ್ತಿಫಲಪ್ರದಮ್ ॥೮॥**

**ಆಸೀತ್ ಕಶ್ಚಿದ್ ದ್ವಿಜಶ್ರೇಷ್ಠಃ ಶ್ರುತಿಸ್ಮೃತಿವಿಚಕ್ಷಣಃ ।**
**ನಿರ್ಮಮೋ ನಿಸ್ಪೃಹಃ ಶಾಂತೋ ದ್ವಂದ್ವಾತೀತೋ ಜಿತೇಂದ್ರಿಯಃ ॥೯॥**

**ಶಿವಪೂಜಾಪರೋ ನಿತ್ಯಂ ಕಾವೇರೀಸ್ನಾನತತ್ಪರಃ ।**
**ಚಾತುರ್ಮಾಸ್ಯಾದಿಧರ್ಮಾಂಶ್ಚ ಕಾರ್ತಿಕೇ ದೀಪದಾನಕಮ್ ॥೧೦॥**

**ಮಾಘೇ ತು ಮಕರೇ ಸ್ನಾನಂ ವೈಶಾಖೇ ಜಲದಾನಕಮ್ ।**
**ಏತಾನಪಿ ಚ ಧರ್ಮಾಂಸ್ತು ನ ಕರೋತಿ ದ್ವಿಜಾಧಮಃ ॥೧೧॥**

---

ಅಹಿಂಸೆಯೇ ಉತ್ತಮೋತ್ತಮ ತೀರ್ಥವಾಗಿದೆ. ಅಹಿಂಸೆಯೇ ಉತ್ತಮ ಆಶ್ರಯವಾಗಿದೆ.

೬ ಅಹಿಂಸೆಯೇ ಉತ್ತಮ ದಾನವಾಗಿದೆ. ಅಹಿಂಸೆಯೇ ಯಜ್ಞವಾಗಿದೆ.

೭ ಪ್ರಾಣಿಗಳನ್ನು ಹಿಂಸಿಸುವವನು ಮಾಡಿದ ಯಜ್ಞ, ದಾನ, ತಪಸ್ಸು, ತೀರ್ಥ-ಯಾತ್ರೆ, ದೇವರಪೂಜೆ, ಚಾಂದ್ರಾಯಣಾದಿ ವ್ರತಗಳೆಲ್ಲ ವ್ಯರ್ಥವೇ ಸರಿ.

೮ ಕೇಳುಗರ ಪಾಪಗಳೆಲ್ಲವನ್ನು ನಾಶಮಾಡಿ ಭೋಗವನ್ನು, ಮುಕ್ತಿಯನ್ನು ನೀಡುವ ಇತಿಹಾಸವೊಂದನ್ನು ಈ ವಿಷಯದಲ್ಲಿ ಹೇಳುವೆನು ಗಮನವಿರಿಸಿ ಕೇಳು.

೯ ವೇದಗಳನ್ನು, ಸ್ಮೃತಿಗಳನ್ನು ಚೆನ್ನಾಗಿ ಅರಿತ, ಸರ್ವತ್ರ ಅಭಿಮಾನ, ಆಸೆಗಳನ್ನು ತೊರೆದ, ಸುಖದುಃಖಗಳನ್ನು ಸಮನಾಗಿ ಕಾಣುವ, ಅಸೂಯಾರಹಿತನಾದ ಬ್ರಾಹ್ಮಣಶ್ರೇಷ್ಠನೊಬ್ಬನಿದ್ದನು.

೧೦ ನಿತ್ಯದಲ್ಲಿ ಶಿವಪೂಜೆಯಲ್ಲಿ ನಿರತನಾದ ಆ ಬ್ರಾಹ್ಮಣನು ಕಾವೇರೀನದಿಯಲ್ಲಿ ಸ್ನಾನವನ್ನು ಮಾಡುತ್ತಿದ್ದನು. ಆದರೆ ಚಾತುರ್ಮಾಸ್ಯವ್ರತವನ್ನಾಗಲೀ, ಕಾರ್ತಿಕದಲ್ಲಿ ದೀಪದಾನವನ್ನಾಗಲೀ ಮಾಡುತ್ತಿರಲಿಲ್ಲ.

೧೧ ಮಾಘಸ್ನಾನ ಮಕರಸ್ನಾನಗಳನ್ನು, ವೈಶಾಖಮಾಸದಲ್ಲಿ ಜಲದಾನ ಮುಂತಾದ ಧರ್ಮಗಳನ್ನು ಆ ಬ್ರಾಹ್ಮಣನು ಆಚರಿಸುತ್ತಿರಲಿಲ್ಲ.

ವಿಷ್ಣುನಿಂದಾಪರೋ ನಿತ್ಯಂ ಲುಬ್ಧಃ ಸರ್ವತ್ರ ಸಂಚರನ್ ।
ದೂರೇ ದರ್ಶನಮಾತ್ರೇಣ ಯಸ್ಯ ಕಸ್ಯ ನಮನ್ ಸ ವೈ ॥೧೨॥

ಮೌನೀ ಸರ್ವತ್ರ ವಿಷಯೇ ಶಿವಪೂಜಾಂ ಕರೋತ್ಯಲಮ್ ।
ಭೀತೋ ಯದೃಚ್ಛಯಾ ಲಬ್ಧವಿಷ್ಣುಶ್ರವಣಶಂಕಯಾ ॥೧೩॥

ಏವಂ ಸಂವಸತಸ್ತಸ್ಯ ದುರ್ಮತೇರಜಿತಾತ್ಮನಃ ।
ಆಯುಃಕ್ಷಯೇ ವಿರೂಪಾಕ್ಷಃ ಉದಾಸೀನ ಉಪೇಕ್ಷಯಾ ॥೧೪॥

ಅಥ ನಂದೀಶ್ವರೋ ವಿಷ್ಣೋರ್ನಿಂದಕಂ ಶಿವಪೂಜಕಮ್ ।
ಹರೇಣೋಪೇಕ್ಷಿತಂ ಜ್ಞಾತ್ವಾ ಪ್ರಾಂಜಲಿಃ ಪ್ರಾಹ ಶಂಕರಮ್ ॥೧೫॥

ನಂದಿಕೇಶ್ವರ ಉವಾಚ-

ಶಂಭೋ ಗಿರಿಶ ವಿಶ್ವೇಶ ಭವ ಭಕ್ತಾರ್ತಿಭಂಜನ ।
ಮಹಾದೇವ ದ್ವಿಜಶ್ರೇಷ್ಠಂ ಕಥಂ ದಾಸಮುಪೇಕ್ಷಸೇ ॥೧೬॥

ತ್ವದ್ಭಕ್ತೋ ನರಕಂ ಗಚ್ಛೇನ್ನಿಷ್ಫಲೋ ವೈದಿಕೋ ವಿಭೋ ।
ಇತಿ ತಸ್ಯ ವಚಃ ಶ್ರುತ್ವಾ ಶಾಸ್ತ್ರೀಯಂ ಪರಮೇಶ್ವರಃ ॥೧೭॥

---

೧೨ ಯಾವಾಗಲೂ ವಿಷ್ಣುವನ್ನು ನಿಂದಿಸುತ್ತಿದ್ದನು. ಕಡು ಲೋಭಿಯಾಗಿದ್ದನು. ಎಲ್ಲಕಡೆಸಂಚರಿಸುತ್ತಿದ್ದನು. ವಿಷ್ಣು-ವೈಷ್ಣವರಿಗೆಎಂದಿಗೂನಮಸ್ಕರಿಸುತ್ತಿರಲಿಲ್ಲ.

೧೩ ಆಕಸ್ಮಿಕವಾಗಿ ಯಾರಾದರೂ ನುಡಿದ ವಿಷ್ಣು ಎಂಬ ಶಬ್ದವು ಕಿವಿಗೆ ಬೀಳದಿರಲೆಂದು ಎಲ್ಲ ವಿಷಯಗಳಲ್ಲಿ ಮೌನಿಯಾಗಿ ಶಿವಪೂಜೆಯನ್ನು ಮಾಡುತ್ತಿದ್ದನು.

೧೪ ಈ ರೀತಿ ಬದುಕುತ್ತಿರುವ ಆ ದುರ್ಬುದ್ಧಿಯ ಆಯುಷ್ಯವು ಮುಗಿಯುತ್ತಿರಲು ರುದ್ರದೇವರು ಔದಾಸೀನ್ಯದಿಂದ ಉಪೇಕ್ಷೆ ಮಾಡಿದರು.

೧೫ ನಂದೀಶ್ವರನು ವಿಷ್ಣುನಿಂದಕನಾದ ಆ ಶಿವಪೂಜಕ ಬ್ರಾಹ್ಮಣನು ಹರನಿಂದ ಉಪೇಕ್ಷಿತನಾದುದನ್ನು ತಿಳಿದು ರುದ್ರದೇವರೆದುರು ಕೈಜೋಡಿಸಿ ಹೇಳಿದನು.

೧೬ ಹೇ ಶಂಭುವೇ, ಕೈಲಾಸವಾಸಿಯೇ, ಜಗದೊಡೆಯನೆ, ಭಕ್ತಪಾಲಕನೇ, ನಿನ್ನ ದಾಸನಾದ ಆ ಬ್ರಾಹ್ಮಣಶ್ರೇಷ್ಠನನ್ನು ಏಕೆ ಉದಾಸೀನ ಮಾಡುತ್ತಿರುವೆ.

೧೭ ನಿನ್ನ ಭಕ್ತನಾದ ಆ ವೇದಜ್ಞನು ನಿಷ್ಫಲವಾಗಿ ನಕರವನ್ನು ಹೊಂದುವನು. ಹೀಗೆಂದ ನಂದೀಶ್ವರನ ಶಾಸ್ತ್ರೀಯವಾದ ಮಾತುಗಳನ್ನು ಕೇಳಿದ ಪರಮೇಶ್ವರನು,

ಈಷತ್ ಕ್ರುದ್ಧಃ ಸ್ಮಯನ್ ಪ್ರಾಹ ಮೇಘಗಂಭೀರಯಾ ಗಿರಾ ||೧೮||

ಶ್ರೀ ಈಶ್ವರ ಉವಾಚ-

ಬ್ರಾಹ್ಮಣೋಽಯಂ ಮಹಾಪಾಪೀ ಮತ್ಪೂಜಾನಿರತೋಽಪಿ ವಾ ।
ಹರಿದ್ವೇಷಪರೋ ನಿತ್ಯಂ ಕಥಂ ಮಲ್ಲೋಕಮರ್ಹತಿ ||೧೯||

ಅಹಮೇವ ಹಿ ದಾಸೋಽಸ್ಮಿ ವಿಷ್ಣುಭಕ್ತೇ ತ್ವಹಿಂಸಕೇ ।
ರಾಮನಾಮಪರೋ ನಿತ್ಯಂ ವಿಷ್ಣುಸ್ತುತಿಪರಾಯಣಃ ||೨೦||

ಲುಬ್ಧೋ ವಿಪ್ರೋ ದಾನಹೀನಃ ಚಾಪಾರ್ಕೇ ಹರಿಪೂಜನಮ್ ।
ಉಷಃಕಾಲೇ ತು ಮುದ್ಗಾನ್ನೈರಕೃತ್ವಾ ವರ್ತತೇ ತು ಯಃ ।
ಹರಿಭಕ್ತಿವಿಹೀನಶ್ಚ ಕಥಂ ಮಲ್ಲೋಕಮರ್ಹತಿ ||೨೧||

ಸಾಮಾನ್ಯನಿಂದಕೋ ಮೂಢೋ ಮದ್ಭಕ್ತೋಽಪಿ ನ ಮೇ ಪ್ರಿಯಃ ।
ಬ್ರಾಹ್ಮಣಾಪೂಜಕಃ ಪಾಪೀ ಕಿಂಪುನರ್ವಿಷ್ಣುನಿಂದಕಃ ||೨೨||

---

೧೮ ಸ್ವಲ್ಪ ಕೋಪಗೊಂಡು ನಸುನಗುತ್ತ, ಮೋಡದಂತೆ ಗಂಭೀರವಾದ ಮಾತಿನಿಂದ ನುಡಿದನು.

೧೯ ಶಂಕರನು ಹೇಳುವನು. ಈ ಬ್ರಾಹ್ಮಣನು ನನ್ನ ಪೂಜಕನಾಗಿದ್ದರೂ ಮಹಾಪಾಪಿಯಾಗಿದ್ದಾನೆ. ನಿತ್ಯದಲ್ಲೂ ವಿಷ್ಣುದ್ವೇಷನಿರತನಾಗಿರುವ ಈತನು ನನ್ನ ಲೋಕವನ್ನು ಹೇಗೆ ಹೊಂದುವನು?

೨೦ ನಿತ್ಯದಲ್ಲೂ ವಿಷ್ಣುವನ್ನು ಸ್ತುತಿಸುತ್ತ ರಾಮನಾಮವನ್ನು ಜಪಿಸುವ ನಾನೇ ದಯಾಪರನಾದ ವಿಷ್ಣುಭಕ್ತನಿಗೆ ದಾಸನಾಗಿದ್ದೇನೆ.

೨೧ ಲೋಭಿಯಾದ ಯಾವ ಬ್ರಾಹ್ಮಣನು ಧನುರ್ಮಾಸದಲ್ಲಿ ಉಷಃಕಾಲದಲ್ಲಿ ಮುದ್ಗಾನ್ನದಿಂದ ಹರಿಪೂಜೆಯನ್ನು ಮಾಡುವುದಿಲ್ಲವೋ ಹಾಗೂ ದಾನ ಮಾಡುವದಿಲ್ಲವೋ, ಹಾಗೂ ಹರಿಯಲ್ಲಿ ಭಕ್ತಿರಹಿತನೋ, ಅಂಥವನು ನನ್ನ ಲೋಕವನ್ನು ಹೇಗೆ ಹೊಂದಬಲ್ಲ?

೨೨ ಮೂಢನಾಗಿ ಸಾಮಾನ್ಯವ್ಯಕ್ತಿಯನ್ನು ನಿಂದಿಸುವ ನನ್ನ ಭಕ್ತನೇ ನನ್ನ ಪ್ರೀತಿಯನ್ನು ಸಂಪಾದಿಸಲಾರ. ಬ್ರಾಹ್ಮಣರನ್ನು ಪೂಜಿಸದವನು ಪಾಪಿಯಾಗುತ್ತಾನೆ. ವಿಷ್ಣುವನ್ನು ನಿಂದಿಸುವವನು ಮಹಾಪಾಪಿಯಾಗುತ್ತಾನೆ. ಅಂಥವನು ನನಗೆ ಹೇಗೆ ಪ್ರಿಯನಾದಾನು?

**ಸ ಏವಾಧೋಕ್ಷಜೋ ವಿಷ್ಣುರ್ಜಗನ್ನಾಥೋ ಜಗನ್ಮಯಃ ।**
**ಸರ್ವಜ್ಞೋ ರಕ್ಷತು ಶ್ರೀಮಾನ್ನಾಹಂ ಶಕ್ನೋಮಿ ರಕ್ಷಿತುಮ್ ॥೨೩॥**

**ವಿಪ್ರತರ್ಪಣಹೀನಸ್ಯ ಲುಬ್ಧಸ್ಯಾವಿಜಿತಾತ್ಮನಃ ।**
**ನಾಂಗೀಕುರ್ಯಾಮಹಂ ಪೂಜಾಂ ವತ್ಸ ಮತ್ಪಾದಯೋಃ ಶಪೇ ॥೨೪॥**

**ಇತ್ಯುಕ್ತ್ವಾ ಭಗವಾನ್ ಶಂಭುಃ ಬ್ರಾಹ್ಮಣಾಕೃತಿರೀಶ್ವರಃ ।**
**ನ ರಕ್ಷಾಯಾಂ ಮನಶ್ಚಕ್ರೇ ಬ್ರಾಹ್ಮಣೇ ವಿಷ್ಣುನಿಂದಕೇ ॥೨೫॥**

**ದ್ವಿಜೋಽಪಿ ಸ ಮೃತೋ ದೂತೈಃ ಪ್ರಾಪಿತೋ ಯಮಸನ್ನಿಧಿಮ್ ।**
**ಅನ್ವಭೂನ್ನರಕಾನ್ ಘೋರಾನ್ ಭೂಮೌ ವೈ ಪಾತಿತಃ ಪುನಃ ॥೨೬॥**

**ಭೀಷಣೋ ದಂಡಕಾರಣ್ಯೇ ಘಂಟಾಕರ್ಣ ಇತಿ ಶ್ರುತಃ ।**
**ವಿಪ್ರಾಣಾಂ ಹಿಂಸಕಃ ಕ್ರೂರೋ ಬಭೂವ ಬ್ರಹ್ಮರಾಕ್ಷಸಃ ॥೨೭॥**

**ಅಥ ಕಾಲಾಂತರೇ ವಿಪ್ರಾಃ ಭಗವಾನ್ಪುರುಷೋತ್ತಮಃ ।**
**ನಿಜಮಾಯಾಮುಪಾಶ್ರಿತ್ಯ ಲೀಲಾಮಾನುಷವಿಗ್ರಹಃ ।**
**ವಸುದೇವಗೃಹೇ ಸಾಕ್ಷಾತ್ ಪರಂಬ್ರಹ್ಮಾವತೀರ್ಯ ವೈ ॥೨೮॥**

---

೨೩ ಭಗವಂತ ಜಗದ್ವ್ಯಾಪಿಯಾಗಿದ್ದಾನೆ. ಇಂದ್ರಿಯಗಳಿಗೆ ಅಗೋಚರನಾಗಿದ್ದಾನೆ. ಜಗತ್ತಿಗೆ ನಿಯಾಮಕನಾಗಿದ್ದಾನೆ. ಸರ್ವಜ್ಞನಾಗಿದ್ದಾನೆ. ಅಂಥ ಶ್ರೀನಾರಾಯಣನೇ ಅವನನ್ನು ರಕ್ಷಿಸಬೇಕು. ನಾನು ಅವನನ್ನು ರಕ್ಷಿಸಲು ಶಕ್ತನಲ್ಲ.

೨೪ ಬ್ರಾಹ್ಮಣರನ್ನು ತೃಪ್ತಿಗೊಳಿಸದ ಇಂದ್ರಿಯಲೋಲುಪನು, ಲೋಭಿಯಾದವನು, ನನಗೆ ಮಾಡಿದ ಪೂಜೆಯನ್ನು ನಾನು ಸ್ವಿಕರಿಸುವುದಿಲ್ಲ. ಹೇ ನಂದಿಕೇಶ್ವರನೇ! ನಾನು ಅವನನ್ನು ಶಪಿಸುತ್ತೇನೆ.

೨೫ ಹೀಗೆಂದು ಹೇಳಿ ಬ್ರಾಹ್ಮಣಾಕೃತಿಯಾದ ಭಗವಾನ್ ರುದ್ರದೇವರು, ವಿಷ್ಣುನಿಂದಕನಾದ ಆ ಬ್ರಾಹ್ಮಣನನ್ನು ರಕ್ಷಿಸಲು ಇಚ್ಛಿಸಲಿಲ್ಲ.

೨೬ ಮೃತನಾದ ಆ ಬ್ರಾಹ್ಮಣನು ಯಮದೂತರಿಂದ ಯಮಸನ್ನಿಧಿಗೆ ತರಲ್ಪಟ್ಟನು. ಘೋರವಾದ ಅನೇಕ ನರಕಗಳನ್ನು ಅನುಭವಿಸಿ ಮತ್ತೆ ಭೂಮಿಗೆ ತಳ್ಳಲ್ಪಟ್ಟನು.

೨೭ ದಂಡಕಾರಣ್ಯದಲ್ಲಿ ಭಯಂಕರವಾದ ಘಂಟಾಕರ್ಣ ಎಂಬ ಹೆಸರಿನಿಂದ ಬ್ರಾಹ್ಮಣಹಿಂಸಕನಾದ ಅತಿಕ್ರೂರಿಯಾದ ಬ್ರಹ್ಮರಾಕ್ಷಸನಾದನು.

೨೮ ಅನಂತರದಲ್ಲಿ ಪುರುಷೋತ್ತಮನಾದ ಲೀಲಾಮಾನುಷವಿಗ್ರಹನಾದ ಪರಬ್ರಹ್ಮನು ತನ್ನ ಇಚ್ಛೆಯನ್ನು ಅನುಸರಿಸಿ ವಸುದೇವನ ಮನೆಯಲ್ಲಿ ಕೃಷ್ಣನೆಂಬ ಹೆಸರಿನಿಂದ ಅವತರಿಸಿದ.

**ನಂದಗೋಪಗೃಹಂ ನೀತಶ್ಚೋರಯನ್ನವನೀತಕಮ್ ।**
**ವೃಂದಾವನಾಂತಸ್ಸಂಚಾರೀ ಭಕ್ತಾನಾಮನುಕಂಪಯಾ ॥೨೯॥**

**ಮೋಹನಾಯಾಸತಾಂ ನೃಣಾಂ ಶ್ರೇಯಸೇ ಭೂಯಸೇ ಸತಾಮ್ ।**
**ಗೋಪಾಲಬಾಲಕೈರ್ವತ್ಸಾನ್ ಪಾಲಯನ್ಯಮುನಾತಟೇ ॥೩೦॥**

**ತತ್ರ ದಧ್ಯೋದನಂ ಭುಕ್ತ್ವಾ ಸಖ್ಯಾನೀತಂ ಫಲಾನ್ವಿತಮ್ ।**
**ಭೋಜಯನ್ ಗೋಪಬಾಲಾಂಶ್ಚ ಪರಿಹಾಸಪುರಸ್ಸರಮ್ ॥೩೧॥**

**ಪರಮಾತ್ಮಾ ಸ್ವಯಂ ತೃಪ್ತಃ ಪರಮಾನಂದವಿಗ್ರಹಃ ।**
**ತತೋ ವತ್ಸೇಷು ವಿಧಿನಾ ಗೋಪಿತೇಷು ವನಾಂತರೇ ॥೩೨॥**

**ತಥಾಭೂತೇಷ್ವಪಿ ಪುನರ್ಗೋಪಾಲೇಷು ಚ ತತ್ಕ್ಷಣೇ ।**
**ಬ್ರಹ್ಮಣೋ ವಂಚನಾಂ ಜ್ಞಾತ್ವಾ ಕೃಷ್ಣಸ್ತನ್ಮಯತಾಂ ಗತಃ ॥೩೩॥**

---

೨೯ ವಸುದೇವನಿಂದ ನಂದಗೋಪನ ಮನೆಗೆ ತರಲ್ಪಟ್ಟ ಆತನು ಬೆಣ್ಣೆ ಮುಂತಾದವನ್ನು ಕದಿಯುತ್ತ ಭಕ್ತರ ಮೇಲಿನ ಅನುಕಂಪದಿಂದ ವೃಂದಾವನದೊಳಗೆ ಸಂಚರಿಸಿದ.

೩೦ ಅಯೋಗ್ಯ ಜನರನ್ನು ಮೋಹನಗೊಳಿಸುತ್ತ ಸಜ್ಜನರ ಅತ್ಯಂತ ಶ್ರೇಯಸ್ಸಿಗಾಗಿ ಗೋಪಾಲಬಾಲರೊಡಗೂಡಿ ಯಮುನಾತೀರದಲ್ಲಿ ಆಕಳು-ಕರುಗಳನ್ನು ಪಾಲಿಸಿದನು.

೩೧ ಗೆಳೆಯರಿಂದ ತರಲ್ಪಟ್ಟ ಹಣ್ಣು-ಹಂಪಲುಗಳಿಂದ ಕೂಡಿದ ಮೊಸರುಬುತ್ತಿಯನ್ನು ವಿನೋದದಿಂದ ತಾನು ಸ್ವೀಕರಿಸಿ ಗೋಪಬಾಲಕರಿಗೆ ತಿನ್ನಿಸಿದನು.

೩೨ ನಂತರ ಸ್ವಯಂತೃಪ್ತನೂ, ಆನಂದಶರೀರಿಯೂ ಆದ ಪರಮಾತ್ಮನು, ಕರುಗಳು ಬ್ರಹ್ಮದೇವನ ಮಾಯೆಯಿಂದ ಬೇರೊಂದು ವನದಲ್ಲಿ ಅಡಗಿ ಕಾಣದಂತಾದರು.

೩೩ ಗೋಪಾಲಕರೂ ಹಾಗೆಯೇ ಕಾಣದಂತಾಗಲು, ಇದು ಬ್ರಹ್ಮನ ವಂಚನೆ-ಯೆಂದರಿತ ಕೃಷ್ಣನು ಅದರ ಪರಿಹಾರದ ವಿಚಾರ ಮಾಡಿದ.

ವಿಶೇಷ- ಅಜ್ಞಾನವಾಗಲೀ, ಕಲ್ಯಾದಿದೈತ್ಯರ ಆವೇಶವಾಗಲೀ ಬ್ರಹ್ಮದೇವರಿಗೆ ಇಲ್ಲವೇ ಇಲ್ಲ. ಹೀಗಾಗಿ ದೇವರ ವಿರುದ್ಧವಾಗಿ ಎಂದಿಗೂ ನಡೆದುಕೊಳ್ಳುವುದಿಲ್ಲ. ಆದರೂ ದೇವರ ವಿರುದ್ಧವಾಗಿ ನಡೆದ ಘಟನೆಯನ್ನು ಇಲ್ಲಿ ತಿಳಿಸುತ್ತಿದ್ದಾರೆ. ಇದು ಕೇವಲ ಮೋಹಕವೆಂದು ತಿಳಿಯಬೇಕು.

**ಯಾತಾಯಾತಂ ತಥಾಕುರ್ವನ್ನೇಕಾಬ್ದಂ ವಿಜನೇ ವನೇ ।**
**ಕದಾಚಿದ್ಯಮುನಾತೋಯಂ ಪೀತ್ವಾ ನೀಲಮಣಿಪ್ರಭಮ್ ॥೩೪॥**

**ಧಿಕ್ಕುರ್ವನ್ಮಮತಾಂ ತಸ್ಯ ಬ್ರಹ್ಮಣಃ ಸ್ರಷ್ಟುರೀಶ್ವರಃ ।**
**ಕ್ಷೀರಫೇನನಿಭೇ ರಮ್ಯೇ ಸ ತು ಚಿಕ್ರೀಡ ಸೈಕತೇ ॥೩೫॥**

**ಯತ್ರ ವೇದಾ ನಿವರ್ತಂತೇಽವಿಚಿಂತ್ಯಂ ಯನ್ಮುನೀಶ್ವರೈಃ ।**
**ತದ್ ಬ್ರಹ್ಮ ಪರಮಂ ಸಾಕ್ಷಾತ್ ಕೃಷ್ಣಾಖ್ಯಂ ಪ್ರಕೃತೇಃ ಪರಮ್ ॥೩೬॥**

**ಗೋಪಾಲರೂಪಸಂಛನ್ನಂ ಸನಕಾದಿನಮಸ್ಕೃತಮ್ ।**
**ದ್ರಷ್ಟುಂ ಬ್ರಹ್ಮರ್ಷಯಃ ಸರ್ವೇ ನಿಸ್ಪೃಹಾ ಲೋಕಪೂಜಿತಾಃ ॥೩೭॥**

**ಶಿಷ್ಯಪ್ರಶಿಷ್ಯೈಃ ಸಹಿತಾ ತತ್ರಾಜಗ್ಮುರ್ಮಹರ್ಷಯಃ ।**
**ರಾಜರ್ಷಯಶ್ಚ ತೇಷಾಂ ವೈ ಸಂಖ್ಯಾ ಕರ್ತುಂ ನ ಶಕ್ಯತೇ ॥೩೮॥**

**ಕೃಷ್ಣೋಽಪಿ ತಾನ್ ಋಷೀನ್ ಭಕ್ತ್ಯಾ ನನಾಮ ಶಿರಸಾಽಗತಾನ್ ।**
**ಪೃಷ್ಟ್ವಾಥ ಕುಶಲಂ ತೇಭ್ಯೋ ದತ್ವಾ ದರ್ಭಾಸನಂ ಶುಭಮ್ ॥೩೯॥**

---

೩೪ ಒಂದು ವರುಷದವರೆಗೆ ಹಾಗೆಯೇ ನಿರ್ಜನವಾದ ಅರಣ್ಯದಲ್ಲಿ ಸಂಚಾರ ಮಾಡುತ್ತ ಒಂದೊಮ್ಮೆ ಇಂದ್ರನೀಲಮಣಿಯಂತೆ ಕಪ್ಪಾಗಿ ಹೊಳೆಯುವ ಯಮುನೆಯ ನೀರನ್ನು ಪಾನ ಮಾಡಿದನು.

೩೫ ಸೃಷ್ಟಿಕರ್ತನಾದ ಆ ಬ್ರಹ್ಮನ ಮಮತೆಯನ್ನು ಕೃಷ್ಣನು ಧಿಕ್ಕರಿಸಿ ಹಾಲಿನ ನೊರೆಯಂತೆ ಬೆಳ್ಳಗಿರುವ ಅತಿ ಮನೋಹರವಾದ ಮರಳಿನಲ್ಲಿ ಕ್ರೀಡಿಸಿದನು.

೩೬ ಯಾವ ಬ್ರಹ್ಮನನ್ನು ಪೂರ್ತಿಯಾಗಿ ವರ್ಣಿಸಲು ಶಕ್ತಿ ಸಾಲದೇ ವೇದಗಳು ಹಿಂತಿರುಗುವವೋ ಯಾರು ಎಲ್ಲ ಯೋಗಿಗಳಿಂದಲೂ ಸಮಗ್ರವಾಗಿ ತಿಳಿಯಲು ಅಶಕ್ಯನೋ ಪ್ರಕೃತಿಗಿಂತಲೂ ಉತ್ತಮನೂ ಆದ ಪರಬ್ರಹ್ಮನೇ ಶ್ರೀಕೃಷ್ಣನಾಗಿ ಅವತರಿಸಿದ್ದಾನೆ.

೩೭ ಗೋಪಾಲರೂಪದಿಂದ ಅಡಗಿರುವ, ಸನಕಾದಿಗಳಿಂದಲೂ ನಮಸ್ಕೃತನಾದ, ಆ ಭಗವಂತನನ್ನು ನೋಡಲು ವಿರಕ್ತರೂ ಲೋಕವಂದಿತರೂ ಆದ

೩೮ ಎಲ್ಲ ಬ್ರಹ್ಮರ್ಷಿಗಳು, ಮಹರ್ಷಿಗಳು, ರಾಜರ್ಷಿಗಳು ತಮ್ಮ ಶಿಷ್ಯ-ಪ್ರಶಿಷ್ಯ-ರಿಂದೊಡಗೂಡಿ ಅಮಿತ ಸಂಖ್ಯೆಯಲ್ಲಿ ಅಲ್ಲಿಗೆ ಆಗಮಿಸಿದರು.

೩೯ ಆಗಮಿಸಿದ ಋಷಿಗಳನ್ನೆಲ್ಲ ಭಕ್ತಿಯಿಂದ ಶಿರಬಾಗಿ ನಮಸ್ಕರಿಸಿದ ಕೃಷ್ಣನು ಅವರ ಕುಶಲವನ್ನು ವಿಚಾರಿಸಿ ಆಸೀನರಾಗಲು ಶುಭವಾದ ದರ್ಭಾಸನವನ್ನು ನೀಡಿದನು.

ಏತಸ್ಮಿನ್ನೇವ ಕಾಲೇ ತು ಮಹಾಯೋಗೇಶ್ವರೋ ಹರಿಃ ।
ತತ್ತದ್ವಿಪ್ರಾಂಘ್ರಿಯುಗಲಂ ಪ್ರಕ್ಷಾಲ್ಯ ವಿಧಿಪೂರ್ವಕಮ್ ॥೪೦॥

ತತ್ತೀರ್ಥಂ ಧಾರಯನ್ ಮೂರ್ಧ್ನಾ ದರ್ಶಯನ್ ಲೋಕಭಾವನಮ್ ।
ಪ್ರಾಂಜಲಿಃ ಪ್ರಶ್ರಿತೋ ವಿದ್ವಾನ್ ಮಂದಸ್ಮಿತಮುಖೋಽಬ್ರವೀತ್ ॥೪೧॥

ನಿರ್ವಿಘ್ನೋ ವರ್ಧತೇ ಧರ್ಮೋ ಯುಷ್ಮಾಕಂ ಸ್ವಾಶ್ರಮೋಚಿತಃ ।
ನಿರ್ವ್ಯಲೀಕಂ ಮನಃ ಶುದ್ಧಂ ಬ್ರಹ್ಮಣ್ಯೇವಾಭಿವರ್ತತೇ ॥೪೨॥

ಕಚ್ಚಿತ್ತಪೋ ನ ಬಾಧಂತೇ ರಾಕ್ಷಸಾ ದ್ವಿಜಪುಂಗವಾಃ ।
ಕಾಮಕ್ರೋಧಮನಾಃ ಕಚ್ಚಿಚ್ಚಂಚಲತ್ವಾನ್ನಿವರ್ತತೇ ॥೪೩॥

ಭವತಾಮಾಶ್ರಮೇ ಕಚ್ಚಿತ್ ಕುಶಲಾಶ್ಚ ಮೃಗಾಸ್ತಥಾ ।
ಹೃದಬ್ಜೇ ತಪಸಾ ಕಚ್ಚಿತ್ ಹರಿಃ ಸಾಕ್ಷಾತ್ಕೃತೋಽನಘಾಃ ॥೪೪॥

ಕಿಮತ್ರಾಗಮನೇ ಕಾರ್ಯಮಥವಾ ಮಯ್ಯನುಗ್ರಹಾತ್ ।
ಶಿಷ್ಯಂ ಮಾಮನುಗೃಹ್ಣೀಧ್ವಂ ಕಿಮತ್ರ ಕರವಾಣ್ಯಹಮ್ ॥೪೫॥

---

೪೦ ಅನಂತರದಲ್ಲಿ ಯೋಗೇಶ್ವರನಾದ ಹರಿಯು ಆ ಎಲ್ಲ ಬ್ರಾಹ್ಮಣರ ಪಾದಗಳನ್ನು ವಿಧಿಪೂರ್ವಕವಾಗಿ ಭಕ್ತಿಯಿಂದ ಪ್ರಕ್ಷಾಲನೆ ಮಾಡಿದನು.

೪೧ ಲೋಕಶಿಕ್ಷಣ ಮಾಡುತ್ತಾ ಆ ಪಾದತೀರ್ಥವನ್ನು ತಲೆಯ ಮೇಲೆ ಧರಿಸಿದನು. ನಂತರ ಕೈಮುಗಿದು ಮಂದಸ್ಮಿತ ಮುಖದಿಂದ ಮಾತನಾಡಿದನು.

೪೨ ನಿಮ್ಮ ವರ್ಣಾಶ್ರಮಗಳಿಗೆ ಉಚಿತವಾದ ಧರ್ಮವು ನಿರ್ವಿಘ್ನವಾಗಿ ನಡೆಯುತ್ತಿದೆಯೇ? ಕಪಟರಹಿತವಾಗಿ ಮನವು ಬ್ರಹ್ಮನನ್ನೇ ಧ್ಯಾನಿಸುತ್ತಿದೆಯೇ?

೪೩ ಬ್ರಾಹ್ಮಣಶ್ರೇಷ್ಠರೇ! ರಾಕ್ಷಸರು ನಿಮ್ಮ ತಪಸ್ಸಿಗೆ ಭಂಗ ತರುತ್ತಿಲ್ಲವಷ್ಟೇ? ಕಾಮಗ್ರೋಧಗಳಿಂದ ಯುಕ್ತವಾಗಿ ಚಂಚಲವಾದ ಮನವು ಪರಮಾತ್ಮನಿಂದ ದೂರ ಓಡುತ್ತಿಲ್ಲವಷ್ಟೇ?

೪೪ ನಿಮ್ಮ ಆಶ್ರಮಗಳಲ್ಲಿರುವ ಮೃಗಗಳು ಕ್ಷೇಮದಿಂದಿವೆಯೇ? ತಪಸ್ಸಿನಿಂದ ಪಾಪರಹಿತರಾದ ನಿಮ್ಮ ಹೃದಯಕಮಲಗಳಲ್ಲಿ ಹರಿಯ ಸಾಕ್ಷಾತ್ಕಾರ-ವಾಗಿದೆಯೇ?

೪೫ ಇಲ್ಲಿಗೆ ಆಗಮಿಸಲು ಕಾರಣವೇನು? ನನ್ನಲ್ಲಿ ಅನುಗ್ರಹದಿಂದ ಬಂದಿರುವಿರಾ? ಶಿಷ್ಯನಾದ ನನ್ನನ್ನು ಅನುಗ್ರಹಿಸಿರಿ. ನಿಮ್ಮ ಸೇವೆಯನ್ನೇನು ಮಾಡಲಿ.

ಹರೇರಿದಂ ವಚಃ ಶ್ರುತ್ವಾ ಮಾಯಾಮಾನುಷರೂಪಿಣಃ ।
ವಿಸ್ಮಿತಾಶ್ಚ ಪ್ರಹೃಷ್ಟಾಶ್ಚ ಪ್ರಾಹುಃ ಕೃಷ್ಣಂ ಮುನೀಶ್ವರಾಃ ॥೪೬॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ
ಪಂಚದಶೋಽಧ್ಯಾಯಃ ॥

---

೪೬ ತನ್ನ ಇಚ್ಛೆಯಿಂದ ಮನುಷ್ಯನಂತೆ ತೋರುವ ಶ್ರೀಹರಿಯ ಮಾತುಗಳಿಂದ ಆಶ್ಚರ್ಯಚಕಿತರೂ ಆನಂದಯುಕ್ತರೂ ಆದ ಋಷಿಗಳು ಕೃಷ್ಣನನ್ನು ಕುರಿತು ಮಾತನಾಡಿದರು.

॥ ಇಲ್ಲಿಗೆ ಹದಿನೈದನೇ ಅಧ್ಯಾಯವು ಮುಗಿಯಿತು ॥

# ಅಥ ಷೋಡಶೋಽಧ್ಯಾಯಃ

**ಮುನಯ ಊಚುಃ –**

**ತವ ಪ್ರಶ್ನಸ್ಯ ಹೇ ಕೃಷ್ಣ ಕೋ ವಕ್ತ್ಯುತ್ತರಮರ್ಥವತ್ ।**
**ತ್ವಮೇವ ನಃ ಪರಂ ಬ್ರಹ್ಮ ತ್ವಮೇವ ಪರಮಾ ಗತಿಃ ॥೧॥**

**ತ್ವಮೇವ ಭಾಸಿ ನೋ ದೇವ ಹೃದಬ್ಜೇ ವಿಶ್ವಭಾವನ ।**
**ದರ್ಶನೇನ ತವಾಭೂನ್ನ ಇದಾನೀಂ ತಪಸಃ ಫಲಮ್ ॥೨॥**

**ಕೃತಾರ್ಥಾಶ್ಚ ತಪಸ್ಸಿದ್ಧಾ ವಯಮೇವ ಯದೂತ್ತಮಮ್ ।**
**ವಿಸ್ಮಿತಾ ದ್ರಷ್ಟುಮಾಯಾತಾ ಮಾಯೇಶಂ ಸ್ರಷ್ಟುರೀಶ್ವರಮ್ ॥೩॥**

**ಇತಿ ಬ್ರುವಾಣಾ ಮುನಯಃ ಸುನಿರ್ವೃತಾಃ**
**ಸಾಕ್ಷಾತ್ಪರಬ್ರಹ್ಮಸುದರ್ಶನೇನ ।**
**ಯನ್ಮಾನಸೇ ಭಾತಿ ಸತಾಂ ಸುಧರ್ಮಣಾಂ**
**ತದೇವ ಪುಣ್ಯೈರ್ಬಹಿರರ್ಚ್ಯತೇ ಸದಾ ॥೪॥**

**ಅಥ ಸ್ತುವತಿ ಗೋವಿಂದಂ ಮುನಿವೃಂದೇಽರವಿಂದಜಃ ।**
**ಮುನೀಂದ್ರಸನ್ನಿಧೌ ಮಂದಂ ಮಂದಾಕ್ಷಾನತಕಂಧರಃ ॥೫॥**

---

೧ ಮುನಿಗಳು ಹೇಳುವರು. ಹೇ ಕೃಷ್ಣನೇ! ನಿನ್ನ ಪ್ರಶ್ನೆಗೆ ಅರ್ಥವತ್ತಾದ ಉತ್ತರವನ್ನು ನೀಡುವರಾರು? ನೀನೇ ನಮಗೆ ಪರಬ್ರಹ್ಮನೂ ಶ್ರೇಷ್ಠವಾದ ಗತಿಪ್ರದನೂ ಆಗಿರುವೆ.

೨ ಜಗವ ಸೃಜಿಸುವ ನೀನೇ ನಮ್ಮ ಹೃದಯ ಕಮಲಗಳಲ್ಲಿ ತೋರುವೆ. ಇದೀಗ ನಿನ್ನ ದರುಶನದಿಂದ ನಮ್ಮ ತಪಸ್ಸಿನ ಫಲವು ಸಿದ್ಧಿಸಿದಂತಾಯಿತು.

೩ ಕೃತಾರ್ಥರೂ ತಪಸ್ಸಿದ್ಧರೂ ಆದ ನಾವು ಆಶ್ಚರ್ಯದಿಂದ ಮಾಯೇಶನಾದ ಯದುಕುಲದಲ್ಲಿ ಅವತರಿಸಿದ ಕೃಷ್ಣನನ್ನು ನೋಡಲು ಬಂದಿರುವೆವು.

೪ ಸಾಕ್ಷಾತ್ ಪರಬ್ರಹ್ಮನಾದ ಶ್ರೀಕೃಷ್ಣನ ದರುಶನದಿಂದ ಆನಂದ ಹೊಂದಿದ ಮುನಿಗಳು ಹೀಗೆಂದರು. ಸದ್ಧರ್ಮವನ್ನು ಆಚರಿಸುವ ಸಜ್ಜನರ ಮಾನಸದಲ್ಲಿ ತೋರುವ ಪರಬ್ರಹ್ಮನನ್ನೇ ಪುಣ್ಯವಂತರು ಹೊರಗೆ ಪೂಜಿಸುವರು.

೫ ಹೀಗೆ ಮುನಿವೃಂದವು ಭಗವಂತನನ್ನು ಸ್ತುತಿಸುತ್ತಿರಲು ಆ ಋಷಿಗಳ ಗುಂಪಿನಲ್ಲಿ ತಲೆಬಾಗಿ ಬ್ರಹ್ಮದೇವರು ಗೋವಿಂದನನ್ನು ಸ್ತುತಿಸಿದರು.

ಶ್ರೀಕೃಷ್ಣಂ ಶರಣಂ ಪ್ರಾಪ್ತೋ ವಂಚಯನ್ ಲೋಕವಂಚಕಮ್ ।
ಪ್ರಣಮಂತಂ ಶತಧೃತಿಮರವಿಂದವಿಲೋಚನಃ ।
ಅಪರಾಧಂ ಕ್ಷಮಸ್ವೇತಿ ಪುನಃ ಪುನರುದೈಕ್ಷತ ॥೬॥

ಏತಸ್ಮಿನ್ಸಮಯೇ ತತ್ರ ಘಂಟಾಕರ್ಣೋಽತಿಭೀಷಣಃ ।
ಫೂತ್ಕಾರೈರ್ವ್ಯಾಕುಲೀಕುರ್ವನ್ ವನಂ ವಹ್ನಿವಿಲೋಚನಃ ।
ಕಂಪಯನ್ವೇಗವಾತೇನ ಸರ್ವಾನ್ ವಿಪಿನಪಾದಪಾನ್ ॥೭॥

ಭಸ್ಮೀಕುರ್ವನ್ನಿವ ಜಗದ್ಗರ್ಜನ್ನತಿಭಯಂಕರಮ್ ।
ವೇಗವದ್ಭಿರ್ಮಹಾಘೋರೈರಾವೃತೋ ಬಹುಭಿಸ್ತದಾ ॥೮॥

ಬಾಲವೃದ್ಧಪಿಶಾಚೈಶ್ಚ ದೃಷ್ಟಮಾತ್ರೇಣ ಮೃತ್ಯುದೈಃ ।
ಅಟ್ಟಹಾಸಮಹಾಘೋಷೈಃ ಸರ್ವತಃ ಪೂರಯನ್ ದಿಶಃ ॥೯॥

ಸಂವರ್ತ ಇವ ಸಂಭೂತಮೇನಂ ವೀಕ್ಷ್ಯಾತಿಭೀಷಣಮ್ ।
ವಿಸ್ಮಿತಾಶ್ಚಾತಿಭೀತಾಶ್ಚ ಕಿಮೇತದಿತಿ ವಾದಿನಃ ॥೧೦॥

ಋಷಯಃ ಕೃಷ್ಣಪಾರ್ಶ್ವಸ್ಥಾಃ ಪಲಾಯನಪರಾಸ್ತದಾ ।

---

೬ ಲೋಕವಂಚಕನೆನಿಸಿದ ಶ್ರೀಕೃಷ್ಣನನ್ನೇ ವಂಚಿಸಲೆತ್ನಿಸಿದ ಬ್ರಹ್ಮದೇವರು ಚಕ್ರಧಾರಿಯಾದ ಶ್ರೀಕೃಷ್ಣನನ್ನು ನಮಸ್ಕರಿಸಿ ಅಪರಾಧವನ್ನು ಕ್ಷಮಿಸಬೇಕೆಂದು ಮತ್ತೆ ಮತ್ತೆ ಪ್ರಾರ್ಥಿಸಿದರು.

೭ ಅದೇ ಸಮಯದಲ್ಲಿ ಬೆಂಕಿಯುಗುಳುವ ಕಂಗಳುಳ್ಳ ಅತಿಭಯಂಕರನಾದ ಘಂಟಾಕರ್ಣನು, ಫೂತ್ಕಾರದಿಂದ ವನವನ್ನು ವ್ಯಾಕುಲಗೊಳಿಸುತ್ತ, ವೇಗವಾದ ಗಾಳಿಯಿಂದ ಎಲ್ಲ ಮರಗಳನ್ನು ಅಲುಗಾಡಿಸುತ್ತ ಅಲ್ಲಿಗೆ ಬಂದನು.

೮ ಪ್ರಪಂಚವನ್ನೇ ಸುಟ್ಟುಹಾಕುವಂತೆ ಅತಿ ಭೀಕರವಾಗಿ ಗರ್ಜಿಸುತ್ತ ಮಹಾಕ್ರೂರಿಗಳೂ ವೇಗಿಗಳೂ ಆದ ಸಂಗಡಿಗರಿಂದ ಸುತ್ತುವರಿದವನಾಗಿ ಬಂದನು.

೯ ನೋಡುವ ಮಾತ್ರದಿಂದ ಕೊಲ್ಲುವ ಚಿಕ್ಕ ಹಾಗೂ ವೃದ್ಧ ಪಿಶಾಚಗಳಿಂದ ಸುತ್ತುವರಿದವನಾಗಿ ಅಟ್ಟಹಾಸದಿಂದ ಕೂಗುತ್ತ ಹತ್ತು ದಿಕ್ಕುಗಳಲ್ಲಿ ಮೊಳಗುವಂತೆ ಗರ್ಜಿಸುತ್ತ ಬಂದನು.

೧೦ ಪ್ರಳಯಕಾಲದ ಅಗ್ನಿಯಂತೆ ಅತಿಭಯಂಕರನಾದ ಆತನನ್ನು ನೋಡಿ ಆಶ್ಚರ್ಯ ಹಾಗೂ ಭಯಯುಕ್ತರಾಗಿ ಇದೇನೆಂದು ಕೇಳಿದರು.

ಆರ್ತಬಂಧುರ್ಯದಾ ದೇವೋ ವರ್ತತೇ ಭಯಭಂಜನಃ ||೧೧||

ನ ಚಿಂತಾ ಚ ಕುತೋ ಭೀತಿರಿತಿ ತತ್ಪೃಷ್ಠಭಾಗಿನಃ |
ದದರ್ಶೇಽಥ ಮಹಾನ್ ವಹ್ನಿಃ ಪ್ರಲಯಾನಲಸನ್ನಿಭಃ ||೧೨||

ತತೋ ಜಾಜ್ವಲ್ಯಮಾನಾಕ್ಷಃ ಸಧೂಮಂ ವಹ್ನಿಮುದ್ವಮನ್ |
ಅತಿಮಾತ್ರಾಕೃತಿರ್ಗರ್ಜನ್ ಭೀಮೋಽದೃಶ್ಯತ ರಾಕ್ಷಸಃ ||೧೩||

ಸ್ಥಾಪಯಿತ್ವಾಽಗ್ರತಃ ಕೃಷ್ಣಂ ವಿಲೀನಾಸ್ತಸ್ಯ ಪೃಷ್ಠತಃ |
ಶವಂ ಕಂಚಿದುಪಾದಾಯ ಸ್ಥೂಲಾಂಗಮತಿಭೀಷಣಮ್ ||೧೪||

ಪ್ರಕ್ಷಿಪ್ಯ ಹರಿಪಾದಾಬ್ಜೇ ಉಪಾಯನಮಿತಿ ಬ್ರುವನ್ |
ರಕ್ಷಸ್ವೇತಿ ಕ್ಷಮಸ್ವೇತಿ ಮಾಂ ಮೂಢಂ ಪಾಪಕೃತ್ತಮಮ್ ||೧೫||

ಪಪಾತ ಶಿರಸಾ ಭೂಮೌ ಭಕ್ತ್ಯುತ್ಕಂಠಾಶ್ರುಲೋಚನಃ |
ಕೃಷ್ಣಃ ಸ ಭಗವಾನ್ಮಂದಂ ಸ್ಮಿತ್ವಾ ವೀರಾಸನೇ ಸ್ಥಿತಃ ||೧೬||

---

೧೧ ಕೃಷ್ಣನ ಪಕ್ಕದಲ್ಲಿ ಕುಳಿತಿದ್ದ ಋಷಿಗಳು ಓಡಲು ಅಣಿಯಾದರು. ನಂತರ ದುಃಖಿತರ ದುಃಖವನ್ನು ನಾಶಗೊಳಿಸುವ ಭಯನಾಶಕನಾದ ದೇವನು ಇಲ್ಲೇ ಇರುವನು ಎಂಬುದನ್ನು ಮನಗಂಡರು.

೧೨ ಆ ದೇವನಿರುವಾಗ ಚಿಂತೆ ಇಲ್ಲ. ಭೀತಿ ಇನ್ನೆಲ್ಲಿ? ಎಂದು ಕೃಷ್ಣನ ಬೆನ್ನ ಹಿಂದೆ ನಿಂತರು. ಅನಂತರ ಪ್ರಲಯಕಾಲದ ಅಗ್ನಿಯಂತೆ ತೋರುವ ಉರಿಯೊಂದು ಕಾಣಿಸಿತು.

೧೩ ನಂತರ ಬಾಯಿಂದ ಕಪ್ಪು ಹೊಗೆಯಿಂದ ಕೂಡಿದ ಬೆಂಕಿಯನ್ನುಗುಳುತ್ತ ಉರಿಯುವ ಕಂಗಳಿಂದ ಕೂಡಿದ ಭಯಂಕರನಾದ ದೈತ್ಯಗಾತ್ರದ ರಾಕ್ಷಸನಾದ ಘಂಟಾಕರ್ಣನು ಗೋಚರಿಸಿದನು.

೧೪ ಕೃಷ್ಣನ ಬೆನ್ನನ ಹಿಂದೆ ಋಷಿಗಳೆಲ್ಲ ಅಡಗಿಕೊಂಡರು. ಘಂಟಾಕರ್ಣನು ಅತಿ ಕ್ರೂರವಾಗಿ ತೋರುವ ದೊಡ್ಡಗಾತ್ರದ ಶವ ಒಂದನ್ನು ತಂದನು.

೧೫ ಶ್ರೀ ಕೃಷ್ಣನ ಪಾದಗಳಲ್ಲಿ ಹಾಕಿ ಇದು ನನ್ನ ಕಾಣಿಕೆಯೆಂದು ಹೇಳಿದನು. ನಂತರ ಪಾಪಿಯೂ ಅಜ್ಞಾನಿಯೂ ಆದ ನನ್ನನ್ನು ರಕ್ಷಿಸು, ಕ್ಷಮಿಸು ಎಂದು ಕೇಳಿದನು.

೧೬ ಹೀಗೆ ಬೇಡುತ್ತ ಭಕ್ತಿಯಿಂದ ತುಂಬಿದ ಕಣ್ಣುಳ್ಳವನಾಗಿ ಕೃಷ್ಣನ ಎದುರು ಭೂಮಿಯಲ್ಲಿ ತಲೆಯೂರಿ ಪ್ರಾರ್ಥಿಸಿದನು. ಅದನ್ನು ಕೇಳಿದ ವೀರಾಸನದಲ್ಲಿ ಕುಳಿತ ಕೃಷ್ಣನು ಮೆಲ್ಲಗೆ ನಕ್ಕನು.

ಕೃಪಾಕಟಾಕ್ಷೇಣ ಹರಿರ್ದಯಾಲುಃ
ನಾನ್ಯಾ ಗತಿಃ ಸ್ಯಾತ್ ಶರಣಾಗತಾಯ ।
ಭಕ್ತಾಪರಾಧಸ್ತು ಮಯಾ ವಿಷಹ್ಯಃ
ಭಕ್ತಾಧೀನಂ ಮಾಂ ತು ಸರ್ವೇ ವದಂತಿ ॥೧೭॥

ಉತ್ತಿಷ್ಠ ಗಚ್ಛ ಮಲ್ಲೋಕಮಿತಿ ಗಂಭೀರಮಬ್ರವೀತ್ ।
ತತ ಉತ್ಥಾಯ ವೇಗೇನ ವಿನೀತಃ ಪ್ರಾಂಜಲಿಃ ಸ್ಥಿತಃ ॥೧೮॥

ರಕ್ಷೋಽಬ್ರವೀತ್ಪುನಃ ಕೃಷ್ಣಂ ಋಷೀಣಾಂ ಶೃಣ್ವತಾಂ ತದಾ ।
ಪರಿತುಷ್ಟೋ ಯದಿ ಶ್ರೀಮಾನ್ ಮಾಂ ರಕ್ಷ ಶರಣಾಗತಮ್ ।
ರಕ್ಷಸೋ ದರ್ಶಯನ್ ಪ್ರಾಹ ಲೋಕಾನಾಂ ಪರವಶ್ಯತಾಮ್ ॥೧೯॥

ಶ್ರೀಕೃಷ್ಣ ಉವಾಚ-

ವಿಲಂಬಸೇ ಕಿಮರ್ಥಂ ತ್ವಂ ಮಾ ವಿಚಾರಯ ರಾಕ್ಷಸ ।
ಶಿವಪೂಜಾಪ್ರಭಾವೇನ ಕಾವೇರೀಸ್ನಾನವೈಭವಾತ್ ॥೨೦॥

ಪ್ರೀತೋಽಸ್ಮಿ ಶಿವಭಕ್ತ್ಯಾ ಚ ಮದ್ಭಕ್ತಃ ಶಂಕರಪ್ರಿಯಃ ।
ಮದ್ಭಕ್ತಿಸಾಧ್ಯಂ ವೈಕುಂಠಂ ವ್ರಜ ಶೀಘ್ರಂ ಮದಾಜ್ಞಯಾ ॥೨೧॥

---

೧೭ ಕೃಪೆ ತುಂಬಿದ ಕಣ್ಣುಗಳಿಂದ ಆತನನ್ನು ನೋಡುತ್ತ ಶರಣಾಗತನಿಗೆ ನನ್ನನ್ನು ಬಿಟ್ಟು ಗತಿಯಿಲ್ಲ. ಭಕ್ತರ ಅಪರಾಧವನ್ನು ನಾನು ಮನ್ನಿಸುವೆನು. ಆದುದರಿಂದಲೇ ಎಲ್ಲರೂ ನನ್ನ ಭಕ್ತಾಧೀನನೆಂದು ಕರೆಯುವರು.

೧೮ ಮೇಲೇಳು. ನನ್ನ ಲೋಕವನ್ನು ಕುರಿತು ಹೊರಡು. ಎಂದು ಗಾಂಭೀರ್ಯದಿಂದ ಹೇಳಿದನು. ನಂತರ ಘಂಟಾಕರ್ಣನು ವೇಗದಿಂದ ಎದ್ದು ಕೈಜೋಡಿಸಿ ನಿಂತನು.

೧೯ ಋಷಿಗಳೆಲ್ಲ ನೋಡುತ್ತಿರಲು ಮತ್ತೆ ಕೃಷ್ಣನನ್ನು ಪ್ರಾರ್ಥಿಸಿದನು. ಲಕ್ಷ್ಮೀಪತಿಯೇ! ನೀನು ಪ್ರೀತನಾಗಿದ್ದರೆ ಶರಣಾಗತನಾದ ನನ್ನನ್ನು ರಕ್ಷಿಸು. ಎಂದು ಪ್ರಾರ್ಥಿಸಿದ ರಾಕ್ಷಸನಿಗೆ ಲೋಕಗಳೆಲ್ಲ ನನ್ನ ವಶದಲ್ಲಿದೆ ಎಂದು ತಿಳಿಸುತ್ತ ಶ್ರೀಕೃಷ್ಣನು ಹೇಳಿದನು.

೨೦ ಘಂಟಾಕರ್ಣನೇ! ಏಕೆ ತಡಮಾಡುತ್ತಿರುವೆ. ಏನನ್ನು ಯೋಚಿಸದಿರು. ನೀನು ಭಕ್ತಿಯಿಂದ ಶಿವಪೂಜೆಯನ್ನು ಮಾಡಿರುವಿ. ಹಾಗೂ ವೈಭವದಿಂದ ಕಾವೇರೀಸ್ನಾನ ಮಾಡಿರುವಿ.

೨೧ ನೀನು ತೋರಿದ ಶಿವಭಕ್ತಿಯಿಂದ ನಾನು ಪ್ರೀತನಾಗಿದ್ದೇನೆ. ನನ್ನ ಭಕ್ತನು

ಶ್ರೀ ಸೂತ ಉವಾಚ-

ಸುಸಂಪೂರ್ಣದಯಾಸಾಂದ್ರಕಟಾಕ್ಷೇಣೇಕ್ಷಿತೋಽಭಯಃ ।
ಮಂದಂ ಪ್ರಾಹ ವಚಃ ಸ್ವಾನಾಂ ಮುಕ್ತಿಮಿಚ್ಛಂಶ್ಚ ರಾಕ್ಷಸಃ ॥೨೨॥

ಇಮೇಽಪಿ ಪರಿವಾರಾ ಮೇ ಯೋಗಕ್ಷೇಮಪರಾಸ್ಸದಾ ।
ಕಥಮೇತಾನ್ವಿನಾ ಸ್ವಾಮಿನ್ ಗಚ್ಛೇಯಂ ಕರುಣಾನಿಧೇ ॥೨೩॥

ಆರ್ತಾನ್ಮಿತ್ರಾಣಿ ಪಾಂಥಾಂಶ್ಚ ಸುಹೃದಶ್ಚೋಪಕಾರಿಣಃ ।
ಪಿತರೌ ಚ ನ ರಕ್ಷೇದ್ಯಃ ಶಕ್ತಶ್ಚೇತ್ ಸೂಕರೋ ಹಿ ಸಃ ॥೨೪॥

ಧಿಕ್ ತಸ್ಯ ಜೀವಿತಂ ಘೋರಂ ವ್ಯರ್ಥಂ ತಸ್ಯ ಬಹುಶ್ರುತಮ್ ।
ಯಃ ಸ್ವಕುಕ್ಷಿಂಭರೋ ಮೂಢಃ ಸ್ವಮಾಂಸಂ ಪ್ರೇತ್ಯ ಖಾದತಿ ॥೨೫॥

ತಥೈವಾಸ್ತು ಮಹಾಭಾಗ ಪರಿತುಷ್ಟೋಽಸ್ಮಿ ತೇ ಭೃಶಮ್ ।
ಏಭಿರೇವ ಸಮಂ ಗಚ್ಛ ಮಮ ಲೋಕಂ ಯಥೇಪ್ಸಿತಮ್ ॥೨೬॥

---

ಶಂಕರನಿಗೆ ಪ್ರಿಯನಾಗುತ್ತಾನೆ. ನನ್ನ ಭಕ್ತಿಯಿಂದ ಮಾತ್ರ ವೈಕುಂಠ ದೊರಕುತ್ತದೆ. ಆ ವೈಕುಂಠಕ್ಕೆ ನನ್ನ ಆಜ್ಞೆಯಿಂದ ಬೇಗನೆ ಹೊರಡು.

೨೨ ಪರಮಾತ್ಮನ ದಯೆಯು ಪರಿಪೂರ್ಣವಾಗಿದೆ. ಆತನ ಕಟಾಕ್ಷದಿಂದ ಘಂಟಾಕರ್ಣನು ನೋಡಲ್ಪಟ್ಟ. ಭಯರಹಿತನಾದ. ತನ್ನವರ ಮುಕ್ತಿಗಾಗಿ ವಿನೀತನಾಗಿ ಮಾತನಾಡಿದ.

೨೩ ಹೇ ಕರುಣಾನಿಧಿಯೇ! ಈ ನನ್ನೆಲ್ಲ ಪರಿವಾರದವರು ಯಾವಾಗಲೂ ನನ್ನ ಯೋಗಕ್ಷೇಮವನ್ನು ನೋಡಿಕೊಂಡವರು. ಇವರನ್ನೆಲ್ಲ ಬಿಟ್ಟು ನಾನೊಬ್ಬನೇ ಮುಕ್ತಿಗೆ ಹೇಗೆ ಹೋಗಲಿ?

೨೪ ದುಃಖಿತರು, ಗೆಳೆಯರು, ದಾರಿಯಲ್ಲಿ ಜೊತೆಯಾದವರು, ಹಿತಕಾರಿಗಳು, ಉಪಕಾರ ಮಾಡಿದವರು ಹಾಗೂ ತಂದೆ-ತಾಯಿಗಳನ್ನು ಶಕ್ತನಾಗಿಯೂ ರಕ್ಷಿಸದವನು ಸೂಕರನೇ ಸರಿ.

೨೫ ಆತನ ಘೋರವಾದ ಜೀವನಕ್ಕೆ ಧಿಕ್ಕಾರವಿರಲಿ. ಆತನ ವಿದ್ಯೆಯೆಲ್ಲ ವ್ಯರ್ಥ. ಕೇವಲ ತನ್ನ ಹೊಟ್ಟೆ ತುಂಬಿಕೊಳ್ಳಲು ಬದುಕಿದವನು ಮೃತನಾದ ಮೇಲೆ ಪರಲೋಕದಲ್ಲಿ ತನ್ನ ಮಾಂಸವನ್ನೇ ತಿನ್ನಬೇಕಾಗುವುದು.

೨೬ ಹೇ ಭಾಗ್ಯವಂತನೇ! ಹಾಗೆಯೇ ಆಗಲಿ. ನಾನು ನಿನ್ನ ವಿಷಯದಲ್ಲಿ ಪ್ರೀತನಾಗಿದ್ದೇನೆ. ನಿನ್ನೆಲ್ಲ ಪರಿವಾರ ಸಹಿತನಾಗಿ ನಿನ್ನ ಇಚ್ಛೆಯಂತೆ ನನ್ನ ಲೋಕಕ್ಕೆ ತೆರಳು.

ಹರಿಣೇತ್ಥಮನುಜ್ಞಾತೋ ಭಕ್ತವಶ್ಯೇನ ವೈ ತದಾ ।
ಪೈಶಾಚೀಂ ತನುಮಾಚ್ಛಿದ್ಯ ಬಂಧುಭಿಶ್ಚ ಪರೈರ್ವೃತಃ ॥೨೭॥

ಸದ್ಯೋ ದಿವ್ಯವಪುಃ ಶ್ರೀಮಾನ್ ದಿವ್ಯಮಾಲಾಂಬರೋಜ್ವಲಃ ।
ದಿವ್ಯಗಂಧಾನುಲಿಪ್ತಾಂಗೋ ದಿವಿ ದೇವೈರಭಿಷ್ಟುತಃ ॥೨೮॥

ಪರಿಕ್ರಮ್ಯ ಪ್ರಣಮ್ಯೈನಂ ಮುನೀನಾಮಪಿ ಪಶ್ಯತಾಮ್ ।
ದಿವ್ಯಂ ವಿಮಾನಮಾರುಹ್ಯ ಶ್ವೇತದ್ವೀಪಮವಾಪ ಸಃ ॥೨೯॥

ತಿಷ್ಠನ್ ಗಚ್ಛನ್ ಸ್ವಪನ್ ಭುಂಜನ್ನರ್ಚನ್ನಾಸೀನ ಉನ್ಮಿಷನ್ ।
ಸ್ಮರನ್ ದ್ವೇಷ್ಯಧಿಯಾ ವಿಷ್ಣುಂ ಸಾರೂಪ್ಯಮಗಮದ್ಧರೇಃ ॥೩೦॥

ತತೋ ಭಗವತೋ ಮಾಯಾವೈಭವಂ ವೀಕ್ಷ್ಯ ಪದ್ಮಜಃ ।
ವಿಸ್ಮಿತೋ ವ್ರೀಡಿತೋಽತ್ಯಂತಂ ತ್ಯಕ್ತಲೋಕಾಧಿಪತ್ಯಧೀಃ ॥೩೧॥

ಚತುರ್ಭಿರ್ವದನೈಃ ಸ್ತುತ್ವಾ ಚತುರ್ವೇದಧರೋ ವಿಭುಮ್ ।
ಕೃತಾಂಜಲಿಃ ಪರಿಕ್ರಮ್ಯ ನಮಸ್ಕೃತ್ಯ ಪುನಃ ಪುನಃ ॥೩೨॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ ಷೋಡಶೋಽಧ್ಯಾಯಃ ॥

೨೭ ಭಕ್ತರ ವಶನಾದ ಶ್ರೀಹರಿಯು ಹೀಗೆ ಆಜ್ಞೆ ಮಾಡಲು ಆ ಪಿಶಾಚದೇಹವನ್ನು ಬಿಟ್ಟು ತನ್ನೆಲ್ಲ ಬಾಂಧವರೊಡಗೂಡಿ ಸದ್ಗತಿಯನ್ನು ಪಡೆದನು.

೨೮ ಕೂಡಲೇ ಶ್ರೇಷ್ಠವಾದ ಶರೀರವನ್ನು ಹೊಂದಿ ದಿವ್ಯವಾದ ಗಂಧ-ಮಾಲೆಗಳನ್ನು ಧರಿಸಿ ದೇವತೆಗಳೆಲ್ಲ ಸ್ತುತಿಸುತ್ತಿರಲು, ಸದ್ಗತಿಯನ್ನು ಪಡೆದನು.

೨೯ ಮುನಿಗಳೆಲ್ಲ ನೋಡುತ್ತಿರಲು ಕೃಷ್ಣನಿಗೆ ಪ್ರದಕ್ಷಿಣೆ ಹಾಕಿ ನಮಸ್ಕರಿಸಿ ದೇವಲೋಕದ ವಿಮಾನವನ್ನೇರಿ ಶ್ವೇತದ್ವೀಪಕ್ಕೆ ಹೋದನು.

೩೦ ನಿಂತಲ್ಲಿ, ಹೊರಟಾಗ, ಮಲಗಿರಲು, ಉಣ್ಣುವಾಗ, ಪೂಜಿಸುವಾಗ ಕುಳಿತಾಗ, ಕಣ್ಣು ಮುಚ್ಚಿರಲು, ಹೀಗೆ ನಿರಂತರ ವಿಷ್ಣುವನ್ನು ದ್ವೇಷ ಮಾಡಿದರೂ, ಕೊನೆಗೆ ಭಗವಂತನನ್ನು ಭಕ್ತಿಯಿಂದ ಸ್ಮರಿಸಿ ಭಗವಂತನ ಸಾರೂಪ್ಯವನ್ನು ಹೊಂದಿದನು.

೩೧ ಭಗವಂತನ ಮಾಯಾ ವೈಭವವನ್ನು ನೋಡಿ ಆಶ್ಚರ್ಯಚಕಿತರೂ, ಲಜ್ಜಿತರೂ ಆದ ಬ್ರಹ್ಮದೇವರು ತಾವು ಲೋಕಾಧಿಪತಿ ಎಂಬ ವಿಚಾರವನ್ನು ತೊರೆದರು.

೩೨ ನಾಲ್ಕು ವೇದಗಳನ್ನು ತಲೆಯಲ್ಲಿ ಧರಿಸಿದ ನಾಲ್ಮೊಗದ ಬ್ರಹ್ಮದೇವರು ಕೈಮುಗಿದು ಪ್ರದಕ್ಷಿಣೆ ಮಾಡಿ ಮತ್ತೆ ಮತ್ತೆ ಶ್ರೀ ಕೃಷ್ಣನನ್ನು ಸ್ತುತಿಸಿದರು.

# ಅಥ ಸಪ್ತದಶೋಽಧ್ಯಾಯಃ

**ಶ್ರೀಸೂತ ಉವಾಚ-**

**ಹಂಸಮಾರುಹ್ಯ ವೇಗೇನ ಸ್ವಧಾಮ ಪ್ರಾಪ್ಯ ಪದ್ಮಜಃ ।**
**ಮುನಯಶ್ಚ ತದಾ ದೃಷ್ಟ್ವಾ ಕೃಷ್ಣಲೀಲಾಂ ಸುವಿಸ್ಮಿತಾಃ ॥೧॥**

**ಪಧಿಪಾಲ ಉವಾಚ-**

**ಕಿಂ ಬ್ರೂಷೇ ಕೃಷ್ಣ ಗಹನಂ ತತ್ತ್ವಮಿತ್ಯದ್ಯ ಮೋಹನಮ್ ।**
**ಯುಕ್ತೇರ್ವಿರುದ್ಧಂ ಸರ್ವತ್ರ ಶಾಸ್ತ್ರೇಣಾಪಿ ವಿಮಿಶ್ರಿತಮ್ ॥೨॥**

**ಶ್ರೀಕೃಷ್ಣ ಉವಾಚ-**

**ತ್ವತ್ಪ್ರಶ್ನಸ್ಯೋತ್ತರಂ ವಕ್ತುಂ ಸ್ಪಷ್ಟಂ ಮಿತ್ರ ನ ಶಕ್ಯತೇ ।**
**ತಥಾಪಿ ಶ್ರದ್ದಧಾನಸ್ಯ ಕಿಂಚಿತ್ ಸ್ಪಷ್ಟಮಿಹೋಚ್ಯತೇ ॥೩॥**

**ಯಥಾಯೋಗ್ಯಾಧಿಕಾರೇಣ ಮುಚ್ಯಂತೇ ಸರ್ವಜಂತವಃ ।**
**ಮದ್ಭಕ್ತಾಸ್ತು ನಿರಾರಂಭಾ ಮುಕ್ತಾಃ ಸ್ಯುಃ ಸಮದರ್ಶಿನಃ ॥೪॥**

**ತತ್ತ್ವಜ್ಞಾನೇನ ಯೋಗೀಂದ್ರಾ ಮದ್ಭಕ್ತಿಜ್ವಲಿತೇನ ಹಿ ।**
**ಶುದ್ಧವೈರಾಗ್ಯಮಾಶ್ರಿತ್ಯ ಮದ್ಭಕ್ತಿಂ ಸಾತ್ತ್ವಿಕೀಂ ಶ್ರಯೇತ್ ॥೫॥**

---

೧ ಆಗ ಬ್ರಹ್ಮದೇವರು ಹಂಸವನ್ನೇರಿ ಶೀಘ್ರವಾಗಿ ತಮ್ಮ ಲೋಕಕ್ಕೆ ಹೋದರು. ನೆರೆದ ಮುನಿಗಳೆಲ್ಲ ಕೃಷ್ಣನ ಅತಿಮಾನುಷವಾದ ಲೀಲೆಯನ್ನು ಕಂಡು ಆಶ್ಚರ್ಯಚಕಿತರಾದರು.

೨ ಘಂಟಾಕರ್ಣ ವಿಷ್ಣುದ್ವೇಷಿಯಾಗಿದ್ದ. ಅಂಥವನಿಗೆ ಮುಕ್ತಿಯಾದದ್ದು ಯುಕ್ತಿವಿರುದ್ಧವಾಗಿದೆ. ಮೋಹಕವಾಗಿದೆ. ಶಾಸ್ತ್ರವಿರುದ್ಧವೂ ಆಗಿದೆ. ಇಂಥ ಮಾತನ್ನು ನೀನು ಹೇಳಿರುವಿ. ಇದರ ರಹಸ್ಯಾರ್ಥವನ್ನು ನನಗೆ ತಿಳಿಸಬೇಕು.

೩ ಹೇ ಗೆಳೆಯನೇ! ಈ ಪ್ರಶ್ನೆಗೆ ಸ್ಪಷ್ಟವಾದ ಪರಿಹಾರ ನೀಡಲು ಸಾಧ್ಯವಿಲ್ಲ. ಆದರೆ ಶ್ರದ್ಧಾವಂತನಾದ ನಿನಗೆ ಸ್ವಲ್ಪ ಸ್ಪಷ್ಟವಾಗುವಂತೆ ಹೇಳುವೆನು.

೪ ತಮ್ಮ ಅಧಿಕಾರಕ್ಕೆ ಯೋಗ್ಯವಾದ ಉಪಾಸನೆಯಿಂದ ಎಲ್ಲ ಜೀವರೂ ಮುಕ್ತರಾಗುವರು. ನನ್ನ ಭಕ್ತರಾದವರು, ಎಲ್ಲೆಡೆ ಭಗವಂತನನ್ನು ಚಿಂತಿಸುತ್ತ ಕಾಮನೆಗಳನ್ನು ತೊರೆದವರಾಗಿ ಮುಕ್ತರಾಗುವರು.

೫ ಯೋಗೀಂದ್ರರು ನನ್ನ ಭಕ್ತಿಯ ಸಹಯೋಗದಿಂದ ಪ್ರಜ್ವಲಿಸುವ ತತ್ತ್ವಜ್ಞಾನವನ್ನು ಪಡೆದು ಮುಕ್ತರೆನಿಸುವರು. ಆದ್ದರಿಂದ ಶುದ್ಧವಾದ

ಸತ್ಯೇನ ಭಕ್ತಿಯೋಗೇನ ಮಮೈವ ಭಜತೇ ಪದಮ್ ।
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ ॥೬॥

ಶೃಣ್ವತಾಂ ಸರ್ವಪಾಪಘ್ನಂ ಸರ್ವಾಭೀಷ್ಟಪ್ರದಂ ಸಖೇ ।
ನೃಮೇಧ ಇತಿ ವಿಪ್ರೇಂದ್ರಃ ಪರುಚ್ಛೇಪ ಇತಿ ದ್ವಿಜಃ ॥೭॥

ಉಭಾವಪ್ಯಮರಪ್ರಖ್ಯೌ ತತ್ತ್ವನಿಷ್ಠೌ ಸದಾ ಸಖೇ ।
ನೃಮೇಧಃ ಕರ್ಮನಿಷ್ಠೋಽಭೂತ್ ಶ್ರುತಿಸ್ಮೃತಿವಿಶಾರದಃ ।
ಅಗೃಹ್ಣಾತ್ ಸರ್ವಶಾಸ್ತ್ರಾಣಿ ವಿಜಿತಾತ್ಮಾ ಬೃಹಸ್ಪತೇಃ ॥೮॥

ಪರುಚ್ಛೇಪೋ ಬ್ರಹ್ಮನಿಷ್ಠಃ ಶ್ರುತಿಸ್ಮೃತಿವಿಚಕ್ಷಣಃ ।
ಹರಿಪೂಜಾರತೋ ನಿತ್ಯಂ ವೈಷ್ಣವೋತ್ತಮಪೂಜಕಃ ।
ಧನುರ್ಮಾಸೇ ಚ ಮುದ್ಗಾನ್ನಮುಷಃಕಾಲೇ ನಿವೇದಯೇತ್ ॥೯॥

ತುಲಸ್ಯರ್ಚನಯಾ ಭಕ್ತ್ಯಾ ದೇವಬ್ರಾಹ್ಮಣಪೂಜಕಃ ।
ಸಮಭ್ಯಸ್ಯದ್ ಭೃಗೋಸ್ತತ್ತ್ವಂ ಭಕ್ತಿಯೋಗಂ ಮಯಿ ಸ್ಥಿರಮ್ ॥೧೦॥

---

ವೈರಾಗ್ಯವನ್ನು ಹೊಂದಿ ಭಕ್ತಿಯಿಂದ ನನ್ನನೇ ಆಶ್ರಯಿಸಬೇಕು.

೬ ಸತ್ಯವಾದ ಭಕ್ತಿಯೆಂಬ ಉಪಾಯದಿಂದ ನನ್ನನ್ನೇ ಪಡೆಯುವನು. ಇದಕ್ಕೊಂದು ಇತಿಹಾಸವನ್ನು ಹೇಳುವೆನು.

೭ ಕೇಳುಗರ ಎಲ್ಲ ಪಾಪಗಳನ್ನು ಕಳೆಯುವ, ಎಲ್ಲ ಕಾಮನೆಗಳನ್ನು ಪೂರೈಸುವ ಇತಿಹಾಸವಿದು. ನೃಮೇಧ ಎಂಬ ಬ್ರಾಹ್ಮಣಶ್ರೇಷ್ಠನೂ ಹಾಗೂ ಪರುಚ್ಛೇಪ ಎಂಬ ವಿಪ್ರನೂ ಒಂದೆಡೆ ವಾಸವಾಗಿದ್ದರು.

೮ ಇಬ್ಬರೂ ಕೂಡ ದೇವತೆಗಳಂತೆ ತೇಜಸ್ವಿಗಳು. ಯಾವಾಗಲೂ ತತ್ವಜ್ಞಾನದಲ್ಲಿ ಅಭಿರುಚಿಯುಳ್ಳವರು. ಶ್ರುತಿ-ಸ್ಮೃತಿಗಳನ್ನು ಚೆನ್ನಾಗಿ ಬಲ್ಲ ನೃಮೇಧನು ಕರ್ಮನಿಷ್ಠನಾಗಿದ್ದನು. ಇಂದ್ರಿಯನಿಗ್ರಹವನ್ನೂ ಪಡೆದಿದ್ದನು. ಬೃಹಸ್ಪತಿಗಳಿಂದ ಎಲ್ಲ ಶಾಸ್ತ್ರಗಳ ಅಧ್ಯಯನ ಮಾಡಿದ್ದನು.

೯ ಪರುಚ್ಛೇಪನು ಶ್ರುತಿ-ಸ್ಮೃತಿಗಳನ್ನು ಚೆನ್ನಾಗಿ ತಿಳಿದ ಬ್ರಹ್ಮನಿಷ್ಠನಾಗಿದ್ದನು. ನಿತ್ಯದಲ್ಲೂ ಶ್ರೀಹರಿಯನ್ನು ಹಾಗೂ ಹರಿಭಕ್ತರನ್ನು ಪೂಜಿಸುತ್ತ ಧನುರ್ಮಾಸದಲ್ಲಿ ಉಷಃಕಾಲದಲ್ಲಿ ಮುದ್ಗಾನ್ನವನ್ನು ನಿವೇದಿಸುತ್ತಿದ್ದನು.

೧೦ ಭಕ್ತಿಯಿಂದ ತುಲಸಿಯನ್ನು ಪೂಜಿಸುತ್ತಿದ್ದ. ತುಲಸಿಯಿಂದ ಪರಮಾತ್ಮನನ್ನು ಭಕ್ತಿಯಿಂದ ಪೂಜಿಸುತ್ತಿದ್ದ. ಆತನು ದೇವತೆಗಳ ಹಾಗೂ ಬ್ರಾಹ್ಮಣರ ಪೂಜಕನೂ ಆಗಿದ್ದನು. ಭೃಗುಋಷಿಗಳಿಂದ ತತ್ವವನ್ನು ಅರಿತು ನನ್ನಲ್ಲಿ ನಿಶ್ಚಲವಾದ ಭಕ್ತಿಯನ್ನು ಹೊಂದಿದ್ದನು.

ತಯೋಸ್ತು ಸರ್ವಶಾಸ್ತ್ರೇಷು ನಾವಿಜ್ಞಾತಂ ತು ವಿದ್ಯತೇ ।
ಉಭಯೋಸ್ತತ್ತ್ವವಿಜ್ಞಾನೇ ನಾನ್ಯೋ ಜಗತಿ ಬೋಧಕಃ ॥೧೧॥

ತಯೋಸ್ತು ಬ್ರಹ್ಮವಿಜ್ಞಾನೇ ವಿವಾದಃ ಸುಮಹಾನಭೂತ್ ।
ತತ್ತ್ವಜ್ಞಾನಂ ತು ಭಕ್ತಿರ್ವಾ ವೈಷ್ಣವೀ ಮೋಕ್ಷಸಾಧನಮ್ ॥೧೨॥

ತತ್ತ್ವಜ್ಞಾನಂ ಭವೇದ್ಭಕ್ತ್ಯಾ ಮುಕ್ತಿಃ ಸ್ಯಾತ್ತದನಂತರಮ್ ।
ಇತಿ ಪ್ರಾಹ ನೃಮೇಧಸ್ತು ಸರ್ವಶಾಸ್ತ್ರವಿಶಾರದಃ ॥೧೩॥

ಪರುಚ್ಛೇಪಸ್ತು ಮದ್ರಾಸಃ ತತ್ತ್ವಶಾಸ್ತ್ರಾರ್ಥವಿತ್ತಮಃ ।
ತತ್ತ್ವಜ್ಞಾನಂ ಯದಾ ಹಿ ಸ್ಯಾತ್ ಭಕ್ತಿಃ ಸ್ಯಾತ್ ಸಾತ್ತ್ವಿಕೀ ತದಾ ॥೧೪॥

ತದ್ಭಕ್ತ ಏವ ಮುಕ್ತಃ ಸ್ಯಾತ್ ವಿಷ್ಣುಮಾಯಾಂ ತರೇಚ್ಚ ಸಃ ।
ಸದ್ವೈರಾಗ್ಯೇಣ ತದ್ಜ್ಞಾನಂ ಜೀವಾಭೇದೇನ ಜಾಯತೇ ॥೧೫॥

ತತಃ ಪಶ್ಯತಿ ಸರ್ವೇಷು ನಾರಾಯಣಮಥಾತ್ಮನಿ ।
ಸರ್ವತ್ರ ಸಾಕ್ಷಿಣಂ ವ್ಯಾಪ್ತಮಸಂಗಂ ವಿಷ್ಣುಮಚ್ಯುತಮ್ ॥೧೬॥

---

೧೧ ಸಕಲಶಾಸ್ತ್ರಗಳಲ್ಲಿ ಅವರು ಅರಿಯದ ವಿಷಯವಿಲ್ಲ. ಅವರಿಗೆ ತತ್ತ್ವಜ್ಞಾನವನ್ನು ಬೋಧಿಸುವ ಮತ್ತೊಬ್ಬ ಪುರುಷನು ಪ್ರಪಂಚದಲ್ಲೇ ಇರಲಿಲ್ಲ.

೧೨ ಬ್ರಹ್ಮಜ್ಞಾನದ ವಿಷಯದಲ್ಲಿ ಅವರಿಬ್ಬರಿಗೆ ದೊಡ್ಡ ವಿವಾದವಾಯಿತು. ಮುಕ್ತಿಸಾಧನವಾದದ್ದು ತತ್ತ್ವಜ್ಞಾನವೋ ಅಥವಾ ವಿಷ್ಣುಭಕ್ತಿಯೋ ಎಂಬುದೇ ಆ ವಿವಾದ.

೧೩ ಕರ್ಮನಿಷ್ಠನೂ ಸರ್ವಶಾಸ್ತ್ರವಿಶಾರದನೂ ಆದ ನೃಮೇಧನು ಭಕ್ತಿಯಿಂದ ತತ್ತ್ವಜ್ಞಾನವೂ ಅದರಿಂದ ಮುಕ್ತಿಯಾಗುವುದೆಂದು ಹೇಳಿದನು.

೧೪ ಬ್ರಹ್ಮನಿಷ್ಠನೂ ತತ್ತ್ವಶಾಸ್ತ್ರಾರ್ಥವನ್ನು ಚೆನ್ನಾಗಿ ಅರಿತವನೂ ಆದ ಪರುಚ್ಛೇಪನು ತತ್ತ್ವಜ್ಞಾನವು ದೊರೆತ ಕೂಡಲೇ ಸಾತ್ತ್ವಿಕಭಕ್ತಿಯೂ ದೊರಕುವುದೆಂದು ಹೇಳಿದನು.

೧೫ ನೃಮೇಧನು ಹೇಳಿದನು. ವಿಷ್ಣುಭಕ್ತನಾದವನೇ ವಿಷ್ಣುಮಾಯೆಯನ್ನು ದಾಟಿ ಮುಕ್ತನೆನಿಸುವನು. ಉತ್ತಮವಾದ ವೈರಾಗ್ಯದಿಂದ ಭಗವಂತನು ಜೀವನಿಂದ ಅಭಿನ್ನವೆಂದು ಜ್ಞಾನವು ಹುಟ್ಟುವದು.

೧೬ ಬ್ರಹ್ಮ ಸಾಕ್ಷಿರೂಪನಾಗಿದ್ದಾನೆ. ಸರ್ವತ್ರ ವ್ಯಾಪ್ತನಾಗಿದ್ದಾನೆ. ಸರ್ವಸಂಗ-ರಹಿತನಾಗಿದ್ದಾನೆ. ಇಂಥ ವಿಷ್ಣುವನ್ನು ಅಚ್ಯುತನನ್ನು ನಾರಾಯಣನನ್ನು ಎಲ್ಲರಲ್ಲಿಯೂ ಕಾಣುತ್ತಾನೆ.

**ಯಃ ಪಶ್ಯತಿ ಸ ಧರ್ಮಾತ್ಮಾ ಸ ವೈ ಭಾಗವತೋತ್ತಮಃ ।**
**ಮದ್ಭಕ್ತಿಸ್ಸಾತ್ವಿಕೀ ನಾಮ ವಿಷ್ಣುಸಾಯುಜ್ಯದಾಯಿನೀ ॥೧೭॥**

**ಸ್ವಧರ್ಮೇಣ ಚ ಶುದ್ಧೇನ ವೈರಾಗ್ಯೇಣ ಬಲೀಯಸಾ ।**
**ಸತ್ಕಥಾಶ್ರವಣಾದ್ವಿಷ್ಣೋಃ ತತ್ತ್ವಜ್ಞಾನಂ ಚ ಸಾಧ್ಯತೇ ॥೧೮॥**

**ತತ್ತ್ವಜ್ಞಾನೇऽಚ್ಯುತೇ ಭಕ್ತಿಃ ಸಾಧ್ಯತೇ ಶಾಶ್ವತೀ ಶುಭಾ ।**
**ತತಃ ಪ್ರಾಹ ನೃಮೇಧಸ್ತು ಸರ್ವಂ ಶ್ರುತ್ವಾ ತದೀರಿತಮ್ ॥೧೯॥**

**ಪ್ರಾಹ ವಾಕ್ಯಂ ಪರಿಹಸನ್ ಪೂರ್ವಾಪರವಿರೋಧವಿತ್ ।**
**ಭಕ್ತ್ಯಾ ಸಂಕೀರ್ತನೇ ಧೀಃ ಸ್ಯಾತ್ಕಥಾಯಾಃ ಶ್ರವಣೇ ಹರೇಃ ॥೨೦॥**

**ತತೋ ಜ್ಞಾನಂ ತತೋ ಭಕ್ತಿಃ ಸಾ ಭಕ್ತಿಃ ಕೀದೃಶೀ ಜಡಾ ।**
**ಭಕ್ತಿಯೋಗಶ್ಚ ಸತ್ಕರ್ಮ ಜ್ಞಾನೇ ಪರಿಸಮಾಪ್ಯತೇ ॥೨೧॥**

**ಜ್ಞಾನಸಾಧ್ಯಂ ಹಿ ನಾಸ್ತ್ಯೇವ ಜ್ಞಾನಾದೇವ ಕಥಂ ಭವೇತ್ ।**
**ತತ್ತ್ವಜ್ಞಾನೇ ಹಿ ನಿಪುಣಾ ತವ ಭಕ್ತಿರ್ವಿಜಾಯತೇ ॥೨೨॥**

---

೧೭ ಎಲ್ಲೆಡೆ ಭಗವಂತನನ್ನು ಕಂಡವನು ಭಾಗವತರಲ್ಲಿ ಉತ್ತಮನು. ಅವನು ಧರ್ಮಾತ್ಮನೇ ಸರಿ. ಹೀಗೆ ನೃಮೇಧನು ಹೇಳಿದನು. ಆದರೇ ವಾಸ್ತವಿಕವಾಗಿ ಸಾತ್ತ್ವಿಕವಾದ ನನ್ನ ಭಕ್ತಿಯು ವಿಷ್ಣುವಿನ ಸಾಯುಜ್ಯವನ್ನು ನೀಡುವುದು.

೧೮ ಪರುಚ್ಛೇಪನು ಹೇಳಿದನು. ಶುದ್ಧವಾದ ತನ್ನ ವಿಹಿತಾಚರಣೆಯಿಂದ ಹಾಗೂ ದೃಢವಾದ ವೈರಾಗ್ಯದಿಂದ, ನಿರಂತರ ವಿಷ್ಣುವಿನ ಲೀಲಾರೂಪ ಕಥಾಶ್ರವಣದಿಂದ ತತ್ತ್ವಜ್ಞಾನವು ಲಭಿಸುವುದು.

೧೯ ತತ್ತ್ವಜ್ಞಾನದಿಂದ ಭಗವಂತನಲ್ಲಿ ಶುದ್ಧವಾದ ಶಾಶ್ವತವಾದ ಭಕ್ತಿಯು ಜನಿಸುವುದು ಎಂದು ಹೇಳಿದನು. ಪರುಚ್ಛೇಪನು ಹೇಳಿದ ಎಲ್ಲ ಮಾತುಗಳನ್ನು ಕೇಳಿ ನೃಮೇಧನು ಹೇಳಿದನು.

೨೦ ಹಿಂದು ಮುಂದಿನ ವಾಕ್ಯಗಳಿಗೆ ವಿರೋಧವನ್ನರಿತ ನೃಮೇಧನು ಆತನಿಗೆ ಪರಿಹಾಸ ಮಾಡಿ ಹೇಳಿದನು. ಭಕ್ತಿಯಿಂದ ನಾಮಸಂಕೀರ್ತನದಲ್ಲೂ ಹರಿಯ ಕಥಾಶ್ರವಣದಲ್ಲೂ ಆಸಕ್ತಿಯು ಮೂಡುವುದು.

೨೧ ಶ್ರವಣದಿಂದ ಜ್ಞಾನ, ಜ್ಞಾನದಿಂದ ಭಕ್ತಿ. ಭಕ್ತಿಯೋಗ ಹಾಗೂ ಸತ್ಕರ್ಮ ಜ್ಞಾನದಲ್ಲಿ ಪರಿಸಮಾಪ್ತಿಯನ್ನು ಹೊಂದುವವು.

೨೨ ಸತ್ಕರ್ಮಭಕ್ತಿಗಳು ಜ್ಞಾನದಲ್ಲಿ ಸಮಾಪ್ತವಾಗುತ್ತವೆ. ಸತ್ಕರ್ಮಭಕ್ತಿಗಳಿಂದ ತತ್ತ್ವಜ್ಞಾನವು ಹುಟ್ಟುತ್ತದೆ. ಇದಕ್ಕೆ ವಿಪರೀತವಾಗಿ ಜ್ಞಾನದಿಂದ ಭಕ್ತಿಯು

ತಸ್ಯ ತದ್ವಚನಂ ಶ್ರುತ್ವಾ ಸ್ಥೂಲಶಾಸ್ತ್ರೇಷು ನಿಶ್ಚಿತಮ್ ।
ತತ್ಕೃತಾವಮತಿಃ ಸೋऽಪಿ ಹಸನ್ ಪ್ರಾಹ ಪ್ರಸನ್ನಧೀಃ ॥೨೩॥

ಏವಮೇವ ನ ಸಂದೇಹೋ ಬಹಿಃಶಾಸ್ತ್ರೇ ಹಿ ತೇ ಮತಿಃ ।
ಧಿಕ್ಕರೋಷಿ ತತೋ ಮಾಂ ಹಿ ಸಖೇ ವ್ಯರ್ಥಾ ಹಿ ತೇ ಶ್ರುತಿಃ ॥೨೪॥

ಮಮಾವಮಾನಜೋ ದೋಷೋ ಜೀವಾಭೇದಾತ್ತ್ವಯ್ಯೈವ ಹಿ ।
ಏತಾವತೀ ಹಿ ಮೇ ಬುದ್ಧಿಃ ಶಾಂತೋ ಬ್ರೂಹಿ ಸಖೇ ಮತಮ್ ॥೨೫॥

ಶಾಸ್ತ್ರೇಷು ಸಾಂಸಲಾ ಧೀಸ್ತೇ ವಿಷ್ಣುಮಾಯಾವೃತೋ ಭವಾನ್ ।
ಅತಸ್ತೇ ತತ್ವಶಾಸ್ತ್ರೇ ತು ನ ಧೀರ್ಭಗವತೋದಿತೇ ॥೨೬॥

---

ಹುಟ್ಟುವುದಿಲ್ಲ. ಹೀಗಿರುವಾಗ ನಿನಗೆ ಮಾತ್ರ ತತ್ತ್ವಜ್ಞಾನದಿಂದಲೇ ಭಕ್ತಿಯು ಹುಟ್ಟಿದೆ. ಹೀಗೆ ಹೇಳುತ್ತಾ ಪರುಚ್ಛೇಪನನ್ನು ಅಪಹಾಸ ಮಾಡಿದ.

೨೩ ನೃಮೇಧ ಮಾಡಿದ ಪರಿಹಾಸದಿಂದ ಪರುಚ್ಛೇಪ ಕ್ರುದ್ಧನಾಗಲಿಲ್ಲ. ಅದನ್ನು ಅವಮಾನ ಎಂದು ಭಾವಿಸಲಿಲ್ಲ. ಪ್ರಸನ್ನನೇ ಆಗಿದ್ದ. ಶಾಸ್ತ್ರಗಳಲ್ಲಿಯ ಆಪಾತತಃ ಪ್ರತೀತವಾದ ಅರ್ಥವನ್ನೇ ನೃಮೇಧ ತಿಳಿದಿದ್ದ. ನೃಮೇಧನ ಮಾತುಗಳೇ ಇದಕ್ಕೆ ಸಾಕ್ಷಿಯಾಗಿದ್ದವು. ಅವನ ಮಾತುಗಳನ್ನು ಕೇಳಿ ಪರುಚ್ಛೇಪನು ನಗುತ್ತ ಮಾತನಾಡಿದನು.

೨೪ ಶಾಸ್ತ್ರಗಳ ಮೇಲ್ತೋರುವ ಅರ್ಥದಲ್ಲೇ ನಿನ್ನ ಮನಸ್ಸಿದೆ. ಆದುದರಿಂದ ಸಂದೇಹಯುಕ್ತನಾಗಿ ನನ್ನನ್ನು ಧಿಕ್ಕರಿಸುತ್ತಿರುವೆ. ಗೆಳೆಯನೇ! ತಪ್ಪಾಗಿ ತಿಳಿದಿದ್ದರಿಂದ ನೀನು ಮಾಡಿದ ಶ್ರವಣ ವ್ಯರ್ಥವೇ ಸರಿ.

೨೫ ನೀನು ಜೀವಾಭೇದವನ್ನು ಹೇಳಿದುದರಿಂದ (ನಿನ್ನ ದೃಷ್ಟಿಯಲ್ಲಿ ನಾನೂ ನೀನೂ ಒಂದೇ ಆದುದರಿಂದ) ನನ್ನನ್ನು ಅವಮಾನಿಸಿದ ದೋಷವು ನಿನಗೇ ಸೇರುವುದು. ನಾನು ತಿಳಿದಿರುವ ತತ್ತ್ವವನ್ನು ಹೇಳುತ್ತೇನೆ. ನೀನು ಭಗವನ್ನಿಷ್ಠನೇ ಆಗಿರುವಿ. ಶಾಂತನಾಗಿ ಆಲೋಚನೆ ಮಾಡು. ಜ್ಞಾನಿಗಳಿಗೆ ಸಮ್ಮತವಾದದ್ದನ್ನು ಹೇಳು.

೨೬ ಶಾಸ್ತ್ರಗಳಲ್ಲಿ ಚಂಚಲವಾದ ಬುದ್ಧಿಯುಳ್ಳ ನೀನು ವಿಷ್ಣುಮಾಯಾವೃತನಾಗಿರುವೆ. ಆದುದರಿಂದಲೇ ಭಗವಂತನು ಹೇಳಿದ ತತ್ವಶಾಸ್ತ್ರದಲ್ಲಿ ನಿನಗೆ ನಿಶ್ಚಿತ ಜ್ಞಾನವಿಲ್ಲ.

ಆಕರ್ಣ್ಯ ತದ್ವಚಂ ಶ್ಲಕ್ಷ್ಣಂ ಮೃದುಪೂರ್ವಂ ನೃಮೇಧಕಃ ।
ಸ್ಮೃತ್ವಾತ್ಮಾನಂ ಸ್ವಕೃತಂ ಚ ಮನಸಾ ಸ್ವಂ ಚ ಗರ್ಹಯನ್ ॥೨೭॥

ವಿಲಜ್ಜಿತಃ ಪುನಃ ಕಿಂಚಿತ್ ಪ್ರಾಹ ತಂ ಪ್ರಹಸನ್ನಿವ ।
ತನ್ಮತಂ ವಾ ಮುನೇ ಬ್ರೂಹಿ ಯಥಾ ವಾ ಹರಿಣೋದಿತಮ್ ।
ತತ್ವಶಾಸ್ತ್ರೇಷು ವಿಹಿತಂ ಯಥಾ ಯೋಗೀಂದ್ರಸಮ್ಮತಮ್ ॥೨೮॥

ಪರುಚ್ಛೇಪ ಉವಾಚ-

ವೇದಾಂತಜ್ಞಾನಶುದ್ಧಾಂತಃಕರಣಾ ನಾರದಾದಯಃ ।
ಸಾತ್ವಿಕೀಂ ಭಕ್ತಿಮಾಸ್ಥಾಯ ಜೀವನ್ಮುಕ್ತಾಸ್ತು ತೇಽಭವನ್ ॥೨೯॥

ಅತ್ರೈವೋಪನಿಷದ್ವಾಕ್ಯಂ ಪ್ರಮಾಣಂ ಭಕ್ತಿಸಾಧನಮ್ ।
ವೇದಾಂತೇಷು ಶ್ರುತೇರರ್ಥಂ ಸಮ್ಯಗ್ ಬ್ರೂಹಿ ವಿಚಾರ್ಯ ಭೋಃ ॥೩೦॥

ತ್ವತ್ಸಂವಾದಃ ಕಂಠಶೋಷಃ ಶತಾಬ್ದೇಽಪಿ ನ ಶಾಮ್ಯತಿ ।
ಯತೋ ವಾಚೋ ನಿವರ್ತಂತೇ ಅಸ್ಯಾರ್ಥಂ ಸ್ಮರ ಹೇ ಸಖೇ ॥೩೧॥

---

೨೭ ಮಾರ್ದವ ಯುಕ್ತವೂ, ಗಂಭೀರವೂ ಆದ ಆ ಮಾತುಗಳನ್ನು ಕೇಳಿ ನೃಮೇಧನು ತಾನಾಡಿದುದನ್ನು ನೆನೆಸಿ ತನ್ನನ್ನೇ ಮನದಲ್ಲಿ ನಿಂದಿಸಿಕೊಂಡನು.

೨೮ ನಾಚಿಕೊಂಡ ಅವನು ಮತ್ತೆ ನಗುವವನಂತೆ ಮಾತನಾಡಿದ. ಭಗವಂತನು ಹೇಳಿದ ಆ ಮತವನ್ನು ಯಥಾವತ್ತಾಗಿ ಹೇಳು ಮುನಿಯೇ! ಎಂದು ಪ್ರಾರ್ಥಿಸಿದನು. ಯೋಗೀಂದ್ರರಿಗೂ ಸಮ್ಮತವಾದ ತತ್ವಶಾಸ್ತ್ರದಲ್ಲಿ ಉಕ್ತವಾದ ಸಿದ್ಧಾಂತವನ್ನು ಯಥಾರ್ಥವಾಗಿ ಹೇಳಬೇಕೆಂದು ಕೇಳಿಕೊಂಡ.

೨೯ ವೇದಾಂತದ ಜ್ಞಾನದಿಂದ ಶುದ್ಧವಾದ ಮನಸ್ಸನ್ನು ಹೊಂದಿದ ನಾರದರೇ ಮೊದಲಾದ ಯೋಗಿಗಳು ಸಾತ್ವಿಕವಾದ ಭಕ್ತಿಯನ್ನು ಹೊಂದಿ ಜೀವನ್ಮುಕ್ತ (ಅಪರೋಕ್ಷ ಜ್ಞಾನಿ) ರೆನಿಸಿದರು.

೩೦ ವೇದಾಂತಗಳಲ್ಲಿ (ಬ್ರಹ್ಮಸೂತ್ರಗಳಿಂದ) ಶ್ರುತಿಯ ಅರ್ಥವನ್ನು ಚೆನ್ನಾಗಿ ವಿಚಾರಿಸಿ ಹೇಳಿರಿ. ಭಕ್ತಿಸಾಧನವಾದ ಉಪನಿಷದ್ವಾಕ್ಯಗಳೇ ಈ ವಿಷಯದಲ್ಲಿ ಪ್ರಮಾಣವಾಗಿವೆ.

೩೧ ಕೇವಲವಾದ ನಿನ್ನ ಈ ವಾದವು ಕಂಠಶೋಷಣೆಯೇ ಸರಿ. ಇದು ನೂರಾರು ವರ್ಷಗಳಾದರೂ ಶಮನವಾಗುವುದಿಲ್ಲ. ಹೇ ಗೆಳೆಯನೇ! ''ಯತೋ ವಾಚೋ ನಿವರ್ತಂತೇ'' ಎಂಬೀ ಶ್ರುತಿಯ ಅರ್ಥವನ್ನು ಸ್ಮರಿಸು.

ವಿಷ್ಣೋರ್ನುಕಮಿತಿ ತ್ವಸ್ಯಾಃ ಪ್ರತಿಜ್ಞಾರ್ಥಃ ಶ್ರುತೇಃ ಶ್ರುತಃ ।
ವಿಷ್ಣೋಃ ಕರ್ಮಾಣಿ ವಾಕ್ಯಾನಿ ವಿಧಿವಾಕ್ಯಾನಿ ಭೋ ಸ್ಮರ ॥೩೨॥

ವೇದಾಹಮೇತಂ ಪುರುಷಂ ಮಹಾಂತಂ
ಇತ್ಯಸ್ಯ ಚಾರ್ಥೋऽನೃತ ಏವ ಹಿ ಸ್ಯಾತ್ ॥೩೩॥

ಪರುಚ್ಛೇಪಸ್ಯ ತದ್ವಾಕ್ಯಂ ಶ್ರುತ್ವಾ ವಾಕ್ಯವಿಶಾರದಃ ।
ಪ್ರತ್ಯುವಾಚ ಮಹಾತೇಜಾಃ ಸ ನೃಮೇಧೋ ಹಸನ್ಮುಹುಃ ।
ಆವಾಭ್ಯಾಂ ಕುತ್ರ ಗಂತವ್ಯಮಸ್ಮಿನ್ ಕಲಹಶಾಂತಯೇ ॥೩೪॥

ಜ್ಞಾತ್ವಾಪಿ ವೇದತತ್ವಾರ್ಥಂ ಕಲಹಶ್ಚೇತ್ಕಿಮುತ್ತರಮ್ ।
ಆವಾಮೇವ ಕೃತಾರ್ಥೌ ಹಿ ಕೋ ಮಧ್ಯಸ್ಥೋ ಬೃಹಚ್ಛ್ರವಾಃ ॥೩೫॥

ಹಿರಣ್ಯಗರ್ಭೋ ಭಗವಾನ್ ಸಾಕ್ಷಾಲ್ಲೋಕಪಿತಾಮಹಃ ।
ಸಭಾ ದೇವಮಯೀ ದಿವ್ಯಾ ತತ್ಪತ್ನೀ ಲೋಕಮಾತೃಕಾ ॥೩೬॥

ತತ್ರೈವ ಶೀಘ್ರಂ ಗಚ್ಛಾವಃ ಸರ್ವಂ ಸ್ಪಷ್ಟಂ ಭವೇದ್ ಧ್ರುವಮ್ ।
ಅಂಗಿಕರೋಷಿ ಬ್ರಹ್ಮಾಣಮಸ್ಮತ್ಪ್ರಶ್ನವಿನಿರ್ಣಯೇ ।
ಇದಾನೀಂ ಶಾಶ್ವತೋ ಧರ್ಮಃ ಸ್ವಸ್ತಿ ಸ್ಯಾಜ್ಜಗತಾಂ ಸದಾ ॥೩೭॥

---

೩೨ ''ವಿಷ್ಣೋರ್ನು ಕಂ'' ಎಂಬ ಶ್ರುತಿಯ ಅರ್ಥ ಹಾಗೂ ''ವಿಷ್ಣೋಃ ಕರ್ಮಾಣಿ'' ಇತ್ಯಾದಿ ವಾಕ್ಯಗಳು ಹಾಗೂ ವಿಧಿವಾಕ್ಯಗಳನ್ನು ಸ್ಮರಿಸು.

೩೩ ''ವೇದಾಹಮೇತಂ ಪುರುಷಂ ಮಹಾಂತಂ'' ಎಂಬ ಶ್ರುತಿಯ ಅರ್ಥವು ಸುಳ್ಳಾಗಬೇಕಾದೀತು.

೩೪ ಹೀಗೆ ಹೇಳಿದ ಪರುಚ್ಛೇಪನ ಮಾತನ್ನು ಕೇಳಿ ವಾಕ್ಯಾರ್ಥವನ್ನು ಚೆನ್ನಾಗಿ ಅರಿತವನಾದ, ಮಹಾತೇಜಸ್ವಿಯಾದ ನೃಮೇಧನು ನಗುತ್ತ ಹೇಳಿದನು. ಈ ವಿವಾದ ಶಾಂತಿಗೆ ನಾವಿಬ್ಬರೂ ಎಲ್ಲಿ ಹೋಗೋಣ?

೩೫ ವೇದಗಳ ತತ್ವವನ್ನು ತಿಳಿದೂ ಕೂಡ ಜಗಳವಾಡಿದರೆ ಏನು ಉತ್ತರ? ನಾವೇ ವೇದಗಳನ್ನು ಚೆನ್ನಾಗಿ ಅರಿತವರು. ನಮಗೆ ಮಧ್ಯಸ್ಥನಾಗುವ ಮಹಾಜ್ಞಾನಿ ಯಾರು?

೩೬ ಹಿರಣ್ಯಗರ್ಭರೆಂದು ಪ್ರಸಿದ್ಧರಾದ ಚತುರ್ಮುಖ ಬ್ರಹ್ಮದೇವರು ಜಗತ್ತಿಗೆ ಜನಕರು. ಅವರು ಇಂದ್ರಿಯಗಳನ್ನು ಗೆದ್ದವರೆಂದು ಖ್ಯಾತರು. ಅವರ ಪತ್ನಿಯಾದ ಸರಸ್ವತಿದೇವಿಯು ಜಗತ್ತಿಗೇ ತಾಯಿಯೆನಿಸಿದ್ದಾರೆ.

೩೭ ನಾವು ಈ ವಿವಾದದ ನಿರ್ಣಯಕ್ಕಾಗಿ ಅವರಲ್ಲಿಗೇ ಹೋಗೋಣ.

**ಶ್ರುತಯಃ ಸ್ಮೃತಯೋ ದಿವ್ಯಾಃ ಸೇತಿಹಾಸಾ ಮುನೀಶ್ವರಾಃ ।**
**ಸರ್ವಾಣಿ ತತ್ತ್ವಶಾಸ್ತ್ರಾಣಿ ಸನಕಾದ್ಯಾಶ್ಚ ಯೋಗಿನಃ ॥೩೮॥**

**ಜಗದ್ಗುರುಂ ಜಗನ್ನಾಥಂ ಬ್ರಹ್ಮಾಣಂ ಸಮುಪಾಸತೇ ।**
**ತತ್ರ ಗಚ್ಛೇಚ್ಛ ಯೋಽಸ್ಮಾಕಂ ಕಲಹೋ ಗಹನೋ ಮಹಾನ್ ॥೩೯॥**

**ಇತ್ಯುಕ್ತ್ವಾ ತತ್ಕರಗ್ರಾಹೀ ಪರುಚ್ಛೇಪೋ ನೃಮೇಧಕಮ್ ।**
**ಏವಂ ನಿಶ್ಚಿತ್ಯ ವಿಪ್ರೇಂದ್ರೌ ಸಖೇ ತೌ ತು ಗೃಹಾಶ್ರಯೌ ।**
**ಯಯತುರ್ಬ್ರಹ್ಮಲೋಕಂ ವೈ ಸರ್ವಲೋಕೈರ್ನಮಸ್ಕೃತಮ್ ॥೪೦॥**

**ಇಂದ್ರಾದ್ಯೈರಷ್ಟದಿಕ್ಪಾಲೈಃ ಮನ್ವಾದ್ಯೈಃ ಸ್ಮೃತಿಕರ್ತೃಭಿಃ ।**
**ರಾಮಾಯಣಂ ಸಭಾಮಧ್ಯೇ ಮಾರ್ಕಂಡೇಯಮುಖೋದ್ಗತಮ್ ।**
**ಶ್ರುಣ್ವಂತಂ ಸತತಂ ಭಕ್ತ್ಯಾ ಶತಕೋಟಿಪ್ರವಿಸ್ತರಮ್ ॥೪೧॥**

---

ನಿಶ್ಚಿತವಾಗಿ ಎಲ್ಲವೂ ಸ್ಪಷ್ಟವಾಗುವುದು. ಪರುಚ್ಛೇಪನು ಹೇಳುತ್ತಾನೆ. ನಮ್ಮ ವಿವಾದದ ನಿರ್ಣಾಯಕರನ್ನಾಗಿ ಬ್ರಹ್ಮದೇವರನ್ನು ನೀನು ಅಂಗೀಕಾರ ಮಾಡಿರುವೆ. ಈಗ ಶಾಶ್ವತ ಧರ್ಮವು ತಿಳಿಯಲ್ಪಡುವುದು. ಮತ್ತು ಇದರಿಂದ ಯಾವಾಗಲೂ ಪ್ರಪಂಚಕ್ಕೆ ಮಂಗಲವಾಗುವುದು.

೩೮ ದಿವ್ಯವಾದ ಇತಿಹಾಸ ಹಾಗೂ ಶ್ರುತಿ-ಸ್ಮೃತಿಗಳು, ಎಲ್ಲ ತತ್ವಶಾಸ್ತ್ರಗಳು, ಸನಕಾದಿ ಯೋಗಿಗಳು, ಎಲ್ಲ ಮುನೀಶ್ವರರು,

೩೯ ಲಕ್ಷ್ಮೀ-ನಾರಾಯಣರ ನಂತರ ಜಗತ್ತಿಗೆ ನಿಯಾಮಕರು, ಜಗತ್ತಿಗೆ ಗುರುಗಳೂ ಆದ ಬ್ರಹ್ಮದೇವರನ್ನು ಚೆನ್ನಾಗಿ ಉಪಾಸನೆ ಮಾಡುವರು. ಗಹನ ವಿಚಾರಯುಕ್ತವಾದ ನಮ್ಮ ಈ ಮಹಾವಿವಾದವು ಅಲ್ಲಿಯೇ ನಿರ್ಣಯವಾಗಲಿ.

೪೦ ಹೀಗೆಂದು ನುಡಿದು ಪರುಚ್ಛೇಪನು ನೃಮೇಧನ ಹಸ್ತವನ್ನು ಹಿಡಿದುಕೊಂಡನು. ಹೀಗೆ ನಿಶ್ಚಯಿಸಿ ಗೃಹಸ್ಥಾಶ್ರಮಿಗಳಾದ ಆ ಈರ್ವರು ಬ್ರಾಹ್ಮಣಶ್ರೇಷ್ಠರು ಎಲ್ಲ ಲೋಕವಾಸಿಗಳಿಂದಲೂ ನಮಸ್ಕೃತವಾದ ಬ್ರಹ್ಮಲೋಕಕ್ಕೆ ಹೋದರು.

೪೧ ಇಂದ್ರಾದಿ ಅಷ್ಟದಿಕ್ಪಾಲಕರಿಂದ ಹಾಗೂ ಮನುವೇ ಮೊದಲಾದ ಸ್ಮೃತಿಕಾರರಿಂದಲೂ ಸಹಿತನಾಗಿ ಸಭಾಮಧ್ಯದಲ್ಲಿ ಮಾರ್ಕಂಡೇಯರು ಹೇಳುತ್ತಿರುವ ಶತಕೋಟಿ ವಿಸ್ತಾರವಾದ ರಾಮಕಥೆಯನ್ನು ಸತತವಾಗಿ ಕೇಳುತ್ತಿರುವ ಬ್ರಹ್ಮದೇವರನ್ನು ನೋಡಿದರು.

**ತಂ ದೃಷ್ಟ್ವಾ ಲೋಕಕರ್ತಾರಂ ಬಾಲಾರ್ಕಸದೃಶಪ್ರಭಮ್ ।**
**ನತ್ವಾಽವರ್ಣಯತಾಂ ತಸ್ಮೈ ಸ್ವಂ ಸ್ವಂ ಮತಮನಿಂದಿತಮ್ ॥೪೨॥**

**ಬ್ರಹ್ಮಾ ತದುಪಧಾರ್ಯಾಥ ತಯೋರ್ವಾದಂ ಮಹಾತ್ಮನೋಃ ।**
**ತಯೋಶ್ಚ ಸಂಭ್ರಮಂ ದೃಷ್ಟ್ವಾ ವಿಸ್ಮಿತಃ ಪ್ರಜಹಾಸ ಚ ॥೪೩॥**

**ಸಭ್ಯಾಶ್ಚ ಮುನಯೋ ದೇವಾಃ ತಯೋಃ ತೇಜಃಪ್ರಭಾವಜಮ್ ।**
**ತಯೋಸ್ಸಂವಾದಶಾಂತ್ಯರ್ಥಂ ವೇದಾಂತಾರ್ಥಮಚಿಂತಯತ್ ॥೪೪॥**

**ಅಗಸ್ತ್ಯಪ್ರಮುಖಾನ್ ಸರ್ವಾನಿದಂ ವಚನಮಬ್ರವೀತ್ ।**
**ಶೈಲಮೇಷ್ಯಥ ಕೈಲಾಸಂ ತತ್ರಾಸ್ತೇ ಶಂಕರೋ ಹರಃ ॥೪೫॥**

**ತೇನ ಸಾಕಂ ಸಮಾಲೋಚ್ಯ ತತ್ತ್ವಂ ನಿಶ್ಚೇತುಮರ್ಹಥ ।**
**ಶ್ರುತಿಸ್ಮೃತಿಪುರಾಣೇಷು ನಿರ್ಣೀತಂ ತತ್ತ್ವಮುತ್ತಮಮ್ ॥೪೬॥**

---

**ವಿಶೇಷ :** ಇತ್ಥಂ ಸ ಗಾಯನ್ ಶತಕೋಟಿವಿಸ್ತರಂ ।
ರಾಮಾಯಣಂ ಭಾರತಪಂಚರಾತ್ರಮ್ ॥ ಮ.ಭಾ.ತಾ. ೯-೧೨೧

ರಾಮಾಯಣವು ಶತಕೋಟಿವಿಸ್ತಾರವೆಂದು ಮಹಾಭಾರತತಾತ್ಪರ್ಯ ನಿರ್ಣಯದಲ್ಲಿ ಶ್ರೀಮದಾಚಾರ್ಯರು ಹೇಳಿದುದಕ್ಕೆ ಇದು ಸಂವಾದವಾಗಿದೆ.)

೪೨ ಉದಯಿಸುತ್ತಿರುವ ಸೂರ್ಯನಂತೆ ಕಂಗೊಳಿಸುತ್ತಿರುವ ಬ್ರಹ್ಮದೇವರನ್ನು ದರ್ಶನ ಮಾಡಿಕೊಂಡರು. ಸಾಷ್ಟಾಂಗ ನಮಸ್ಕರಿಸಿದರು. ಅನಿಂದಿತವಾದ ತಮ್ಮ ತಮ್ಮ ವಿಚಾರಗಳನ್ನು ತಿಳಿಸಿದರು.

೪೩ ಮಹಾತ್ಮರಾದ ಅವರಿಬ್ಬರ ವಾದವನ್ನು ತಿಳಿದ ಬ್ರಹ್ಮದೇವರು ಅವರ ವಾದ ಸಂಭ್ರಮವನ್ನು ನೋಡಿ ಆಶ್ಚರ್ಯದಿಂದ ನಸುನಕ್ಕರು.

೪೪ ಸಭೆಯಲ್ಲಿದ್ದ ದೇವತೆಗಳು, ಮುನಿಗಳು ವಿಸ್ಮಿತರಾಗಿ ಅವರ ಜ್ಞಾನದಿಂದ ಉತ್ಪನ್ನವಾದ ಈ ವಿವಾದದ ಶಾಂತಿಗೆ ವೇದಾಂತದ ಅರ್ಥವನ್ನು ಚಿಂತಿಸತೊಡಗಿದರು.

೪೫ ಆ ಎಲ್ಲ ಅಗಸ್ತ್ಯರೇ ಮೊದಲಾದ ಋಷಿಗಳನ್ನು ಕುರಿತು ಬ್ರಹ್ಮದೇವರು ಹೇಳಿದರು. ನೀವು ಕೈಲಾಸಪರ್ವತಕ್ಕೆ ಹೋಗಿರಿ. ಅಲ್ಲಿ ರುದ್ರದೇವರಿದ್ದಾರೆ.

೪೬ ಆ ರುದ್ರದೇವರೊಂದಿಗೆ ಸಮಾಲೋಚನೆ ಮಾಡಿ ಶ್ರುತಿ-ಸ್ಮೃತಿಗಳು ಹಾಗೂ ಪುರಾಣಗಳಲ್ಲಿ ನಿರ್ಣಯಿಸಲ್ಪಟ್ಟ ಉತ್ತಮ ತತ್ತ್ವವನ್ನು ನಿಶ್ಚಯಿಸಿಕೊಳ್ಳಿ.

**ಗೀತಾಯಾಂ ದರ್ಶಿತಂ ಪೂರ್ವಂ ಸರ್ವಂ ಪಾರ್ಥಾಯ ವಿಷ್ಣುನಾ ।**
**ತತ್ಸರ್ವಂ ಭಗವತ್ತತ್ತ್ವಂ ಮಹಾದೇವೋ ಜಗನ್ಮಯಃ ।**
**ಸರ್ವಂ ಜಾನಾತಿ ನೋऽದ್ಯಾಪಿ ತತ್ತ್ವಂ ನಿಶ್ಚಿತ್ಯ ವಕ್ಷ್ಯತಿ ||೪೭||**

**ಋಷಯ ಊಚುಃ –**

**ಸೂತ ಸೂತ ಮಹಾಭಾಗ ಸರ್ವಜ್ಞೋऽಸಿ ದಯಾಪರ ।**
**ವ್ಯಾಸಶಿಷ್ಯಾಗ್ರಣೀಶ್ರೇಷ್ಠ ಸರ್ವಂ ಜಾನಾಸಿ ನೋ ವದ ||೪೮||**

**ಕದೋಪದಿಷ್ಟವಾನ್ ವಿಷ್ಣುಃ ಕಿಮರ್ಥಂ ಶಂಕರಾಯ ಸಃ ।**
**ಗೀತಾರ್ಥಮಖಿಲಂ ಬ್ರಹ್ಮನ್ ಸನ್ಮೂರ್ತಿರಕರೋಚ್ಚ ಕಿಮ್ ||೪೯||**

**ಸೂತ ಉವಾಚ-**

**ಶೃಣುಧ್ವಂ ಮುನಯಃ ಸರ್ವೇ ಹರೇಣ ಯದನುಷ್ಠಿತಮ್ ।**
**ನೂನಂ ಮಾಯಾ ಹರೇರ್ದೈವೀ ಯೋಗಿನಾಮಪಿ ಮೋಹಿನೀ ||೫೦||**

**ಸತ್ಸಂಗೇನ ಭವೇನ್ಮುಕ್ತಿರಸತ್ಸಂಗೇನ ಬಂಧನಮ್ ।**
**ಸತ್ಸಂಗಮೇವ ಕುರ್ವಂತಿ ಯೋಗಿನೋऽಪಿ ಹಿ ಮುಕ್ತಯೇ ||೫೧||**

---

೪೭ ಹಿಂದೆ ಈ ಎಲ್ಲ ತತ್ತ್ವವನ್ನು ಕೃಷ್ಣರೂಪಿಯಾದ ವಿಷ್ಣುವು ಪಾರ್ಥನಿಗೆ ಉಪದೇಶ ಮಾಡಿದ್ದನು. ಆ ಎಲ್ಲ ತತ್ತ್ವವನ್ನು ಜಗನ್ಮಯನಾದ ಮಹಾದೇವನು ಅರಿತಿದ್ದಾನೆ. ಎಲ್ಲ ತತ್ತ್ವವನ್ನು ಅರಿತ ಮಹಾದೇವನು ನಿಮಗೆ ತತ್ತ್ವವನ್ನು ನಿಶ್ಚಯಿಸಿ ಹೇಳುವನು.

೪೮ ಹೇ ಮಹಾಭಾಗ್ಯವಂತರೆನಿಸಿದ ಸೂತರೇ! ನೀವು ಸರ್ವಜ್ಞರೂ ದಯಾಪರರೂ ವ್ಯಾಸಶಿಷ್ಯರಲ್ಲಿ ಅಗ್ರಗಣ್ಯರು ಎನಿಸಿದವರು. ನೀವು ಎಲ್ಲವನ್ನು ಅರಿತವರು. ನೀವು ತಿಳಿದುದನ್ನು ನಮಗೆ ಹೇಳಿರಿ.

೪೯ ಭಗವಂತನಾದ ವಿಷ್ಣುವು ಯಾವ ಕಾಲದಲ್ಲಿ ಯಾವ ಕಾರಣಕ್ಕೆ ರುದ್ರದೇವರಿಗೆ ಗೀತಾರ್ಥವನ್ನು ಉಪದೇಶ ಮಾಡಿದನು. ನಂತರ ರುದ್ರದೇವರು ಏನು ಮಾಡಿದರು

೫೦ ಹೇ ಮುನಿಗಳೇ! ರುದ್ರದೇವರು ಏನು ಮಾಡಿದರೆಂಬುದನ್ನು ಹೇಳುತ್ತೇನೆ. ಅದನ್ನು ನೀವೆಲ್ಲ ಕೇಳಿರಿ. ಭಗವಂತನ ದಿವ್ಯ ಮಾಯೆಯು ಯೋಗಿಗಳಿಗೂ ಮೋಹಕವಾದುದು.

೫೧ ಸಜ್ಜನರ ಸಹವಾಸವು ಮುಕ್ತಿ ನೀಡಿದರೆ, ಅಯೋಗ್ಯರ ಸಹವಾಸವು ಬಂಧನಕ್ಕೆ ಕಾರಣವಾಗುವುದು. ಯೋಗಿಗಳಾದವರೂ ಕೂಡ ಮುಕ್ತಿಗಾಗಿ ಸತ್ಸಂಗವನ್ನೇ ಮಾಡುವರು.

ಮಹಾದೇವೋಽಪಿ ಸಂಗೇನ ವಿಕೃತಿಂ ಪ್ರಾಪ ಶಂಕರಃ ।
ವಿಷ್ಣೋಃ ಸದುಪದೇಶೇನ ಶುದ್ಧಸತ್ತ್ವೋ ಬಭೂವ ಹ ॥೫೨॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ
ಸಪ್ತದಶೋಽಧ್ಯಾಯಃ ॥

---

೫೨ ಶಂಕರನು ಮಹಾದೇವನಾದರೂ ಸಹವಾಸದಿಂದ ವಿಕೃತಿಯನ್ನು ಹೊಂದಿದನು. ಮಹಾವಿಷ್ಣುವಿನ ಸದುಪದೇಶದಿಂದ ಶುದ್ಧವಾದ ಮನಸ್ಸುಳ್ಳವನಾದನು.

॥ ಇಲ್ಲಿಗೆ ಹದಿನೇಳನೇ ಅಧ್ಯಾಯವು ಮುಗಿಯಿತು ॥

# ಅಥ ಅಷ್ಟಾದಶೋಽಧ್ಯಾಯಃ

**ಶೌನಕ ಉವಾಚ-**

ಕಥಂ ಸೂತ ಮಹಾಭಾಗ ಶಂಕರೋ ಲೋಕಶಂಕರಃ ।
ವಿಷ್ಣೋಸ್ಸದುಪದೇಶೇನ ಶುದ್ಧಸತ್ತ್ವೋ ಬಭೂವ ಹ ॥೧॥

**ಸೂತ ಉವಾಚ-**

ಪುರಾ ತ್ರಿಪುರಸಂಹಾರೇ ಸುರಾಲಯಮಯಂ ಧನುಃ ।
ವಿಷ್ಣುರ್ನಿಮಾಯ ದೇವಾನಾಂ ಪಾಲನಾಯ ದದೌ ಮಹತ್ ॥೨॥

ಸರ್ವದೇವಮಯಂ ಬಾಣಂ ನಿಜಶಕ್ತ್ಯುಪಬೃಂಹಿತಮ್ ।
ಸೂರ್ಯಕೋಟಿಪ್ರತೀಕಾಶಮನಿವಾರ್ಯಂ ಸುರೈರಪಿ ॥೩॥

ತೇನ ಬಾಣೇನ ಸಂಹೃತ್ಯ ಸರ್ವಾನ್ ತ್ರಿಪುರವಾಸಿನಃ ।
ಭಸ್ಮಾವಶೇಷಮಕರೋತ್ ತ್ರಿಪುರಂ ಚ ಮಹೇಶ್ವರಃ ॥೪॥

ಪಾಲಯನ್ಸರ್ವಲೋಕಾಂಶ್ಚ ಸರ್ವದೇವೈರಭಿಷ್ಟುತಃ ।
ಉಪಗೀಯಮಾನೋ ವೇದೈಶ್ಚ ನಿಜವೀರ್ಯೇಣ ವಿಸ್ಮಿತಃ ॥೫॥

ಮುಮೋದ ಸಹಸಾ ದೇವಃ ತ್ರೈಲೋಕ್ಯಂ ಸಂಪ್ರಕಾಶಯನ್ ।

---

೧ ಹೇ ಸೂತರೇ! ಲೋಕಕ್ಕೆ ಮಂಗಳಪ್ರದನೆನಿಸಿದ ಶಂಕರನು ವಿಷ್ಣುವಿನ ಸದುಪದೇಶದಿಂದ ಹೇಗೆ ಶುದ್ಧಸತ್ವನೆನಿಸಿದನು?

೨ ಸೂತರು ಹೇಳುವರು. ಹಿಂದೆ ತ್ರಿಪುರ ಸಂಹಾರ ಸಮಯದಲ್ಲಿ ಎಲ್ಲ ದೇವತೆಗಳ ಸಾಮರ್ಥ್ಯದಿಂದ ಕೂಡಿದ ಧನುಸ್ಸನ್ನು ದೇವತೆಗಳ ಪಾಲನೆಗಾಗಿ ವಿಷ್ಣುವು ನಿರ್ಮಿಸಿ ಕೊಟ್ಟನು.

೩ ಎಲ್ಲ ದೇವತೆಗಳ ಸಾಮರ್ಥ್ಯವನ್ನು ಹೊಂದಿದ, ತನ್ನ ಶಕ್ತಿಯಿಂದ ಕೂಡಿದ, ಕೋಟಿ ಸೂರ್ಯರ ಪ್ರಕಾಶದಿಂದ ಕೂಡಿದ ದೇವತೆಗಳಿಂದಲೂ ನಿವಾರಿಸಲಾಗದ ಬಾಣವನ್ನು ನಿರ್ಮಿಸಿದನು.

೪ ಆ ಬಾಣದಿಂದ ತ್ರಿಪುರವಾಸಿಗಳನ್ನೆಲ್ಲ ಸಂಹಾರಮಾಡಿದ ರುದ್ರದೇವರು, ತ್ರಿಪುರವನ್ನು ಸುಟ್ಟು ಹಾಕಿದರು.

೫ ಎಲ್ಲ ಲೋಕಗಳನ್ನು ರಕ್ಷಿಸಿ ಸಕಲದೇವತೆಗಳಿಂದ ಹಾಗೂ ವೇದಗಳಿಂದ ಸ್ತುತ್ಯರಾಗಿ ತನ್ನ ಸಾಮರ್ಥ್ಯವನ್ನು ಕಂಡು ಅಚ್ಚರಿ ಹೊಂದಿದರು.

ಏತಸ್ಮಿನ್ನಂತರೇ ದಕ್ಷೋ ಯಜ್ಞೇ ತು ಸಮುಪಸ್ಥಿತೇ ॥೬॥

ಭೃಗ್ವಾದಿಭಿಸ್ಸದಸ್ಯೈಶ್ಚ ಇಂದ್ರಾದೀನಾಂ ಚ ಸನ್ನಿಧೌ ।
ಭಾಗಂ ನಾಕಲ್ಪಯೇದ್ರೌದ್ರಮವಮಾನಂ ಚಕಾರ ಹ ॥೭॥

ಏವಂ ಪ್ರವರ್ತಿತಂ ಯಜ್ಞಂ ದೃಷ್ಟ್ವಾ ದೇವೋ ವೃಷಧ್ವಜಃ ।
ಚುಕೋಪ ಭೃಶಮತ್ಯುಗ್ರೋ ಧನುಸ್ಸಜ್ಯಂ ಚಕಾರ ಸಃ ॥೮॥

ಯತೋ ನಾಕಲ್ಪಯನ್ಮೇಽದ್ಯ ಯಜ್ಞಭಾಗಂ ಸುರಾಧಮಾಃ ।
ನಷ್ಟಾ ಯೂಯಂ ನ ಸಂದೇಹಃ ಪಶ್ಯಧ್ವಂ ಮೇ ಪರಾಕ್ರಮಮ್ ॥೯॥

ಇತ್ಯುಕ್ತ್ವಾ ಪರುಷಂ ಶಂಭುಶ್ಚಾಪಮಾದಾಯ ವೈದಿಕಮ್ ।
ಜ್ಯಾಶಬ್ದಮಕರೋತ್ತೀವ್ರಂ ಲೋಕಾನ್ಸಂಕೋಚಯನ್ನಿವ ॥೧೦॥

ತೇನ ಶಬ್ದೇನ ಸಂತ್ರಸ್ತಾ ದೇವರ್ಷಿಪಿತೃಚಾರಣಾಃ ।
ಹಾಹಾಕೃತಂ ಜಗತ್ಸರ್ವಂ ಬಭೂವ ಸಚರಾಚರಮ್ ॥೧೧॥

ಸರ್ವದೇವಾಃ ಸುಸಂಭ್ರಾಂತಾಃ ಸಿದ್ಧಚಾರಣಗುಹ್ಯಕಾಃ ।

---

೬ ಮೂರು ಲೋಕಗಳಲ್ಲಿ ಪ್ರಕಾಶ ಬೀರುತ್ತ ರುದ್ರದೇವರು ಆನಂದಿಸಿದರು. ಇದೇ ಸಮಯದಲ್ಲಿ ದಕ್ಷಪ್ರಜಾಪತಿಯು ತನ್ನ ಯಜ್ಞವನ್ನು ಪ್ರಾರಂಭಿಸಿದನು.

೭ ಭೃಗು ಋಷಿಗಳೇ ಮೊದಲಾದ ಯಜ್ಞದ ಸದಸ್ಯರ ಹಾಗೂ ಇಂದ್ರನೇ ಮೊದಲಾದ ದೇವತೆಗಳ ಸನ್ನಿಧಿಯಲ್ಲಿ ರುದ್ರದೇವರಿಗೆ ಯಜ್ಞಭಾಗವನ್ನು ನೀಡದೇ ಅವಮಾನ ಮಾಡಿದನು.

೮ ಹೀಗೆ ನಡೆದ ಯಜ್ಞವನ್ನು ನೋಡಿ ನಂದಿವಾಹನನಾದ ರುದ್ರದೇವರು ಉಗ್ರಕೋಪಿಗಳಾಗಿ ಧನುಸ್ಸನ್ನು ಹೆದೆಯೇರಿಸಿದರು.

೯ ಯಜ್ಞದಲ್ಲಿ ಭಾಗವನ್ನು ಕಲ್ಪಿಸದ ಕಾರಣದಿಂದ ನೀವೆಲ್ಲ ದೇವತೆಗಳು ನಾಶ ಹೊಂದುವಿರಿ. ಇದರಲ್ಲಿ ಸಂದೇಹವಿಲ್ಲ. ನನ್ನ ಪರಾಕ್ರಮವನ್ನು ನೋಡಿರಿ.

೧೦ ಹೀಗೆ ಬಿರುನುಡಿಗಳನ್ನಾಡುತ್ತ ರುದ್ರದೇವರು ವೈದಿಕವಾದ ಧನುಸ್ಸನ್ನೆತ್ತಿ ಲೋಕಗಳನ್ನೆಲ್ಲ ನಾಶ ಮಾಡುವಂತೆ ಬಿಲ್ಲಿನ ಹಗ್ಗವನ್ನೆಳೆದು ಶಬ್ದ ಮಾಡಿದರು.

೧೧ ಆ ಶಬ್ದದಿಂದ ಸಂತ್ರಸ್ತರಾದ ದೇವತೆಗಳು, ಪಿತೃಗಳು, ಚಾರಣರು ಮೊದಲಾದವರು ಹಾಹಾಕಾರ ಮಾಡಿದರು. ಚರಾಚರಾತ್ಮಕ ಪ್ರಪಂಚವೆಲ್ಲ ಕ್ಷುಬ್ಧವಾಯಿತು.

**ವಿದ್ಯಾಧರಾಸ್ತಥಾ ನಾಗಾ ಗಂಧರ್ವಾಪ್ಸರಸಸ್ತಥಾ ॥೧೨॥**

**ರಕ್ಷ ರಕ್ಷೇತಿ ಭಾಷಂತಃ ಕೇಶವಂ ಶರಣಂ ಯಯುಃ ।**
**ಅಥಾಂತರಿಕ್ಷೇ ದಿವ್ಯಾ ವಾಕ್ ಸಂಬಭೂವಾಶರೀರಿಣೀ ॥೧೩॥**

**ಕೋಪಂ ಸಂಹರ ವಿಶ್ವಾತ್ಮನ್ ದೇವದೇವ ಜಗತ್ಪತೇ ।**
**ಶಂಕರ ತ್ವಂ ಮಹೇಶಾನಃ ಕಥಂ ಕುಪ್ಯಸಿ ಚಾಜ್ಞವತ್ ॥೧೪॥**

**ತ್ವಯಿ ಕ್ರುದ್ಧೇ ಮಹಾದೇವ ರಿಪೂಣಾಮಪಿ ವತ್ಸಲ ।**
**ಪ್ರಾಣಿನಸ್ತು ಜಡಾಸ್ಸರ್ವೇ ಕಂ ಯಾಂತಿ ಶರಣಂ ಪ್ರಭೋ ॥೧೫॥**

**ಶ್ರುತ್ವಾಪ್ಯೇವಂ ವಚೋ ದಿವ್ಯಂ ಶಂಕರೋ ಭವ ಈಶ್ವರಃ ।**
**ಈಷಚ್ಛಾಂತೋ ಧನುರ್ಘೋರಂ ನ ಚಕರ್ಷ ನ ವಾ ಶರಮ್ ॥೧೬॥**

**ಅಸ್ಮಿನ್ನವಸರೇ ಯೋಗೀ ದತ್ತಾತ್ರೇಯಃ ಸ್ವಯಂ ಹರಿಃ ।**
**ಸ್ಫುರತ್ಪಿಂಗಜಟಾಜೂಟೋ ಜ್ವಲದಗ್ನಿಸಮಪ್ರಭಃ ॥೧೭॥**

**ಯೋಗಿನಾಂ ಪರಮಾಚಾರ್ಯೋ ಯೋಗಶಾಸ್ತ್ರಪ್ರವರ್ತಕಃ ।**

---

೧೨ ಎಲ್ಲ ದೇವತೆಗಳು ದಿಕ್ಕುಗಾಣದಂತಾದರು. ಸಿದ್ಧರು, ಚಾರಣರು, ಗುಹ್ಯಕರು, ವಿದ್ಯಾಧರರು, ನಾಗರು, ಗಂಧರ್ವರು, ಅಪ್ಸರೆಯರು ಮೊದಲಾದವರೆಲ್ಲರೂ ಭೀತರಾದರು.

೧೩ ರಕ್ಷಿಸು ರಕ್ಷಿಸು ಎಂದೊದರುತ್ತ ಕೇಶವನನ್ನು ಶರಣು ಹೊಂದಿದರು. ಆಗ ಅಂತರಿಕ್ಷದಲ್ಲೊಂದು ಅಶರೀರವಾಣಿ ನುಡಿಯಿತು.

೧೪ ಹೇ ಶಂಕರ! ಇಂದ್ರಾದಿದೇವತೆಗಳಿಗೆ ನೀನು ನಾಯಕನಾಗಿರುವಿ. ಇಂದ್ರಾದಿ ಸಮಸ್ತಪ್ರಪಂಚಕ್ಕೆ ನಿಯಾಮಕನಾಗಿರುವಿ. ನೀನು ಮಹಾ-ಸಮರ್ಥ. ಅಜ್ಞಾನಿಯಂತೆ ಹೇಗೆ ಕೋಪಿಸಿಕೊಳ್ಳುತ್ತಿರುವೆ? ನಿನ್ನ ಕೋಪವನ್ನು ಉಪಸಂಹಾರ ಮಾಡು.

೧೫ ಶತ್ರುಗಳಲ್ಲೂ ಕರುಣೆದೋರುವ ನೀನೇ ಕುಪಿತನಾದರೆ, ಅಜ್ಞಾನಿಗಳಾದ ಈ ಪ್ರಾಣಿಗಳೆಲ್ಲ ಯಾರನ್ನು ಶರಣು ಹೊಂದುವವು?

೧೬ ಹೀಗೆ ನುಡಿದ ಆಕಾಶವಾಣಿಯ ಮಾತನ್ನು ಕೇಳಿಯೂ ಕೂಡ ಶಂಕರನು ಸ್ವಲ್ಪ ಶಾಂತನಾದರೂ ಘೋರವಾದ ಧನುರ್ಬಾಣಗಳನ್ನು ಹಿಂತೆಗೆಯಲಿಲ್ಲ.

೧೭ ಇದೇ ಸಮಯಕ್ಕೆ ಉರಿವ ಅಗ್ನಿಯಂತೆ ಕಾಂತಿಯುಳ್ಳ ಕಂಗೊಳಿಸುವ ಕೆಂಪು ಜಟಾಜೂಟದಿಂದ ಕೂಡಿದ ಸಾಕ್ಷಾತ್ ಹರಿಯ ಅವತಾರನೆನಿಸಿದ,

**ಭಕ್ತವಶ್ಯೋಽಗ್ರತಃಸ್ಥಾಯೀ ಸಕೃತ್‌ಕೀರ್ತನಮಾತ್ರತಃ ॥೧೮॥**

**ಸ್ಮೃತ್ವಾ ಮುಕ್ತಿಪ್ರದೋ ನೃಣಾಂ ಭಗವಾನ್ ಭಕ್ತವತ್ಸಲಃ ।**
**ಸಾಕ್ಷಾನ್ನಾರಾಯಣೋ ಯೋಗೀ ದೇವಾನಾಂ ಜ್ಞಾನದೋ ಹರಿಃ ॥೧೯॥**

**ತಂ ದೃಷ್ಟ್ವಾ ಸ ಹಿ ಚಾಪಂ ಚ ವಿಸೃಜ್ಯ ವಿನಯಾನ್ವಿತಃ ।**
**ನತ್ವಾ ಮೂರ್ಧ್ನಾ ಶಿವೋ ಭಕ್ತ್ಯಾ ಕೃತಾಂಜಲಿರಭಾಷತ ॥೨೦॥**

**ಶ್ರೀ ಈಶ್ವರ ಉವಾಚ-**

**ಭಗವನ್ ಯೋಗಿನಾಂ ಶ್ರೇಷ್ಠ ನಾರಾಯಣ ಜಗದ್ಗುರೋ ।**
**ಪೂತೋಽಸ್ಮ್ಯಹಂಕೃತಾರ್ಥೋಽಸ್ಮಿಸ್ವಯಂಯನ್ಮೇಽಕ್ಷಿಗೋಚರಃ ॥೨೧॥**

**ಸರ್ವಥಾ ಕೃತಕೃತ್ಯೋಽಸ್ಮಿ ದರ್ಶನಾತ್ತವ ಕೇಶವ ।**
**ಅದ್ಯ ಪ್ರಭಾತಂ ಸುದಿನಂ ತವ ವಿಷ್ಣೋಸ್ಸುದರ್ಶನಾತ್ ॥೨೨॥**

**ನೇತ್ರಸಾಫಲ್ಯಮಾಯಾತಂ ತಪಸಶ್ಚ ಫಲಂ ಮಹತ್ ।**
**ಇತ್ಯುಕ್ತ್ವಾ ಪೂಜಯಾಮಾಸ ಹರೋಽರ್ಘ್ಯಾದಿಭಿರಾದರಾತ್ ॥೨೩॥**

---

೧೮ ಯೋಗಶಾಸ್ತ್ರಪ್ರವರ್ತಕನು, ಯೋಗಿಗಳಿಗೆ ಮೂಲಗುರುವೆನಿಸಿದವನೂ, ಭಕ್ತವಶ್ಯನೂ ಆದ ದತ್ತಾತ್ರೇಯನು ಭಕ್ತರು ಒಮ್ಮೆ ಸ್ಮರಿಸಿದ ಮಾತ್ರದಿಂದ ಅಲ್ಲಿ ಪ್ರತ್ಯಕ್ಷನಾದನು.

೧೯ ಸ್ಮರಣಮಾತ್ರದಿಂದ ಮುಕ್ತಿಯನ್ನು ನೀಡುವ ಷಡ್ಗುಣೈಶ್ವರ್ಯಸಂಪನ್ನನಾದ ದೇವತೆಗಳಿಗೂ ಜ್ಞಾನಪ್ರದನೆನಿಸಿದ ಸಾಕ್ಷಾನ್ನಾರಾಯಣನಾದ ದತ್ತಾತ್ರೇಯನು ಅಲ್ಲಿ ಬಂದು ನಿಂತನು.

೨೦ ದತ್ತಾತ್ರೇಯನನ್ನು ನೋಡಿ ವಿನಯದಿಂದ ಬಿಲ್ಲನ್ನು ಕೈಬಿಟ್ಟು ತಲೆಬಾಗಿ ನಮಸ್ಕರಿಸಿದ ಶಿವನು ಕೈಜೋಡಿಸಿ ಮಾತನಾಡಿದನು.

೨೧ ಹೇ ಯೋಗಿಶ್ರೇಷ್ಠನೇ! ಜಗದ್ಗುರುವೇ! ನಾರಾಯಣನೇ! ನೀನು ಸ್ವೇಚ್ಛೆಯಿಂದ ನನಗೆ ದರ್ಶನ ನೀಡಿರುವೆ. ಆದುದರಿಂದ ನಾನೂ ಶುದ್ಧನೂ ಕೃತಕೃತ್ಯನೂ ಆಗಿರುವೆ.

೨೨ ಕೇಶವ ನಿನ್ನ ದರುಶನದಿಂದ ನಾನು ಕೃತಕೃತ್ಯನಾಗಿರುವೆ. ನಿನ್ನ ದರುಶನ ಹೊಂದಿದ ಈ ಮುಂಜಾವಿನ ದಿನವೇ ಸುದಿನವು.

೨೩ ನಿನ್ನ ದರ್ಶನದಿಂದ ನನ್ನ ಕಣ್ಣುಗಳು ಸಫಲವಾದವು. ನಿನ್ನ ಈ ದರ್ಶನ ನನ್ನ ತಪಸ್ಸಿನ ಫಲವಾಗಿದೆ. ಹೀಗೆನ್ನುತ್ತ ಹರನು ಅರ್ಘ್ಯ-ಪಾದ್ಯಾದಿಗಳಿಂದ ದತ್ತಾತ್ರೇಯನನ್ನು ಪೂಜಿಸಿದನು.

ವಿದ್ಯಾಧರಾಸ್ತಥಾ ನಾಗಾ ಗಂಧರ್ವಾಪ್ಸರಸಸ್ತಥಾ ॥೧೨॥

ರಕ್ಷ ರಕ್ಷೇತಿ ಭಾಷಂತಃ ಕೇಶವಂ ಶರಣಂ ಯಯುಃ ।
ಅಥಾಂತರಿಕ್ಷೇ ದಿವ್ಯಾ ವಾಕ್ ಸಂಬಭೂವಾಶರೀರಿಣೀ ॥೧೩॥

ಕೋಪಂ ಸಂಹರ ವಿಶ್ವಾತ್ಮನ್ ದೇವದೇವ ಜಗತ್ಪತೇ ।
ಶಂಕರ ತ್ವಂ ಮಹೇಶಾನಃ ಕಥಂ ಕುಪ್ಯಸಿ ಚಾಜ್ಞವತ್ ॥೧೪॥

ತ್ವಯಿ ಕ್ರುದ್ಧೇ ಮಹಾದೇವ ರಿಪೂಣಾಮಪಿ ವತ್ಸಲ ।
ಪ್ರಾಣಿನಸ್ತು ಜಡಾಸ್ಸರ್ವೇ ಕಂ ಯಾಂತಿ ಶರಣಂ ಪ್ರಭೋ ॥೧೫॥

ಶ್ರುತ್ವಾಪ್ಯೇವಂ ವಚೋ ದಿವ್ಯಂ ಶಂಕರೋ ಭವ ಈಶ್ವರಃ ।
ಈಷಚ್ಛಾಂತೋ ಧನುರ್ಘೋರಂ ನ ಚಕರ್ಷ ನ ವಾ ಶರಮ್ ॥೧೬॥

ಅಸ್ಮಿನ್ನವಸರೇ ಯೋಗೀ ದತ್ತಾತ್ರೇಯಃ ಸ್ವಯಂ ಹರಿಃ ।
ಸ್ಫುರತ್ಪಿಂಗಜಟಾಜೂಟೋ ಜ್ವಲದಗ್ನಿಸಮಪ್ರಭಃ ॥೧೭॥

ಯೋಗಿನಾಂ ಪರಮಾಚಾರ್ಯೋ ಯೋಗಶಾಸ್ತ್ರಪ್ರವರ್ತಕಃ ।

---

೧೨ ಎಲ್ಲ ದೇವತೆಗಳು ದಿಕ್ಕುಗಾಣದಂತಾದರು. ಸಿದ್ಧರು, ಚಾರಣರು, ಗುಹ್ಯಕರು, ವಿದ್ಯಾಧರರು, ನಾಗರು, ಗಂಧರ್ವರು, ಅಪ್ಸರೆಯರು ಮೊದಲಾದವರೆಲ್ಲರೂ ಭೀತರಾದರು.

೧೩ ರಕ್ಷಿಸು ರಕ್ಷಿಸು ಎಂದೊದರುತ್ತ ಕೇಶವನನ್ನು ಶರಣು ಹೊಂದಿದರು. ಆಗ ಅಂತರಿಕ್ಷದಲ್ಲೊಂದು ಅಶರೀರವಾಣಿ ನುಡಿಯಿತು.

೧೪ ಹೇ ಶಂಕರ! ಇಂದ್ರಾದಿದೇವತೆಗಳಿಗೆ ನೀನು ನಾಯಕನಾಗಿರುವಿ. ಇಂದ್ರಾದಿ ಸಮಸ್ತಪ್ರಪಂಚಕ್ಕೆ ನಿಯಾಮಕನಾಗಿರುವಿ. ನೀನು ಮಹಾ-ಸಮರ್ಥ. ಅಜ್ಞಾನಿಯಂತೆ ಹೇಗೆ ಕೋಪಿಸಿಕೊಳ್ಳುತ್ತಿರುವೆ? ನಿನ್ನ ಕೋಪವನ್ನು ಉಪಸಂಹಾರ ಮಾಡು.

೧೫ ಶತ್ರುಗಳಲ್ಲೂ ಕರುಣೆದೋರುವ ನೀನೇ ಕುಪಿತನಾದರೆ, ಅಜ್ಞಾನಿಗಳಾದ ಈ ಪ್ರಾಣಿಗಳೆಲ್ಲ ಯಾರನ್ನು ಶರಣು ಹೊಂದುವವು?

೧೬ ಹೀಗೆ ನುಡಿದ ಆಕಾಶವಾಣಿಯ ಮಾತನ್ನು ಕೇಳಿಯೂ ಕೂಡ ಶಂಕರನು ಸ್ವಲ್ಪ ಶಾಂತನಾದರೂ ಘೋರವಾದ ಧನುರ್ಬಾಣಗಳನ್ನು ಹಿಂತೆಗೆಯಲಿಲ್ಲ.

೧೭ ಇದೇ ಸಮಯಕ್ಕೆ ಉರಿವ ಅಗ್ನಿಯಂತೆ ಕಾಂತಿಯುಳ್ಳ ಕಂಗೊಳಿಸುವ ಕೆಂಪು ಜಟಾಜೂಟದಿಂದ ಕೂಡಿದ ಸಾಕ್ಷಾತ್ ಹರಿಯ ಅವತಾರನೆನಿಸಿದ,

ಭಕ್ತವಶ್ಯೋಽಗ್ರತಃಸ್ಥಾಯೀ ಸಕೃತ್‌ಕೀರ್ತನಮಾತ್ರತಃ ॥೧೮॥

ಸ್ಮೃತ್ವಾ ಮುಕ್ತಿಪ್ರದೋ ನೃಣಾಂ ಭಗವಾನ್ ಭಕ್ತವತ್ಸಲಃ ।
ಸಾಕ್ಷಾನ್ನಾರಾಯಣೋ ಯೋಗೀ ದೇವಾನಾಂ ಜ್ಞಾನದೋ ಹರಿಃ ॥೧೯॥

ತಂ ದೃಷ್ಟ್ವಾ ಸ ಹಿ ಚಾಪಂ ಚ ವಿಸೃಜ್ಯ ವಿನಯಾನ್ವಿತಃ ।
ನತ್ವಾ ಮೂರ್ಧ್ನಾ ಶಿವೋ ಭಕ್ತ್ಯಾ ಕೃತಾಂಜಲಿರಭಾಷತ ॥೨೦॥

ಶ್ರೀ ಈಶ್ವರ ಉವಾಚ-

ಭಗವನ್ ಯೋಗಿನಾಂ ಶ್ರೇಷ್ಠ ನಾರಾಯಣ ಜಗದ್ಗುರೋ ।
ಪೂತೋಽಸ್ಮ್ಯಹಂಕೃತಾರ್ಥೋಽಸ್ಮಿಸ್ವಯಂಯನ್ಮೇಽಕ್ಷಿಗೋಚರಃ ॥೨೧॥

ಸರ್ವಥಾ ಕೃತಕೃತ್ಯೋಽಸ್ಮಿ ದರ್ಶನಾತ್ತವ ಕೇಶವ ।
ಅದ್ಯ ಪ್ರಭಾತಂ ಸುದಿನಂ ತವ ವಿಷ್ಣೋಸ್ಸುದರ್ಶನಾತ್ ॥೨೨॥

ನೇತ್ರಸಾಫಲ್ಯಮಾಯಾತಂ ತಪಸಶ್ಚ ಫಲಂ ಮಹತ್ ।
ಇತ್ಯುಕ್ತ್ವಾ ಪೂಜಯಾಮಾಸ ಹರೋಽರ್ಘ್ಯಾದಿಭಿರಾದರಾತ್ ॥೨೩॥

---

೧೮ ಯೋಗಶಾಸ್ತ್ರಪ್ರವರ್ತಕನು, ಯೋಗಿಗಳಿಗೆ ಮೂಲಗುರುವೆನಿಸಿದವನೂ, ಭಕ್ತವಶ್ಯನೂ ಆದ ದತ್ತಾತ್ರೇಯನು ಭಕ್ತರು ಒಮ್ಮೆ ಸ್ಮರಿಸಿದ ಮಾತ್ರದಿಂದ ಅಲ್ಲಿ ಪ್ರತ್ಯಕ್ಷನಾದನು.

೧೯ ಸ್ಮರಣಮಾತ್ರದಿಂದ ಮುಕ್ತಿಯನ್ನು ನೀಡುವ ಷಡ್ಗುಣೈಶ್ವರ್ಯಸಂಪನ್ನನಾದ ದೇವತೆಗಳಿಗೂ ಜ್ಞಾನಪ್ರದನೆನಿಸಿದ ಸಾಕ್ಷಾನ್ನಾರಾಯಣನಾದ ದತ್ತಾತ್ರೇಯನು ಅಲ್ಲಿ ಬಂದು ನಿಂತನು.

೨೦ ದತ್ತಾತ್ರೇಯನನ್ನು ನೋಡಿ ವಿನಯದಿಂದ ಬಿಲ್ಲನ್ನು ಕೈಬಿಟ್ಟು ತಲೆಬಾಗಿ ನಮಸ್ಕರಿಸಿದ ಶಿವನು ಕೈಜೋಡಿಸಿ ಮಾತನಾಡಿದನು.

೨೧ ಹೇ ಯೋಗಿಶ್ರೇಷ್ಠನೇ! ಜಗದ್ಗುರುವೇ! ನಾರಾಯಣನೇ! ನೀನು ಸ್ವೇಚ್ಛೆಯಿಂದ ನನಗೆ ದರ್ಶನ ನೀಡಿರುವೆ. ಆದುದರಿಂದ ನಾನೂ ಶುದ್ಧನೂ ಕೃತಕೃತ್ಯನೂ ಆಗಿರುವೆ.

೨೨ ಕೇಶವ ನಿನ್ನ ದರುಶನದಿಂದ ನಾನು ಕೃತಕೃತ್ಯನಾಗಿರುವೆ. ನಿನ್ನ ದರುಶನ ಹೊಂದಿದ ಈ ಮುಂಜಾವಿನ ದಿನವೇ ಸುದಿನವು.

೨೩ ನಿನ್ನ ದರ್ಶನದಿಂದ ನನ್ನ ಕಣ್ಣುಗಳು ಸಫಲವಾದವು. ನಿನ್ನ ಈ ದರ್ಶನ ನನ್ನ ತಪಸ್ಸಿನ ಫಲವಾಗಿದೆ. ಹೀಗೆನ್ನುತ್ತ ಹರನು ಅರ್ಘ್ಯ-ಪಾದ್ಯಾದಿಗಳಿಂದ ದತ್ತಾತ್ರೇಯನನ್ನು ಪೂಜಿಸಿದನು.

ಆಸನೇ ಸಮುಪಾಸೀನಂ ಜ್ಞಾನಮುದ್ರಾನ್ವಿತಂ ಹರಿಮ್ ।
ವಿಷ್ಣೋ ಕಿಂ ಕರವಾಣೀತಿ ಕೃತಾಂಜಲಿರುಪಸ್ಥಿತಃ ॥೨೪॥

ಮೇಘಗಂಭೀರಯಾ ವಾಚಾ ತ್ರೈಲೋಕ್ಯಂ ಹರ್ಷಯನ್ ಹರಿಃ ।
ಮಂದಸ್ಮಿತಮುವಾಚೇದಂ ತತ್ತ್ವಮಾರ್ಗಂ ಪ್ರದರ್ಶಯನ್ ॥೨೫॥

ದತ್ತಾತ್ರೇಯ ಉವಾಚ-

ಈದೃಶಃ ಸಂಭ್ರಮಃ ಕೋಽಯಂ ಸ್ವಕೀಯೇಷು ಮಹೇಶ್ವರ ।
ನಾಸ್ತಿಕೇಷು ಚ ದೈತ್ಯೇಷು ತವ ಕೋಪಃ ಪ್ರದರ್ಶ್ಯತಾಮ್ ॥೨೬॥

ಯೇ ಧರ್ಮವಿಮುಖಾ ನಿತ್ಯಂ ಸಜ್ಜನಾ ಯೈಸ್ತು ನಿಂದಿತಾಃ ।
ಯೇಽಭ್ಯಸೂಯಂತಿ ಮಾಂ ಕ್ರೂರಾಸ್ತೇಷ್ವಯಂ ತ್ವತ್ಪರಾಕ್ರಮಃ ॥೨೭॥

ಯತ್ರ ಪೂಜಾ ಹರೇರ್ಲುಪ್ತಾ ಧನುರ್ಮಾಸ್ಯುಷಸೀಶ್ವರ ।
ನ ಯತ್ರ ಕಾರ್ತಿಕೇ ಪೂಜಾ ತತ್ರ ಸಂಪಾತ್ಯತಾಂ ಶರಃ ॥೨೮॥

ನ ಯತ್ರ ತುಲಸೀಪೂಜಾ ನ ಯತ್ರ ಶ್ರೋತ್ರಿಯಾರ್ಚನಮ್ ।
ನಾಸ್ತೀತಿ ಶಬ್ದೋ ಯತ್ರ ಸ್ಯಾತ್ ಯತ್ರ ಕೇವಲಕುಕ್ಷಿಭೃತ್ ॥೨೯॥

---

೨೪ ಜ್ಞಾನಮುದ್ರೆಯಿಂದೊಡಗೂಡಿ ಆಸನದಲ್ಲಿ ಕುಳಿತ ದತ್ತಾತ್ರೇಯನ ಎದುರಿಗೆ ಶಿವನು ಕೈಮುಗಿದು ಹೇ ವಿಷ್ಣುವೇ! ನಿನ್ನ ಸೇವೆಯನ್ನೇನು ಮಾಡಲಿ? ಎಂದು ಕೈಮುಗಿದು ಕೇಳಿದನು.

೨೫ ಶ್ರೀಹರಿಯಾದ ದತ್ತಾತ್ರೇಯನು ಮೇಘದಂತೆ ಗಂಭೀರವಾದ ಮಾತಿನಿಂದ ಮೂರು ಲೋಕಗಳಿಗೂ ಸಂತೋಷವಾಗುವಂತೆ ತತ್ತ್ವವನ್ನುಪದೇಶಿಸುತ್ತ ಮಂದಸ್ಮಿತ ಮುಖದಿಂದ ಹೇಳಿದನು.

೨೬ ಹೇ ಮಹೇಶ್ವರ! ನಿನ್ನವರಾದ ದೇವತೆಗಳಲ್ಲಿ ಈ ಸಮರದ ಸಂಭ್ರಮವೇಕೆ? ನಾಸ್ತಿಕರಾದವರಲ್ಲಿ ಹಾಗೂ ದೈತ್ಯರಲ್ಲಿ ನಿನ್ನ ಕೋಪವನ್ನು ಪ್ರದರ್ಶಿಸು.

೨೭ ನಿತ್ಯದಲ್ಲೂ ಧರ್ಮವಿಮುಖರಾದವರಲ್ಲಿ ಸಜ್ಜನನಿಂದಕರಲ್ಲಿ, ನನ್ನಲ್ಲಿ ಅಸೂಯೆ ಹೊಂದಿದ ಕ್ರೂರರಲ್ಲಿ ಈ ನಿನ್ನ ಪರಾಕ್ರಮದ ಪ್ರದರ್ಶನವಿರಲಿ.

೨೮ ಧನುರ್ಮಾಸದ ಉಷಃಕಾಲದ ಹರಿಪೂಜೆಯು ಎಲ್ಲಿ ನಿಂತು ಹೋಗಿದೆಯೋ, ಕಾರ್ತಿಕಮಾಸದ ಪೂಜೆಯು ಎಲ್ಲಿ ನಡೆಯುತ್ತಿಲ್ಲವೋ, ಅಲ್ಲಿ ಈ ನಿನ್ನ ಬಾಣವು ಬೀಳಲಿ.

೨೯ ಎಲ್ಲಿ ತುಲಸೀ ಪೂಜೆಯಾಗುವುದಿಲ್ಲವೋ, ಎಲ್ಲಿ ಶ್ರೋತ್ರಿಯಬ್ರಾಹ್ಮಣರು

**ಸಕೇಶಾ ವಿಧವಾ ಯತ್ರ ಯಾ ನಾರೀ ಕುಲಪಾಂಸನೀ ।**
**ಯಾ ಭರ್ತುಃ ಪ್ರತಿಕೂಲಾ ವಾ ತತ್ರಾಯಂ ಪಾತ್ಯತಾಂ ಶರಃ ॥೩೦॥**

**ಭರ್ತುರಗ್ರೇಽಥವಾ ಕುಪ್ಯೇತ್ ಸಾ ಚಂಡೀ ದಹ್ಯತಾಂ ಶರೈಃ ।**
**ಏಕಾದಶ್ಯಾಂ ತು ಯೋ ಭುಂಕ್ತೇ ನಾಚರೇದ್ದ್ವಾದಶೀವ್ರತಮ್ ॥೩೧॥**

**ದ್ವಾದಶ್ಯಾಂ ವಾ ಪರಾನ್ನಾದಿ ತ್ವದ್‌ಬಾಣಃ ತತ್ರ ಪಾತ್ಯತಾಮ್ ।**
**ಯೋ ಭುಂಕ್ತೇ ಹ್ಯನಿವೇದ್ಯಾನ್ನಂ ಸಕೇಶ್ಯನ್ನಂ ಚ ಯೋಽಶ್ನುತೇ ॥೩೨॥**

**ಯೋ ಭುಂಕ್ತೇ ಸಾಕ್ಷಿಹೀನೋ ವಾ ಸ ಪಾಪೀ ದಹ್ಯತಾಂ ಶರೈಃ ।**
**ಗೀತಾಶಾಸ್ತ್ರಂ ಚ ಯೋ ವಿದ್ವಾನನ್ಯಶಾಸ್ತ್ರಸಮಂ ವದೇತ್ ॥೩೩॥**

**ಯಸ್ತು ಭಾಗವತಂ ಶಾಸ್ತ್ರಂ ತತ್ವವೇದಾಂತಸಂಗ್ರಹಮ್ ।**
**ದೂಷಯೇದ್ದೋಷದೃಷ್ಟ್ಯಾ ಚ ಸ ಚಂಡಾಲಃ ಪ್ರಹನ್ಯತಾಮ್ ॥೩೪॥**

---

ಸತ್ಕಾರ ಹೊಂದುತ್ತಿಲ್ಲವೋ, ಬೇಡಿದವರಿಗೆ ಇಲ್ಲ ಎಂಬ ಶಬ್ದವು ಎಲ್ಲಿ ಕೇಳುವುದೋ, ಎಲ್ಲಿ ಕೇವಲ ಹೊಟ್ಟೆ ತುಂಬಿಸಿಕೊಳ್ಳುವವರಿದ್ದಾರೆಯೋ ಅಲ್ಲಿ ನಿನ್ನ ಈ ಬಾಣದ ಪ್ರಯೋಗವಿರಲಿ.

೩೦ ಕುಲಗೌರವವನ್ನು ನಾಶ ಮಾಡುವ ಸಕೇಶಳಾದ ವಿಧವೆಯು ಇರುವಲ್ಲಿ ಹಾಗೂ ಗಂಡನಿಗೆ ಪ್ರತಿಕೂಲಳಾದ ಹೆಂಡತಿಯಿರುವಲ್ಲಿ ಈ ಬಾಣವು ಬೀಳಲಿ.

೩೧ ಅಥವಾ ಪತಿಯ ಮೇಲೆ ಕೋಪಿಸಿ ನಿಂದಿಸುವ ಚಂಡಿಯಾದ ಸ್ತ್ರೀಯು ಬಾಣಗಳಿಂದ ದಹಿಸಲ್ಪಡಲಿ. ಏಕಾದಶಿಯಂದು ಯಾರು ಉಣ್ಣುವರೋ ಹಾಗೂ ದ್ವಾದಶಿ ವ್ರತವನ್ನು ಆಚರಿಸುವುದಿಲ್ಲವೋ,

೩೨ ದ್ವಾದಶಿಯಂದು ಯಾರು ಪರಾನ್ನ ಉಣ್ಣುವನೋ ಅಲ್ಲಿ ನಿನ್ನ ಬಾಣವು ಬೀಳಲಿ. ದೇವರಿಗೆ ನೈವೇದ್ಯ ಮಾಡದ ಹಾಗೂ ಸಕೇಶಿ ಸ್ತ್ರೀಯು ಮಾಡಿದ ಅನ್ನವನ್ನು ಯಾವನು ಉಣ್ಣುವನೋ,

೩೩ ಯಾರು ಸಾಕ್ಷಿಭೋಜನವನ್ನು ಮಾಡದೇ ಒಬ್ಬನೇ ಉಣ್ಣುವನೋ (ಸಾಕ್ಷಿಭೋಜನವೆಂದರೆ ಒಬ್ಬ ಬ್ರಾಹ್ಮಣನನ್ನಾದರೂ ಜೊತೆಗೆ ಕೂಡಿಸಿಕೊಂಡು ಊಟ ಮಾಡುವುದು) ಗೀತಾಶಾಸ್ತ್ರವನ್ನು ಯಾವ ವಿದ್ವಾಂಸನು ಬೇರೆ ಶಾಸ್ತ್ರಗಳಿಗೆ ಸಮವೆಂದು ಹೇಳುವನೋ,

೩೪ ತತ್ವಗಳ ಹಾಗೂ ವೇದಾಂತಶಾಸ್ತ್ರದ ಸಂಗ್ರಹ ರೂಪವಾದ ಭಾಗವತನನ್ನು

ಶ್ರುತೇರೇವ ಹಿ ಸದ್ಧರ್ಮೋ ಧರ್ಮಮೂರ್ತಿರ್ಹರಿಃ ಸ್ಮೃತಃ ।
ಹರಿರೇವ ಗತಿಸ್ತಸ್ಮಾತ್ ಹರಿದ್ರೋಹೀ ವಿನಶ್ಯತಿ ॥೩೫॥

ವೇದಪ್ರಣಿಹಿತೋ ಧರ್ಮಃ ಅಧರ್ಮಸ್ತದ್ವಿಪರ್ಯಯಃ ॥೩೬॥

ಧರ್ಮಮೇವೇಹ ತಸ್ಮಾದ್ವೈ ಶ್ರೇಯೋಽರ್ಥೀ ಪರಿಪಾಲಯನ್ ।
ಪ್ರೀತಯೇ ಸರ್ವದಾ ವಿಷ್ಣೋಃ ಭುಕ್ತಿಂ ಮುಕ್ತಿಂ ಚ ವಿಂದತಿ ॥೩೭॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ
ಅಷ್ಟಾದಶೋಽಧ್ಯಾಯಃ ॥

---

ಯಾರು ದೋಷದೃಷ್ಟಿಯಿಂದ ನಿಂದಿಸುವರೋ ಅಂತಹ ಚಂಡಾಲನು ನಿನ್ನ ಬಾಣದಿಂದ ಹಿಂಸಿಸಲ್ಪಡಲಿ.

೩೫ ಶುದ್ಧಧರ್ಮವು ವೇದಗಳಿಂದಲೇ ಸಿದ್ಧವಾಗುವುದು, ಶ್ರೀಹರಿಯೇ ಧರ್ಮಮೂರ್ತಿಯೆನಿಸಿದ್ದಾನೆ. ಶ್ರೀಹರಿಯೇ ಜೀವಿಗಳಿಗೆ ಗತಿಯಾಗಿದ್ದಾನೆ. ಆದುದರಿಂದ ಹರಿದ್ರೋಹಿಯು ನಾಶ ಹೊಂದುವನು.

೩೬ ವೇದದಿಂದ ಸಿದ್ಧವಾದುದು ಮಾತ್ರ ಧರ್ಮವೆನಿಸುವುದು. ವೇದವಿರೋಧಿಯಾದುದೆಲ್ಲ ಅಧರ್ಮವೇ ಸರಿ.

೩೭ ಆದುದರಿಂದ ಶ್ರೇಯಸ್ಸನ್ನು ಬಯಸುವವನು ವಿಷ್ಣುಪ್ರೀತಿಗಾಗಿ ಧರ್ಮವನ್ನೇ ಪರಿಪಾಲಿಸಿ ಭುಕ್ತಿ-ಮುಕ್ತಿಯನ್ನು ಹೊಂದುವನು.

॥ ಇಲ್ಲಿಗೆ ಹದಿನೆಂಟನೇ ಅಧ್ಯಾಯವು ಮುಗಿಯಿತು ॥

## ಅಥ ಏಕೋನವಿಂಶೋಽಧ್ಯಾಯಃ

ಶ್ರೀಈಶ್ವರ ಉವಾಚ-

ತ್ವನ್ಮಾಯಾಮೋಹಿತಾಸ್ಸರ್ವೇ ಭಗವನ್ನಸ್ಮದಾದಯಃ ।
ತ್ವತ್ಕಟಾಕ್ಷಂ ವಿನಾ ವಿಷ್ಣೋ ತವ ಮಾಯಾ ದುರತ್ಯಯಾ ॥೧॥

ಪಾಹಿ ಮಾಂ ಕೃಪಯಾ ಕೃಷ್ಣ ಶರಣಾಗತವತ್ಸಲ ।
ತ್ವತ್ಪಾದಪದ್ಮಂ ಭಗವನ್ ಪ್ರಪನ್ನೋಽಸ್ಮಿ ದಯಾನಿಧೇ ॥೨॥

ವಿನಾಶಾಯ ಮಹಾವಿಷ್ಣೋ ಉಲ್ಬಣಂ ಮಮ ತಾಮಸಮ್ ।
ಕಥಂ ನಷ್ಟಭಯೋಽಹಂ ಸ್ಯಾಂ ಸಾತ್ತ್ವಿಕಃ ಸಜ್ಜನಪ್ರಿಯಃ ॥೩॥

ಇತಿ ಪ್ರಣತಮೀಶಾನಂ ಪ್ರಾರ್ಥಯಂತಂ ಪುನಃ ಪುನಃ ।
ತಮುತ್ಥಾಪ್ಯ ಮಹಾತೇಜಾ ಮಂದಸ್ಮಿತಮುವಾಚ ಹ ॥೪॥

ಮನ್ಮಂತ್ರಜಾಪಕೋ ನಿತ್ಯಂ ಮನ್ಮಾಯಾಂ ಸೋಽಚಿರಾತ್ತರೇತ್ ।
ಯಸ್ತು ಸ್ವಧರ್ಮಹೀನಶ್ಚ ನಿರ್ಘೃಣೋ ಧನಲೋಲುಪಃ ।
ಮದ್ಭಕ್ತಸ್ತಾಮಸಃ ಪ್ರೋಕ್ತೋ ಮಾಂ ವ್ರಜೇದ್ದಶಜನ್ಮತಃ ॥೫॥

---

೧ ರುದ್ರದೇವರು ಹೇಳುತ್ತಾರೆ. ಭಗವಂತನೇ! ನಾವೆಲ್ಲ ನಿನ್ನ ಮಾಯೆಯಿಂದ ಮೋಹಿತರು. ನಿನ್ನ ಕೃಪಾಕಟಾಕ್ಷವಿಲ್ಲದೇ ನಿನ್ನ ಮಾಯೆಯನ್ನು ದಾಟಲು ಸಾಧ್ಯವಿಲ್ಲ.

೨ ಹೇ ದಯಾನಿಧಿಯೇ! ನಾನು ನಿನ್ನ ಪಾದಕಮಲವನ್ನು ಶರಣು ಹೊಂದಿದ್ದೇನೆ. ಶರಣಾಗತವತ್ಸಲನೆನಿಸಿದ ನೀನು ನನ್ನನ್ನು ಕೃಪೆಯಿಂದ ರಕ್ಷಿಸು.

೩ ಹೇ ಮಹಾವಿಷ್ಣುವೇ! ಜಗತ್ತಿನ ವಿನಾಶಕ್ಕಾಗಿ ನನ್ನ ತಮೋಗುಣವು ಉದ್ರಿಕ್ತವಾಗಿತ್ತು. ನಾನು ಹೇಗೆ ತಾಮಸಗುಣದ ಭಯದಿಂದ ಮುಕ್ತನಾಗಿ ಸಾತ್ವಿಕನೂ, ಸಜ್ಜನಪ್ರಿಯನೂ ಆಗುವೆನು?

೪ ಹೀಗೆಮತ್ತೆ ಮತ್ತೆ ಪ್ರಾರ್ಥಿಸುತ್ತ ನಮಸ್ಕರಿಸಿದ ರುದ್ರನನ್ನು ತೇಜೋಮಯನಾದ ದತ್ತಾತ್ರೇಯನು ಮೇಲೆತ್ತಿ ನಸುನಗುತ್ತ ಹೇಳಿದನು.

೫ ನಿರಂತರವಾಗಿ ನನ್ನ ಮಂತ್ರವನ್ನು ಜಪಿಸುವವನು ನನ್ನ ಮಾಯೆಯನ್ನು ಶೀಘ್ರದಲ್ಲೇ ದಾಟುವನು. ಸ್ವಧರ್ಮವನ್ನು ತ್ಯಜಿಸಿದವನೂ, ಕರುಣಾ-ರಹಿತನೂ, ಧನಲೋಭಿಯೂ, ಆದ ನನ್ನ ಭಕ್ತನು ತಾಮಸನೆನಿಸುವನು. ಅಂತಹವನು ಹತ್ತು ಜನ್ಮಗಳಿಂದ ನನ್ನನ್ನು ಹೊಂದುವನು.

ಸ್ವಧರ್ಮಕೃತ್ಫಲಾರ್ಥೀ ಯೋ ನಿಸ್ಪೃಹೋ ನಾತಿಹಿಂಸಕಃ ।
ಮದ್ಭಕ್ತೋ ರಾಜಸಃ ಪ್ರೋಕ್ತೋ ಮುಕ್ತೋ ಜನ್ಮತ್ರಯಾತ್ ಭವೇತ್ ॥೬॥

ಯಸ್ತು ಸ್ವಾಶ್ರಮಧರ್ಮಸ್ಥೋ ನಿಷ್ಕಾಮೋ ನಿಸ್ಪೃಹಃ ಸುಧೀಃ ।
ವಿರಕ್ತಃ ಸ್ವಕಲತ್ರಾದೌ ಮಯ್ಯೇವಾತ್ಮನಿವೇದನಃ ॥೭॥

ಹೃಷ್ಟೋ ಮಮಾವತಾರೇಷು ನಿತ್ಯೋತ್ಸವಪರಾಯಣಃ ।
ಮತ್ಕಥೈಕರತಿಃ ಶಾಂತಃ ಸಾತ್ವಿಕಃ ಸೋಽಯಮೇವ ಹಿ ॥೮॥

ಇತಿ ಶ್ರುತ್ವಾ ಹರೇರ್ವಾಕ್ಯಂ ಸ ಹೃಷ್ಟಃ ಕೇವಲಂ ಹರಃ ।
ಕೃತಾಂಜಲಿರುವಾಚೇದಂ ಗಿರಿಶಶ್ಚಂದ್ರಶೇಖರಃ ॥೯॥

ಕಥಂ ವಿಷ್ಣೋ ವಿಮೂಢೋಽಯಂ ತ್ವನ್ಮಾಯಾಮೋಹಿತೋಽನಿಶಮ್ ।
ಪ್ರವರ್ತೇತ ಸ್ವಧರ್ಮೇಷು ಪೂರ್ವಪ್ರಕೃತಿವಾಸಿತಃ ॥೧೦॥

ಯಸ್ತು ಸ್ವಧರ್ಮವರ್ತೀ ಸ್ಯಾತ್ ತವ ಮಾಯಾಂ ತರೇತ್ತು ಸಃ ।
ಇತಿ ಬ್ರವೀಷಿ ಚಾದ್ಯಸ್ತ್ವಂ ಮೋಹಯಸ್ಯೇವ ಮಾಂ ಹರೇ ॥೧೧॥

---

೬ ತನಗೆ ವಿಹಿತವಾದ ಧರ್ಮವನ್ನೇ ಫಲಾಪೇಕ್ಷೆಯಿಂದ ಆಚರಿಸುತ್ತ ಬೇರೆಲ್ಲ ವಿಷಯಗಳಲ್ಲಿ ಇಚ್ಛಾರಹಿತನಾಗಿ ಪ್ರಾಣಿಹಿಂಸೆಯನ್ನು ಮಾಡದವನು ನನ್ನ ರಾಜಸಭಕ್ತನೆನಿಸುವನು. ಅವನು ಮೂರು ಜನ್ಮಗಳಿಂದ ಮುಕ್ತನೆನಿಸುವನು.

೭ ಯಾರು ತನ್ನ ವಿಹಿತ ವರ್ಣಾಶ್ರಮಗಳ ಆಚಾರದಲ್ಲಿ ನಿರತನೋ, ಫಲೇಚ್ಛಾರಹಿತನೋ, ಆಶಾರಹಿತನೋ, ಜ್ಞಾನಿಯೋ, ತನ್ನ ಶರೀರ, ಪತ್ನಿ, ಪುತ್ರರು ಮೊದಲಾದವರಲ್ಲಿ ವಿರಕ್ತನೋ, ನನ್ನಲ್ಲೇ ಆತ್ಮಸಮರ್ಪಣೆಯನ್ನು ಮಾಡುವವನೋ,

೮ ನನ್ನ ಅವತಾರ ಲೀಲೆಗಳನ್ನು ಕೇಳಿ ಸಂತೋಷ ಹೊಂದಿದವನೋ, ನಿತ್ಯದಲ್ಲೂ ನನಗೆ ಉತ್ಸವ ಮಾಡಿಸುವವನೋ, ನನ್ನ ಕಥೆಯಲ್ಲೇ ಆಸಕ್ತನೋ, ಶಾಂತನೋ, ಭಗವನ್ನಿಷ್ಠನೋ, ಆತ ಸಾತ್ವಿಕ ಭಕ್ತನೆನಿಸುವನು.

೯ ಹೀಗೆಂದ ಹರಿಯ ಮಾತುಗಳನ್ನು ಕೇಳಿ ಸಂತುಷ್ಟನಾದ, ಚಂದ್ರನನ್ನು ಧರಿಸಿದ ಪಾರ್ವತೀಪತಿ ಹರನು ಕೈಮುಗಿದು ಮಾತನಾಡಿದನು.

೧೦ ಹೇ ಭಗವಂತನೇ! ಪೂರ್ವಸಂಸ್ಕಾರಗಳಿಂದ ಪ್ರೇರಿತರೂ, ನಿನ್ನ ಮಾಯೆಯಿಂದ ಮೋಹಿತರೂ ಮೂಢರೂ ಆದ ಈ ಜನಗಳು ಹೇಗೆ ತಮ್ಮ ಸ್ವಧರ್ಮಗಳಲ್ಲಿ ನಿರತರಾಗುವರು.

೧೧ ತನಗೆ ವಿಹಿತವಾದ ಧರ್ಮದಲ್ಲಿ ಆಸಕ್ತನಾದವನು ನಿನ್ನ ಮಾಯೆಯನ್ನು

**ದಾಸೋಽಹಂ ತೇ ಮಹಾಯೋಗಿನ್ ತ್ವಾಮಹಂ ಶರಣಂ ಗತಃ ।**
**ಧರ್ಮತತ್ತ್ವಂ ವಿಭೋ ಬ್ರೂಹಿ ಯೇನ ಸ್ಯಾಂ ತ್ವಜ್ಜನೋ ಹರೇ ॥೧೨॥**

**ಇತಿ ಸಂಪ್ರಾರ್ಥಿತೋ ವಿಷ್ಣುಃ ಶಂಕರೇಣ ಮುನೀಶ್ವರಃ ।**
**ತತೋಽಸ್ಮೈ ಭಗವದ್ಗೀತಾಂ ದತ್ತಾತ್ರೇಯ ಉಪಾದಿಶತ್ ॥೧೩॥**

**ತತ್ವಜ್ಞಾನವಿವಿತ್ಸುಂ ತಂ ಪುನಃ ಪುನರುಮಾಪತಿಮ್ ।**
**ಸಮ್ಯಗ್‌ಜ್ಞಾತ್ವಾ ಹರಿಃ ಶುದ್ಧಂ ಶುದ್ಧಭಕ್ತಿಮುಪಾದಿಶತ್ ॥೧೪॥**

**ತತಸ್ತ್ವಬ್ದಸಹಸ್ರಾಂತೇ ಜ್ಞಾನವಿಜ್ಞಾನಭಾಸುರಃ ।**
**ಭಗವದ್ಭಕ್ತಿನಿಷ್ಠೋಽಭೂದುಪಶಾಂತ ಉಮಾಪತಿಃ ।**
**ತಸ್ಮಾದ್ಭಜಧ್ವಮೀಶಂ ತಂ ತತ್ತ್ವೈವ ಸ್ಯಾತ್ತುನಿಶ್ಚಯಃ ॥೧೫॥**

**ಸೂತ ಉವಾಚ–**

**ಪರುಚ್ಛೇಪೋ ನೃಮೇಧೋಽಥ ಕೈಲಾಸಮಗಮದ್ಗಿರಿಮ್ ।**
**ತಾವೀಶಂ ಶಂಕರಂ ನತ್ವಾಪೃಚ್ಛತಾಂ ಮುನಿಪುಂಗವೌ ॥೧೬॥**

---

ದಾಟುವನೆಂದು ಹೇಳುವೆ. ಹೀಗೆ ಹೇಳುವ ನೀನು ನನ್ನನ್ನು ಮೋಹಿಸುತ್ತಿರುವೆ.

೧೨ ಹೇ ಮಹಾಯೋಗಿಯೇ! ನಾನು ನಿನಗೆ ಶರಣಾಗತನಾದ ನಿನ್ನ ದಾಸನಾಗಿರುವೆನು. ಯಾವುದರಿಂದ ನಾನು ನಿನಗೆ ಪ್ರಿಯನೆನಿಸುವೆನೋ ಅಂತಹ ಧರ್ಮತತ್ತ್ವವನ್ನರುಹು.

೧೩ ಈ ರೀತಿಯಾಗಿ ರುದ್ರದೇವರು ಪ್ರಾರ್ಥನೆ ಮಾಡಲು ಮುನೀಶ್ವರನಾದ ದತ್ತಾತ್ರೇಯನು ಶಂಕರನಿಗೆ ಭಗವದ್ಗೀತೆಯನ್ನು ಉಪದೇಶ ಮಾಡಿದನು.

೧೪ ತತ್ವಜ್ಞಾನವನ್ನು ತಿಳಿಯಲು ಅತಿ ಉತ್ಸುಕನಾದ ಶಂಕರನನ್ನು ಚೆನ್ನಾಗಿ ಶುದ್ಧವಾಗಿರುವನೆಂದು ಅರಿತು ದತ್ತಾತ್ರೇಯನು ಶುದ್ಧ ಭಕ್ತಿಯೋಗವನ್ನು ಉಪದೇಶ ಮಾಡಿದನು.

೧೫ ಆ ಉಪದೇಶದಿಂದ ಜ್ಞಾನ-ವಿಜ್ಞಾನಗಳಿಂದ ವಿರಾಜಿಸಿದ ರುದ್ರದೇವರು ಉಪಶಾಂತರಾಗಿ ಸಾವಿರ ವರ್ಷಗಳ ಅಂತರದಲ್ಲಿ ಭಗವಂತನಲ್ಲಿ ವಿಶೇಷಭಕ್ತಿಯನ್ನು ಹೊಂದಿದರು. ಆದುದರಿಂದ ಆ ರುದ್ರದೇವರನ್ನೇ ಸೇವಿಸಿರಿ. ಅವರಿಂದಲೇ ನಿಮಗೆ ತತ್ತ್ವ ನಿಶ್ಚಯವಾಗುವುದು.

೧೬ ಮುನಿಶ್ರೇಷ್ಠರಾದ ಪರುಚ್ಛೇಪ ಹಾಗೂ ನೃಮೇಧರು ಕೈಲಾಸಪರ್ವತಕ್ಕೆ ಹೋಗಿ ರುದ್ರದೇವರಿಗೆ ನಮಸ್ಕರಿಸಿ ತಮ್ಮ ವಿವಾದವನ್ನು ನಿರ್ಣಯಿಸಲು ಪ್ರಾರ್ಥಿಸಿದರು.

ಭಗವನ್ಸರ್ವಧರ್ಮಜ್ಞ ತತ್ತ್ವಂ ನಿರ್ಣೀಯ ನೌ ವದ ।
ತಯೋಸ್ಸಂವಾದಶಾಂತ್ಯರ್ಥಂ ಗೀತಾರ್ಥಮವಿಚಿಂತಯತ್ ॥೧೭॥

ಈಶ್ವರೋऽಪಿ ಮಹಾತೇಜಾಃ ಕ್ಷಣಂ ಧ್ಯಾತ್ವಾ ಸುವಿಸ್ಮಿತಃ ।
ಪುರೋಪದಿಷ್ಟಂ ಗೀತಾರ್ಥಂ ದತ್ತಾತ್ರೇಯೇಣ ಯೋಗಿನಾ ॥೧೮॥

ಭಕ್ತಿತತ್ತ್ವಂ ಸಮಾಲಕ್ಷ್ಯ ಹರಿಧ್ಯಾನಪರೋಭವತ್ ।
ಭಕ್ತಿಮೇವ ಸಮಾಲಕ್ಷ್ಯ ಮೋಕ್ಷಸಾಧನಮೀಶ್ವರಃ ।
ಮಾಯಾಂ ಭಗವತೋ ವಿಷ್ಣೋಃ ಪ್ರಶಶಂಸ ಪುನಃ ಪುನಃ ॥೧೯॥

ಜ್ಞಾನಮೇವ ಸಮಾಲಕ್ಷ್ಯ ಭಕ್ತಿಯೋಗಂ ಕ್ವಚಿತ್ ಸ್ಥಲೇ ।
ಉಭಯಂ ಚ ಕ್ವಚಿಚ್ಛಾಸ್ತ್ರೇ ಮುಕ್ತಿಹೇತುಂ ದದರ್ಶ ಸಃ ॥೨೦॥

ಸರ್ವಶಾಸ್ತ್ರೇಷು ಯದ್ಗೂಢಂ ಸರ್ವೋಪನಿಷದಾಂ ಫಲಮ್ ।
ಗೀತಾಯಾಂ ಶೌರಿಣಾ ಪ್ರೋಕ್ತಂ ಪಾರ್ಥಾಯ ದಯಯಾ ಸ್ಮರನ್ ॥೨೧॥

---

೧೭ ಹೇ ಸರ್ವಧರ್ಮಗಳನ್ನರಿತ ದೇವನೇ! ನಮ್ಮಿಬ್ಬರಿಗೆ ತತ್ವ ನಿರ್ಣಯಿಸಿ ಹೇಳಬೇಕು. ಎನ್ನಲು ಅವರಿಬ್ಬರ ವಿವಾದ ಶಾಂತಿಗೆ ಗೀತಾರ್ಥವನ್ನು ಚಿಂತಿಸಿದನು.

೧೮ ಮಹಾತೇಜಸ್ಸಂಪನ್ನನಾದ ಈಶ್ವರನು ಕೂಡ ಕ್ಷಣಕಾಲ ವಿಚಾರಿಸಿದನು. ಯೋಗಿಯಾದ ದತ್ತಾತ್ರೇಯನಿಂದ ಹಿಂದೆ ಉಪದೇಶಿಸಲ್ಪಟ್ಟ ಗೀತೆಯ ಅರ್ಥವನ್ನು ನೆನೆದು ವಿಸ್ಮಿತನಾದನು.

೧೯ ಮುಕ್ತಿಗೆ ಭಕ್ತಿಯೇ ಸಾಧನವೆಂದು ಸರಿಯಾಗಿ ತಿಳಿದವರು ರುದ್ರದೇವರು. ಅಂಥ ಭಕ್ತಿತತ್ವವನ್ನು ಚಿಂತಿಸುತ್ತಾ ರುದ್ರದೇವರು ಹರಿಧ್ಯಾನ ಪರರಾದರು. ಷಡ್ಗುಣೈಶ್ವರ್ಯ ಸಂಪನ್ನನಾದ ಮಹಾವಿಷ್ಣುವಿನ ಮಾಯೆಯನ್ನು ಮತ್ತೆ ಮತ್ತೆ ಪ್ರಶಂಸೆ ಮಾಡಿದರು.

೨೦ ಕೆಲವೆಡೆ ಜ್ಞಾನವನ್ನು ಕೆಲವೆಡೆ ಭಕ್ತಿಯೋಗವನ್ನು, ಕೆಲವು ಶಾಸ್ತ್ರಗಳಲ್ಲಿ ಎರಡನ್ನು ಮೋಕ್ಷಹೇತುವೆಂದು ಹೇಳುವುದನ್ನು ರುದ್ರದೇವರು ಚೆನ್ನಾಗಿ ಅರಿತಿದ್ದಾರೆ.

೨೧ ಎಲ್ಲ ಉಪನಿಷತ್ತುಗಳ ಫಲವೂ ಎಲ್ಲ ಶಾಸ್ತ್ರಗಳ ರಹಸ್ಯವೂ ಆದ ಭಗವದ್ಗೀತೆಯಲ್ಲಿ ಅರ್ಜುನನಿಗೆ ಶ್ರೀಕೃಷ್ಣನು ದಯೆಯಿಂದ ಉಪದೇಶ ನೀಡಿದುದನ್ನು ಸ್ಮರಿಸಿದರು.

ಭಕ್ತಿಮೇವ ಸಮಾಲಕ್ಷ್ಯ ಸಾಕ್ಷಾನ್ಮೋಕ್ಷೈಕಸಾಧನಮ್।
ಹರಿಪ್ರೋಕ್ತಂ ಪುರಾ ಯುದ್ಧೇ ಪಾರ್ಥಾಯ ಧ್ಯಾನಮಾಸ್ಥಿತಃ ॥೨೨॥

ಧ್ಯಾತ್ವೈವಂ ಹಿ ಚಿರಂ ಶಂಭುಃ ಮನಸಾ ಚಿಂತಯನ್ನಿದಮ್।
ಸುಲಭೋ ಭಕ್ತಿಮಾರ್ಗೋಽಯಂ ಸರ್ವವೇದಾಂತನಿಶ್ಚಿತಃ ।
ಮುಕ್ತ್ಯಾದರ್ಶೋಽಚ್ಯುತೇನೈವ ಗೋಪಿತೋಽಭೂತ್ಕೃತೋಽಪಿ ಹಿ ॥೨೩॥

ಬ್ರಹ್ಮಣಾ ಪ್ರಾರ್ಥಿತೋ ವಿಷ್ಣುರ್ಲೋಕಸೃಷ್ಟಿಪ್ರವರ್ತನೇ ।
ಪುನರಾಚ್ಛಾದಯಾಮಾಸ ಗೀತಾಂ ತಾಂ ಸರ್ವಮೋಹಿನೀಮ್ ॥೨೪॥

ನಷ್ಟಧರ್ಮೇ ಕಲೌ ಪಾಪೇ ದಯಯಾ ಭಗವಾನ್ಸ್ವಯಮ್ ।
ವ್ಯಾಜೀಕೃತ್ಯಾರ್ಜುನಂ ಶೌರಿಃ ಭಕ್ತಿತತ್ತ್ವಮದರ್ಶಯತ್ ।
ದುರಾಚಾರಾಃ ಕಲೌ ಮೂಢಾ ಭಕ್ತಿಯೋಗಂ ನ ಜಾನತೇ ॥೨೫॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ
ಏಕೋನವಿಂಶೋಽಧ್ಯಾಯಃ ॥

---

೨೨ ಹಿಂದೆ ಮಹಾಭಾರತ ಯುದ್ಧದ ಸಮಯದಲ್ಲಿ ಪಾರ್ಥನಿಗೆ ಶ್ರೀಹರಿಯು ಹೇಳಿದುದನ್ನು ವಿಚಾರಿಸಿದರು.

೨೩ ಬಹಳ ಸಮಯದವರೆಗೆ ಧ್ಯಾನಿಸಿ ತಿಳಿದ ರುದ್ರದೇವರು ಮನದಲ್ಲಿ ಹೀಗೆ ವಿಚಾರಿಸಿದರು. ಮೋಕ್ಷವನ್ನು ಸುಲಭವಾಗಿ ತೋರಿಸುವ ಕನ್ನಡಿಯಂತೆ ಇರುವ ಈ ಭಕ್ತಿಮಾರ್ಗವು ಎಲ್ಲ ಶಾಸ್ತ್ರಗಳಿಂದ ನಿಶ್ಚಿತವಾದುದು. ಭಗವಂತನಿಂದಲೇ ಹೇಳಲ್ಪಟ್ಟಿದ್ದರೂ ಕಾಣದಂತಾಗಿತ್ತು.

೨೪ ಲೋಕಗಳ ಸೃಷ್ಟಿಗಾಗಿ ಬ್ರಹ್ಮದೇವನಿಂದ ಪ್ರಾರ್ಥಿತನಾದ ಆ ವಿಷ್ಣುವು ಸರ್ವರನ್ನು ಮೋಹನಗೊಳಿಸುವುದಕ್ಕಾಗಿ ಆ ಗೀತಾರ್ಥವು ಮರೆಯುವಂತೆ ಮಾಡಿದನು.

೨೫ ಪಾಪಭೂಯಿಷ್ಠವಾದ ಕಲಿಯುಗವು ಹತ್ತಿರವಾಗಿ ಧರ್ಮವು ನಷ್ಟವಾಗಲು ಸ್ವಯಂ ಭಗವಂತನೇ ದಯೆಯಿಂದ ಅರ್ಜುನನನ್ನು ನಿಮಿತ್ತ ಮಾಡಿ ಭಕ್ತಿತತ್ವವನ್ನು ಅರುಹಿದನು. ಕಲಿಯುಗದಲ್ಲಿ ದುರಾಚಾರಿಗಳಾದ ಮೂರ್ಖರು ಭಕ್ತಿಯೋಗವನ್ನು ತಿಳಿಯರು.

॥ ಇಲ್ಲಿಗೆ ಹತ್ತೊಂಬತ್ತನೇ ಅಧ್ಯಾಯವು ಮುಗಿಯಿತು ॥

## ಅಥ ವಿಂಶೋಽಧ್ಯಾಯಃ

ಶ್ರೀಈಶ್ವರ ಉವಾಚ-

ಶ್ರುಣುಧ್ವಂ ಮುನಯೋ ಯೂಯಂ ಯನ್ನಿಮಿತ್ತಮಿಹಾಗತಾಃ ।
ಏನಿರ್ಣಯೋ ಮಹಾನತ್ರ ಸರ್ವಶಾಸ್ತ್ರೇಷು ದುರ್ಘಟಃ ॥೧॥

ತಸ್ಮಾತ್ಸರ್ವೇಷು ಶಾಸ್ತ್ರೇಷು ದುರ್ಘಟೇ ತತ್ತ್ವನಿರ್ಣಯೇ ।
ಸತ್ಯಮೇವೇಶ್ವರಂ ಬೀಜಂ ದೃಷ್ಟಾದೃಷ್ಟನಿಯಾಮಕಮ್ ॥೨॥

ಶಂಭೋರಿತ್ಥಂ ವಚಃ ಶ್ರುತ್ವಾ ಸರ್ವಶಾಸ್ತ್ರಾರ್ಥಸಂಗ್ರಹಮ್ ।
ನೃಮೇಧಶ್ಚ ಪರುಚ್ಛೇಪಸ್ತತ್ರೈವ ಶಿವಸನ್ನಿಧೌ ॥೩॥

ಮುನೀನಾಮಗ್ರತೋ ವಾಕ್ಯಮೂಚತುಸ್ಸತ್ಯಕಾರಣಮ್ ।
ಅಸ್ಮಿನ್ ವೃಕ್ಷೇ ಶಮೀಸಂಜ್ಞೇ ಪತ್ರಶಾಖೋಪಶೋಭಿತೇ ॥೪॥

ಅಗ್ನಿಮುತ್ಪಾದಯೇದ್ಯಸ್ತು ಸ ಬ್ರಹ್ಮಜ್ಞೋ ನ ಸಂಶಯಃ ।
ಸ ಏವ ತತ್ತ್ವಜ್ಞಾನೀ ಚ ಸ ಬ್ರಹ್ಮರ್ಷಿರಿಹಾವಯೋಃ ॥೫॥

---

೧ ರುದ್ರದೇವರು ಹೇಳುವರು. ಹೇ ಮುನಿಗಳೇ! ಕೇಳಿರಿ. ಯಾವ ತತ್ತ್ವನಿರ್ಣಯಕ್ಕಾಗಿ ನೀವಿಲ್ಲಿ ಬಂದಿರುವಿರೋ ಅಂಥ ನಿರ್ಣಯವು ಎಲ್ಲ ಶಾಸ್ತ್ರಗಳಿಂದಲೂ ನಿರ್ಣಯಿಸಲು ಕಷ್ಟಸಾಧ್ಯವಾದುದು.

೨ ಆದುದರಿಂದಲೇ ಸರ್ವಶಾಸ್ತ್ರಗಳಿಂದಲೂ ಕಷ್ಟಸಾಧ್ಯವಾದ ತತ್ತ್ವನಿರ್ಣಯಕ್ಕೆ ಕಣ್ಣಿಗೆ ಕಾಣುವ ಹಾಗೂ ಕಾಣದ ಎಲ್ಲದಕ್ಕೂ ನಿಯಾಮಕನಾದ ಈಶ್ವರನೇ ಸತ್ಯವಾಗಿಯೂ ಕಾರಣನಾಗಿದ್ದಾನೆ.

೩ ಸರ್ವಶಾಸ್ತ್ರಗಳ ಸಾರರೂಪವಾದ ಶಂಭುವಿನ ಈ ಮಾತನ್ನು ಕೇಳಿ ನೃಮೇಧ ಹಾಗೂ ಪರುಚ್ಛೇಪರು ಆ ಶಿವಸನ್ನಿಧಿಯಲ್ಲಿಯೇ

೪ ಎಲ್ಲ ಮುನಿಗಳ ಸಮ್ಮುಖದಲ್ಲಿ ಸತ್ಯ ನಿರ್ಣಾಯಕವಾದ ಮಾತನಾಡಿದರು. ಇಲ್ಲಿ ಎದುರಿಗೆ ತೋರುವ ಅನೇಕ ಶಾಖೋಪಶಾಖೆಗಳಿಂದ ಹಾಗೂ ಎಲೆಗಳಿಂದೊಡಗೂಡಿದ ಈ ಶಮೀ (ಬನ್ನಿಯ ಗಿಡ) ವೃಕ್ಷದಲ್ಲಿ ಅಗ್ನಿಯನ್ನು ಸೃಷ್ಟಿಸಿದವನು ಬ್ರಹ್ಮಜ್ಞಾನಿಯು.

೫ ಅವನೇ ತತ್ತ್ವಜ್ಞನು. ನಮ್ಮಿಬ್ಬರಲ್ಲಿ ಅವನೇ ಬ್ರಹ್ಮರ್ಷಿ ಎನಿಸುವನು. ಇದರಲ್ಲಿ ಸಂಶಯವಿಲ್ಲ.

**ತದಶಕ್ತಃ ಸಖೇ ಯಸ್ತು ಕೇವಲಂ ಬ್ರಾಹ್ಮಣೋ ಭವೇತ್ ।**
**ನಿಶ್ಚಿತ್ಯೇತ್ಥಂ ತು ತೌ ತತ್ರ ಸಿದ್ಧಾಂತಂ ವಾದಮೂರ್ಛಿತೌ ॥೬॥**

**ತತೋ ನೃಮೇಧೋ ಗಾಯತ್ರ್ಯಾ ಅಭಿಮಂತ್ರ್ಯ ಕರೇ ಜಲಮ್ ।**
**ವಹ್ನೇ ತ್ವಂ ವಿಕ್ರಮಸ್ವಾಸ್ಮಿನ್ ವೃಕ್ಷೇ ಸತ್ಯಂ ವಚೋ ಮಮ ॥೭॥**

**ಧರ್ಮ ಏವ ಪರಂಬ್ರಹ್ಮ ಮೋಕ್ಷಮಾರ್ಗೈಕಕಾರಣಮ್ ।**
**ಇತ್ಯುಕ್ತ್ವಾ ಪ್ರಾಕ್ಷಿಪತ್ತೀರ್ಥಂ ಸ್ವಕರಸ್ಥಂ ನಗೋಪರಿ ।**
**ತತ್ರ ಜಾತೋ ಮಹಾಧೂಮಃ ಸರ್ವಲೋಕಭಯಂಕರಃ ॥೮॥**

**ಪರುಚ್ಛೇಪೋಽಪಿ ವಿಪ್ರೇಂದ್ರಃ ಪ್ರಾಂಜಲಿಃ ಪ್ರಾಙ್ಮುಖಸ್ತದಾ ।**
**ಧ್ಯಾತ್ವಾ ವಿಷ್ಣುಮುವಾಚೇದಂ ಸರ್ವೇಷಾಮುಪಶೃಣ್ವತಾಮ್ ॥೯॥**

**ಶಮೀ ಶಮಯತೇ ಪಾಪಂ ಶಮೀ ಶತ್ರುವಿನಾಶಿನೀ ।**
**ಅರ್ಜುನಸ್ಯ ಧನುರ್ಧಾತ್ರೀ ರಾಮಸ್ಯ ಪ್ರಿಯದರ್ಶಿನೀ ॥೧೦॥**

**ಹರಿರೇವ ಪರಂಬ್ರಹ್ಮ ಪುರುಷಃ ಪ್ರಕೃತೇ ಪರಃ ।**
**ನಾರಾಯಣೋ ಜಗದ್ವ್ಯಾಪೀ ಭಗವಾನ್ ಭಕ್ತವತ್ಸಲಃ ॥೧೧॥**

---

೬ ಅಗ್ನಿಯನ್ನು ಹುಟ್ಟಿಸಲು ಅಶಕ್ತನಾದವನು ಕೇವಲ ಬ್ರಾಹ್ಮಣನೆನಿಸುವನು. ವಾದ ಕುಶಲರಾದ ಅವರಿಬ್ಬರು ಹೀಗೆಂದು ಸಿದ್ಧಾಂತವನ್ನು ಮಾಡಿಕೊಂಡರು.

೭ ಆನಂತರ ನೃಮೇಧನು ಹಸ್ತದಲ್ಲಿ ನೀರನ್ನು ಧರಿಸಿ ಗಾಯತ್ರಿಯಿಂದ ಅಭಿಮಂತ್ರಿಸಿ ಅಗ್ನಿಯೇ ಈ ವೃಕ್ಷದಲ್ಲಿ ತೋರು. ನನ್ನ ಮಾತು ಸತ್ಯವಾಗಲಿ.

೮ ಧರ್ಮವೇ ತತ್ತ್ವಜ್ಞಾನವೇ ಮೋಕ್ಷದ ಏಕೈಕ ಮಾರ್ಗವಾಗಿದೆ ಎಂದು ತನ್ನ ಕೈಯಲ್ಲಿನ ಜಲವನ್ನು ಆ ಶಮೀವೃಕ್ಷದ ಮೇಲೆ ಪ್ರೋಕ್ಷಿಸಿದನು. ಆಗ ಆ ವೃಕ್ಷದಿಂದ ಎಲ್ಲ ಲೋಕಗಳಿಗೆ ಭಯವನ್ನುಂಟು ಮಾಡುವ ದೊಡ್ಡದಾದ ಹೊಗೆಯು ಉತ್ಪನ್ನವಾಯಿತು. ಅಗ್ನಿಯು ಹುಟ್ಟಲೇ ಇಲ್ಲ.

೯ ಅನಂತರ ಬ್ರಾಹ್ಮಣಶ್ರೇಷ್ಠನಾದ ಪರುಚ್ಛೇಪನು ಪೂರ್ವಾಭಿಮುಖನಾಗಿ ನಿಂತು, ವಿಷ್ಣುವನ್ನು ಸ್ಮರಿಸಿ ಎಲ್ಲರೂ ಕೇಳುತ್ತಿರಲು ಹೀಗೆಂದನು.

೧೦ ಈ ಶಮಿಯು ಪಾಪವನ್ನು ಶಮನ ಮಾಡುತ್ತಾಳೆ. ಶತ್ರುಗಳನ್ನು ನಾಶಗೊಳಿಸುವಳು. ಅರ್ಜುನನ ಗಾಂಡೀವವನ್ನು ಧರಿಸಿದವಳು. ರಾಮನ ಪ್ರಿಯಪತ್ನಿಯಾದ ಸೀತೆಯನ್ನು ಮತ್ತೆ ರಾಮನಿಗೆ ತೋರಿದವಳು.

೧೧ ಶ್ರೀಹರಿಯೇ ಮಹಾಲಕ್ಷ್ಮೀಗಿಂತಲೂ ಉತ್ತಮನಾದ ಪುರುಷನೂ,

**ಈಶ್ವರೋ ಯದಿ ಸರ್ವೇಷಾಂ ಶರಣಾಗತವತ್ಸಲಃ ।**
**ತದ್ಭಕ್ತಿರೇವ ಸರ್ವೇಷಾಂ ತತ್ತ್ವಾನಾಮಪಿ ದೀಪಿಕಾ ॥೧೨॥**

**ಮೋಕ್ಷದಾ ಯದಿ ಸತ್ಯೇನ ವೃಕ್ಷೇಽಸ್ಮಿನ್ನಗ್ನಿರಸ್ತ್ವಿಹ ।**
**ತತೋಽಭವನ್ಮಹಾವಹ್ನಿಸ್ತದ್ವಾಕ್ಯಸಮನಂತರಮ್ ॥೧೩॥**

**ಜ್ವಾಲಾಮಾಲೀ ಶಮೀವೃಕ್ಷೋ ಘೃತಸಿಕ್ತೋ ಯಥಾಽಧ್ವರೇ ।**
**ತಂ ದೃಷ್ಟ್ವಾಸುಮಹಾವಹ್ನಿಂ ಪ್ರಲಯಾರ್ಕಸಮಪ್ರಭಮ್ ॥೧೪॥**

**ಶಂಕರಶ್ಚ ಮುನೀಂದ್ರಾಸ್ತೇ ವಿಸ್ಮಯಂ ಪರಮಂ ಯಯುಃ ।**
**ಪ್ರಶಶಂಸುಃ ಪರುಚ್ಛೇಪಂ ಸಾಧು ಸಾಧ್ವಿತಿ ದೇವತಾಃ ॥೧೫॥**

**ದೇವದುಂದುಭಯೋ ನೇದುಃ ಪುಷ್ಪವೃಷ್ಟಿರ್ಮಹತ್ಯಭೂತ್ ।**
**ಗಂಧರ್ವಾಶ್ಚ ಜಗುರ್ಹೃಷ್ಟಾಃ ನನೃತುಶ್ಚಾಪ್ಸರೋಗಣಾಃ ॥೧೬॥**

**ಸರ್ವೇ ಮುಮುದಿರೇ ಲೋಕಾ ಮಾಹಾತ್ಮ್ಯಂ ವೀಕ್ಷ್ಯ ವೈ ಹರೇಃ ।**

---

ಪರಬ್ರಹ್ಮನೂ ಆಗಿದ್ದಾನೆ. ಭಕ್ತವತ್ಸಲನೆನಿಸಿದ ಭಗವಾನ್ ನಾರಾಯಣನು ಜಗತ್ತನ್ನು ವ್ಯಾಪಿಸಿದ್ದಾನೆ.

೧೨ ಭಗವಂತನೇ ಎಲ್ಲ ಶರಣಾಗತರ ರಕ್ಷಕನಾದರೆ, ಈಶ್ವರ ಭಕ್ತಿಯೇ ಎಲ್ಲರಿಗೂ ತತ್ವವನ್ನು ತೋರಿಸುವುದಾದರೇ,

೧೩ ಆ ಭಕ್ತಿಯೇ ಮೋಕ್ಷಸಾಧನವೆನ್ನುವುದು ಸತ್ಯವಾದರೆ ಈ ಶಮೀವೃಕ್ಷದಲ್ಲಿ ಅಗ್ನಿಯು ತೋರಲಿ. ಹೀಗೆನ್ನುತ್ತಿದ್ದಂತೆ ಆ ವೃಕ್ಷದಿಂದ ದೊಡ್ಡದಾದ ಅಗ್ನಿಯು ಪ್ರಜ್ವಲಿಸಿತು.

೧೪ ತುಪ್ಪದಲ್ಲಿ ತೊಯ್ದ ಯಜ್ಞದ ಕಟ್ಟಿಗೆಯಂತೆ ಜ್ವಾಲೆಯ ಮಾಲೆಗಳಿಂದ ಆ ಶಮೀವೃಕ್ಷವು ಪ್ರಲಯಕಾಲದ ಸೂರ್ಯನಂತೆ ಕಂಗೊಳಿಸಿತು.

೧೫ ಆ ಮಹಾನ್ ಅಗ್ನಿಯನ್ನು ನೋಡಿ ಶಂಕರ ಹಾಗೂ ಮುನಿಗಳು ಅತ್ಯಂತ ವಿಸ್ಮಿತರಾದರು. ದೇವತೆಗಳು ಸಾಧು ಸಾಧು ಎಂದು ಪರುಚ್ಛೇಪನನ್ನು ಪ್ರಶಂಸೆ ಮಾಡಿದರು.

೧೬ ದೇವತೆಗಳು ದುಂಧುಭಿಯೇ ಮೊದಲಾದ ವಾದ್ಯಗಳನ್ನು ಬಾರಿಸಿದರು. ಭಾರೀ ಪುಷ್ಪವೃಷ್ಟಿಯಾಯಿತು. ಗಂಧರ್ವರು ಸಂತೋಷದಿಂದ ಹಾಡಿದರೆ ಅಪ್ಸರೆಯರು ನರ್ತನ ಮಾಡಿದರು.

ತತೋ ನೃಮೇಧಃ ಪ್ರಹಸನ್ ಹ್ರಿಯಾ ಕಿಂಚಿದವಾಙ್ಮುಖಃ ॥೧೭॥

ಪರುಚ್ಛೇಪಂ ಬ್ರಹ್ಮನಿಷ್ಠಂ ಬಭಾಷೇ ಪ್ರಾಂಜಲಿಃ ಸುಧೀಃ ।
ಬ್ರಹ್ಮರ್ಷೇ ಭೋ ಮಹಾಯೋಗಿನ್ ಬ್ರಹ್ಮಜ್ಞಾನೀ ತ್ವಮೇವ ಹಿ ॥೧೮॥

ಅಹಂ ಸಮಾಧಿಮಾನ್ ಬ್ರಹ್ಮನ್ ವಿಜ್ಞಾನೀತಿ ಕಥಾ ಮಮ ।
ಯಸ್ಮಾತ್ಸಭಾಯಾಂ ವೃಕ್ಷೇಽಸ್ಮಿನ್ ಅಗ್ನಿಂ ನ ಜನಯಾಮ್ಯಹಮ್ ॥೧೯॥

ಅಹೋ ಕ್ಷಾಂತಿರಹೋ ಕ್ಷಾಂತಿಸ್ತವೈವ ಜ್ಞಾನಮುತ್ತಮಮ್ ।
ತ್ವದ್ಭಕ್ತಿರೇವ ಬ್ರಹ್ಮಜ್ಞ ತ್ವದ್ವಿದ್ಯೈವ ಶ್ರುತೇರ್ಮತಾ ॥೨೦॥

ಇತಿ ಬ್ರುವನ್ ಮಹಾಯೋಗೀ ಪರುಚ್ಛೇಪಂ ಹರೇಃ ಪ್ರಿಯಮ್ ।
ಅಪರಾಧಂ ಕ್ಷಮಸ್ವೇತಿ ವವಂದೇ ಶಿರಸಾ ಮುನಿಮ್ ॥೨೧॥

ಅತಿಭೀತಂ ಪರುಚ್ಛೇಪ ಉಪಶಾಂತೇನ ಚೇತಸಾ ।
ಸಹಸಾ ತಂ ಸಮುತ್ಥಾಪ್ಯ ಸಸ್ವಜೇ ಪ್ರೇಮಯಾರ್ದ್ರಧೀಃ ॥೨೨॥

ಉವಾಚೇದಂ ವಚಃ ಸತ್ಯಂ ನಮೇಯಂ ವಿನತಂ ಸಖೇ ।

---

೧೭ ಶ್ರೀಹರಿಯ ಮಹಾಮಹಿಮೆಯನ್ನು ನೋಡಿ ಎಲ್ಲ ಲೋಕದ ಜನಗಳೂ ಸಂತುಷ್ಟರಾದರು. ಅನಂತರ ನೃಮೇಧನು ನಗುತ್ತ ನಾಚಿಕೆಯಿಂದ ಮುಖವನ್ನು ಕೆಳಗೆ ಬಾಗಿಸಿದನು.

೧೮ ಬ್ರಹ್ಮರ್ಷಿಯಾದ ಪರುಚ್ಛೇಪನನ್ನು ಕುರಿತು ಕೈಜೋಡಿಸಿ ಹೇಳಿದನು. ಹೇ ಮಹಾಯೋಗಿಯಾದ ಬ್ರಹ್ಮರ್ಷಿಯೇ! ನೀನೇ ನಿಜವಾಗಿಯೂ ಬ್ರಹ್ಮಜ್ಞಾನಿಯು.

೧೯ ಹೇ ಬ್ರಾಹ್ಮಣಶ್ರೇಷ್ಠನೇ! ನಾನು ನಿರ್ಣಯ ಹೊಂದಿದ್ದೇನೆ. ನಾನು ಜ್ಞಾನಿಯೆಂಬುದು ಕೇವಲ ಕಥೆಯಷ್ಟೇ ಸರಿ. ಏಕೆಂದರೆ ಈ ಸಭೆಯಲ್ಲಿ ನಾನು ಶಮೀವೃಕ್ಷದಲ್ಲಿ ಅಗ್ನಿಯನ್ನು ಹುಟ್ಟಿಸಲು ಸಮರ್ಥನಾಗಲಿಲ್ಲ.

೨೦ ನಿನ್ನ ಜ್ಞಾನವೇ ವೇದಗಳಿಗೆ ಸಮ್ಮತವಾದುದು. ನಿನ್ನ ಭಕ್ತಿಯೇ ಅತ್ಯುತ್ತಮವಾದುದು. ಆ ಭಕ್ತಿಯೇ ಮುಕ್ತಿಗೆ ಸಾಧನವಾಗಿದೆ. ನಿನ್ನದು ಅದೆಂತಹ ಸಾಮರ್ಥ್ಯ.

೨೧ ಹೀಗೆನ್ನುತ್ತ ಯೋಗಿಯಾದ ನೃಮೇಧನು ಹರಿಪ್ರಿಯನಾದ ಪರುಚ್ಛೇಪನನ್ನು ಅಪರಾಧವನ್ನು ಕ್ಷಮಿಸು ಎಂದು ಪ್ರಾರ್ಥಿಸಿ ತಲೆಬಾಗಿ ನಮಸ್ಕರಿಸಿದನು.

೨೨ ಬಹಳ ಭೀತನಾದ ನೃಮೇಧನನ್ನು ಪರುಚ್ಛೇಪನು ಶಾಂತವಾದ ಮನಸ್ಸಿನಿಂದ ಮೇಲೆತ್ತಿ ಪ್ರೇಮದಿಂದ ಆಲಿಂಗಿಸಿಕೊಂಡನು.

ಆವಯೋಃ ಕಲಹೋಽಯಂ ಹಿ ವೇದಾಂತಾರ್ಥಪ್ರದರ್ಶಕಃ ॥೨೩॥

ವೇದಶಾಸ್ತ್ರವಿನೋದೇನ ಕಾಲಕ್ಷೇಪೋ ಹಿ ಧೀಮತಾಮ್ ।
ಏತಾದೃಶಪ್ರಸಂಗೋಽಸ್ತು ಸುಪ್ರಿಯೋ ಜನ್ಮಜನ್ಮನಿ ॥೨೪॥

ಭಗವನ್ಮಹಿಮಾ ನಿತ್ಯಂ ಸಂಸಾರಾಂಬುಧಿತಾರಕಃ ।
ಹರೇರನುಗ್ರಹೋಽಯಂ ಹಿ ವೇದಾಂತಾರ್ಥವಿಚಾರಣಾ ।
ವಿಷ್ಣುಮಾಯಾವೃತಾ ಯೇ ವೈ ಭವೇಯುರ್ಮಮತಾಧಿಯಃ ॥೨೫॥

ವೇದಶಾಸ್ತ್ರವಿನೋದೇನ ಕಾಲೋ ಗಚ್ಛತಿ ಧೀಮತಾಮ್ ।
ಇತರೇಷಾಂ ತು ಮೂರ್ಖಾಣಾಂ ನಿದ್ರಯಾ ಗೃಹಚೇಷ್ಟಯಾ ॥೨೬॥

ತತಃ ಪರುಚ್ಛೇಪಮಹೋಪಶಾಂತಿಂ
ನಿಶಾಮ್ಯ ದೇವಾ ಮುನಯಶ್ಚ ಸಿದ್ಧಾಃ ।
ಸುವಿಸ್ಮಿತಾಸ್ತಂ ಪ್ರಶಂಸಂಸುರುಚ್ಚೈಃ
ತ್ವಮೇವ ವಿಪ್ರೋತ್ತಮ ಈಶ್ವರೇ ವೈ ॥೨೭॥

---

೨೩ ಮತ್ತು ಈ ರೀತಿ ಸತ್ಯವಾದ ಮಾತನ್ನಾಡಿದನು. ಗೆಳೆಯನೇ! ನನಗೆ ನಮಸ್ಕರಿಸುವುದು ಬೇಡ. ನಮ್ಮಿಬ್ಬರ ಈ ವಿವಾದವು ವೇದಾಂತದ ಅರ್ಥವನ್ನು ಎತ್ತಿ ತೋರಿಸುವುದು.

೨೪ ಜ್ಞಾನಿಗಳು ವೇದಶಾಸ್ತ್ರಗಳ ವಿಚಾರದಲ್ಲಿಯೇ ಕಾಲ ಕಳೆಯುವರು. ಅತಿಪ್ರಿಯವಾದ ಇಂತಹ ಪ್ರಸಂಗವು ಪ್ರತಿ ಜನ್ಮದಲ್ಲಿಯೂ ದೊರಕಲಿ.

೨೫ ಭಗವಂತನ ಮಹಿಮೆಯ ಸ್ಮರಣೆಯು ಯಾವಾಗಲೂ ಸಂಸಾರಸಾಗರವನ್ನು ದಾಟಿಸುವುದು. ಈ ರೀತಿ ವೇದಾಂತರ್ಥ ವಿಚಾರಣೆಯ ಅವಕಾಶ ಒದಗಿದುದು ಭಗವಂತನ ಅನುಗ್ರಹವೇ ಸರಿ. ವಿಷ್ಣುಮಾಯೆಯಿಂದ ಸುತ್ತಲ್ಪಟ್ಟವರು ನಾನು ನನ್ನದೆಂಬ ಮಮತೆಯ ಬುದ್ಧಿಯಿಂದ ಯುಕ್ತರಾಗುವರು.

೨೬ ಜ್ಞಾನಿಗಳು ಸಮಯವನ್ನು ವೇದಶಾಸ್ತ್ರಗಳ ಅರ್ಥವನ್ನರಿಯುತ್ತ ಕಳೆಯುತ್ತಾರೆ. ಬೇರೆ ಮೂರ್ಖ ಜನಗಳು ನಿದ್ರೆಯಲ್ಲಿ ಸಂಸಾರದ ಕೆಲಸಗಳಲ್ಲಿ ಕಾಲ ಕಳೆಯುವರು.

೨೭ ಆನಂತರ ಪರುಚ್ಛೇಪನ ಮಹಾಸಾಧನೆಯನ್ನು ಅರಿತ ದೇವತೆಗಳು, ಮುನಿಗಳು, ಸಿದ್ಧರು ಆಶ್ಚರ್ಯದಿಂದ ಹೇ ಬ್ರಾಹ್ಮಣಶ್ರೇಷ್ಠನೇ! ಭಗವಂತನ ದೃಷ್ಟಿಯಲ್ಲಿ ನೀನೇ ಶ್ರೇಷ್ಠನು ಎಂದು ಶ್ಲಾಘಿಸಿದರು.

ವಿಪ್ರಯೋಃ ಸುಮಹಾನ್ಯಸ್ಮಾತ್ ವಿವಾದಃ ಶಮಿತಶ್ಚಿರಾತ್ ।
ಶಮೀತಿ ವಹ್ನಿಗರ್ಭಶ್ಚೇತ್ಯೇವಂ ನಾಮ್ನಾಭವತ್ತರುಃ ॥೨೮॥

ಸೂತ ಉವಾಚ-

ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋऽಹಂ ಮುನೀಶ್ವರಾಃ ।
ಸಕೃತ್ ಶ್ರುತ್ವೇದಮಾಖ್ಯಾನಂ ಮುಚ್ಯತೇ ಸರ್ವಪಾತಕೈಃ ॥೨೯॥

ಬ್ರಹ್ಮೋಪಾಖ್ಯಾನಮಾಯುಷ್ಯಂ ಪುತ್ರಪೌತ್ರವಿವರ್ಧನಮ್ ।
ಯಃ ಪಠೇತ್ ಶ್ರುಣುಯಾದೇತನ್ಮೂಢೋऽಪಿ ಜ್ಞಾನವಾನ್ ಭವೇತ್ ॥೩೦॥

ಏತದಧ್ಯಾಯಪಠನಾತ್ ಬ್ರಾಹ್ಮಣೋ ವೈಷ್ಣವೋ ಭವೇತ್ ।
ಇತಿಹಾಸಂ ಯಃ ಶ್ರುಣುಯಾಚ್ಚಾಪಾರ್ಕೇ ಹರಿಸನ್ನಿಧೌ ।
ಉಷಃ ಸ್ನಾತ್ವಾ ಸಕೃದ್ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥೩೧॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ
ವಿಂಶೋऽಧ್ಯಾಯಃ ॥

---

೨೮ ಬ್ರಾಹ್ಮಣರಿಬ್ಬರ ಮಹಾವಿವಾದವು ಶಮನವಾದುದರಿಂದ ಶಮೀ ಎಂದು ಹಾಗೂ ಅದರಲ್ಲಿ ಅಗ್ನಿಜ್ವಲನವಾದುದರಿಂದ ಅಗ್ನಿಗರ್ಭ ಎಂದೂ ಆ ವೃಕ್ಷವು ಹೆಸರನ್ನು ಪಡೆಯಿತು.

೨೯ ನಿಮ್ಮಿಂದ ಕೇಳಲ್ಪಟ್ಟನಾನು ಈ ಎಲ್ಲವನ್ನು ನಿಮಗೆ ಹೇಳಿದ್ದೇನೆ. ಒಮ್ಮೆಯಾದರೂ ಇದನ್ನು ಕೇಳಿದವನು ಎಲ್ಲ ಪಾಪಗಳಿಂದ ಮುಕ್ತನಾಗುವನು.

೩೦ ಆಯುಷ್ಯ, ಮಕ್ಕಳು, ಮೊಮ್ಮಕ್ಕಳು, ಮುಂತಾದ ಎಲ್ಲ ಸಂಪತ್ತನ್ನು ನೀಡುವ ಈ ಉಪಾಖ್ಯಾನವನ್ನು ಹೇಳುವವನು ಹಾಗೂ ಕೇಳಿದವನು ಮೂಢನಾದರೂ ಜ್ಞಾನಿಯೆನಿಸುವನು.

೩೧ ಈ ಅಧ್ಯಾಯವನ್ನು ಪಠಿಸುವ ಬ್ರಾಹ್ಮಣನು ವಿಷ್ಣುಭಕ್ತನೆನಿಸುವನು. ಧನುರ್ಮಾಸದಲ್ಲಿ ಹರಿಸನ್ನಿಧಾನದಲ್ಲಿ ಉಷಃಕಾಲದಲ್ಲಿ ಸ್ನಾನ ಮಾಡಿ ಒಮ್ಮೆಯಾದರೂ ಕೇಳಿದವನು ಎಲ್ಲ ಪಾಪಗಳಿಂದಲೂ ಮುಕ್ತನಾಗುವನು.

॥ ಇಲ್ಲಿಗೆ ಇಪ್ಪತ್ತನೇ ಅಧ್ಯಾಯವು ಮುಗಿಯಿತು ॥

## ಅಥ ಏಕವಿಂಶೋಽಧ್ಯಾಯಃ

**ಸೂತ ಉವಾಚ-**

**ಶ್ರುತ್ವಾ ಕೃಷ್ಣೇರಿತಂ ತತ್ತ್ವಂ ಗುಪ್ತಂ ಶಾಸ್ತ್ರೇಷು ಸರ್ವತಃ ।**
**ಭಕ್ತಾಧೀನಂ ಚ ತಂ ಜ್ಞಾತ್ವಾ ಸ್ಮಿತ್ವಾ ಕಿಂಚಿದಥಾಽಬ್ರವೀತ್ ॥೧॥**

**ಭಗವನ್ ಬ್ರೂಹಿ ಮೇ ಕೃಷ್ಣ ಸ್ವರೂಪಂ ತು ಕಲೇಃ ಸಖೇ ।**
**ಕಲಿಚಿಹ್ನಂ ಚ ಕೀದೃಕ್ ಸ್ಯಾತ್ಕೋ ವಾ ಕ್ರೂರಂ ಕಲಿಂ ಜಯೇತ್ ॥೨॥**

**ಇತಿ ಭಕ್ತೇನ ಸಂಪೃಷ್ಟೋ ಭಕ್ತಿಪಾಶೇನ ಯಂತ್ರಿತಃ ।**
**ಸ್ಮಿತಪೂರ್ವಮಥೋವಾಚ ಕೃಷ್ಣಸ್ತಂ ಕಮಲೇಕ್ಷಣಃ ॥೩॥**

**ಶ್ರೀಕೃಷ್ಣ ಉವಾಚ-**

**ಶ್ರುಣು ಭದ್ರ ಪ್ರವಕ್ಷ್ಯಾಮಿ ತತ್ತ್ವಂ ವೇದಾಂತನಿಶ್ಚಿತಮ್ ।**
**ಯದ್ ಜ್ಞಾತ್ವಾ ನೇಹ ಭೂಯೋಽನ್ಯತ್ ಜ್ಞೇಯಮಸ್ತಿ ಜಗತ್ತ್ರಯೇ ॥೪॥**

**ದೇಹಜಾಡ್ಯಾತ್ಸಮುತ್ಪನ್ನಂ ಜೃಂಭಣಂ ತು ವಿಧೇಃ ಪುರಾ ।**
**ತದೋತ್ಪನ್ನಾಃ ಸ್ತ್ರಿಯಸ್ತತ್ರ ಧೈರ್ಯಧರ್ಮವಿನಾಶನಾಃ ॥೫॥**

**ತತ್ಸ್ವರೂಪಂ ಕಲಿಃ ಪ್ರೋಕ್ತಃ ಭಕ್ತಿಜ್ಞಾನವಿನಾಶನಃ ।**
**ಜೇತಾ ಯಸ್ತು ವಶೀ ನಾರೀಂ ಸ ನರಸ್ತು ತರೇತ್ಕಲಿಮ್ ॥೬॥**

---

೧ ಕೃಷ್ಣನು ಹೇಳಿದ ಸರ್ವಶಾಸ್ತ್ರಗಳಲ್ಲಿ ಅಡಕವಾದ ತತ್ವವನ್ನು ಕೇಳಿ ಕೃಷ್ಣನು ಭಕ್ತಾಧೀನನೆಂದರಿತು ಮುಗುಳು ನಗುತ್ತ ದಧಿಪಾಲನು ಮಾತನಾಡಿದನು.

೨ ಹೇ ಭಗವದವತಾರನಾದ ಕೃಷ್ಣನೇ! ನನಗೆ ಕಲಿಯ ಸ್ವರೂಪವನ್ನು, ಕಲಿಯ ಚಿಹ್ನೆಗಳನ್ನು ಹಾಗೂ ಯಾರು ಕಲಿಯನ್ನು ಜಯಿಸುವರೆಂಬುದನ್ನು ಹೇಳು.

೩ ಭಕ್ತನಾದ ದಧಿಪಾಲನಿಂದ ಹೀಗೆ ಕೇಳಲ್ಪಟ್ಟ ಭಕ್ತಿಪಾಶ ವಶನಾದ ನಲಿನ-ನೇತ್ರನಾದ ಕೃಷ್ಣನು ನಗುತ್ತ ಹೀಗೆ ನುಡಿದನು.

೪ ಹೇ ಪ್ರಿಯನೇ! ವೇದಾಂತದಲ್ಲಿ ನಿಶ್ಚಿತವಾದ ತತ್ವವನ್ನು ಹೇಳುವೆನು ಕೇಳು. ಇದನ್ನು ತಿಳಿದ ನಂತರ ಮತ್ತೇನನ್ನೂ ತಿಳಿಯಬೇಕಾದುದಿಲ್ಲ.

೫ ಹಿಂದೆ ಬ್ರಹ್ಮದೇವರು ಆಕಳಿಸಲು ಧರ್ಮ-ಧೈರ್ಯಗಳನ್ನು ನಾಶಗೊಳಿಸುವ ಸ್ತ್ರೀಯರು ಉತ್ಪನ್ನರಾದರು.

೬ ಜ್ಞಾನ, ಭಕ್ತಿಗಳನ್ನು ನಾಶಗೊಳಿಸುವ ಕಲಿಯು ಸ್ತ್ರೀ ಸ್ವರೂಪನಾಗಿದ್ದಾನೆ. ಸ್ತ್ರೀ ಆಕರ್ಷಣೆಯನ್ನು ಗೆದ್ದ ಮನುಜನು ಕಲಿಯನ್ನು ಗೆಲ್ಲುವನು.

ಕಲಿರೇವ ಸ್ತ್ರಿಯಃ ಪ್ರೋಕ್ತಾಃ ಸ್ತ್ರಿಯ ಏವ ಕಲಿಃ ಸ್ಮೃತಃ ।
ತಸ್ಮಾತ್ಕಲಿಂ ಸ್ತ್ರಿಯಂ ವಿದ್ವಾನ್ ಮುಮುಕ್ಷುರ್ದೂರತಸ್ತ್ಯಜೇತ್ ॥೭॥

ದ್ಯೂತಂ ಕಾಮಶ್ಚ ಲೋಭಶ್ಚ ಮದ್ಯಹಾಟಕಯೋಷಿತಃ ।
ಕ್ಷುದ್ರಾ ಯತ್ರ ಹ್ಯಸದ್ವಾರ್ತಾ ತತ್ರ ಸನ್ನಿಹಿತಃ ಕಲಿಃ ॥೮॥

---

೭ ಕಲಿಯೇ ಸ್ತ್ರೀಯರು. ಸ್ತ್ರೀಯರೇ ಕಲಿ. ಆದುದರಿಂದ ಮೋಕ್ಷದ ಇಚ್ಛೆಯುಳ್ಳ ವಿದ್ವಾಂಸನು ಸ್ತ್ರೀಯರನ್ನು ದೂರದಿಂದಲೇ ತ್ಯಜಿಸಬೇಕು.

ವಿಶೇಷ : ಇಲ್ಲಿ ನಿಂದಿಸುತ್ತಿರುವುದು ದುಷ್ಟ ಸ್ತ್ರೀಯರನ್ನೇ ಹೊರತು ಒಟ್ಟಾರೆ ಎಲ್ಲ ಸ್ತ್ರೀಯರನ್ನಲ್ಲ ಹಾಗೂ ತ್ಯಜಿಸಲು ಹೇಳುತ್ತಿರುವುದು ಸ್ತ್ರೀಯರಲ್ಲಿ ಅತಿಯಾದ ಸಂಗವನ್ನೇ ಹೊರತು ಸ್ತ್ರೀಯರನ್ನಲ್ಲ ಎಂದು ತಿಳಿಯಬೇಕು.

ಸ್ತ್ರೀ ಎರಡು ಕುಲಗಳನ್ನು (ಎರಡು ಕುಲಗಳಲ್ಲಿ ಸೇರಿದ ನೂರೊಂದು ಕುಲಗಳನ್ನು) ಉದ್ಧರಿಸುವಳೆಂದು ಶಾಸ್ತ್ರಗಳು ಹೇಳುವವು. ಇದನ್ನೇ ಶ್ರೀಮದಾಚಾರ್ಯರು ತಿಳಿಸಿರುವರು.

ಕನ್ಯೋದಿತಾ ಬತ ಕುಲದ್ವಯತಾರಿಣೀತಿ ।
ಜಾಯಾಸಖೇತಿ ವಚನಂ ಶ್ರುತಿಗಂ ಶ್ರುತಿಶ್ಚ ॥ ಮ.ಭಾ.ತಾ.ನಿ ೧೯-೭೬

ಭಾರ್ಯಾ ಮಿತ್ರಂ ಗೃಹೇ ಸತಃ (ಭಾರತ, ವನಪರ್ವ) ಗೃಹಸ್ಥನಿಗೆ ಹೆಂಡತಿಯೇ ಮಿತ್ರಳು. ಭಾರ್ಯಾ ದೈವಕೃತಃ ಸಖಾ (ಭಾರತ, ವನಪರ್ವ)
ಹೆಂಡತಿಯು ದೇವನು ನೀಡಿದ ಗೆಳತಿಯಾಗಿರುವಳು. ಹೀಗೆ ಮಹಾಭಾರತಾದಿಗಳಲ್ಲಿ ಸ್ತ್ರೀಯರನ್ನು ಸ್ತುತಿಸಿದ್ದಾರೆ. ಆದ್ದರಿಂದ ದುಷ್ಟಸ್ತ್ರೀಯರನ್ನು ಪರಿತ್ಯಜಿಸಬೇಕೆಂದು ಇಲ್ಲಿ ತಿಳಿಸುತ್ತಿದ್ದಾರೆ. ಈ ವಿಷಯವನ್ನು ಅನ್ಯಥಾ ಭಾವಿಸಬಾರದು.

೮ ಜೂಜಾಟ, ಅತಿ ಆಸೆ, ಲೋಭ, ಮದ್ಯ, ಬಂಗಾರ, ಸ್ತ್ರೀಯರು, ಲೋಕದ ವಾರ್ತೆ, ಇವುಗಳಿದ್ದಲ್ಲಿ ಕಲಿಯು ಸನ್ನಿಹಿತನಾಗಿರುವನು.

ವಿಶೇಷ : ಅಭ್ಯರ್ಥಿತಸ್ತದಾ ತಸ್ಮೈ ಸ್ಥಾನಾನಿ ಕಲಯೇ ದದೌ ।
ದ್ಯೂತಂ ಪಾನಂ ಸ್ತ್ರಿಯಃ ಸೂನಾ ಯತ್ರಾಧರ್ಮಶ್ಚತುರ್ವಿಧಃ ॥

ಪುನಶ್ಚ ಯಾಚಮಾನಾಯ ಜಾತರೂಪಮದಾತ್ಪ್ರಭುಃ
ತತೋಽನೃತಂ ಮದಃ ಕಾಮೋ ರಜೋ ವೈರಂ ಚ ಪಂಚಮಮ್॥

ಅಮೂನಿ ಪಂಚ ಸ್ಥಾನಾನಿ ಹ್ಯಧರ್ಮಪ್ರಭವಃ ಕಲಿಃ ।
ಔತ್ತರೇಯೇಣ ದತ್ತಾನಿ ನ್ಯವಸತ್ತನ್ನಿದೇಶಕೃತ್ ।
ಅಥೈತಾನಿ ನ ಸೇವೇತ ಬುಭೂಷುಃ ಪುರುಷಃ ಕ್ವಚಿತ್ ॥

(ಭಾಗವತ ೧-೧೭-೩೭, ೩೮, ೩೯, ೪೦)

**ಯದಾ ಪಾಶುಪತಂ ಶೈವಂ ಪ್ರಚುರಂ ಕ್ಷುದ್ರದೈವತಮ್ ।**
**ತದಾ ಕಲಿಯುಗಂ ವಿದ್ಯಾತ್ ಭುಕ್ತಿಮುಕ್ತಿಪ್ರಣಾಶನಮ್ ॥೯॥**

**ಮಾಂ ಚ ಸಾಕ್ಷಾತ್ಪರಂ ಬ್ರಹ್ಮ ಪುರುಷಂ ಪ್ರಕೃತೇಃ ಪರಮ್ ।**
**ತಿರಸ್ಕುರ್ಯುಶ್ಚ ಮದ್ಭಕ್ತಾ ಮದನ್ನಂ ಚ ತದಾ ಕಲಿಃ ॥೧೦॥**

**ಮದ್ಭಕ್ತಜನಮಾಹಾತ್ಮ್ಯಂ ಮದನ್ನಸ್ಯ ಚ ವೈಭವಮ್ ।**
**ದೂಷಯಂತಿ ದುರಾತ್ಮಾನಃ ತದಾ ಕಲಿಯುಗಂ ಭವೇತ್ ॥೧೧॥**

---

೯ ಸಣ್ಣ ದೇವತೆಗಳನ್ನು ಸರ್ವೋತ್ತಮನೆಂದು ಸಾರುವ ಶೈವ, ಪಾಶುಪತ ಮತಗಳು ಹೆಚ್ಚಾಗಿ ಪ್ರಸಾರ ಹೊಂದಲು ಭುಕ್ತಿ, ಮುಕ್ತಿಗಳನ್ನು ನಾಶಮಾಡುವ ಕಲಿಯುಗ ಬಂದಿತೆಂದು ತಿಳಿ.

೧೦ ಲಕ್ಷ್ಮೀದೇವಿಗಿಂತಲೂ ಶ್ರೇಷ್ಠನಾದ ಪರಬ್ರಹ್ಮಶಬ್ದವಾಚ್ಯನಾದ ನನ್ನನ್ನು ಯಾವಾಗ ತಿರಸ್ಕರಿಸುವರೋ ಹಾಗೂ ನನ್ನ ನೈವೇದ್ಯವನ್ನು ತಿರಸ್ಕಾರ ಮಾಡುವರೋ ಆಗ ಕಲಿಯು ಬಂದಂತೆಯೇ ಸರಿ.

೧೧ ನನ್ನ ಭಕ್ತರ ಮಹಿಮೆಯನ್ನು ನನ್ನ ನೈವೇದ್ಯದ ಗರಿಮೆಯನ್ನು ಯಾವಾಗ ದೂಷಣೆಯನ್ನು ಮಾಡುವರೋ ಆಗ ಕಲಿಯುಗ ಬರುವುದು.

ವಿಶೇಷ : ವಿಷ್ಣುಭಕ್ತರ ದ್ವೇಷವೂ ವಿಷ್ಣುವಿನ ದ್ವೇಷದಲ್ಲೇ ಪರ್ಯವಸಾನ ಹೊಂದುವುದು.

ಪ್ರಾದುರ್ಭಾವವಿಪರ್ಯಾಸಸ್ತದ್ಭಕ್ತದ್ವೇಷ ಏವ ಚ ।
ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ॥ ಮ.ತಾ.ನಿ. ೧-೧೧೧

ವಿಷ್ಣು ನೈವೇದ್ಯದ ನಿಂದನೆಯು ಕಲಿಯುಗದ, ದುರ್ಜನರ ಲಕ್ಷಣವೆನಿಸಿದಂತೆ, ನೈವೇದ್ಯ ಸ್ವೀಕಾರವು ಮಹಾಪುಣ್ಯಕ್ಕೂ ವಿಷ್ಣುವಿನ ಅನುಗ್ರಹಕ್ಕೂ ಕಾರಣವಾಗಿದೆ. ಭಾಗವತ, ಶ್ರೀಕೃಷ್ಣಾಮೃತಮಹಾರ್ಣವದಲ್ಲಿಯ ವಚನಗಳೂ ಈ ವಿಷಯದಲ್ಲಿ ಇವೆ.

**ಕೋಟ್ಯೈಂದವಸಹಸ್ರೈಸ್ತು ಮಾಸೋಪೋಷಣಕೋಟಿಭಿಃ ।**
**ಯತ್ಫಲಂ ಲಭ್ಯತೇ ಪುಂಭಿಃ ವಿಷ್ಣೋರ್ನೈವೇದ್ಯಭಕ್ಷಣಾತ್ ॥**

**ವಿಷ್ಣೋರ್ನೈವೇದ್ಯಶೇಷೇಣ ಯೋ ಭುನಕ್ತಿ ದಿನೇ ದಿನೇ ।**
**ಸಿಕ್ಥೇ ಸಿಕ್ಥೇ ಭವೇತ್ಪುಣ್ಯಂ ಚಾಂದ್ರಾಯಣಶತಾಧಿಕಮ್** ॥ ಕೃ.ಮ- ೯೭-೯೭

**ತ್ವಯೋಪಭುಕ್ತಸ್ರಗ್ಗಂಧವಾಸೋಽಲಂಕಾರಚರ್ಚಿತಾಃ ।**
**ಉಚ್ಛಿಷ್ಟಭೋಜಿನೋ ದಾಸಾಃ ತವ ಮಾಯಾಂ ಜಯೇಮಹಿ** ॥ ಭಾಗವತ

ಕುಶಾಸ್ತ್ರೇಷು ಚ ವಿಶ್ವಾಸಃ ಮಾಂ ವಿನಾ ತ್ವನ್ಯದೈವತೇ ।
ಕನ್ಯಕಾದ್ರವ್ಯಜೀವೀ ಸ್ಯಾತ್ತದಾ ಕಲಿಯುಗಂ ಭವೇತ್ ॥೧೨॥

ಕಾಮ್ಯಕರ್ಮಣಿ ಸಚ್ಛ್ರದ್ಧಾಂ ಹ್ಯಶ್ರದ್ಧಾಂ ನಿತ್ಯಕರ್ಮಣಿ ।
ಏಕಾದಶೀವಿನಿಂದಾಂ ಚ ಕಲಿಚಿಹ್ನಂ ಪ್ರಚಕ್ಷತೇ ॥೧೩॥

ನ್ಯಸ್ಯೇದ್ಯದಾ ಕಲಿಃ ಪಾದಂ ಗುರುಪಿತ್ರೋಶ್ಚ ದೂಷಣಮ್ ।
ಕಲೇರ್ದಶಸಹಸ್ರಾಂತೇ ವಿಷ್ಣುಃ ತ್ಯಕ್ಷತಿ ಮೇದಿನಿಮ್ ।
ತದರ್ಧೇ ಜಾಹ್ನವೀ ಗಂಗಾ ತದರ್ಧೇ ತ್ವಿತರೇ ಸುರಾಃ ॥೧೪॥

ಸತ್ಯವತ್ಯಾಮಹಂ ಜಾತೋ ವ್ಯಾಸಾಂಶೇನ ಪರಾಶರಾತ್ ।
ಮೋಹನಾನಿ ಪುರಾಣಾನಿ ಯದಾ ಕುರ್ಯಾಂ ತದಾ ಕಲಿಃ ॥೧೫॥

ದೃಷ್ಟ್ವಾ ತೇಷು ಪುರಾಣೇಷು ಮದ್‌ಬ್ರಹ್ಮತ್ವವಿದೂಷಣಮ್ ।
ಅಯೋಧ್ಯಾಮಧುರಾಪ್ರಾಂತೇ ಆವಿವೇಶ ಪುನಃ ಕಲಿಃ ॥೧೬॥

---

೧೨ ದುಃಶಾಸ್ತ್ರಗಳಲ್ಲಿ ವಿಶ್ವಾಸ, ನನ್ನನ್ನು ಬಿಟ್ಟು ಅನ್ಯದೇವತೆಗಳಲ್ಲಿ ಭಕ್ತಿ, ಕನ್ಯೆಯ ಗಳಿಕೆಯಿಂದ ಜೀವನ ನಡೆಸಲು ಕಲಿಯುಗ ಬಂದಿತೆಂದು ತಿಳಿ.

೧೩ ಕ್ಷುದ್ರಫಲ ನೀಡುವ ಕಾಮ್ಯಕರ್ಮಗಳಲ್ಲಿ ಅತೀ ಶ್ರದ್ಧೆ, ಮೋಕ್ಷ ನೀಡುವ ನಿತ್ಯ ಕರ್ಮಗಳಲ್ಲಿ ಅವಿಶ್ವಾಸ, ಏಕಾದಶಿಯ ನಿಂದನೆ ಇವುಗಳನ್ನು ಕಲಿಯ ಲಕ್ಷಣಗಳೆಂದು ಹೇಳುವರು.

೧೪ ಕಲಿಯು ತನ್ನ ಕಾಲನ್ನಿರಿಸಲು ಶಿಷ್ಯರು ಗುರುಗಳನ್ನು ಹಾಗೂ ಪುತ್ರರು ತಂದೆಯನ್ನು ದೂಷಿಸುವರು. ಕಲಿಯುಗವು ಬಂದು ಹತ್ತು ಸಾವಿರ ವರ್ಷಗಳಾಗಲು ಭಗವಂತನಾದ ವಿಷ್ಣುವು ಭೂಮಿಯನ್ನು ತ್ಯಜಿಸುವನು. ಐದು ಸಾವಿರ ವರುಷಗಳಿಗೆ ಗಂಗಾದೇವಿಯೂ ಎರಡೂವರೆ ಸಾವಿರ ವರುಷಗಳಿಗೆ ಬೇರೆ ದೇವತೆಗಳೂ ಭೂಮಿಯಿಂದ ತೆರಳುವರು. (ಎಂದರೆ ಸಾನ್ನಿಧ್ಯ ಕಡಿಮೆಯಾಗುವುದು)

೧೫ ಯಾವಾಗ ನಾನು ಪರಾಶರ ಋಷಿಗಳಿಂದ ಸತ್ಯವತಿಯಲ್ಲಿ ವೇದವ್ಯಾಸರೆಂಬ ಹೆಸರಿನಿಂದ ಅವತರಿಸಿ ಮೋಹಕವಾದ ಪುರಾಣಗಳನ್ನು ರಚಿಸುವೆನೋ ಆಗ ಕಲಿಯು ಬರುವುದು.

೧೬ ಆ ಪುರಾಣಗಳಲ್ಲಿ ನಾನು ಗುಣಪೂರ್ಣನೆಂಬುದು ದೂಷಣೆಯಾಗುವುದನ್ನು ನೋಡಿ ಅಯೋಧ್ಯಾ ಮಧುರಾ ಪ್ರಾಂತಗಳಲ್ಲಿ ಮತ್ತೆ ಕಲಿಯು ಪ್ರವೇಶಿಸುವನು.

ಏಕಪಾದಃ ಕಲೇಸ್ತತ್ರ ಗಂಗಾಕಾಶ್ಯಾದಿಕೇಷು ಚ ।
ದ್ವೌ ಪಾದೌ ಗೌತಮೀತೀರೇ ಕೃಷ್ಣವೇಣೀತಟೇ ತ್ರಯಃ ॥೧೭॥

ಸಾರ್ಧಂ ಪಾದತ್ರಯಂ ತತ್ರ ಭವೇದಾವೆಂಕಟಾಚಲಾತ್ ।
ತತ ಆರಭ್ಯ ಸರ್ವತ್ರ ಕಲೇಃ ಪಾದಚತುಷ್ಟಯಮ್ ॥೧೮॥

ಆಕಾವೇರೀತಟಾತ್ಪೂರ್ಣೋ ಮೂರ್ತಿಮಾನಾವೃಷಾಚಲಮ್ ।
ತಾಮ್ರಪರ್ಣೀ ನದೀ ಯತ್ರ ಪದ್ಮನಾಭಸ್ಥಲಂ ಮಹತ್ ।
ಏಕಪಾದಃ ಕಲೇಸ್ತತ್ರ ಸೋಽಪಿ ಚಾಂತೇ ವಿನಶ್ಯತಿ ॥೧೯॥

ಯತ್ರ ಯತ್ರ ಕಲಿಃ ಪೂರ್ಣೋ ಮದ್ಭಕ್ತಿಸ್ತತ್ರ ಲುಪ್ಯತೇ ।
ತತ್ರ ತತ್ರ ಶಿವದ್ವೇಷೋ ಮದ್ಭಕ್ತಿಚ್ಛಲತೋ ಭವೇತ್ ॥೨೦॥

ತತ್ರ ದ್ರಾವಿಡದೇಶೇಷು ತಾಮ್ರಪರ್ಣೀ ಮಹಾನದೀ ।
ಪ್ರಾಯೇಣ ಕಲಿನಾಶೋಽತ್ರ ವಿಷ್ಣುಭಕ್ತಿರ್ವಿವರ್ಧತೇ ॥೨೧॥

---

ವಿಶೇಷ : ಅಮೋಹಾಯ ಗುಣಾ ವಿಷ್ಣೋರಾಕಾರಶ್ಚಿಚ್ಛರೀರತಾ ।
ನಿರ್ದೋಷತ್ವಂ ತಾರತಮ್ಯಂ ಮುಕ್ತಾನಾಮಪಿ ಚೋಚ್ಯತೇ ।
ಏತದ್ವಿರುದ್ಧಂ ಯತ್ಸರ್ವಂ ತನ್ಮೋಹಾಯೇತಿ ನಿರ್ಣಯಃ ॥

ವಿಷ್ಣುವಿನ ಗುಣಗಳು, ಆಕಾರ, ಜ್ಞಾನಾತ್ಮಕ ಶರೀರ, ನಿರ್ದೋಷತ್ವ, ಮುಕ್ತತಾರತಮ್ಯ ಇವುಗಳಿಗೆ ವಿರುದ್ಧವಾದ ಎಲ್ಲವೂ ಅಸುರ ಮೋಹನಕ್ಕೆಂದೇ ನಿರ್ಣಯ.

೧೭ ಅಯೋಧ್ಯಾ, ಮಥುರಾ, ಗಂಗಾತೀರ, ಕಾಶಿ ಮುಂತಾದೆಡೆಗಳಲ್ಲಿ ಕಲಿಯ ಒಂದು ಪಾದ, ಗೌತಮೀ ನದೀ ತೀರದಲ್ಲಿ ಎರಡು ಪಾದಗಳು, ಕೃಷ್ಣವೇಣೀ ತೀರದಲ್ಲಿ ಮೂರು ಪಾದಗಳು,

೧೮ ವೆಂಕಟಾಚಲದಿಂದ ಕೃಷ್ಣೆಯವರೆಗೆ ಮೂರುವರೆ ಪಾದ, ಅಲ್ಲಿಂದ ಆರಂಭಿಸಿ ಬೇರೆಲ್ಲ ಕಡೆಗೆ ಕಲಿಯ ನಾಲ್ಕು ಪಾದಗಳು,

೧೯ ಕಾವೇರೀತೀರದಿಂದ ವೃಷಭಾಚಲದವರೆಗೆ ಪೂರ್ಣ ಮೂರ್ತಿಮತ್ತಾಗಿ ಕಲಿಯಿರುವನು. ತಾಮ್ರಪರ್ಣೀ ನದೀ ಇರುವಲ್ಲಿ ಹಾಗೂ ಪದ್ಮನಾಭನು ಇರುವ ಸ್ಥಲದಲ್ಲಿ ಕಲಿಯ ಏಕಪಾದವಿರುವುದು. ಆದರೆ ಆ ಏಕಪಾದವೂ ಕೊನೆಗೆ ನಾಶವಾಗುವುದು.

೨೦ ಕಲಿಯು ಪೂರ್ಣ ವ್ಯಾಪಿಸಿದ ಕಡೆಗೆ ನನ್ನ ಭಕ್ತಿಯ ಲೋಪವಾಗುವುದು. ಅಲ್ಲಿ ನನ್ನ ಭಕ್ತಿಯ ನೆಪದಿಂದ ಶಿವದ್ವೇಷ ಮಾಡುವರು.

೨೧ ದ್ರಾವಿಡದೇಶದಲ್ಲಿ ತಾಮ್ರಪರ್ಣೀ ನದಿ ಇರುವ ಸ್ಥಳದಲ್ಲಿ ಕಲಿಯ ಪ್ರಭಾವವು ಕಡಿಮೆಯಾಗುವುದು. ಮತ್ತು ವಿಷ್ಣುಭಕ್ತಿಯು ವೃದ್ಧಿಸುವುದು.

ಸರ್ವತ್ರ ವರ್ಣಸಾಂಕರ್ಯಂ ಕಲೌ ಜಾಯೇತ ವೈ ಶಠೇ ।
ಕೇವಲಂ ತು ಕಲೌ ವೇದೋ ಗಾಥಾಪ್ರಾಯೋ ಭವಿಷ್ಯತಿ ॥೨೨॥

ಸ್ವೇಚ್ಛಯಾಧ್ಯಯನಂ ಧೃತ್ವಾ ಭೃತಕಾಧ್ಯಯನಂ ಕಲೌ ।
ಬಾಹುಲ್ಯಂ ವಿಧವಾನಾಂ ಚ ಯಥೇಷ್ಟಾಚರಣಂ ತಥಾ ॥೨೩॥

ಸದಾ ಪರಾನ್ನಭೋಕ್ತಾರಃ ಸದಾ ಶೂದ್ರಾನ್ನಭೋಜಿನಃ ।
ಕಲೌ ಗೃಹ್ಣಂತಿ ಶೂದ್ರತ್ವಂ ಸರ್ವೇ ವಿಷಯತತ್ಪರಾಃ ॥೨೪॥

ಪುಣ್ಯಮೇವೇತಿ ಮನ್ಯಂತೇ ಪುತ್ರದಾರಾದಿಪೋಷಣಮ್ ।
ಉದ್ವಾಹಮೇವ ಸರ್ವತ್ರ ಗಾರ್ಹಸ್ಥ್ಯಮಿತಿ ವೈ ಕಲೌ ॥೨೫॥

ಅಶ್ರೋತ್ರಿಯಾಶ್ಚ ಪೂಜ್ಯಂತೇ ವಾಚಾಲಾಃ ಶಾಸ್ತ್ರಲಂಪಟಾಃ ।
ಧನವಂತೋ ವಿಶೇಷೇಣ ಡಾಂಭಿಕಾಶ್ಚ ಕಲೌ ದ್ವಿಜಾಃ ॥೨೬॥

ಸರ್ವೇ ವ್ಯವಾಯನಿರತಾಃ ಸರ್ವೇ ಸ್ವಾರ್ಥೈಕತತ್ಪರಾಃ ।
ಸರ್ವೇ ಶೌಚಪರಿಭ್ರಷ್ಟಾಃ ಕಲೌ ಲೌಕಿಕಪೌರ್ತಿಕಾಃ ॥೨೭॥

---

೨೨ ಕಲಿಯುಗದಲ್ಲಿ ಎಲ್ಲೆಡೆ ವರ್ಣಸಾಂಕರ್ಯ ನಡೆಯುವುದು. ವೇದಗಳೆಲ್ಲ ಕಲಿಯುಗದಲ್ಲಿ ಅರ್ಥಹೀನವಾದ ಕತೆಗಳಂತೆ ಭಾಸವಾಗುವವು.

೨೩ ಕಲಿಯುಗದಲ್ಲಿ ಹೊಟ್ಟೆ ತುಂಬಿಕೊಳ್ಳಲು ಮನಸ್ಸಿಗೆ ಬಂದಂತೆ ಅಧ್ಯಯನ ಮಾಡುವರು. ತಮಗೆ ತಿಳಿದಂತೆ ಧರ್ಮವನ್ನಾಚರಿಸುವರು. ವಿಧವೆಯರು ಬಹು ಸಂಖ್ಯೆಯಲ್ಲಿರುವರು.

೨೪ ಯಾವಾಗಲೂ ಪರಾನ್ನವನ್ನು ಹಾಗೂ ಶೂದ್ರಾನ್ನವನ್ನು ಉಣ್ಣುವರು. ಎಲ್ಲರೂ ವಿಷಯ ತತ್ಪರರಾಗಿ ಶೂದ್ರರೆನ್ನಿಸುವರು.

೨೫ ತಮ್ಮ ಹೆಂಡತಿ, ಮಕ್ಕಳು ಮುಂತಾದವರ ಪೋಷಣೆಯೇ ಪುಣ್ಯಕಾರ್ಯವೆಂದು ಭಾವಿಸುವರು. ಗೃಹಸ್ಥರಿಗೆ ವಿಹಿತವಾದ ಪಂಚಯಜ್ಞಗಳನ್ನಾಚರಿಸದೇ ಕೇವಲ ಮದುವೆಯಾಗುವುದೇ ಗೃಹಸ್ಥಾಶ್ರಮ ಪರಿಪಾಲನೆಯೆಂದು ತಿಳಿಯುತ್ತಾರೆ.

೨೬ ಅಶ್ರೋತ್ರಿಯರೂ ಶಾಸ್ತ್ರಲಂಪಟರಾದ ಮಾತಿನ ಚತುರರೂ ಪೂಜೆಗೊಳ್ಳುವರು. ವಿಶೇಷವಾಗಿ ಕಲಿಯುಗದಲ್ಲಿ ಡಾಂಭಿಕ ಬ್ರಾಹ್ಮಣರೇ ಧನವನ್ನು ಹೆಚ್ಚು ಗಳಿಸುವರು.

೨೭ ಎಲ್ಲರೂ ಸ್ತ್ರೀ ಸಂಗದಲ್ಲಿ ಮಗ್ನರು. ಸ್ವಾರ್ಥದಲ್ಲೇ ತತ್ಪರರು. ಶೌಚರಹಿತರು. ಹೊಟ್ಟೆ ತುಂಬಿಸಿಕೊಳ್ಳುವುದೇ ಕಲಿಯುಗದ ಮಹಾಧರ್ಮವಾಗಿದೆ.

ಋತುಸ್ನಾತಾಂ ತು ಯೋ ಭಾರ್ಯಾಂ ಯುವತೀಂ ಚ ಪತಿವ್ರತಾಮ್ ।
ಸ್ಪರ್ಧಯಾ ನಾಧಿಗಚ್ಛೇದ್ಯಃ ಪುತ್ರೇಪ್ಸುಃ ಪಿತೃಘಾತಕಃ ॥೨೮॥

ಅತೃಪ್ತಾ ದುರ್ಭಗಾಃ ಸರ್ವೇ ಸರ್ವೇ ಭಕ್ಷ್ಯೈಕತತ್ಪರಾಃ ।
ಸದಾಚಾರವಿಹೀನಾಶ್ಚ ಹರೇರ್ನೈವೇದ್ಯನಿಂದಕಾಃ ॥೨೯॥

ಅದ್ವಾದಶೀವ್ರತಾಸ್ಸರ್ವೇ ಸರ್ವೇ ಕೇಶವನಿಂದಕಾಃ ।
ಸರ್ವೇ ವೈರಾಗ್ಯರಹಿತಾ ಭವಿಷ್ಯಂತಿ ಕಲೌ ದ್ವಿಜಾಃ ॥೩೦॥

ದಂಡಿತ್ವಮೇವ ಸಂನ್ಯಾಸೇ ವಿಪ್ರತ್ವೇ ಸೂತ್ರಧಾರಣಮ್ ।
ಶೂದ್ರಪ್ರಾಯಾಃ ಕಲೌ ವಿಪ್ರಾಃ ಶೂದ್ರಜ್ಞಾನಾದಿಭಾವನಾಃ ॥೩೧॥

ಸ್ವತಂತ್ರಾಶ್ಚ ಗೃಹೇ ನಾರ್ಯೋ ವಿಪ್ರಾಃ ತ್ರೈವರ್ಣ್ಯವೃತ್ತಯಃ ।
ಬಸ್ತಪ್ರಾಯಾಃ ಕಲೌ ಗಾವಃ ಶುಷ್ಕಪ್ರಾಯಾಶ್ಚ ಭೂರುಹಾಃ ॥೩೨॥

ಪೃಥ್ವೀ ಚ ವಿಫಲಪ್ರಾಯಾ ಕಲೌ ನಿರ್ವೀರ್ಯಮೌಷಧಮ್ ।
ರೋಗಾರ್ತಾಶ್ಚ ಭವಿಷ್ಯಂತಿ ಪಾಪಿಷ್ಠಾಃ ಸತತಂ ನರಾಃ ॥೩೩॥

---

೨೮ ಪುತ್ರಾಪೇಕ್ಷಿಯಾಗಿಯೂ ಪತಿವ್ರತೆಯೂ, ತರುಣಿಯೂ, ಆದ ಋತು-ಸ್ನಾತಳಾದ ಪತ್ನಿಯನ್ನು ಸ್ಪರ್ಧೆಯಿಂದ ತ್ಯಜಿಸಿದವನು ಪಿತೃಘಾತಕನೇ ಸರಿ.

೨೯ ಎಲ್ಲರೂ ಅಸಂತೃಪ್ತರೂ, ಭಾಗ್ಯಹೀನರೂ, ಹೊಟ್ಟೆ ತುಂಬಿಸುವಲ್ಲಿ ನಿರತರೂ, ಸದಾಚಾರ ಹೀನರೂ, ವಿಷ್ಣು ನೈವೇದ್ಯ ನಿಂದಕರೂ ಆಗುವರು.

೩೦ ಕಲಿಯುಗದ ಬ್ರಾಹ್ಮಣರೆಲ್ಲ ದ್ವಾದಶೀ (ಏಕಾದಶಿ) ವ್ರತರಹಿತರೂ, ಕೇಶವ ನಿಂದಕರೂ, ವೈರಾಗ್ಯರಹಿತರೂ ಆಗುವರು.

೩೧ ದಂಡ ಹಿಡಿದ ಮಾತ್ರದಿಂದ ಸನ್ಯಾಸಿಗಳೆನಿಸಿಕೊಳ್ಳುತ್ತಾರೆ. ಯಜ್ಞೋಪವೀತ-ಧಾರಣ ಮಾತ್ರದಿಂದ ಬ್ರಾಹ್ಮಣರೆನಿಸುತ್ತಾರೆ. ಕಲಿಯುಗದ ಬ್ರಾಹ್ಮಣರು ಶೂದ್ರರಂತೆ ಜ್ಞಾನ-ವಿಶ್ವಾಸಗಳನ್ನು ಹೊಂದಿ ಪ್ರಾಯಃ ಶೂದ್ರರಂತೆ ಆಗುವರು.

೩೨ ಮನೆಗಳಲ್ಲಿ ಸ್ತ್ರೀಯರು ಸ್ವತಂತ್ರರಾಗಿ ವರ್ತಿಸುವರು. ಬ್ರಾಹ್ಮಣರು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮೊದಲಾದವರ ವೃತ್ತಿಗಳಿಂದ ಜೀವಿಸುವರು. ಕಲಿಯುಗದ ಆಕಳುಗಳು ಮೇಕೆಗಳಂತಾಗುವವು. ಗಿಡಗಳು ಒಣಗಿದಂತೆ ಆಗಿ ಅಲ್ಪಫಲ ನೀಡುವವು.

೩೩ ಭೂಮಿಯು ಅಲ್ಪಧಾನ್ಯಗಳನ್ನು ನೀಡುವುದು. ಔಷಧಗಳು ಸಾಮರ್ಥ್ಯರಹಿತ-ವಾಗುವವು. ಜನಗಳೆಲ್ಲ ಪಾಪಿಗಳೂ, ರೋಗಿಗಳೂ ಆಗುವರು.

**ಕ್ಷುತ್‌ಕ್ಷಾಮಾಃ ಕ್ರೋಧನಾ ನಿತ್ಯಂ ಸಾಸೂಯಾಸ್ಸಾಧುಸಂಗಮೇ ।**
**ಪ್ರಾಯೇಣ ನಿರ್ಧನಾಸ್ಸರ್ವೇ ಶಿಶ್ನೋದರಪರಾಯಣಾಃ ॥೩೪॥**

**ವಿಕರ್ಮಸ್ಥಾಶ್ಚ ಶೂದ್ರಾನ್ನಂ ಭಕ್ಷಯಂತಿ ಕಲೌ ಯುಗೇ ।**
**ವೇಶ್ಯಾನಟವಿಟೇಭ್ಯಶ್ಚ ಆದದಾತ್ಯಾದರಾದ್ಧನಮ್ ॥೩೫॥**

**ಕೃಷಿರೇವ ಪರೋ ಧರ್ಮೋ ಕೃಷಿರೇವ ಪರಂ ತಪಃ ।**
**ವಿಕ್ರೀಣಂತಿ ಚ ಗವ್ಯಾದೀನ್ ಬ್ರಾಹ್ಮಣಾ ನಿಷ್ಠುರಾಃ ಕಲೌ ॥೩೬॥**

**ತ್ರಿರಾತ್ರೇಣ ಭವೇಚ್ಛೂದ್ರೋ ಗೋರಸಾದೇಶ್ಚ ವಿಕ್ರಯಾತ್ ।**
**ರಿಕ್ತೋ ಲವಣವಿಕ್ರೇತಾ ಹ್ಯಲ್ಪಾಯುಸ್ತಿಲವಿಕ್ರಯಾತ್ ॥೩೭॥**

**ಲಾಕ್ಷಾವಿಕ್ರಯತಃ ಕುಷ್ಠೀ ಅಪುತ್ರೋ ಗವ್ಯವಿಕ್ರಯಾತ್ ।**
**ಜಪಸ್ನಾನಂ ಚ ತೀರ್ಥಾದೌ ದ್ರವ್ಯಾರ್ಥೇ ವಿನಿಯುಜ್ಯತೇ ॥೩೮॥**

**ಪುರಾಣಪಠನೇ ಪ್ರಾಪ್ತೇ ನ ಶೃಣೋತಿ ದುರಾಗ್ರಹೀ ।**
**ಪುರಾಣವಾಚಕಂ ಯಸ್ತು ಲೋಭಬುದ್ಧ್ಯಾವಮನ್ಯತೇ ।**

---

೩೪ ಭೋಜನಪ್ರಿಯರೂ, ನಿರಂತರ ಕೋಪಿಗಳೂ, ಸಜ್ಜನರಲ್ಲಿ ಮಾತ್ಸರ್ಯವುಳ್ಳವರೂ ಪ್ರಾಯಃ ದರಿದ್ರರೂ, ಸ್ತ್ರೀಸಂಗಮದಲ್ಲಿ ಹಾಗೂ ಹೊಟ್ಟೆ ತುಂಬಿಸುವಲ್ಲಿ ನಿರತರಾಗುವರು.

೩೫ ಕಲಿಯುಗದಲ್ಲಿತಮ್ಮವರ್ಣಾಶ್ರಮಗಳಿಗೆವಿರುದ್ಧವಾದಕರ್ಮಗಳನ್ನಾಚರಿಸುತ್ತ ಶೂದ್ರಾನ್ನವನ್ನು ಸೇವಿಸುವರು. ವೇಶ್ಯೆಯರು, ವಿಟರು, ನಟರಿಗೆ ಆದರದಿಂದ ಧನವನ್ನು ನೀಡುವರು.

೩೬ ಕೃಷಿ (ಉದ್ಯೋಗ) ಯೇ ಶ್ರೇಷ್ಠರಾದ ಧರ್ಮ. ಉದ್ಯೋಗವೇ ಉತ್ತಮ ತಪವೆಂದು ಭಾವಿಸುವರು. ದಯಾರಹಿತರಾಗಿ ಬ್ರಾಹ್ಮಣರು ಕಲಿಯುಗದಲ್ಲಿ ಗೋವಿನಿಂದ ದೊರಕುವ ಪದಾರ್ಥಗಳನ್ನು ಮಾರಿಕೊಳ್ಳುವರು.

೩೭ ಹಾಲು ಮೊದಲಾದ ಗೋರಸಗಳನ್ನು ಮಾರುವುದರಿಂದ ಮೂರು ದಿನಗಳಲ್ಲಿ ಶೂದ್ರನಾಗುವನು. ಉಪ್ಪನ್ನು ಮಾರುವವನು ದರಿದ್ರನೂ, ಎಳ್ಳು ಮಾರುವವನು ಅಲ್ಪಾಯುವೂ ಆಗುವನು.

೩೮ ಲಾಕ್ಷಾರಸ (ಅರಗು)ವನ್ನು ಮಾರುವವನು ಕುಷ್ಠರೋಗಿಯು, ಹಾಲು, ತುಪ್ಪಗಳನ್ನು ಮಾರುವುದರಿಂದ ಅಪುತ್ರನೂ ಆಗುವನು. ಜಪ, ಸ್ನಾನ ಮೊದಲಾದ ಪುಣ್ಯ ಕಾರ್ಯಗಳನ್ನು ತೀರ್ಥಕ್ಷೇತ್ರಗಳಲ್ಲಿ ದುಡ್ಡಿನ ಆಶೆಯಿಂದ ಮಾಡುವರು.

**ಅರಣ್ಯೇ ನಿರ್ಜಲೇ ಘೋರೇ ಭವತಿ ಬ್ರಹ್ಮರಾಕ್ಷಸಃ ॥೩೯॥**

**ವಾದಾರ್ಥಮೇವ ವಿದ್ಯಾ ಸ್ಯಾದ್ ಗಾಯತ್ರೀವಿಕ್ರಯಃ ಕಲೌ ।**
**ಸಪ್ತಜನ್ಮಸು ಚಂಡಾಲೋ ಗಾಯತ್ರೀವಿಕ್ರಯಾದ್ಭವೇತ್ ॥೪೦॥**

**ಅನ್ನವಿಕ್ರಯಣಾತ್ಸದ್ಯಃ ಕನ್ಯಕಾವಿಕ್ರಯೀ ತಥಾ ।**
**ಅನ್ನದೋಷೇಣ ಸರ್ವತ್ರ ಕಲೌ ಸನ್ನಿಹಿತೋ ಯಮಃ ।**
**ಅನ್ನದಾನಸ್ಯ ಲೋಪೇನ ಕಲೌ ದುಃಖಪರಂಪರಾ ॥೪೧॥**

**ದಾನಾಭಾವಾತ್ ಪ್ರಣಶ್ಯಂತಿ ಸರ್ವೇ ಕಲಿಯುಗೇ ಜನಾಃ ।**
**ಪುಸ್ತಕಂ ಯಸ್ತು ವಿದ್ಯಾಂ ವಾ ವಿಕ್ರೀಣೀತೇ ತು ಗಾಂ ಕ್ಷಿತಿಮ್ ।**
**ಸರ್ವದಾ ತತ್ರ ದುರ್ಭಿಕ್ಷಂ ದಸ್ಯುವ್ಯಾಧಿಭಯಂ ಸಖೇ ॥೪೨॥**

**ಶ್ರೀಕೃಷ್ಣ ಉವಾಚ-**

**ಇತ್ಯೇತತ್ಕಥಿತಂ ಸರ್ವಂ ಕಲಿಚಿಹ್ನಂ ಪ್ರಕಾಶತಃ ।**
**ಕೃಷ್ಣಸ್ಯ ವಚನಂ ಶ್ರುತ್ವಾ ಬಾಷ್ಪಗದ್ಗದಯಾ ಗಿರಾ ।**
**ದಧಿಪಾಲೋಽಬ್ರವೀದ್ವಾಕ್ಯಂ ದೇವದೇವಂ ಜಗತ್ಪತಿಮ್ ॥೪೩॥**

---

೩೯ ಪುರಾಣ, ಪ್ರವಚನಗಳು ನಡೆಯುತ್ತಿದ್ದರೂ ದುರಾಗ್ರಹ ಬುದ್ಧಿಯಿಂದ ಕೇಳದವನು, ಪುರಾಣ ಹೇಳುವ ಆಚಾರ್ಯನನ್ನು ಲೋಭದಿಂದ ಅವಮಾನಿಸಿದವನು ನೀರಿಲ್ಲದ ಅರಣ್ಯದಲ್ಲಿ ಬ್ರಹ್ಮರಾಕ್ಷಸನಾಗುವನು.

೪೦ ಕಲಿಯುಗದಲ್ಲಿ ಬೇರೆಯವರನ್ನು ವಾದದಲ್ಲಿ ಗೆಲ್ಲಲು ಮಾತ್ರ ವಿದ್ಯೆಯನ್ನು ಉಪಯೋಗಿಸುವರು. ಗಾಯತ್ರಿ (ವೇದ) ಯನ್ನು ಮಾರಿಕೊಳ್ಳುವರು. ಗಾಯತ್ರಿಯ (ವೇದ) ಮಾರಾಟದಿಂದ ಏಳುಜನ್ಮಗಳಲ್ಲಿ ಚಂಡಾಲನಾಗುವನು.

೪೧ ಅನ್ನ ಹಾಗೂ ಕನ್ಯೆಯ ಮಾರಾಟದಿಂದ ಕೂಡಲೇ ಚಂಡಾಲನಾಗುವನು. ಅನ್ನದ ದೋಷದಿಂದ ಕಲಿಯುಗದಲ್ಲಿ ಎಲ್ಲೆಡೆ ಯಮನು (ಅಪಮೃತ್ಯು) ಸನ್ನಿಹಿತನಾಗಿದ್ದಾನೆ. ಕಲಿಯುಗದ ಎಲ್ಲ ದುಃಖಗಳಿಗೂ ಅನ್ನದಾನ ಮಾಡದಿರುವುದೇ ಕಾರಣವಾಗಿದೆ.

೪೨ ದಾನ ಮಾಡದಿರುವುದರಿಂದಲೇ ಕಲಿಯುಗದಲ್ಲಿ ಎಲ್ಲ ಜನಗಳು ವಿನಾಶ ಹೊಂದುವರು. ಪುಸ್ತಕ, ವಿದ್ಯೆ, ಆಕಳು ಹಾಗೂ ಭೂಮಿಯನ್ನು ಮಾರಾಟ ಮಾಡಿದರೆ ಅಲ್ಲಿ ಯಾವಾಗಲೂ ಬರಗಾಲ, ಶತ್ರುಗಳು ಹಾಗೂ ರೋಗಗಳ ಭಯವಿರುವುದು.

೪೩ ಕಲಿಯ ಲಕ್ಷಣಗಳನ್ನೆಲ್ಲ ನಿನಗೆ ತೋರುವಂತೆ ಹೇಳಿದ್ದೇನೆ. ಹೀಗೆಂದ ಕೃಷ್ಣನ

ದಧಿಪಾಲ ಉವಾಚ-

ಕೇನೋಪಾಯೇನ ಸಂಸಾರಂ ಕಲಿಂ ಧರ್ಮವಿನಾಶನಮ್ ।
ಸಖೇ ಕೃಷ್ಣ ತರಂತ್ಯದ್ಧಾ ತತ್ತ್ವಮೇವ ವದಸ್ವ ಮೇ ॥೪೪॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ
ಏಕವಿಂಶೋಽಧ್ಯಾಯಃ ॥

★★★

---

ಮಾತುಗಳನ್ನು ಕೇಳಿ ಬಿಗಿದ ಕಂಠದಿಂದ ಜಗತ್ಪತಿಯಾದ ದೇವ ದೇವನನ್ನು ಕುರಿತು ದಧಿಪಾಲನು ನುಡಿದನು.

೪೪ ಹೇ ಸಖನಾದ ಕೃಷ್ಣನೇ! ಯಾವ ಉಪಾಯದಿಂದ ಸಂಸಾರವನ್ನು ದಾಟುವನು. ಮತ್ತು ಕಲಿಯ ಪ್ರಭಾವವು ಚೆನ್ನಾಗಿ ನಾಶವಾಗುವುದು ಎಂಬ ತತ್ವವನ್ನು ನನಗೆ ತಿಳಿಸಬೇಕು.

॥ ಇಲ್ಲಿಗೆ ಇಪ್ಪತ್ತೊಂದನೇ ಅಧ್ಯಾಯವು ಮುಗಿಯಿತು ॥

# ಅಥ ದ್ವಾವಿಂಶೋಽಧ್ಯಾಯಃ

ಇತಿ ತಸ್ಯ ವಚಃ ಶ್ರುತ್ವಾ ದರ್ಶಯನ್ ಭಕ್ತವಶ್ಯತಾಮ್ ।
ಮಂದಂ ಸ್ಮಿತ್ವಾಽಭಿತಃ ಪಶ್ಯನ್ ನಂದಸೂನುರುವಾಚ ಹ ॥೧॥

ಶ್ರೀಕೃಷ್ಣ ಉವಾಚ-

ಸಾಧು ಸಾಧು ಮಹಾಭಾಗ ಭಕ್ತೋಽಸಿ ಪರಮಸ್ಸಖೇ ।
ಕಲಿನಾಶಂ ಪ್ರವಕ್ಷ್ಯಾಮಿ ಶ್ರುಣುಷ್ವೈಕಾಗ್ರಮಾನಸಃ ॥೨॥

ಯಸ್ತು ಸ್ವಧರ್ಮನಿರತೋ ದಾಂತಃ ಶಾಂತಃ ಪ್ರಸನ್ನಧೀಃ ।
ಸರ್ವಭೂತದಯಾಯುಕ್ತೋ ನ ತಂ ವೈ ಬಾಧತೇ ಕಲಿಃ ॥೩॥

ಯಸ್ತು ಮದ್ದೀಕ್ಷಯಾ ಯುಕ್ತೋ ಮದರ್ಚನಪರಸ್ಸದಾ ।
ಮತ್ಕಥೈಕಧನೋ ನಿತ್ಯಂ ನ ತಂ ವೈ ಬಾಧತೇ ಕಲಿಃ ॥೪॥

ಮನ್ನಾಮರಸಿಕೋ ನಿತ್ಯಂ ಮತ್ಪ್ರಸಾದೈಕಭಕ್ಷಕಃ ।
ಮದ್ಭಕ್ತದರ್ಶನಾಮೋದೀ ನ ತಂ ವೈ ಬಾಧತೇ ಕಲಿಃ ॥೫॥

---

೧ ಹೀಗೆ ಕೇಳಿದ ದಧಿಪಾಲನ ವಚನವನ್ನು ಕೇಳಿ ತಾನು ಭಕ್ತವಶನೆಂಬುದನ್ನು ತೋರುತ್ತ ಮೆಲು ನಕ್ಕು ಸುತ್ತಲೂ ನೋಡುತ್ತ ಕೃಷ್ಣನು ಹೇಳಿದನು.

೨ ಒಳ್ಳೆಯದು, ಭಾಗ್ಯವಂತನೇ! ನೀನು ನನ್ನ ಗೆಳೆಯನೂ ಪರಮಭಕ್ತನೂ ಆಗಿರುವೆ. ಕಲಿನಾಶದ ಉಪಾಯವನ್ನು ಹೇಳುವೆನು. ಚಿತ್ತವಿಟ್ಟು ಕೇಳು.

೩ ಯಾರು ಸ್ವಧರ್ಮನಿರತರೋ, ಜಿತೇಂದ್ರಿಯರೋ, ಭಗವಂತನಲ್ಲಿ ಮನಸ್ಸಿಟ್ಟವರೋ, ಪ್ರಸನ್ನ ಮನಸ್ಸುಳ್ಳವರೋ ಎಲ್ಲ ಪ್ರಾಣಿಗಳಲ್ಲಿ ದಯಾವಂತರೋ ಅಂತಹವರನ್ನು ಕಲಿಯು ಬಾಧಿಸಲಾರ.

೪ ಯಾವಾಗಲೂ ನನ್ನ ದೀಕ್ಷೆಯಿಂದ ಕೂಡಿದ್ದು, ನನ್ನ ಪೂಜೆಯಲ್ಲಿ ನಿರತನಾದವನು ಹಾಗೂ ನನ್ನ ಕಥಾಶ್ರವಣವೇ ಸಂಪತ್ತೆಂದು ತಿಳಿದವನನ್ನು ಕಲಿಯು ಬಾಧಿಸುವುದಿಲ್ಲ.

ವಿಶೇಷ : ದೀಕ್ಷೆಯು ಎರಡು ವಿಧವಾದುದು. ಗೋಪಿಚಂದನ ಮುದ್ರೆ, ಶಿಖಾ, ಯಜ್ಞೋಪವೀತ ಮೊದಲಾದವುಗಳ ಧಾರಣವು ಬಾಹ್ಯದೀಕ್ಷೆಯಾದರೆ ವಿಷ್ಣು ಭಕ್ತಿಯು ಆಂತರಿಕ ದೀಕ್ಷೆಯೆನಿಸುವುದು.

೫ ನನ್ನ ನಾಮರಸದಿಂದ ತೃಪ್ತನು, ನನ್ನ ಪ್ರಸಾದವನ್ನು ಮಾತ್ರ ತಿನ್ನುವವನು, ನನ್ನ ಭಕ್ತರ ದರ್ಶನದಿಂದ ಸಂತೋಷ ಹೊಂದಿದವನನ್ನು ಕಲಿಯು ಬಾಧಿಸಲಾರ.

ಮದುತ್ಸವೈಕನಿಷ್ಠೋ ಯೋ ಗೃಹೇ ವಾ ದೇವತಾಲಯೇ ।
ಮದರ್ಥಮೇವ ಸತ್ಕರ್ಮಾ ನ ಹಿ ತಂ ಬಾಧತೇ ಕಲಿಃ ॥೬॥

ಧನುರ್ಮಾಸೇಽಪ್ಯುಷಃಕಾಲೇ ಮುದ್ಗಾನ್ನೈರ್ಹರಿಪೂಜನಮ್ ।
ತುಲಸ್ಯಾ ಅರ್ಚನಂ ಕುರ್ಯಾನ್ನ ವೈ ತಂ ಬಾಧತೇ ಕಲಿಃ ॥೭॥

ಉಪೋಷ್ಯ ಯಸ್ತು ಹೃಷ್ಟಾತ್ಮಾ ಮದ್ದಿನೇಷು ಮದರ್ಚಕಃ ।
ಪರೇದ್ಯುರ್ಭೋಜಯೇದ್ಭಕ್ತಾನ್ ನ ಹಿ ತಂ ಬಾಧತೇ ಕಲಿಃ ॥೮॥

ಯತ್ರ ಶ್ರೋತ್ರಿಯಪೂಜಾ ಚ ಯತ್ರ ಪುಣ್ಯಾಶ್ಚ ವೈಷ್ಣವಾಃ ।
ಯತ್ರ ವಿಷ್ಣುಕಥಾ ದಿವ್ಯಾ ತತ್ರ ಸನ್ನಿಹಿತೋ ಹರಿಃ ॥೯॥

ಯತೋ ಹರಿಸ್ತತೋ ಲಕ್ಷ್ಮೀಃ ಯತೋ ಲಕ್ಷ್ಮೀಸ್ತತಃ ಶ್ರುತಿಃ ।
ಯತ್ರ ಶ್ರುತಿಸ್ತತ್ರ ದೇವಾಃ ಯತೋ ದೇವಾಸ್ತತೋ ಜಯಃ ॥೧೦॥

ಯತೋ ಜಯಸ್ತತಃ ಶುದ್ಧಿರ್ಯತಃ ಶುದ್ಧಿಸ್ತತೋ ಧನಮ್ ।
ಯತೋ ಧನಂ ತತೋಽನ್ನಾದ್ಯಮನ್ನದಾನಂ ಕಲೌ ತಪಃ ॥೧೧॥

---

೬ ಮನೆಯಲ್ಲಾಗಲೀ ದೇವಾಲಯದಲ್ಲಾಗಲೀ ನನ್ನ ಉತ್ಸವಗಳನ್ನು ನಡೆಸುವವನು ನನ್ನ ಪ್ರೀತಿಗಾಗಿ ಸತ್ಕರ್ಮಗಳನ್ನು ಆಚರಿಸುವವನನ್ನು ಕಲಿಯು ಬಾಧಿಸುವುದಿಲ್ಲ.

೭ ಧನುರ್ಮಾಸದ ಉಷಃಕಾಲದಲ್ಲಿ ಮುದ್ಗಾನ್ನದಿಂದ ಹರಿಯನ್ನು ಪೂಜಿಸಿ ತುಲಸಿಯನ್ನು ಅರ್ಚಿಸಿದವನನ್ನು ಕಲಿಯು ಬಾಧಿಸುವುದಿಲ್ಲ.

೮ ಏಕಾದಶಿಯಂದು ಸಂತೋಷದಿಂದ ಉಪವಾಸ ಮಾಡಿ ನನ್ನನ್ನು ಪೂಜಿಸಿ ದ್ವಾದಶಿಯಂದು ವೈಷ್ಣವರಿಗೆ ಭೋಜನ ಮಾಡಿಸಿದವನನ್ನು ಕಲಿಯು ಬಾಧಿಸುವುದಿಲ್ಲ.

೯ ಶ್ರೋತ್ರಿಯಬ್ರಾಹ್ಮಣರ ಪೂಜೆ ನಡೆಯುವಲ್ಲಿ, ಪುಣ್ಯವಂತರಾದ ವಿಷ್ಣುಭಕ್ತರು ವಾಸ ಮಾಡುವಲ್ಲಿ ವಿಷ್ಣುಕಥೆಗಳು ನಡೆಯುವ ಸ್ಥಳದಲ್ಲಿ ಹರಿಯು ಸನ್ನಿಹಿತನಾಗಿರುವನು.

೧೦ ಹರಿಯಿದ್ದಲ್ಲಿ ಲಕ್ಷ್ಮೀ ಇರುವಳು. ವಿದ್ಯಾಭಿಮಾನಿನಿಯಾದ ಲಕ್ಷ್ಮೀ ಇರುವಲ್ಲಿ ವೇದಗಳಿರುವವು. ವೇದಗಳಿರುವಲ್ಲಿ ದೇವತೆಗಳು, ದೇವತೆಗಳಿದ್ದಲ್ಲಿ ಜಯವಾಗುವುದು.

೧೧ ಜಯವಿರುವಲ್ಲಿ ಶುದ್ಧಿ, ಶುದ್ಧಿಯಿಂದ ಧನ, ಧನವಿರುವಲ್ಲಿ ಅನ್ನಾದಿಗಳು, ಅನ್ನದಾನವೇ ಕಲಿಯುಗದಲ್ಲಿ ತಪವೆನ್ನಿಸುವುದು.

ಅನ್ನಮೇವ ಪರಂ ಬ್ರಹ್ಮ ಸರ್ವಮನ್ನೇ ಪ್ರತಿಷ್ಠಿತಮ್ ।
ದುರ್ಭಿಕ್ಷೇ ಚಾನ್ನದಾತಾರಂ ಸುಭಿಕ್ಷೇ ಚ ಹಿರಣ್ಯದಮ್ ।
ಚತುರೋಽಹಂ ನಮಸ್ಯಾಮಿ ರಣೇ ಧೀರಂ ಋಣೇ ಶುಚಿಮ್ ॥೧೨॥

ವೈಶಾಖೇ ವಾ ತುಲಾಯಾಂ ತು ಮಾಘೇ ವಾ ಕಾರ್ತಿಕೇಽಪಿ ವಾ ।
ಸ್ನಾತಿ ಯೋ ವೈ ಮಹಾನದ್ಯಾಂ ನ ತಂ ವೈ ಬಾಧತೇ ಕಲಿಃ ॥೧೩॥

ತುಲಸೀಕರವೀರಾದ್ಯೈಃ ಸಾಲಗ್ರಾಮಪ್ರಪೂಜಕಃ ।
ದಧ್ಯನ್ನದಾತಾ ವೈಶಾಖೇ ನ ತಂ ವೈ ಬಾಧತೇ ಕಲಿಃ ॥೧೪॥

ಕಾರ್ತಿಕ್ಯಾಂ ದೀಪದಾತಾ ಯೋ ಮಾಘೇ ಕಂಬಲದಾಯಕಃ ।
ಪಂಚಯಜ್ಞಪರೋ ಯಸ್ತು ನ ತಂ ವೈ ಬಾಧತೇ ಕಲಿಃ ॥೧೫॥

---

೧೨ ಅನ್ನವೇ ಪರಬ್ರಹ್ಮ ಎನಿಸುವುದು. ಜೀವನವೆಲ್ಲ ಅನ್ನವನ್ನೇ ಆಶ್ರಯಿಸಿದೆ. ಬರಗಾಲದಲ್ಲಿ ಅನ್ನ ಹಾಗೂ ಸುಭಿಕ್ಷಕಾಲದಲ್ಲಿ ಬಂಗಾರ ದಾನ ಮಾಡುವವನನ್ನು ರಣರಂಗದಲ್ಲಿ ಬೆನ್ನು ತೋರಿಸದವನನ್ನು, ಪಡೆದ ಋಣವನ್ನು ತೀರಿಸಿ ಶುಚಿಯಾದವನನ್ನು ಚತುರನಾದ ನಾನು ನಮಸ್ಕರಿಸುವೆನು.

**ವಿಶೇಷ :** ಅದ್ಯತೇ ಅತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತ ಇತಿ ।

ಜೀವರುಗಳನ್ನೆಲ್ಲ ಭಗವಂತನು ಪ್ರಲಯಕಾಲದಲ್ಲಿ ತಿನ್ನುವನು. ಜೀವರುಗಳೆಲ್ಲ ಭಗವಂತನನ್ನು ಉಪಜೀವಿಸಿಕೊಂಡಿರುವರು. ಆದುದರಿಂದ ಭಗವಂತನು ಅನ್ನವೆನಿಸುವನು.

೧೩ ವೈಶಾಖಮಾಸದಲ್ಲಿ ಸೂರ್ಯನು ತುಲಾರಾಶಿಯಲ್ಲಿರುವಾಗ ಮಾಘಮಾಸದಲ್ಲಿ ಹಾಗೂ ಕಾರ್ತಿಕಮಾಸದಲ್ಲಿ ಮಹಾನದಿಗಳಲ್ಲಿ, ಸ್ನಾನಮಾಡಿದವನನ್ನು ಕಲಿಯು ಬಾಧಿಸುವುದಿಲ್ಲ.

೧೪ ತುಲಸೀ, ಕರವೀರಪುಷ್ಪಗಳಿಂದ ಸಾಲಗ್ರಾಮವನ್ನು ಪೂಜಿಸುವವನು, ವೈಶಾಖ ಮಾಸದಲ್ಲಿ ಮೊಸರು ಬುತ್ತಿಯನ್ನು ದಾನ ಮಾಡಿದವನನ್ನು ಕಲಿಯು ಬಾಧಿಸುವುದಿಲ್ಲ.

೧೫ ಕಾರ್ತಿಕಮಾಸದಲ್ಲಿ ದೀಪವನ್ನು, ಮಾಘಮಾಸದಲ್ಲಿ ಕಂಬಳಿಯನ್ನು ನೀಡುವವನು. ನಿತ್ಯದಲ್ಲಿ ಪಂಚಯಜ್ಞಗಳನ್ನು ಆಚರಿಸುವವನನ್ನು ಕಲಿಯು ಬಾಧಿಸುವುದಿಲ್ಲ.

**ವಿಶೇಷ :** ಪಾಠೋ ಹೋಮಶ್ಚಾತಿಥೀನಾಂ ಸಪರ್ಯಾ ತರ್ಪಣಂ ಬಲಿಃ ।
ಏತೇ ಪಂಚ ಮಹಾಯಜ್ಞಾಃ ಬ್ರಹ್ಮಯಜ್ಞಾದಿನಾಮಕಾಃ ॥೧೬॥

ಧನುರ್ಮಾಸೇಽಪ್ಯುಷಃಕಾಲೇ ಮುದ್ಗಾನ್ನೈರ್ಹರಿಪೂಜನಮ್ ।
ಪ್ರತಿವರ್ಷಂ ಪ್ರಕುರ್ವೀತ ನ ತಂ ವೈ ಬಾಧತೇ ಕಲಿಃ ॥೧೬॥

ಶೃಣೋತಿ ಯೋ ಭಾಗವತಂ ನಿತ್ಯಂ ಗೀತಾಂ ತು ಯಃ ಪಠೇತ್ ।
ದ್ವಾದಶಾಕ್ಷರಜಾಪೀ ಯೋ ನ ತಂ ವೈ ಬಾಧತೇ ಕಲಿಃ ॥೧೭॥

ಭಕ್ತ್ಯಾ ತು ಭಾರತಂ ಪ್ರಾತಃ ಶೃಣುಯಾದ್ವಾ ಪಠೇತ್ತು ಯಃ ।
ಸಹಸ್ರನಾಮಪಠಿತಾ ನ ಹಿ ತಂ ಬಾಧತೇ ಕಲಿಃ ॥೧೮॥

ಯೇ ವೈಷ್ಣವಕಥಾಂ ಪುಣ್ಯಾಂ ಶ್ರಾವಯಂತಿ ದ್ವಿಜನ್ಮನಃ ।
ಶ್ರೀರಾಮಗಾಥಾಂ ಮಧ್ಯಾಹ್ನೇ ನ ತಾನ್ ವೈ ಬಾಧತೇ ಕಲಿಃ ॥೧೯॥

ಯೇ ವಿಷ್ಣ್ವಾಲಯಕರ್ತಾರೋ ವಿಷ್ಣುಕರ್ಮರತಾ ನರಾಃ ।
ಪೂಜಾದ್ರವ್ಯಪ್ರದಾತಾರೋ ನ ಹಿ ತಾನ್ ಬಾಧತೇ ಕಲಿಃ ॥೨೦॥

ಪ್ರಪಾರಾಮಾದಿಕರ್ತಾರಃ ತುಷ್ಟ್ಯರ್ಥಂ ಪರಮಾತ್ಮನಃ ।
ದದತೇ ಬಿಲ್ವಪತ್ರಾಣಿ ನ ತಾನ್ವೈ ಬಾಧತೇ ಕಲಿಃ ॥೨೧॥

---

ಎಂಬ ಅಮರಕೋಶಕ್ಕೆ ಅನುಗುಣವಾಗಿ ಪಂಚಯಜ್ಞಗಳೆಂದರೆ- ಬ್ರಹ್ಮಯಜ್ಞ, ವೈಶ್ವದೇವ, ಅತಿಥಿಪೂಜೆ, ಪಿತೃತರ್ಪಣ, ಬಲಿಹರಣಗಳು.)

೧೬ ಧನುರ್ಮಾಸದ ಉಷಃಕಾಲದಲ್ಲಿ ಮುದ್ಗಾನ್ನದಿಂದ ಹರಿಪೂಜೆಯನ್ನು, ಪ್ರತಿ ವರುಷ ಆಚರಿಸುವವನನ್ನು ಕಲಿಯು ಬಾಧಿಸಲಾರ.

೧೭ ನಿತ್ಯದಲ್ಲಿ ಭಾಗವತವನ್ನು ಕೇಳುವ ಹಾಗೂ ಗೀತೆಯನ್ನು ಪಠಿಸುವವನನ್ನು ವಾಸುದೇವದ್ವಾದಶಾಕ್ಷರಮಂತ್ರ ಜಪಿಸುವವನನ್ನು ಕಲಿಯು ಬಾಧಿಸುವುದಿಲ್ಲ.

೧೮ ಪ್ರಾತಃ ಕಾಲದಲ್ಲಿ ಭಕ್ತಿಯಿಂದ ಮಹಾಭಾರತವನ್ನು ಯಾರು ಪಠಿಸುವರೋ ಅಥವಾ ಕೇಳುವರೋ, ವಿಷ್ಣುವಿನ ಮಂಗಳಕರವಾದ ಸಹಸ್ರನಾಮಗಳನ್ನು ಪಠಿಸುವರೋ ಅವರನ್ನು ಕಲಿಯು ಬಾಧಿಸಲಾರ.

೧೯ ವಿಷ್ಣುವಿನ ಹಾಗೂ ವಿಷ್ಣುಭಕ್ತರ ಕಥೆಗಳನ್ನು ದ್ವಿಜರಿಗೆ ಹೇಳುವವನನ್ನು ಹಾಗೂ ಮಧ್ಯಾಹ್ನ ಸಮಯದಲ್ಲಿ ರಾಮಾಯಣವನ್ನು ಪಠಿಸುವವನನ್ನು ಕಲಿಯು ಬಾಧಿಸುವುದಿಲ್ಲ.

೨೦ ವಿಷ್ಣುವಿನ ದೇವಾಲಯಗಳನ್ನು ನಿರ್ಮಿಸುವವರು, ವಿಷ್ಣುವಿಗೆ ಪ್ರಿಯವಾದ ಶ್ರುತಿ ಸ್ಮೃತಿಗಳಲ್ಲಿ ಹೇಳಿದ ವಿಹಿತ ಕರ್ಮಗಳನ್ನಾಚರಿಸುವವರು ಹರಿಯ ಪೂಜೆಯ ಸಾಧನಗಳನ್ನು ದಾನ ನೀಡುವವರನ್ನು ಕಲಿಯು ಬಾಧಿಸುವುದಿಲ್ಲ.

೨೧ ಪರಮಾತ್ಮನ ಪ್ರೀತಿಗಾಗಿ ಅರವಟ್ಟಿಗೆ, ಉದ್ಯಾನವನಗಳನ್ನು ನಿರ್ಮಿಸಿದವನು,

ಪೂಜಾರ್ಥಂ ತುಲಸೀಪದ್ಮಪುಷ್ಪಾಣ್ಯನ್ಯಾನಿ ವಾ ಹರೇಃ ।
ಯೇ ಪರೇಭ್ಯಃ ಪ್ರಯಚ್ಛಂತಿ ನ ಹಿ ತಾನ್ ಬಾಧತೇ ಕಲಿಃ ॥೨೨॥

ಉಪಕರ್ತಾ ಚ ಸರ್ವೇಷಾಂ ಸರ್ವಭೂತದಯಾಪರಃ।
ಯೋ ಮಹಾಲಯಕರ್ತಾ ಸ್ಯಾತ್ ನ ಹಿ ತಂ ಬಾಧತೇ ಕಲಿಃ ॥೨೩॥

ಪಿತೃಶುಶ್ರೂಷಕೋ ನಿತ್ಯಂ ಗುರುಭಕ್ತಿಂ ಕರೋತಿ ಯಃ ।
ವಿಪ್ರಾಭಿವಂದನಂ ಕುರ್ಯಾತ್ ನ ಹಿ ತಂ ಬಾಧತೇ ಕಲಿಃ ॥೨೪॥

ಪತಿವ್ರತಾ ತು ನಾರೀಣಾಂ ಪತಿವಾಕ್ಯಾನುಸಾರಿಣೀ ।
ಮೃತಭರ್ತಾ ಯದಾ ಸಾಧ್ವೀ ಗಚ್ಛತ್ಯೇವಂ ಸಮಾಗಮಮ್ ।
ಪ್ರಾಪ್ನೋತಿ ವೈಷ್ಣವಂ ಧಾಮ ಯತ್ರ ಗತ್ವಾ ನ ಸಂಸರೇತ್ ॥೨೫॥

---

ದೇವರ ಪೂಜೆಗೋಸುಗ, ಬಿಲ್ವಪತ್ರಗಳನ್ನು ನೀಡುವವರನ್ನು ಕಲಿಯು ಬಾಧಿಸುವುದಿಲ್ಲ.

೨೨ ಪರಮಾತ್ಮನ ಅರ್ಚನೆಗಾಗಿ ತುಲಸಿ, ಕಮಲ ಮುಂತಾದ ಪುಷ್ಪಗಳನ್ನು ಯಾರು ಪೂಜಕರಿಗೆ ನೀಡುವರೋ ಅವರನ್ನು ಕಲಿಯು ಬಾಧಿಸಲಾರ.

೨೩ ಎಲ್ಲ ಪ್ರಾಣಿಗಳಲ್ಲಿ ದಯೆಯುಳ್ಳವನೂ, ಎಲ್ಲರಿಗೂ ಉಪಕಾರ ಮಾಡುವವನೂ ಸರ್ವಪಿತೃಗಳ ಪ್ರೀತಿಗಾಗಿ ಮಹಾಲಯವನ್ನು (ಪಕ್ಷ) ಆಚರಿಸುವವನನ್ನು ಕಲಿಯು ಬಾಧಿಸಲಾರ.

೨೪ ನಿತ್ಯವೂ ತಂದೆ ತಾಯಿಗಳನ್ನು ಸೇವಿಸುವವನು, ಗುರುಗಳಲ್ಲಿ ಭಕ್ತಿಯುಳ್ಳವನು ಬ್ರಾಹ್ಮಣರನ್ನು ನಮಸ್ಕರಿಸುವವನನ್ನು ಕಲಿಯು ಬಾಧಿಸಲಾರ.

೨೫ ಪತಿಯ ಆಜ್ಞೆಯನ್ನು ಪಾಲಿಸುವ ಪತಿವ್ರತೆಯಾದ ನಾರಿಯು ಪತಿಯು ಮೃತನಾಗಲು ಸಹಗಮನ ಮಾಡಿದ ಸತಿಯು ಮತ್ತೆ ಸಂಸಾರವಿಲ್ಲದ ವಿಷ್ಣುಲೋಕವನ್ನು ಹೊಂದುವಳು.

ವಿಶೇಷ : ಇದು ಸ್ತುತಿ ಪರವಾಕ್ಯವೆಂದು ತಿಳಿಯಬೇಕು. ಅಥವಾ ಮೋಹಕವೆಂದು ತಿಳಿಯಬೇಕು. ಜ್ಞಾನವಿಲ್ಲದೇ ಅನ್ಯಸಾಧನಗಳಿಂದ ಮೋಕ್ಷವನ್ನು ಹೇಳಿದರೆ ಪಾಪಗಳಿಂದ ಮುಕ್ತಿ, ಅಥವಾ ಪ್ರಾಶಸ್ತ್ಯವನ್ನು ತಿಳಿಸುವ ಸ್ತುತಿ ಪರ ವಾಕ್ಯಗಳು ಎಂದು ತಿಳಿಯಬೇಕು. ಅವುಗಳಿಂದ ಸಾಕ್ಷಾತ್ತಾಗಿ ವೈಕುಂಠಪ್ರಾಪ್ತಿಯನ್ನೇ ಹೇಳಿದ್ದರೆ ಅವು ಮೋಹಕವೆಂದು ತಿಳಿಯಬೇಕು. ಈ ರೀತಿಯಾಗಿ ಗೀತಾಭಾಷ್ಯವು ತಿಳಿಸುತ್ತದೆ. ಆ ವಾಕ್ಯಗಳನ್ನು ಈ ರೀತಿಯಾಗಿವೆ.

ತತ್ರ ಪಾಪಾದಿಮುಕ್ತಿಃ ಸ್ತುತಿಪರತಾ ಚ ।

**ಸರ್ವಧರ್ಮಾನ್ ಪರಿತ್ಯಜ್ಯ ಭಜೇತ್ಸರ್ವಾತ್ಮನಾ ಪತಿಮ್ ।**
**ಪತಿಶುಶ್ರೂಷಣಂ ನಾರ್ಯಾಃ ಸ್ವರ್ಗಸೋಪಾನಪಂಕ್ತಯಃ ।**
**ಏವಂ ವೈ ಕುರುತೇ ನಾರೀ ನ ತಾಂ ವೈ ಬಾಧತೇ ಕಲಿಃ ॥೨೬॥**

**ಬಹುನಾತ್ರ ಕಿಮುಕ್ತೇನ ಸಖೇ ತತ್ತ್ವಂ ವದಾಮ್ಯಹಮ್ ।**
**ದಯಾಲುಃ ಸರ್ವಭೂತೇಷು ನ ಹಿ ತಂ ಬಾಧತೇ ಕಲಿಃ ॥೨೭॥**

**ಸದಾ ಮಾಂ ಭಜತೇ ಯೋ ವೈ ಸರ್ವಪಾಪೈಃ ಪ್ರಮುಚ್ಯತೇ ।**
**ತಸ್ಮಾತ್ಸರ್ವಪ್ರಯತ್ನೇನ ಭಜ ಮಾಂ ಸರ್ವದಾ ಸಖೇ ॥೨೮॥**

**॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ ದ್ವಾವಿಂಶೋಽಧ್ಯಾಯಃ ॥**

---

ಬ್ರಹ್ಮಜ್ಞಾನಂ ವಿನಾ ಮುಕ್ತಿಃ ನ ಕಥಂಚಿದವೇಕ್ಷ್ಯತೇ ।
ಯಾನಿ ತೀರ್ಥಾದಿವಾಕ್ಯಾನಿ ಕರ್ಮಾದಿವಿಷಯಾಣಿ ಚ ॥

ಸ್ತಾವಕಾನ್ಯೇವ ತಾನಿ ಸ್ಯುರಜ್ಞಾನಾಂ ಮೋಹಕಾನಿ ವಾ ।
ಭವೇನ್ಮೋಕ್ಷಸ್ತು ಮದ್ದೃಷ್ಟೇಃ ನಾನ್ಯತಸ್ತು ಕಥಂಚನ ॥

ಅತಃ ಅಪರೋಕ್ಷ ಜ್ಞಾನಾದೇವ ಮೋಕ್ಷಃ ಕರ್ಮ ತು ತತ್ಸಾಧನಮೇವ ।
(ಗೀತಾಭಾಷ್ಯ ೩-೨೦)

೨೬ ಬೇರೆಲ್ಲ ಧರ್ಮಗಳನ್ನು ಬಿಟ್ಟು ಎಲ್ಲ ರೀತಿಯಿಂದ ಪತಿಯನ್ನೇ ಸೇವಿಸಬೇಕು. ಪತಿ ಸೇವೆಯು ಸ್ತ್ರೀಯರಿಗೆ ಸ್ವರ್ಗಕ್ಕೇರುವ ಮೆಟ್ಟಿಲೇ ಸರಿ. ಹೀಗೆ ಪತಿಯನ್ನು ಸೇವಿಸುವ ಸ್ತ್ರೀಯನ್ನು ಕಲಿಯು ಬಾಧಿಸಲಾರ.

೨೭ ಮಿತ್ರನೇ ಹೆಚ್ಚಿಗೆ ಹೇಳುವುದರಿಂದೇನು ಪ್ರಯೋಜನ. ತತ್ವವನ್ನರುಹುವೆನು ಕೇಳು. ಎಲ್ಲ ಜೀವರಲ್ಲಿ ದಯೆ ತೋರುವವನನ್ನು ಕಲಿಯು ಬಾಧಿಸುವುದಿಲ್ಲ.

೨೮ ನಿರಂತರವಾಗಿ ನನ್ನನ್ನು ಭಜಿಸಿದವನು ಎಲ್ಲ ಪಾಪಗಳಿಂದ ಮುಕ್ತನಾಗುವನು. ಆದುದರಿಂದ ಗೆಳೆಯನೇ ಮಹಾಪ್ರಯತ್ನಪೂರ್ವಕವಾಗಿ ಯಾವಾಗಲೂ ನನ್ನನ್ನು ಭಜಿಸು.

**॥ ಇಲ್ಲಿಗೆ ಇಪ್ಪತ್ತೆರಡನೇ ಅಧ್ಯಾಯವು ಮುಗಿಯಿತು ॥**

# ಅಥ ತ್ರಯೋವಿಂಶೋಽಧ್ಯಾಯಃ

ಶ್ರೀಸೂತ ಉವಾಚ-

ಅತಃ ಪರಂ ಪ್ರವಕ್ಷ್ಯಾಮಿ ಶಬರ್ಯಾಶ್ಚರಿತಂ ಶುಭಮ್ ।
ರಾಮಭಕ್ತಿಕರೀ ನಿತ್ಯಂ ಸ್ವಾದುಮೂಲಫಲಾನಿ ಚ ।
ಆಸ್ವಾದ್ಯ ಕಿಂಚಿದ್ರಾಮಾಯ ನಿವೇದಯತಿ ಭಕ್ತಿತಃ ॥೧॥

ಋಷಯ ಊಚು-

ಸೂತ ಸೂತ ಮಹಾಭಾಗ ಪುರಾಣಾರ್ಥವಿಶಾರದ ।
ಶಬರ್ಯಾಖ್ಯಾನಮಸ್ಮಾಕಂ ವದ ಸೂತ ಮಹಾಮತೇ ॥೨॥

ಸೂತ ಉವಾಚ-

ಅಹಂ ಸರ್ವಂ ಪ್ರವಕ್ಷ್ಯಾಮಿ ಭಕ್ತಿಮಾರ್ಗಂ ವಿಶೇಷತಃ ।
ಪುರಾ ಕೃಷ್ಣೇನ ದೇವೇನ ದಧಿಪಾಲಾಯ ಬೋಧಿತಮ್ ॥೩॥

ಶ್ರೀಕೃಷ್ಣ ಉವಾಚ-

ಪುರಾ ತು ಶಬರೀ ಕಾಚಿತ್ ಮದ್ಭಕ್ತ್ಯೈಕರಸಾಶ್ರಯಾ ।
ಮನ್ಮನಸ್ಕಾ ಸದಾ ಸಾಧ್ವೀ ನ ವೇತ್ತಿ ಸ್ವಾಂಗಪೋಷಣಮ್ ॥೪॥

ಆಸ್ವಾದ್ಯ ಚ ಫಲಂ ಮೂಲಂ ಸ್ವಾದು ಮಹ್ಯಂ ಪ್ರಯಚ್ಛತಿ ।
ವಿರಸಂ ಭಕ್ಷಯಂತೀ ಚ ಗುಣದೋಷೌ ನ ಪಶ್ಯತಿ ॥೫॥

---

೧ ಇನ್ನು ಮುಂದೆ ಶಬರಿಯ ಚರಿತೆಯನ್ನು ಹೇಳುವೆನು. ನಿತ್ಯದಲ್ಲಿ ರಾಮನಲ್ಲಿ ಭಕ್ತಿಯಿರಿಸಿ ರುಚಿಕರವಾದ ಗಡ್ಡೆ ಗೆಣಸು ಹಾಗೂ ಹಣ್ಣುಗಳ ರುಚಿಯನ್ನು ಪರೀಕ್ಷಿಸಿ ನಂತರ ರಾಮನಿಗೆ ಭಕ್ತಿಯಿಂದ ಸಮರ್ಪಿಸುತ್ತಿದ್ದಳು.

೨ ಋಷಿಗಳು ಹೀಗೆ ಪ್ರಾರ್ಥಿಸಿದರು. ಮಹಾಜ್ಞಾನಿವರೇಣ್ಯರೂ ಪುರಾಣದ ರಹಸ್ಯಾರ್ಥಗಳನ್ನೆಲ್ಲ ಅರಿತವರೂ ಆದ ತಾವು ಶಬರಿಯ ಕತೆಯನ್ನು ನಮಗೆ ಹೇಳುವ ಕೃಪೆ ಮಾಡಬೇಕು.

೩ ಸೂತರು ಹೇಳಿದರು. ಹಿಂದೆ ದೇವೋತ್ತಮನಾದ ಕೃಷ್ಣನು ದಧಿಪಾಲನಿಗೆ ಹೇಳಿದುದೆಲ್ಲವನ್ನು ಹೇಳವೆನು. ವಿಶೇಷವಾಗಿ ಭಕ್ತಿಮಾರ್ಗವನ್ನು ಹೇಳುವೆನು.

೪ ಹಿಂದೆ ನನ್ನ ಭಕ್ತಿರಸದಲ್ಲೇ ಮುಳುಗಿದ ಶಬರೀ ಎಂಬುವಳಿದ್ದಳು. ಯಾವಾಗಲೂ ನನ್ನಲ್ಲೇ ಮನವಿರಿಸಿದ ಅವಳು ಶರೀರದ ರಕ್ಷಣೆಗೂ ಗಮನ ನೀಡುತ್ತಿರಲಿಲ್ಲ.

೫ ಫಲ-ಮೂಲಗಳ ರುಚಿಯನ್ನು ತಾನು ಗಮನಿಸಿ ಒಳ್ಳೆಯ ರುಚಿಯಾದುದನ್ನು

**ಪರಂ ಬ್ರಹ್ಮ ಪರಂ ಸಾಕ್ಷಾತ್ ರಾಮಾಖ್ಯೋ ರಾಘವಾನ್ವಯೇ ।**
**ಅವತೀರ್ಣೋ ವನಂ ಯಾತೋ ದಶಾಸ್ಯವಧಕಾರಣಾತ್ ॥೬॥**

**ಶಬರ್ಯಾ ಆಶ್ರಮಂ ಪ್ರಾಪ್ತೋ ಮದ್ಭಕ್ತಾಯಾಃ ಸಹಾನುಜಃ ।**
**ಮಾಂ ದೃಷ್ಟ್ವಾ ಸಹ ಸೌಮಿತ್ರಿಂ ತದ್ದರ್ಶನಸಮುತ್ಸುಕಮ್ ।**
**ಭಕ್ತ್ಯಾಽಽತಿಥ್ಯಂ ಕೃತವತೀ ಅರ್ಘ್ಯಪಾದ್ಯಪುರಸ್ಸರಮ್ ॥೭॥**

**ಮಮ ದತ್ತವತೀ ಮೂಲಂ ಸ್ವಾದುತ್ವಾದರ್ಧಭಕ್ಷಿತಮ್ ॥**
**ಭಕ್ತ್ಯಾ ಪರಮಯಾ ಸಾಧ್ವೀ ಸಾಶ್ರುನೇತ್ರಾ ಕೃತಾಂಜಲಿಃ ।**
**ಅವತಸ್ಥೇ ಕೃಶಾತ್ಯಂತಂ ವೇಪಮಾನಾ ತಪಸ್ವಿನೀ ॥೮॥**

**ಪ್ರೀತ್ಯಾ ರಾಮೋಽಪಿ ತದ್ದತ್ತಮುಚ್ಛಿಷ್ಟಂ ನಿಖಿಲಂ ಚ ತತ್ ।**
**ಮೂಲಂ ಭಕ್ತ್ಯಾ ಪರಾಧೀನಃ ಸ್ವೀಚಕಾರ ದಯಾನಿಧಿಃ ॥೯॥**

---

ನನಗೆ ಇತ್ತು, ಗುಣದೋಗಳನ್ನರಿಯದ ಅವಳು ರಸಹೀನವಾದವನ್ನು ತಾನು ಸೇವಿಸುತ್ತಿದ್ದಳು.

೬ ಪರಬ್ರಹ್ಮನೆನಿಸಿದ ವಿಷ್ಣುವು ರಘುವಂಶದಲ್ಲಿ ರಾಮನೆಂಬ ಹೆಸರಿನಿಂದ ಅವತರಿಸಿ ರಾವಣನ ವಧೆಗಾಗಿ ವನಕ್ಕೆ ತೆರಳಿದ.

೭ ತಮ್ಮನಾದ ಲಕ್ಷ್ಮಣನಿಂದ ಸಮೇತನಾಗಿ ಶಬರಿಯ ಆಶ್ರಮಕ್ಕೆ ಹೋದ. ಅಲ್ಲಿ ರಾಮನನ್ನು ನೋಡಲು ಶಬರಿಯು ಬಂದಳು. ತನ್ನ ಆಶ್ರಮಕ್ಕೆ ಬಂದಿರುವ ಲಕ್ಷ್ಮಣಸಮೇತನಾದ ರಾಮನನ್ನು ಉಪಚರಿಸಿದಳು. ಅರ್ಘ್ಯಪಾದ್ಯಾದಿಗಳನ್ನು ನೀಡಿ ಭಕ್ತಿಯಿಂದ ಆತಿಥ್ಯವನ್ನು ಮಾಡಿದಳು.

೮ ಫಲ-ಮೂಲಗಳನ್ನು ತಾನು ಆಸ್ವಾದಿಸಿ ರುಚಿಯಾದ ಉಳಿದ ಫಲಗಳನ್ನು ರಾಮನಿಗೆ ನೀಡಿದಳು. ಸಾಧು ಸ್ವಭಾವದ ಆ ಶಬರಿಯು ನೀರು ತುಂಬಿದ ಕಣ್ಣುಗಳಿಂದ ಮಾತು ಬಾರದೇ ಅತ್ಯಂತ ಕೃಶಳಾದ ಆ ತಪಸ್ವಿನಿಯು ನಡುಗುತ್ತ ಕೈಮುಗಿದು ನಿಂತಳು.

೯ ರಾಮನು ಕೂಡ ಪ್ರೀತಿಯಿಂದ ಅವಳು ನೀಡಿದ ಎಂಜಲನ್ನು ಸ್ವೀಕರಿಸಿ ತಾನು ಭಕ್ತಪ್ರಿಯನು ದಯಾನಿಧಿಯು ಎಂದು ತೋರಿಸಿದ.

ವಿಶೇಷ : ಶಬರಿಯು ರಾಮನಿಗೆ ನೀಡಿದುದು ಎಂಜಲು ಹಣ್ಣು ಮೊದಲಾದವುಗಳನ್ನಲ್ಲ. ತಾತ್ಪರ್ಯನಿರ್ಣಯದಲ್ಲಿ ವಾಲ್ಮೀಕಿರಾಮಾಯಣದಲ್ಲಿ ಸಂಗ್ರಹರಾಮಾಯಣದಲ್ಲಿಯೂ ಅದರ ಪ್ರಸ್ತಾಪವೇ ಇಲ್ಲ. ''ಸ್ವಯಮಾಸಾದ್ಯ ಮಾಧುರ್ಯಂ ಪರೀಕ್ಷ್ಯ ಪರಿಭಕ್ಷ್ಯ ಚ'' ಎಂಬ ಪದ್ಮಪುರಾಣದ ವಾಕ್ಯವಿದೆ. ಒಂದು ಗಿಡದ ಹಣ್ಣುಗಳನ್ನು ತಿಂದು ಪರೀಕ್ಷಿಸಿ ಅದೇ ಗಿಡದ ಬೇರೆ ಹಣ್ಣುಗಳನ್ನು ಸಂಗ್ರಹಿಸಿ ರಾಮನಿಗೆ ನೀಡಿದಳು

ತನ್ನಿಷ್ಠಾಮಪಿ ತದ್ಭಕ್ತಿಂ ದೃಷ್ಟ್ವಾ ರಾಮೋಽತಿವಿಸ್ಮಿತಃ ।
ಪ್ರಹಸನ್ ಪ್ರಾಹ ಧರ್ಮಾತ್ಮಾ ಪ್ರೀತೋ ವೈರಾಗ್ಯಭಾಗ್ಯತಃ ॥೧೦॥

ಶ್ರೀರಾಮ ಉವಾಚ-

ಪರಿತುಷ್ಟೋಽಸ್ಮಿ ಭದ್ರಂ ತೇ ವತ್ಸೇ ಭಕ್ತ್ಯಾ ಸಪರ್ಯಯಾ ।
ವರದೋಽಹಮಿಹ ಪ್ರಾಪ್ತೋ ಯಥೇಷ್ಟಂ ವೃಣುಯಾ ವರಮ್ ॥೧೧॥

ಏವಮುಕ್ತಾ ಭಗವತಾ ರಾಮೇಣಾಕ್ಲಿಷ್ಟಕರ್ಮಣಾ ।
ಸಾಶ್ರುಕಂಠಾ ತು ಸಾ ಪ್ರಾಹ ವೇಪಮಾನಾ ಕೃತಾಂಜಲಿಃ ॥೧೨॥

ಶಬರ್ಯುವಾಚ-

ಭಗವನ್ಪರಿತುಷ್ಟೋಽಸಿ ವರದೋ ಯದಿ ಚಾದ್ಯ ಮೇ ।
ತ್ವತ್ಸೇವಾಂ ಚ ಪ್ರಾರ್ಥಯಾಮಿ ಹ್ಯಯಮೇವ ಪರೋ ವರಃ ॥೧೩॥

---

ಎಂದು ಈ ವಾಕ್ಯಕ್ಕೆ ಅರ್ಥ ಹೇಳುತ್ತಾರೆ.

೧೦ ಶಬರಿಯ ನಿಷ್ಠೆ ಹಾಗೂ ಭಕ್ತಿಯನ್ನು ಕಂಡು ಅತಿ ವಿಸ್ಮಿತನಾದ ರಾಮನು ಅವಳ ಅತ್ಯಂತ ವೈರಾಗ್ಯದಿಂದ ಪ್ರೀತನಾಗಿ ನಗುತ್ತ ನುಡಿದನು.

ವಿಶೇಷ : ಅತಿವಿಶಿಷ್ಟವಾದ ಶ್ರದ್ಧೆ, ಭಕ್ತಿ, ವೈರಾಗ್ಯಗಳನ್ನು ಅವಳು ಹೊಂದಿರಲು ಅವಳು ಮೂಲದಲ್ಲಿ ಒಬ್ಬ ಶ್ರೇಷ್ಠ ಅಪ್ಸರೆಯಾದುದೇ ಕಾರಣ ಎಂದು ಶ್ರೀ ಮದಾಚಾರ್ಯರು ನಿರೂಪಿಸಿದ್ದಾರೆ.

ಶಾಪಾದ್ವರಾಪ್ಸರಸಮೇವ ಹಿ ತಾಂ ವಿಮೋಚ್ಯ ಶಚ್ಯಾ ಕೃತಾತ್ ಪತಿ ಪುರಸ್ತ್ವತಿದರ್ಪಹೇತೋಃ । (ಮ.ಭಾ.ತಾ.ನಿ. ೫/೪೫)

ತನ್ನ ಪತಿಯಾದ ಇಂದ್ರನ ಸಮ್ಮುಖದಲ್ಲಿ ಅತಿಯಾದ ದರ್ಪದಿಂದ ಆ ಅಪ್ಸರೆಯು ನಡೆದುಕೊಂಡಳು. ಅದನ್ನು ಗಮನಿಸಿದ ಶಚೀದೇವಿ ಶಾಪನೀಡಿದಳು. ಶಚೀದೇವಿಯ ಶಾಪಕ್ಕೆ ಅನುಗುಣವಾಗಿ ಆ ಅಪ್ಸರೆಯೇ ಶಬರಿಯಾಗಿ ಜನಿಸಿದಳು.

೧೧ ಹೇ ಶಬರಿಯೇ! ನಿನ್ನ ಪೂಜೆ ಮತ್ತು ಭಕ್ತಿಗಳಿಂದ ನಾನು ಪ್ರೀತನಾಗಿದ್ದೇನೆ. ವರದೇಶನಾದ ನಾನು ಬಂದಿದ್ದೇನೆ. ಬೇಕಾದ ವರವನ್ನು ಕೇಳಿಕೋ.

೧೨ ಇಚ್ಛಾಮಾತ್ರದಿಂದ ಸಮಸ್ತಕಾರ್ಯಗಳನ್ನು ನಿರ್ವಹಿಸಬಲ್ಲ ರಾಮನು ಹೀಗೆ ಹೇಳಲು ಸಂತಸದಿಂದ ಕಂಠ ಬಿಗಿದು, ಕೃಶಳಾಗಿ ನಡುಗುತ್ತಿರುವ ಶಬರಿಯು ಕೈಮುಗಿದು ಹೇಳಿದಳು.

೧೩ ಭಗವಂತನೇ! ನೀನು ಪ್ರೀತನಾಗಿ ನನಗೆ ವರ ನೀಡುವುದಾದರೆ ನಾನು ನಿನ್ನ ಸೇವೆಯನ್ನು ಬೇಡುವೆನು. ಇದೇ ನನಗೆ ಬೇಕಾದ ಉತ್ತಮವಾದ ವರವಾಗಿದೆ.

**ತ್ವತ್ಕೈಂಕರ್ಯಂ ವಿನಾ ವಿಷ್ಣೋ ಅಷ್ಟೈಶ್ವರ್ಯಂ ಚ ಮೇ ನ ಚ ।**
**ಯೋಗಸಿದ್ಧಿಶ್ಚ ವಾ ನಿತ್ಯಂ ತ್ವತ್ಸಾಯುಜ್ಯಂ ಚ ವಾ ಹರೇ ॥೧೪॥**

**ಇತ್ಯುಕ್ತಃ ಸಸ್ಮಿತಃ ಪ್ರಾಹ ಭಗವಾನ್ ಭೂತಭಾವನಃ ।**
**ಕಿಂಚಿದ್ ಧ್ಯಾತ್ವಾ ರಘುಶ್ರೇಷ್ಠಃ ತದ್ಭಕ್ತ್ಯರ್ಗಲಯಾ ವೃತಃ ॥೧೫॥**

**ಶ್ರೀರಾಮ ಉವಾಚ-**

**ಮನ್ಮನಾ ಮತ್ಕಥಾಲಾಪಾ ಮದರ್ಚನಪರಾಯಣಾ ।**
**ವರ್ತಸ್ವೇಹ ಮುನೀನಾಂ ತ್ವಂ ಶುಶ್ರೂಷಣಪರಾ ವನೇ ॥೧೬॥**

**ಮತ್ಸೇವಾನಿರತಾ ಭಕ್ತ್ಯಾ ಭವ ತ್ವಂ ಭಾವಿಜನ್ಮನಿ ।**
**ಮಯಾಥಾದರಣೀಯಾ ಹಿ ಭವಿತಾ ಹಿ ಮಮಾಜ್ಞಯಾ ॥೧೭॥**

**ಮಾ ಕೃಥಾಸ್ತ್ವಂ ವೃಥಾ ದೇಹಂ ಕೃಶಂ ಮತ್ಪ್ರೀತಿಸಾಧನಮ್ ।**
**ಕುರು ಪುಣ್ಯಮಹೋರಾತ್ರಂ ಸ್ಮರ ನಿತ್ಯಮನಿತ್ಯತಾಮ್ ॥೧೮॥**

**ಧನುರ್ಮಾಸೇಽಪ್ಯುಷಃಕಾಲೇ ಮುದ್ಗಾನ್ನಂ ಮೇ ಸಮರ್ಪಯ ।**
**ತೇನ ಪುಣ್ಯಪ್ರಭಾವೇನ ದಾಸ್ಯಾಮಿ ಪರಮಾಂ ಗತಿಮ್ ॥೧೯॥**

---

೧೪ ಹೇ ವಿಷ್ಣುವೇ! ನಿನ್ನ ಸೇವೆಯನ್ನು ಬಿಟ್ಟು ಅಷ್ಟೈಶ್ವರ್ಯಗಳನ್ನು ನೀಡಿದರೂ ಬೇಡ. ಯೋಗಸಿದ್ಧಿಗಳಾಗಲೀ ನಿನ್ನ ಸಾಯುಜ್ಯವನ್ನು ಕೂಡ ನಾನು ಅಪೇಕ್ಷಿಸುವುದಿಲ್ಲ.

೧೫ ಅವಳ ಭಕ್ತಿಯಿಂದ ನಿಷ್ಕಾಮನೆಯಿಂದ ಪ್ರೀತನಾದ ಜಗವನ್ನು ಸೃಜಿಸುವ ಭಗವಂತನು ಏನೋ ಧ್ಯಾನಿಸಿದವನಂತೆ ಮಾಡಿ ಅವಳಿಗೆ ಹೇಳಿದ.

೧೬ ಇದೇ ವನದಲ್ಲಿ ನೀನು ವಾಸವಾಗಿರು. ನನ್ನನ್ನೇ ನೆನೆಯುತ್ತಿರು. ನನ್ನ ಚರಿತೆಯನ್ನಾಲಿಸುತ್ತಲಿರು. ನನ್ನನ್ನು ಪೂಜಿಸುತ್ತ ಇರು. ಇಲ್ಲಿಯ ಮುನಿಗಳನ್ನು ಸೇವಿಸುತ್ತ ಇರು.

೧೭ ಭಕ್ತಿಯಿಂದ ನನ್ನ ಸೇವೆಯಲ್ಲಿ ನಿರತಳಾದ ನೀನು ಮುಂದಿನ ಜನ್ಮದಲ್ಲಿ ನನ್ನಿಂದ ಆದರಣೀಯಳಾದ ಸ್ತ್ರೀಯಾಗಿ ಜನಿಸುವೆ.

೧೮ ನನ್ನ ಪ್ರೀತಿ ಗಳಿಸಲು ಸಾಧನವಾದ ಈ ದೇಹವನ್ನು ವ್ಯರ್ಥವಾಗಿ ದಂಡಿಸಿ ಸೊರಗಿಸಬೇಡ. ನಿತ್ಯದಲ್ಲೂ ಪುಣ್ಯಕಾರ್ಯಗಳನ್ನು ಮಾಡು. ದೇಹದ ಅನಿತ್ಯತೆಯನ್ನರಿತು ನಿತ್ಯನಾದ ನನ್ನನ್ನು ಸ್ಮರಿಸು.

೧೯ ಧನುರ್ಮಾಸದ ಉಷಃಕಾಲದಲ್ಲಿ ನನಗೆ ಮುದ್ಗಾನ್ನವನ್ನು ಸಮರ್ಪಿಸು. ಅದರ ಪುಣ್ಯಪ್ರಭಾವದಿಂದ ನಿನಗೆ ಅತಿಶ್ರೇಷ್ಠವಾದ ಗತಿಯನ್ನು ನೀಡುವೆನು.

**ಇತ್ಯುಕ್ತ್ವಾ ತೇನ ಸಾಧ್ವೀ ಸಾ ಶಬರೀ ರಾಮಶಾಸನಾತ್ ।**
**ಅಪೂಜಯತ್ತತೋ ಭಕ್ತ್ಯಾ ಚಾಪಾರ್ಕೇಽಚ್ಯುತಮೀಶ್ವರಮ್ ॥೨೦॥**

**ಮುದ್ಗಾನ್ನಂ ದೇವದೇವಾಯ ನಿವೇದ್ಯ ಶ್ರದ್ಧಯಾ ಸಖೇ ।**
**ತೇನ ಪುಣ್ಯಪ್ರಭಾವೇನ ಜಾತಾ ಸಾ ಯದುನಂದನೀ ॥೨೧॥**

**ಸೇಯಂ ಸುಭದ್ರಾ ಭಗಿನೀ ಮಮ ಕಲ್ಯಾಣದಾಯಿನೀ ।**
**ಭವಿತ್ರೀ ಪಾರ್ಥಪತ್ನೀ ಚ ಮಮ ಲೋಕಂ ಗಮಿಷ್ಯತಿ ॥೨೨॥**

---

೨೦ ರಾಮನು ಹೀಗೆ ಆಜ್ಞೆ ಮಾಡಲು ಶಬರಿಯು ಧನುರ್ಮಾಸದ ಉಷಃಕಾಲದಲ್ಲಿ ಭಗವಂತನನ್ನು ಪೂಜಿಸಿದಳು.

ವಿಶೇಷ : ಇಲ್ಲಿ ರಾಮನು ಬಂದು ಹೋದ ನಂತರ ಶಬರಿಯು ಧನುರ್ಮಾಸದಲ್ಲಿ ಪೂಜೆಮಾಡಿದವಿವರವಿದೆ. ತಾತ್ಪರ್ಯನಿರ್ಣಯ, ವಾಲ್ಮೀಕಿರಾಯಾಯಣದಲ್ಲಿ ಶಬರಿಯು ರಾಮನ ಎದುರೇ ಅಗ್ನಿಪ್ರವೇಶಮಾಡಿ ದೇಹ ತ್ಯಾಗ ಮಾಡಿದ ವಿವರಗಳಿವೆ.

**ಅನುಜ್ಞಾತಾ ತು ರಾಮೇಣ ಹುತ್ವಾತ್ಮಾನಂ ಹುತಾಶನೇ ।**
**ಜ್ವಲತ್ಪಾವಕಸಂಕಾಶಾ ಸ್ವರ್ಗಮೇವ ಜಗಾಮ ಸಾ ॥** ವಾ.ರಾ.ಕಿ. ೭೪-೩೩

ಕೆಲವು ಕಡೆಗೆ ಅಸುರಮೋಹನಕ್ಕಾಗಿ ಕಥೆಗಳನ್ನು ವ್ಯತ್ಯಾಸ ಮಾಡುವುದುಂಟು. ಇನ್ನು ರಾಮಾಯಣವು ಪ್ರತಿಕಲ್ಪದಲ್ಲೂ ನಡೆಯುವುದು. ಆದುದರಿಂದ ಬೇರೊಂದು ಕಲ್ಪದಲ್ಲಿ ನಡೆದುದನ್ನು ಇಲ್ಲಿ ಹೇಳಿರುವರೆಂದು ತಿಳಿಯಬಹುದು.

೨೧ ದೇವೋತ್ತಮನಾದ ಶ್ರೀಹರಿಗೆ ಶ್ರದ್ಧೆಯಿಂದ ಮುದ್ಗಾನ್ನವನ್ನು ಸಮರ್ಪಿಸಿ ಆ ಪುಣ್ಯಪ್ರಭಾವದಿಂದ ಯದುವಂಶದಲ್ಲಿ ಜನಿಸಿದಳು.

೨೨ ಅವಳೇ ನನ್ನ ತಂಗಿಯಾದ ಸುಭದ್ರೆಯು. ಯದುಕುಲದವರಿಗೆ ಮಂಗಳವನ್ನುಂಟು ಮಾಡುತ್ತ ಅರ್ಜುನನ ಪತ್ನಿಯಾಗಿ ಕೊನೆಗೆ ನನ್ನ ಲೋಕವನ್ನು ಹೊಂದುವಳು.

**ವಿಶೇಷ :** ಇಲ್ಲಿ ಶಬರಿಯೇ ಸುಭದ್ರೆಯಾಗಿ ಜನಿಸಿದಳು ಎಂಬುದಾಗಿ ಹೇಳಲಾಗಿದೆ. ಶ್ರೀಮದಾಚಾರ್ಯರು ಸುಭದ್ರೆಯು ಹಿಂದಿನ ಜನ್ಮದಲ್ಲಿ ತ್ರಿಜಟೆಯಾಗಿದ್ದಳು ಎಂದು ನಿರ್ಣಯಿಸಿದ್ದಾರೆ.

**ಜಾತಾ ದೇವಕ್ಯಾಂ ಸಾ ಸುಭದ್ರೇತಿ ನಾಮ್ನಾ ।**
**ಭದ್ರಾರೂಪೇಣಾನಕದುಂದುಭೇಸ್ತಾಮ್ ।**
**ಕೃತ್ವಾ ಪುತ್ರೀಂ ರೋಹಿಣೀ ಸ್ವಾಮರಕ್ಷತ್ ।**
**ಪೂರ್ವಂ ತು ಯಾಽಽಸೀತ್ ತ್ರಿಜಟೈವ ನಾಮ್ನಾ ।** ಮ.ತಾ.ನಿ. ೨೦-೩೭

**ದಧಿಪಾಲ ಉವಾಚ-**

**ಕೇನ ಪುಣ್ಯಪ್ರಭಾವೇನ ಸುಭದ್ರಾ ತ್ವರ್ಜುನಪ್ರಿಯಾ ।**
**ಏತದ್ವಿಸ್ತಾರ್ಯ ಮೇ ದೇವ ಬ್ರೂಹಿ ಕೃಷ್ಣ ದಯಾನಿಧೇ ॥೨೩॥**

**ಶ್ರೀಕೃಷ್ಣ ಉವಾಚ-**

**ಶೃಣುಷ್ವೇಕಮನಾ ಭೂತ್ವಾ ಸುಭದ್ರಾಕೌತುಕಂ ಸಖೇ ।**
**ವಿವಾಹೇ ತು ಸುಭದ್ರಾಯಾಃ ಪಿತಾ ಮಾತಾ ಚ ರೋಹಿಣೀ।**
**ಕಸ್ಯ ದೇಯಾ ಸುಭದ್ರೇತಿ ಅಭೂತಾಮಾಧಿಸಂಯುತೌ ॥೨೪॥**

---

ಸೀತಾಯಾಃ ಪ್ರಾಙ್ನಿತ್ಯಶುಶ್ರೂಷಣಾತ್ ಸಾ ।
ಬಭೂವ ವಿಷ್ಣೋರ್ಭಗಿನೀ ಪ್ರಿಯಾ ಚ ॥ ಮ.ತಾ.ನಿ. ೨೦-೩೮

ತ್ರಿಜಟೆ ಎಂಬ ರಾಕ್ಷಸಿಯು ನಿತ್ಯದಲ್ಲಿಯೂ ಸೀತೆಯ ಸೇವೆಯನ್ನು ಮಾಡಿ ಕೃಷ್ಣನ ಪ್ರಿಯತಂಗಿಯಾಗಿ ಜನಿಸಿ ಪಾರ್ಥಪತ್ನಿಯಾದಳು.

**ವಿಶೇಷ :** ಪುರಾಣಗಳಲ್ಲಿ ಕೆಲವು ಕಡೆ ವ್ಯಕ್ತಿಗಳ ವ್ಯತ್ಯಾಸವನ್ನು ಮಾಡಿ ಹೇಳುವುದುಂಟು. ಅಥವಾ ಶಬರಿಯು ಪೂರ್ವದಲ್ಲಿ ಒಬ್ಬ ಅಪ್ಸರೆ. ಶಚಿಯ ಶಾಪದಿಂದ ಬೇಡಿತಿಯಾಗಿ ಜನಿಸಿದವಳು. ಅದೇ ರೀತಿ ತ್ರಿಜಟೆಯೂ ಪೂರ್ವದಲ್ಲಿ ಅಪ್ಸರೆ. ಶಾಪದಿಂದ ರಾಕ್ಷಸಿಯಾಗಿ ಜನಿಸಿದವಳು.

ಶಚಿಯಿಂದ ಶಾಪಕ್ಕೊಳಗಾದ ಅಪ್ಸರೆಯೇ ಶಬರಿಯಾಗಿ ರಾಮನನ್ನು ಹಾಗೂ ತ್ರಿಜಟೆಯಾಗಿ ಸೀತೆಯನ್ನು ಸೇವಿಸಿ ಆ ಮೂಲಕ ಲಕ್ಷ್ಮೀನಾರಾಯಣರಿಬ್ಬರನ್ನು ಸೇವಿಸಿ ಕೃಷ್ಣನ ತಂಗಿಯಾಗಿ ಜನಿಸಿ ಅರ್ಜುನನ ಪತ್ನಿಯಾದಳು ಎಂದು ತಿಳಿಯಬಹುದು.

೨೩ ದಯಾಪರನಾದ ಕೃಷ್ಣನೇ! ಯಾವ ಪುಣ್ಯದ ಕಾರಣದಿಂದ ಸುಭದ್ರೆಯು ಅರ್ಜುನನ ಪತ್ನಿಯಾದಳು. ಇದನ್ನು ವಿಸ್ತಾರವಾಗಿ ಹೇಳು.

೨೪ ಮಿತ್ರನೇ! ಸುಭದ್ರೆಯ ಸ್ವಾರಸ್ಯಕರ ವೃತ್ತಾಂತವನ್ನು ಕೇಳು. ಸುಭದ್ರೆಯ ವಿವಾಹದ ಸಂದರ್ಭಧಲ್ಲಿ ತಂದೆಯಾದ ವಸುದೇವ ಹಾಗೂ ತಾಯಿಯಾದ ರೋಹಿಣಿಯು ಸುಭದ್ರೆಯನ್ನು ಯಾರಿಗೆ ನೀಡಿ ವಿವಾಹ ಮಾಡಬೇಕೆಂದು ಚಿಂತೆಗೊಳಗಾದರು.

**ವಿಶೇಷ :** ಸುಭದ್ರೆಯು ವಸುದೇವ-ದೇವಕಿಯರ ಮಗಳು. ಆದರೆ ಇಲ್ಲಿ ಸುಭದ್ರೆಯನ್ನು ವಸುದೇವ-ರೋಹಿಣಿಯರ ಮಗಳೆಂದು ಹೇಳಲಾಗಿದೆ. ಇದರ ನಿರ್ಣಯವನ್ನು ಶ್ರೀಮದಾಚಾರ್ಯರು ನೀಡಿದ್ದಾರೆ.

ಜಾತಾದೇವಕ್ಯಾಂ ಸಾ ಸುಭದ್ರೇತಿ ನಾಮ್ನಾ
ಭದ್ರಾರೂಪೇಣಾನಕದುಂದುಭೇಸ್ತಾಮ್ ।

**ಮಯಾ ವಿಚಾರಣಾಂ ಕೃತ್ವಾ ಸರ್ವೈಸ್ಸೈರ್ಬಾಂಧವಾದಿಭಿಃ ।**
**ಅರ್ಜುನಾಯ ಪ್ರದಾತವ್ಯಾ ಇತಿ ವೈ ನಿಶ್ಚಯಃ ಕೃತಃ ॥೨೫॥**

**ಅನ್ಯೇಽಪಿ ಬಾಂಧವಾಸ್ಸರ್ವೇ ಬಲರಾಮಾದಿಯಾದವಾಃ ।**
**ದುರ್ಯೋಧನಾಯ ದಾತವ್ಯಾ ಇತಿ ನಿಶ್ಚಿತ್ಯ ತೇಽಬ್ರುವನ್ ॥೨೬॥**

**ಅರ್ಜುನೋ ಮಮ ಭರ್ತಾ ಸ್ಯಾತ್ಕಥಂ ಪ್ರಾಪ್ಸ್ಯೇ ಮನೋರಥಮ್ ।**
**ಇತಿ ಚಿಂತಾಕುಲಾ ದೇವೀ ಸುಭದ್ರಾ ಲೋಕಸುಂದರೀ ।**
**ಮಾಂ ತು ಪ್ರಾರ್ಥಯತೇ ನಿತ್ಯಮರ್ಜುನೋ ಮೇ ಪತಿರ್ಭವೇತ್ ॥೨೭॥**

**ಕೇನೋಪಾಯೇನ ದೇವೇಶ ವದ ಮೇ ಬಂಧುವತ್ಸಲ ।**
**ಭದ್ರೇ ಮನೋಗತಂ ತೇಽದ್ಯ ಕರಿಷ್ಯಾಮಿ ನ ಸಂಶಯಃ ॥೨೮॥**

---

**ಕೃತ್ವಾ ಪುತ್ರೀಂ ರೋಹಿಣೇ ಸ್ವಾಮರಕ್ಷತ್ ।**
**ಪೂರ್ವಂ ತು ಯಾಽಽಸೀತ್ ತ್ರಿಜಟೈವ ನಾಮ್ನಾ ॥** ಮ.ಭಾ.ತಾ.ನಿ. ೨೦-೩೭

ಸುಭದ್ರೆಯು ವಸುದೇವ ದೇವಕಿಯರ ಮಗಳಾಗಿ ಜನಿಸಿದರೂ ಕೂಡ ರೋಹಿಣಿಯು ಅವಳನ್ನು ತನ್ನ ಮಗಳನ್ನಾಗಿ ಬೆಳೆಸಿದಳು. ಆದುದರಿಂದ ಅವಳನ್ನು ರೋಹಿಣಿಯ ಮಗಳೆಂದೂ ಕರೆಯುವರು.

ಹೀಗೆ ಯಾವುದೋ ಗ್ರಂಥಾಂತರದಲ್ಲಿರುವ ಅತಿ ಸಣ್ಣ ವಿಷಯಗಳು ಕೂಡ ಆಚಾರ್ಯರ ನಿರ್ಣಯದಿಂದ ಹೊರತಾಗಿಲ್ಲ. ಇದರಿಂದ ಅವರು ಸರ್ವಜ್ಞರೂ ಶ್ರೀಹರಿಯ ಅನುಗ್ರಹಪಾತ್ರರೆಂದು ತಿಳಿದುಬರುತ್ತದೆ. ಅವರು ಹೇಳಿದ ಮಾತುಗಳು ಎಷ್ಟು ಪ್ರಾಮಾಣಿಕವೆಂದು ತೋರಿ ಬರುವುದು.

೨೫ ನನ್ನೊಡನೆ ಹಾಗೂ ಎಲ್ಲ ಬಾಂಧವರೊಡನೆ ವಿಚಾರ ಮಾಡಿ ಸುಭದ್ರೆಯನ್ನು ಅರ್ಜುನನಿಗೆ ನೀಡುವುದೆಂದು ನಿಶ್ಚಯಿಸಲಾಯಿತು.

೨೬ ಉಳಿದ ಬಂಧುಗಳು, ಬಲರಾಮನೇ ಮೊದಲಾದ ಯಾದವರು ದುರ್ಯೋಧನನಿಗೆ ನೀಡಬೇಕೆಂದು ನಿಶ್ಚಯಿಸಿದರು.

೨೭ ಅರ್ಜುನನೇ ನನ್ನ ಪತಿಯಾಗಬೇಕು ಎಂಬ ನನ್ನ ಮನೋಭಿಲಾಷೆಯು ಹೇಗೆ ಪೂರೈಸುವುದು? ಹೀಗೆ ಚಿಂತಿತಳಾದ ಅತ್ಯಂತ ಸುಂದರಿಯಾದ ಸುಭದ್ರೆಯು ಅರ್ಜುನನೇ ತನ್ನ ಪತಿಯಾಗಲೆಂದು ನಿತ್ಯದಲ್ಲೂ ನನ್ನನ್ನು ಪ್ರಾರ್ಥಿಸುತ್ತಿದ್ದಳು.

೨೮ ದೇವೇಶನೇ! ಯಾವ ಉಪಾಯದಿಂದ ನಾನು ಅರ್ಜುನನ ಪತ್ನಿಯಾಗುವೆನು? ಎಂದು ಕೇಳಲು ಕೃಷ್ಣನು ಹೇಳಿದನು. ಮಂಗಳಾಂಗಿಯೇ! ನಿನ್ನ ಮನದಿಚ್ಛೆಯನ್ನು ಪೂರೈಸುವೆನು. ಸಂದೇಹ ಬೇಡ.

ಇತಿ ಬ್ರುವಾಣಂ ದೇವೇಶಂ ಸುಭದ್ರಾ ವಾಕ್ಯಮಬ್ರವೀತ್ ।
ವದಂತಿ ಬಾಂಧವಾಸ್ಸರ್ವೇ ದೇಯಾ ದುರ್ಯೋಧನಾಯ ತು ॥೨೯॥

ದುರ್ಯೋಧನಾಯ ದತ್ತಾ ಚೇತ್ ಪ್ರಾಣಾನ್ ತ್ಯಕ್ಷ್ಯಾಮಿ ನಾನ್ಯಥಾ ।
ದುರ್ಯೋಧನಂ ಮಹಾಪಾಪಂ ವೃಣೇ ನಾಹಂ ಕದಾಚನ ।
ಶ್ರುತ್ವಾ ತು ಭಗಿನೀವಾಕ್ಯಂ ಪ್ರಾಹ ಗಂಭೀರಯಾ ಗಿರಾ ॥೩೦॥

ಶ್ರೀಕೃಷ್ಣ ಉವಾಚ-

ಭದ್ರೇ ಶ್ರುಣುಷ್ವ ಮದ್ವಾಕ್ಯಮುಪಾಯಂ ತು ಬ್ರವೀಮಿ ತೇ ।
ಕುರು ಕಲ್ಯಾಣಿ ಮುದ್ಗಾನ್ನಂ ಧನುರ್ಮಾಸೇ ಹರೇಃ ಪ್ರಿಯಮ್ ॥೩೧॥

ಉಷಃಕಾಲಾರ್ಚನಂ ವಿಷ್ಣೋರ್ನೈವೇದ್ಯಂ ಚ ಮನೋಹರಮ್ ।
ಏವಂ ಕೃತ್ವಾ ಸುಭದ್ರೇ ತ್ವಂ ಪಾರ್ಥಪತ್ನೀ ಭವಿಷ್ಯಸಿ ॥೩೨॥

ನ ಪ್ರಾರ್ಥಯಂತೇ ಮದ್ದತ್ತಂ ಕೈವಲ್ಯಂ ಚಾಪಿ ಮೇ ಪ್ರಿಯಾಃ ।
ಪ್ರಾರ್ಥಯಂತೇ ಚ ಮದ್ದಾಸ್ಯಂ ಯನ್ಮೋಕ್ಷಾದಧಿಕಂ ಚ ತತ್ ।
ಮಾಮೇವ ಭಜಮಾನೋ ಮಾಂ ಶ್ರದ್ಧಯಾ ಜಾಂಬವಾನಗಾತ್ ॥೩೩॥

---

೨೯ ಹೀಗೆಂದ ಕೃಷ್ಣನಿಗೆ ಸುಭದ್ರೆ ಹೇಳಿದಳು. ಯಾದವಬಂಧುಗಳೆಲ್ಲ ದುರ್ಯೋಧನನಿಗೆ ನೀಡುವುದಾಗಿ ಹೇಳುತ್ತಿದ್ದಾರೆ.

೩೦ ಮಹಾಪಾಪಿಯಾದ ದುರ್ಯೋಧನನ್ನು ನಾನೆಂದೂ ಪತಿಯೆಂದು ಸ್ವೀಕರಿಸಲಾರೆ. ಅವನಿಗೇ ನನ್ನನ್ನು ನೀಡಿದರೆ ಖಂಡಿತವಾಗಿಯೂ ಪ್ರಾಣತ್ಯಾಗ ಮಾಡುವೆನು. ತಂಗಿಯ ಮಾತನ್ನು ಕೇಳಿದ ಶ್ರೀಕೃಷ್ಣನು ಗಂಭೀರವಾಗಿ ನುಡಿದನು.

೩೧ ಮಂಗಳೆಯೇ! ನನ್ನ ಮಾತನ್ನು ಕೇಳು. ನಿನಗೊಂದು ಉಪಾಯ ಹೇಳುವೆನು. ಧನುರ್ಮಾಸದಲ್ಲಿ ಹರಿಪ್ರಿಯವಾದ ಮುದ್ಗಾನ್ನವನ್ನು ತಯಾರಿಸು.

೩೨ ಉಷಃಕಾಲದಲ್ಲಿ ದೇವನನ್ನು ಅರ್ಚಿಸಿ ಮುದ್ಗಾನ್ನವನ್ನು ಸಮರ್ಪಿಸು. ಈ ರೀತಿ ಮಾಡಿದರೆ ನೀನು ಅರ್ಜುನನ ಪತ್ನಿಯೆನಿಸುವೆ.

೩೩ ನನ್ನ ಪ್ರಿಯಭಕ್ತರು ಮೋಕ್ಷವನ್ನು ಕೂಡ ಬೇಡುವುದಿಲ್ಲ. ಕೇವಲ ನನ್ನ ದಾಸ್ಯವನ್ನು ಮಾತ್ರ ಅಪೇಕ್ಷಿಸುವರು. ಅದು ಅವರಿಗೆ ಮೋಕ್ಷಕ್ಕಿಂತಲೂ ಹೆಚ್ಚು ಬೆಲೆಯುಳ್ಳದ್ದು. ನನ್ನನ್ನೇ ಶ್ರದ್ಧೆಯಿಂದ ಸೇವಿಸಿದ ಜಾಂಬವಂತನು ನನ್ನನ್ನೇ ಹೊಂದಿದನು.

ದಧಿಪಾಲ ಉವಾಚ-

ಕಃ ಸಖೇ ಜಾಂಬವಾನ್ನಾಮ ಕದಾಸೀತ್ ಕುತ್ರ ವಾ ಪ್ರಿಯಃ ।
ಅಕರೋತ್ತೇ ಕಥಂ ಭಕ್ತಿಮೇತದಾಚಕ್ಷ್ವ ವಿಸ್ತರಾತ್ ॥೩೪॥

ಶ್ರೀಕೃಷ್ಣ ಉವಾಚ-

ಪುರಾ ತ್ರೇತಾಯುಗೇ ಶ್ರೀಮಾನ್ ರಾಮೋ ದಾಶರಥಿರ್ಯದಾ ।
ತಸ್ಯ ಸಾಹಾಯ್ಯಮಕರೋತ್ ಜಾಂಬವಾನೃಕ್ಷಪುಂಗವಃ ॥೩೫॥

ರಾವಣಸ್ಯ ವಧಾರ್ಥಾಯ ರಾಮೇಣ ಸಹ ಋಕ್ಷರಾಟ್ ।
ರಾಮಭಕ್ತಿಪರೋ ನಿತ್ಯಂ ತತ್ಸೇವಾಮಕರೋತ್ತದಾ ॥೩೬॥

ದಧಿಪಾಲ ಉವಾಚ-

ಕಥಂ ಜಾತೋ ಜಾಂಬವಾಂಸ್ತು ಕಸ್ಯ ಪುತ್ರೋ ಮಹಾಬಲಃ ।
ರಾಮಾಯ ಯುದ್ಧಸಾಹಾಯ್ಯಂ ಭಕ್ತಿಯುಕ್ತೋऽಕರೋತ್ಕಥಮ್ ॥೩೭॥

ಶ್ರೀಕೃಷ್ಣ ಉವಾಚ-

ಪಿತಾಮಹಸುತಃ ಶ್ರೀಮಾನ್ ಜಾಂಬವಾನಿತಿ ವಿಶ್ರುತಃ ।
ಋಕ್ಷರಾಜೋ ಮಹಾಪ್ರಾಜ್ಞಃ ಕುಲಾದ್ರಿಸದೃಶೋ ಬಲೇ ॥೩೮॥

---

೩೪ ಮಿತ್ರನೇ! ಈ ಜಾಂಬವಂತನಾರು? ಈತನಿದ್ದುದು ಯಾವಾಗ? ನಿನ್ನ ಪ್ರಿಯನೆನಿಸಿದುದು ಹೇಗೆ? ಅವನು ನಿನ್ನಲ್ಲಿ ಹೇಗೆ ಭಕ್ತಿ ಮಾಡಿದನು? ಇದನ್ನೆಲ್ಲ ಸವಿಸ್ತಾರವಾಗಿ ಹೇಳು.

೩೫ ಹಿಂದೆ ತ್ರೇತಾಯುಗದಲ್ಲಿ ಲಕ್ಷ್ಮೀಪತಿಯಾದ ಶ್ರೀಹರಿಯು ದಶರಥನ ಮಗನಾಗಿ ರಾಮನೆಂಬ ಹೆಸರಿನಿಂದ ಅವತರಿಸಿದಾಗ ಕರಡಿಗಳಲ್ಲೇ ಶ್ರೇಷ್ಠನಾದ ಜಾಂಬವಂತನು ರಾಮನಿಗೆ ಸಹಾಯ ಮಾಡಿದನು.

೩೬ ರಾಮಭಕ್ತನಾದ ಜಾಂಬವಂತನು ರಾವಣನ ವಧೆಯ ಕಾರ್ಯದಲ್ಲಿ ನಿತ್ಯದಲ್ಲೂ ರಾಮನ ಸೇವೆ ಮಾಡಿದನು.

೩೭ ಮಹಾಬಲಿಯಾದ ಜಾಂಬವಂತನು ಯಾರ ಮಗ? ಅವನು ಹುಟ್ಟಿದುದು ಹೇಗೆ? ಅವನು ರಾಮನಿಗೆ ಯುದ್ಧದಲ್ಲಿ ಹೇಗೆ ಸಹಾಯವನ್ನು ಮಾಡಿದನು?

೩೮ ಬ್ರಹ್ಮದೇವರ ಮಗನಾದ ಜಾಂಬವಂತನು ಕರಡಿಗಳ ರಾಜನು. ಮಹಾಜ್ಞಾನಿಯು. ಬಲದಲ್ಲಿ ಕುಲಪರ್ವತದಂತಿದ್ದವನು.

**ಸರ್ವಶಾಸ್ತ್ರಾರ್ಥತತ್ತ್ವಜ್ಞೋ ಬೃಹಸ್ಪತಿರಿವಾಪರಃ ।**
**ಸಮುದ್ರ ಇವ ಚಾಕ್ಷೋಭ್ಯೋ ಮನೋವಾತಸಮೋ ಜವೇ ॥೩೯॥**

**ತೇಜಸಾದಿತ್ಯಸಂಕಾಶೋ ಬುದ್ಧಿಮಾನ್ನೀತಿಮಾನ್ಸುಧೀಃ ।**
**ಜ್ಞಾನವೃದ್ಧೋ ವಯೋವೃದ್ಧೋ ಮಹಾಯೋಗೀ ಮಹಾಬಲಃ ॥೪೦॥**

**ದೈತ್ಯದಾನವಗಂಧರ್ವಾಃ ಪಿಶಾಚೋರಗರಾಕ್ಷಸಾಃ ।**
**ಇಂದ್ರಾದ್ಯಾಶ್ಚ ಸುರಾಸ್ಸರ್ವೇ ಸಿದ್ಧಚಾರಣಕಿನ್ನರಾಃ ॥೪೧॥**

**ಯಕ್ಷಾಶ್ಚ ಗುಹ್ಯಕಾದ್ಯಾಶ್ಚ ಪನ್ನಗಾಶ್ಚೈವ ಸರ್ವಶಃ ।**
**ಯುದ್ಧೇ ಯನ್ನೇಕ್ಷಿತುಂ ಶಕ್ತಾಃ ಪ್ರಲಯಾಗ್ನಿಸಮಪ್ರಭಮ್ ॥೪೨॥**

**ಕ್ಷೀರಾಬ್ಧಿಮಥನೇ ಪೂರ್ವಮೇಕತಃ ಸೋಽಭವದ್ಬಲೀ ।**
**ತ್ರಿಃಸಪ್ತಕೃತ್ವೋ ಬಲವಾನ್ ಪುರಾ ವಿಷ್ಣುಂ ತ್ರಿವಿಕ್ರಮೇ ॥೪೩॥**

---

ವಿಶೇಷ : ಯ ಏವ ಪೂರ್ವಂ ಪರಮೇಷ್ಠಿವಕ್ಷಸ-
ಸ್ಟಗುದ್ಭವೋ ಧರ್ಮ ಇಹಾಸ್ಯತೋಽಭವತ್ ॥ (ಮ.ತಾ.ನಿ. ೩-೬೭)

ಈ ಜಾಂಬವಂತನು ಯಮಧರ್ಮನ ಅವತಾರ. ಪೂರ್ವದಲ್ಲಿ ಬ್ರಹ್ಮನ ಎದೆಯ ಚರ್ಮದಿಂದ ಹುಟ್ಟಿದ ಯಮಧರ್ಮನು, ಬ್ರಹ್ಮನ ಆವೇಶದಿಂದ ಯುಕ್ತನಾಗಿ ಬ್ರಹ್ಮದೇವರ ಮುಖದಿಂದ ಜಾಂಬವಂತನಾಗಿ ಅವತರಿಸಿದ.

ಸ ಜಾಂಬವಾನ್ ದೈವತಕಾರ್ಯದರ್ಶಿನಾ
ಪುರೈವ ಸೃಷ್ಟೋ ಮುಖತಃ ಸ್ವಯಂಭುವಾ ॥ (ಮ.ತಾ.ನಿ. ೩-೬೭)

ದೇವಕಾರ್ಯವನ್ನು ಬಲ್ಲ ಬ್ರಹ್ಮದೇವರು ರಾಮಾವತಾಕ್ಕಿಂತ ಮುಂಚೆಯೇ ಜಾಂಬವಂತನನ್ನು ಸೃಷ್ಟಿಸಿದ್ದರು.

೩೯ ಜಾಂಬವಂತನು ಬೃಹಸ್ಪತಿಯಂತೆ ಸರ್ವಶಾಸ್ತ್ರಗಳನ್ನರಿತವನು, ಸಮುದ್ರದಂತೆ ಗಂಭೀರನು, ವೇಗದಲ್ಲಿ ಮನೋವೇಗ, ವಾಯುವೇಗಕ್ಕೆ ಸಮನಾದವನು.

೪೦ ಸೂರ್ಯನಂತೆ ತೇಜಸ್ವಿಯಾದವನು, ಬುದ್ಧಿವಂತನು, ನೀತಿಶಾಸ್ತ್ರವನ್ನರಿತವನು, ಜ್ಞಾನವೃದ್ಧನು, ವಯೋವೃದ್ಧನು ಅತಿ ಬಲಶಾಲಿಯಾದ ಮಹಾಯೋಗಿಯು.

೪೧ ದೈತ್ಯರು, ದಾನವರು, ಗಂಧರ್ವರು, ಪಿಶಾಚರು, ನಾಗಗಳು, ರಾಕ್ಷಸರು, ಇಂದ್ರಾದಿದೇವತೆಗಳು, ಸಿದ್ಧರು, ಚಾರಣರು, ಕಿನ್ನರರು,

೪೨ ಯಕ್ಷರು, ಗುಹ್ಯಕರು ಮುಂತಾದವರೆಲ್ಲ ಪ್ರಲಯಕಾಲದ ಅಗ್ನಿಯಂತೆ ತೋರುತ್ತಿದ್ದ ಜಾಂಬವಂತನನ್ನು ಯುದ್ಧದಲ್ಲಿ ಎದುರಿಸಲು ಶಕ್ತರಾಗುತ್ತಿರಲಿಲ್ಲ.

೪೩ ಹಿಂದೆ ಕ್ಷೀರಸಾಗರವನ್ನು ಮಥಿಸುವ ಸಂದರ್ಭದಲ್ಲಿ ಒಂದು ಪಕ್ಕದಲ್ಲಿ ಒಬ್ಬನೇ

ಪ್ರದಕ್ಷಿಣೇಚಕಾರಾಸೌ ಭೇರೀಘೋಷೈರ್ಜಯಂ ವದನ್ ।
ಅತ್ಯದ್ಭುತಮಚಿಂತ್ಯಂ ಚ ಸಾಹಾಯ್ಯಂ ಜಾನಕೀಪತೇಃ ॥೪೪॥

ಕರೋದ್ರಕ್ಷಸಾಂ ಯುದ್ಧೇ ರಾವಣಶ್ಚ ಸುವಿಸ್ಮಿತಃ ।
ಮಹಾಪರಾಕ್ರಮೀ ಋಕ್ಷಃ ರಾಮಭಕ್ತೋ ಜಿತೇಂದ್ರಿಯಃ ॥೪೫॥

ತಸ್ಯ ಕನ್ಯಾ ಬಭೂವಾಥ ನಾಮ್ನಾ ಜಾಂಬವತೀತಿ ಯಾ ।
ಸಾ ಕನ್ಯಾ ಚ ಮದರ್ಥಂ ವೈ ಭಕ್ತ್ಯಾ ತೇನ ಸಮರ್ಪಿತಾ ॥೪೬॥

ದಧಿಪಾಲ ಉವಾಚ-

ಕೇನ ಪುಣ್ಯಪ್ರಭಾವೇನ ಜಾತಾ ಜಾಂಬವತೀ ಪ್ರಿಯಾ ।
ತವ ಕೃಷ್ಣಾಖಿಲಂ ಮಹ್ಯಂ ಬ್ರೂಹಿ ಮೇ ಭಕ್ತವತ್ಸಲ ॥೪೭॥

---

ನಿಂತಿದ್ದನು. ವಿಷ್ಣುವು ತ್ರಿವಿಕ್ರಮಾವತಾರವನ್ನು ಮಾಡಿದಾಗ ಇಪ್ಪತ್ತೊಂದು ಬಾರಿ,

೪೪ ಭೇರಿ ಮೊದಲಾದವುಗಳನ್ನು ಬಾರಿಸುತ್ತ ವಿಷ್ಣುವನ್ನು ಪ್ರದಕ್ಷಿಣೆ ಮಾಡಿದನು. ಬೇರಾರೂ ಚಿಂತಿಸಲಾಗದ ಅದ್ಭುತ ಸಹಾಯವನ್ನು ಶ್ರೀರಾಮನಿಗೆ ಮಾಡಿದನು.

**ವಿಶೇಷ :** ಬಲೇರ್ಯದಾ ವಿಷ್ಣುರವಾಪ ಲೋಕಾನ್
ತ್ರಿಭಿಃ ಕ್ರಮೈರ್ನಂದಿರವಂ ಪ್ರಕುರ್ವತಾ ।
ತದಾ ಮಯಾ ಭ್ರಾಂತಮಿದಂ ಜಗತ್ತ್ರಯಮ್ ।
ಸವೇದನಂ ಜಾನು ಮಮಾಸ ಮೇರುತಃ ॥ ಮ.ತಾ.ನಿ. ೬-೫೪

ಜಾಂಬವಾನ್ಯಕ್ಷರಾಜಸ್ತು ಭೇರೀಶಬ್ದೈರ್ಮನೋಜವಃ ।
ವಿಜಯಂ ದಿಕ್ಷು ಸರ್ವಾಸು ಮಹೋತ್ಸವಮಘೋಷಯತ್ । ಭಾಗ ೮-೨೧-೮

೪೫ ರಾಕ್ಷಸರೊಂದಿಗಿನ ರಾಮನ ಯುದ್ಧದಲ್ಲಿ ಜಾಂಬವಂತನ ಪರಾಕ್ರಮವನ್ನು ನೋಡಿ ರಾವಣನು ಕೂಡ ಆಶ್ಚರ್ಯ ಹೊಂದಿದನು. ರಾಮಭಕ್ತನಾದ ಜಾಂಬವಂತನು ಮಹಾಪರಾಕ್ರಮಿಯು. ಇಂದ್ರಿಯಚಾಪಲ್ಯ ರಹಿತನು.

೪೬ ಆತನಿಗೆ ಜಾಂಬವತೀ ಎಂಬ ಹೆಸರಿನ ಮಗಳಿದ್ದಳು. ಆ ಕನ್ಯೆಯನ್ನು ನನಗೆ ಭಕ್ತಿಯಿಂದ ಸಮರ್ಪಿಸಿದನು.

೪೭ ಹೇ ಭಕ್ತವತ್ಸಲನಾದ ಕೃಷ್ಣನೇ! ಯಾವ ಪುಣ್ಯದಿಂದ ಜಾಂಬವತಿಯು ನಿನಗೆ ಪ್ರಿಯಳಾದಳು ಎಂಬುದನ್ನು ನನಗೆ ಹೇಳಬೇಕು.

ಶ್ರೀಕೃಷ್ಣ ಉವಾಚ-

**ಪುರಾ ಜಾಂಬವತೀ ಕನ್ಯಾ ಸೋಮಸ್ಯ ಗುಣವರ್ಧನೀ ।**
**ವಿಷ್ಣುಭಕ್ತಿರತಾ ನಿತ್ಯಂ ಮತ್ಕಥಾಶ್ರವಣೋತ್ಸುಕಾ ॥೪೮॥**

**ಸೋಮಕನ್ಯಾ ಮಹಾಪ್ರಾಜ್ಞಾ ಯಾತ್ರಾಯಾಮಕರೋನ್ಮತಿಮ್ ।**
**ಕದಾ ದ್ರಕ್ಷ್ಯಾಮಿ ದೇವೇಶಂ ಶ್ರೀನಿವಾಸಂ ದಯಾನಿಧಿಮ್ ॥೪೯॥**

**ಪುರೋಹಿತಂ ಪುರಸ್ಕೃತ್ಯ ತ್ವಗಮದ್ವೇಂಕಟಾಚಲಮ್ ।**
**ಸ್ವಾಮಿಪುಷ್ಕರಣೀಸ್ನಾನಂ ಕೃತ್ವಾ ವಿಷ್ಣುಂ ದದರ್ಶ ಸಾ ॥೫೦॥**

**ತಂ ದೃಷ್ಟ್ವಾ ದೇವದೇವೇಶಂ ಸಾಷ್ಟಾಂಗಂ ಪ್ರಣಿಪತ್ಯ ಸಾ ।**
**ಸ್ತುತ್ವಾ ತಂ ದೇವದೇವೇಶಂ ಭಕ್ತಿಯುಕ್ತೇನ ಚೇತಸಾ ॥೫೧॥**

**ಮಾರ್ಗಶೀರ್ಷೇ ಧನುರ್ಮಾಸೇ ಮಾಸಮೇಕಂ ನಿರಂತರಮ್ ।**
**ಅಕರೋತ್ ಶ್ರದ್ಧಯಾ ಪೂಜಾಂ ಮುದ್ಗಾನ್ನಂ ತು ನಿವೇದ್ಯ ಸಾ ॥೫೨॥**

**ಮಾರ್ಗಶೀರ್ಷೇ ಸಿತೇ ಪಕ್ಷೇ ದ್ವಾದಶ್ಯಾಮರುಣೋದಯೇ ।**
**ಆಯಾಂತಿ ಸರ್ವತೀರ್ಥಾನಿ ಸ್ವಾಮಿಪುಷ್ಕರಿಣೀಜಲೇ ॥೫೩॥**

---

೪೮ ಜಾಂಬವತಿಯು ಹಿಂದೆ ಚಂದ್ರನ ಮಗಳು. ವಿಷ್ಣುಭಕ್ತಳು. ನಿತ್ಯದಲ್ಲೂ ವಿಷ್ಣುಚರಿತ್ರೆಯನ್ನು ಶ್ರವಣ ಮಾಡಲು ಉತ್ಸಾಹವುಳ್ಳವಳು.

೪೯ ಜ್ಞಾನಿಯಾದ ಆ ಚಂದ್ರಪುತ್ರಿಯು ತೀರ್ಥಯಾತ್ರೆಯನ್ನು ಮಾಡಲು ಇಚ್ಛಿಸಿ ದಯಾನಿಧಿಯಾದ ಶ್ರೀನಿವಾಸನನ್ನು ಯಾವಾಗ ಕಾಣುವೆನೆಂದು ಚಿಂತಿಸುತ್ತಿದ್ದಳು.

೫೦ ಪುರೋಹಿತರೊಂದಿಗೆ ವೆಂಕಟಾಚಲಕ್ಕೆ ಬಂದಳು. ಸ್ವಾಮಿಪುಷ್ಕರಣಿಯಲ್ಲಿ ಸ್ನಾನ ಮಾಡಿ ಶ್ರೀನಿವಾಸನ ದರ್ಶನ ಪಡೆದಳು.

೫೧ ದೇವದೇವನಾದ ಶ್ರೀನಿವಾಸನನ್ನು ನೋಡಿ ಭಕ್ತಿಯಿಂದ ನಮಸ್ಕರಿಸಿ ಪ್ರಾರ್ಥಿಸಿದಳು.

೫೨ ಮಾರ್ಗಶೀರ್ಷದ ಧನುರ್ಮಾಸದಲ್ಲಿ ನಿರಂತರ ಒಂದು ತಿಂಗಳಿನ ವರೆಗೆ ಮುದ್ಗಾನ್ನವನ್ನು ನಿವೇದಿಸಿ ಶ್ರದ್ಧೆಯಿಂದ ಪೂಜೆ ಮಾಡಿದಳು.

೫೩ ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ದ್ವಾದಶಿಯ ಅರುಣೋದಯದ ಸಮಯದಲ್ಲಿ ಎಲ್ಲ ತೀರ್ಥಗಳು ಸ್ವಾಮಿಪುಷ್ಕರಿಣಿಯ ಜಲದಲ್ಲಿ ಸನ್ನಿಹಿತವಾಗಿರುತ್ತವೆ.

ತತ್ರ ಸ್ನಾತ್ವಾ ಚ ಸಾ ಕನ್ಯಾ ಪೂತಾऽಭೂತ್ಸರ್ವಪಾಪತಃ ।
ತಸ್ಮಾದ್ಭಕ್ತಾಂ ಚ ತಾಂ ದೃಷ್ಟ್ವಾ ಶ್ರೀನಿವಾಸೋ ದಯಾನಿಧಿಃ ॥೫೪॥

ವರಂ ವೃಣೀಷ್ವ ಭದ್ರಂ ತೇ ತಂ ತೇ ದಾಸ್ಯಾಮಿ ಸುವ್ರತೇ ।
ದೇವಸ್ಯ ವಚನಂ ಶ್ರುತ್ವಾ ಬಾಷ್ಪಗದ್ಗದಯಾ ಗಿರಾ ॥೫೫॥

ದೇವದೇವ ದಯಾಸಿಂಧೋ ಅಂಗಸಂಗಂ ಚ ದೇಹಿ ಭೋಃ ।
ಕನ್ಯಾಯಾ ವಚನಂ ಶ್ರುತ್ವಾ ಹರ್ಷಯನ್ನಿದಮಬ್ರವೀತ್ ॥೫೬॥

ಅಹಂ ಚ ದ್ವಾಪರಾಂತೇ ವೈ ಭವಿಷ್ಯಾಮಿ ಯದೂದ್ವಹಃ ।
ತದಾ ದಾಸ್ಯಾಮಿ ಮತ್ಸಂಗಂ ಮಮ ಭಾರ್ಯಾ ಭವಿಷ್ಯಸಿ ॥೫೭॥

ಇತ್ಯುಕ್ತಾ ದೇವದೇವೇನ ವಿಷ್ಣುಭಕ್ತಿಪಾರಾಯಣಾ ।
ಸೇಯಂ ಜಾಂಬವತೀ ಕನ್ಯಾ ಮಮ ಭಾರ್ಯಾ ತ್ವಜಾಯತ ॥೫೮॥

ಧನುರ್ಮಾಸಪ್ರಭಾವೇನ ಭಕ್ತಿರ್ಭವತಿ ಶಾಶ್ವತೀ ।
ಪುರೇಷ್ಟಂ ಭರತಃ ಪ್ರಾಪ ಧನುರ್ಮಾಸೇऽರ್ಚನಾದ್ಧರೇಃ ॥೫೯॥

---

೫೪ ಆಗ ಅಲ್ಲಿ ಸ್ನಾನ ಮಾಡಿ ಆ ಚಂದ್ರಪುತ್ರಿಯು ಸರ್ವಪಾಪಗಳಿಂದ ಮುಕ್ತಳಾದಳು. ಭಕ್ತಳಾದ ಅವಳನ್ನು ದಯಾನಿಧಿಯೆನಿಸಿದ ಶ್ರೀನಿವಾಸನು ನೋಡಿದನು.

೫೫ ವರವನ್ನು ಕೇಳಿಕೋ. ಅದನ್ನು ನೀನಗೆ ನೀಡುವೆನೆಂದು ಹೇಳಿದ. ಶ್ರೀನಿವಾಸನ ಮಾತುಗಳನ್ನು ಆಲಿಸಿ ತುಂಬಿ ಬಂದ ಕಂಠದಿಂದ ಮಾತು ಬಾರದವಳಾಗಿ ಪ್ರಾರ್ಥಿಸಿದಳು.

೫೬ ಹೇ ದೇವತೆಗಳ ಒಡೆಯನೇ ! ಕಾರುಣ್ಯಸಿಂಧುವೇ ! ನಿನ್ನ ಅಂಗಸಂಗದ ಸೌಭಾಗ್ಯವನ್ನು ನೀಡು. ಹೀಗೆ ಪ್ರಾರ್ಥಿಸಿದ ಅವಳ ಕೋರಿಕೆಯನ್ನಾಲಿಸಿ ಅವಳಿಗೆ ಆನಂದ ನೀಡುತ್ತ ಶ್ರೀನಿವಾಸನು ಹೀಗೆ ನುಡಿದನು.

೫೭ ದ್ವಾಪರಯುಗದ ಕೊನೆಗೆ ನಾನು ಯದುಕುಲದಲ್ಲಿ ಕೃಷ್ಣನಾಗಿ ಅವತರಿಸುವೆನು. ಆಗ ನಿನ್ನನ್ನು ಪತ್ನಿಯನ್ನಾಗಿ ಸ್ವೀಕರಿಸಿ ನನ್ನ ಅಂಗಸಂಗದ ಭಾಗ್ಯವನ್ನು ನೀಡುವೆನು.

೫೮ ದೇವದೇವನಾದ ಶ್ರೀನಿವಾಸನಿಂದ ಹೀಗೆ ಹೇಳಲ್ಪಟ್ಟ ಚಂದ್ರಪುತ್ರಿಯೇ ಈ ಜಾಂಬವಂತನ ಪುತ್ರಿಯಾಗಿ ಜನಿಸಿ ನನ್ನ ಪತ್ನಿಯಾಗಿದ್ದಾಳೆ.

೫೯ ಧನುರ್ಮಾಸದ ಆಚರಣೆಯ ಪ್ರಭಾವದಿಂದ ಶಾಶ್ವತಭಕ್ತಿಯು ಒದಗುವುದು.

ಸುಭದ್ರಾಯಾಶ್ಚ ಚರಿತಂ ಜಾಂಬವತ್ಯಾಸ್ತಥಾ ದ್ವಯಮ್ ।
ಇದಂ ಚ ಕಥಿತಂ ದಿವ್ಯಂ ಶ್ರುತಂ ನು ಸಕಲಂ ತ್ವಯಾ ॥೬೦॥

ಇದಂ ಚ ಪರಮಾಖ್ಯಾನಂ ಭಕ್ತ್ಯಾ ಚ ಶ್ರುಣುಯಾನ್ನರಃ ।
ಸರ್ವಾನ್ ಕಾಮಾನವಾಪ್ನೋತಿ ಸತ್ಯಂ ಸತ್ಯಂ ನ ಸಂಶಯಃ ॥೬೧॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ
ತ್ರಯೋವಿಂಶೋಽಧ್ಯಾಯಃ ॥

---

ಹಿಂದೆ ಧನುರ್ಮಾಸದಲ್ಲಿ ಹರಿಯನ್ನು ಪೂಜಿಸಿ ಭರತನು ತನ್ನ ಇಷ್ಟವನ್ನು ಪಡೆದುಕೊಂಡನು.

೬೦ ಸುಭದ್ರೆ ಹಾಗೂ ಜಾಂಬವತಿಯರ ಈ ಮಂಗಲಚರಿತೆಯನ್ನು ನಿನಗೆ ಹೇಳಿದುದನ್ನು ನೀನು ಕೇಳಿದೆಯಷ್ಟೇ?

೬೧ ಶ್ರೇಷ್ಠವಾದ ಈ ಕಥೆಯನ್ನು ಭಕ್ತಿಯಿಂದ ಕೇಳುವ ಜನಗಳ ಎಲ್ಲ ಕಾಮನೆಗಳು ಪೂರೈಸುವವು. ಇದು ಸತ್ಯವಾದುದು. ಇದರಲ್ಲಿ ಯಾವುದೇ ಸಂದೇಹವಿಲ್ಲ.

॥ ಇಲ್ಲಿಗೆ ಇಪ್ಪತ್ಮೂರನೇ ಅಧ್ಯಾಯವು ಮುಗಿಯಿತು ॥

# ಅಥ ಚತುರ್ವಿಂಶೋಽಧ್ಯಾಯಃ

**ದಧಿಪಾಲ ಉವಾಚ-**

**ಧನುರ್ಮಾಸಸ್ಯ ಮಾಹಾತ್ಮ್ಯಂ ಶ್ರುತ್ವಾ ವೈ ತ್ವನ್ಮುಖೋದ್ಗತಮ್ ।**
**ನ ತೃಪ್ತಿರ್ಜಾಯತೇ ತಸ್ಮಾದ್ವಿಸ್ತರೇಣ ಪುನರ್ವದ ॥೧॥**

**ಭರತೋ ಹಿ ಮಹಾತೇಜಾ ಧನುರ್ಮಾಸೇಽರ್ಚನಂ ಪುರಾ ।**
**ಕಥಂ ಚಕ್ರೇ ಮಹಾವಿಷ್ಣೋಃ ಕಥಮಿಷ್ಟಮವಾಪ್ತವಾನ್ ।**
**ತತ್ಸರ್ವಂ ಬ್ರೂಹಿ ಮೇ ಕೃಷ್ಣ ದೇವದೇವ ಜಗತ್ಪತೇ ॥೨॥**

**ಸಖೇ ತ್ವಂ ಜ್ಞಾನಿವರ್ಯೋಽಸಿ ಭಕ್ತಿಮಾಂಶ್ಚ ದೃಢವ್ರತಃ ।**
**ಕಥಾಂ ತೇ ಸಂಪ್ರವಕ್ಷ್ಯಾಮಿ ಸಂಕ್ಷೇಪೇಣ ಚ ಹೇ ಸಖೇ ॥೩॥**

**ಪುರಾ ತ್ರೇತಾಯುಗೇ ದೇವಾನ್ ಬಾಧಂತೇ ರಾಕ್ಷಸಾಧಮಾಃ ।**
**ಬ್ರಹ್ಮಾದ್ಯೈಃ ಪ್ರಾರ್ಥಿತೋ ದೇವೈರ್ದಶಗ್ರೀವವಧೇ ಹರಿಃ ॥೪॥**

**ಜಾತೋ ದಾಶರಥೀ ರಾಮೋಽಯೋಧ್ಯಾಯಾಂ ವಿಶ್ವಗುಪ್ತಯೇ ।**
**ರಾವಣಸ್ಯ ವಧಾರ್ಥಂ ವೈ ಕೃತ್ವಾಽಽತ್ಮಾನಂ ಚತುರ್ವಿಧಮ್ ॥೫॥**

**ರಾಮಶ್ಚ ಲಕ್ಷ್ಮಣಶ್ಚೇತಿ ಶತ್ರುಘ್ನೋ ಭರತಸ್ತಥಾ ।**

---

೧ ನಿನ್ನ ಮುಖಾರವಿಂದದಿಂದ ಹೊರಸೂಸುವ ಧನುರ್ಮಾಸದ ಮಹಿಮೆಯನ್ನು ಎಷ್ಟು ಕೇಳಿದರೂ ಸಾಕೆನಿಸುತ್ತಿಲ್ಲ. ಆದ್ದರಿಂದ ಮತ್ತೆ ವಿಸ್ತಾರವಾಗಿ ಹೇಳಬೇಕು.

೨ ಮಹಾತೇಜಸ್ವಿಯಾದ ಭರತನು ಧನುರ್ಮಾಸದಲ್ಲಿ ಹೇಗೆ ಪೂಜೆ ಮಾಡಿದ? ಅವನು ಇಷ್ಟಾರ್ಥಗಳನ್ನು ಪಡೆದ ಬಗೆ ಹೇಗೆ? ಎನ್ನುವುದನ್ನು ದೇವದೇವನಾದ ಜಗತ್ಪತಿಯೇ ದಯವಿಟ್ಟು ನನಗೆ ಹೇಳಬೇಕು.

೩ ಮಿತ್ರನೇ! ನೀನು ಜ್ಞಾನಿಯೂ, ಭಕ್ತಿವಂತನೂ ವ್ರತಶೀಲನೂ ಆಗಿರುವೆ. ಈ ಕಥೆಯನ್ನು ನಿನಗೆ ಸಂಕ್ಷೇಪದಿಂದ ಹೇಳುವೆ ಕೇಳು.

೪ ಹಿಂದೊಮ್ಮೆ ತ್ರೇತಾಯುಗದಲ್ಲಿ ದುಷ್ಟರಾದ ರಾಕ್ಷಸರು ದೇವತೆಗಳನ್ನು ಋಷಿಗಳನ್ನು ಬಹಳವಾಗಿ ಬಾಧಿಸುತ್ತಿದ್ದರು. ಆಗ ಬ್ರಹ್ಮಾದಿದೇವತೆಗಳು ರಾವಣನನ್ನು ಸಂಹರಿಸಲು ಶ್ರೀಹರಿಯನ್ನು ಪ್ರಾರ್ಥಿಸಿದರು.

೫ ತನ್ನನ್ನು ನಾಲ್ಕು ರೂಪಗಳನ್ನಾಗಿ ಮಾಡಿ ಜಗದ ರಕ್ಷಣೆಗಾಗಿ ಅಯೋಧ್ಯೆಯಲ್ಲಿ ದಶರಥನ ಮಗನಾಗಿ ಅವತರಿಸಿದನು.

ಕೌಶಿಕಾಭ್ಯರ್ಥಿತೋ ಪಿತ್ರಾ ಪ್ರೇರಿತೋ ಯಜ್ಞಗುಪ್ತಯೇ ॥೬॥

ಲಕ್ಷ್ಮಣಾನುಚರೋ ಯಾತೋ ವಿಶ್ವಾಮಿತ್ರಾಶ್ರಮಂ ಪ್ರತಿ ।
ಹತ್ವಾ ತು ತಾಟಕಾಂ ಘೋರಾಂ ಸರ್ವಲೋಕಭಯಂಕರೀಮ್ ॥೭॥

ಕೃತ್ವಾಽಹಲ್ಯಾಂ ತತಃ ಪೂತಾಮಸಾಧ್ವೀಂ ಪಾದಪಾಂಸುಭಿಃ ।
ದೃಷ್ಟಮೈಥಿಲಯಜ್ಞೋಽಥ ಧನುರ್ಭಂಗಪುರಸ್ಸರಮ್ ॥೮॥

ಸೀತಾಮುದ್ವಾಹ್ಯ ಧರ್ಮಾತ್ಮಾ ಸಾಕ್ಷಾಲ್ಲಕ್ಷ್ಮೀಮಿವಾಪರಾಮ್ ।
ಭ್ರಾತೃಭಿಶ್ಚ ಕೃತೋದ್ವಾಹೋ ಜನಕೇನಾಭಿಪೂಜಿತಃ ॥೯॥

---

೬ ರಾಮ, ಲಕ್ಷಣ, ಶತ್ರುಘ್ನ, ಭರತರೆಂಬ ನಾಲ್ಕು ರೂಪಗಳಿಂದ ಪರಮಾತ್ಮನು ಅವತರಿಸಿದನು. ವಿಶ್ವಾಮಿತ್ರರಿಂದ ಪ್ರಾರ್ಥಿತನಾಗಿ ತಂದೆಯ ಪ್ರೇರಣೆಯಿಂದ ಯಜ್ಞರಕ್ಷಣೆಗೋಸುಗ ತೆರಳಿದನು.

**ವಿಶೇಷ:** ರಾಮ, ಲಕ್ಷ್ಮಣ, ಭರತ, ಶತ್ರುಘ್ನರು ಸಾಕ್ಷಾತ್ತಾಗಿ ಭಗವಂತನ ಅವತಾರಗಳೆಂದು ಇಲ್ಲಿ ಹಾಗೂ ಇನ್ನೂ ಅನೇಕ ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ರಾಮನೊಬ್ಬನೇ ಸಾಕ್ಷಾತ್ ಶ್ರೀಹರಿಯ ಅವತಾರ. ಉಳಿದ ಮೂವರಲ್ಲಿ ಲಕ್ಷ್ಮಣನಲ್ಲಿ ಸಂಕರ್ಷಣ, ಭರತನಲ್ಲಿ ಪ್ರದ್ಯುಮ್ನ ಹಾಗೂ ಶತ್ರುಘ್ನನಲ್ಲಿ ಅನಿರುದ್ಧರೂಪಿಯಾದ ಪರಮಾತ್ಮನ ಆವೇಶವಿದೆ. ಆದ್ದರಿಂದ ಕೆಲವು ಕಡೆ ಹೀಗೆ ಹೇಳಿರುವರು ಎಂದು ಶ್ರೀಮದಾಚಾರ್ಯರು ನಿರ್ಣಯಿಸಿದ್ದಾರೆ.

ಸಂಕರ್ಷಣಾದ್ಯೈಸ್ತ್ರಿಭಿರೇವ ರೂಪೈ-
ರಾವಿಷ್ಟ ಆಸೀತ್ ತ್ರಿಷು ತೇಷು ವಿಷ್ಣುಃ ॥ ಮ.ತಾ.ನಿ. ೩-೭೮

ಅಂಶೇನ ವಾಸುದೇವಸ್ಯ ಜಾತೋ ರಾಮೋ ಮಹಾಯಶಾಃ ।
ಸಂಕರ್ಷಣಸ್ಯ ಚಾಂಶೇನ ಲಕ್ಷ್ಮಣಃ ಪರವೀರಹಾ ।
ಪ್ರದ್ಯುಮ್ನಸ್ಯ ತಥಾಂಶೇನ ಭರತೋ ಧರ್ಮವತ್ಸಲಃ ।
ಅನಿರುದ್ಧಸ್ಯ ಚಾಂಶೇನ ಶತ್ರುಘ್ನಸ್ತು ಮಹಾಬಲಃ ॥ ವಿಷ್ಣುಧರ್ಮೋತ್ತರ ಪುರಾಣ

೭ ಲಕ್ಷ್ಮಣನೊಡಗೂಡಿ ವಿಶ್ವಾಮಿತ್ರರ ಆಶ್ರಮಕ್ಕೆ ಹೋಗಿ, ಲೋಕಭಯಂಕರಳಾದ ತಾಟಕೆಯನ್ನು ಸಂಹಾರ ಮಾಡಿದನು.

೮ ಗೌತಮರ ಅಧಿಕವಾದ ತಪಸ್ಸನ್ನು ನಾಶ ಮಾಡಲು, ಇಂದ್ರನ ಸಂಗ ಮಾಡಿದ ಅಹಲ್ಯೆಯನ್ನು ತನ್ನ ಪಾದದ ಧೂಳಿನಿಂದ ಉದ್ಧರಿಸಿದ. ಜನಕನ ಯಜ್ಞದಲ್ಲಿ ಭಾಗವಹಿಸಿ ಅವನಲ್ಲಿದ್ದ ಶಿವ ಧನುಸ್ಸನ್ನು ಮುರಿದು ಹಾಕಿದ.

೯ ಸಾಕ್ಷಾತ್ತಾಗಿ ಲಕ್ಷ್ಮಿಯ ಅವತಾರಳೇ ಆದ ಸೀತೆಯನ್ನು ವಿವಾಹವಾದ. ತನ್ನ

# ಅಥ ಚತುರ್ವಿಂಶೋಽಧ್ಯಾಯಃ

ದಧಿಪಾಲ ಉವಾಚ-

ಧನುರ್ಮಾಸಸ್ಯ ಮಾಹಾತ್ಮ್ಯಂ ಶ್ರುತ್ವಾ ವೈ ತ್ವನ್ಮುಖೋದ್ಗತಮ್ ।
ನ ತೃಪ್ತಿರ್ಜಾಯತೇ ತಸ್ಮಾದ್ವಿಸ್ತರೇಣ ಪುನರ್ವದ ॥೧॥

ಭರತೋ ಹಿ ಮಹಾತೇಜಾ ಧನುರ್ಮಾಸೇಽರ್ಚನಂ ಪುರಾ ।
ಕಥಂ ಚಕ್ರೇ ಮಹಾವಿಷ್ಣೋಃ ಕಥಮಿಷ್ಟಮವಾಪ್ತವಾನ್ ।
ತತ್ಸರ್ವಂ ಬ್ರೂಹಿ ಮೇ ಕೃಷ್ಣ ದೇವದೇವ ಜಗತ್ಪತೇ ॥೨॥

ಸಖೇ ತ್ವಂ ಜ್ಞಾನಿವರ್ಯೋಽಸಿ ಭಕ್ತಿಮಾಂಶ್ಚ ದೃಢವ್ರತಃ ।
ಕಥಾಂ ತೇ ಸಂಪ್ರವಕ್ಷ್ಯಾಮಿ ಸಂಕ್ಷೇಪೇಣ ಚ ಹೇ ಸಖೇ ॥೩॥

ಪುರಾ ತ್ರೇತಾಯುಗೇ ದೇವಾನ್ ಬಾಧಂತೇ ರಾಕ್ಷಸಾಧಮಾಃ ।
ಬ್ರಹ್ಮಾದ್ಯೈಃ ಪ್ರಾರ್ಥಿತೋ ದೇವೈರ್ದಶಗ್ರೀವವಧೇ ಹರಿಃ ॥೪॥

ಜಾತೋ ದಾಶರಥೀ ರಾಮೋಽಯೋಧ್ಯಾಯಾಂ ವಿಶ್ವಗುಪ್ತಯೇ ।
ರಾವಣಸ್ಯ ವಧಾರ್ಥಂ ವೈ ಕೃತ್ವಾಽಽತ್ಮಾನಂ ಚತುರ್ವಿಧಮ್ ॥೫॥

ರಾಮಶ್ಚ ಲಕ್ಷ್ಮಣಶ್ಚೇತಿ ಶತ್ರುಘ್ನೋ ಭರತಸ್ತಥಾ ।

---

೧ ನಿನ್ನ ಮುಖಾರವಿಂದದಿಂದ ಹೊರಸೂಸುವ ಧನುರ್ಮಾಸದ ಮಹಿಮೆಯನ್ನು ಎಷ್ಟು ಕೇಳಿದರೂ ಸಾಕೆನಿಸುತ್ತಿಲ್ಲ. ಆದ್ದರಿಂದ ಮತ್ತೆ ವಿಸ್ತಾರವಾಗಿ ಹೇಳಬೇಕು.

೨ ಮಹಾತೇಜಸ್ವಿಯಾದ ಭರತನು ಧನುರ್ಮಾಸದಲ್ಲಿ ಹೇಗೆ ಪೂಜೆ ಮಾಡಿದ? ಅವನು ಇಷ್ಟಾರ್ಥಗಳನ್ನು ಪಡೆದ ಬಗೆ ಹೇಗೆ? ಎನ್ನುವುದನ್ನು ದೇವದೇವನಾದ ಜಗತ್ಪತಿಯೇ ದಯವಿಟ್ಟು ನನಗೆ ಹೇಳಬೇಕು.

೩ ಮಿತ್ರನೇ! ನೀನು ಜ್ಞಾನಿಯೂ, ಭಕ್ತಿವಂತನೂ ವ್ರತಶೀಲನೂ ಆಗಿರುವೆ. ಈ ಕಥೆಯನ್ನು ನಿನಗೆ ಸಂಕ್ಷೇಪದಿಂದ ಹೇಳುವೆ ಕೇಳು.

೪ ಹಿಂದೊಮ್ಮೆ ತ್ರೇತಾಯುಗದಲ್ಲಿ ದುಷ್ಟರಾದ ರಾಕ್ಷಸರು ದೇವತೆಗಳನ್ನು ಋಷಿಗಳನ್ನು ಬಹಳವಾಗಿ ಬಾಧಿಸುತ್ತಿದ್ದರು. ಆಗ ಬ್ರಹ್ಮಾದಿದೇವತೆಗಳು ರಾವಣನನ್ನು ಸಂಹರಿಸಲು ಶ್ರೀಹರಿಯನ್ನು ಪ್ರಾರ್ಥಿಸಿದರು.

೫ ತನ್ನನ್ನು ನಾಲ್ಕು ರೂಪಗಳನ್ನಾಗಿ ಮಾಡಿ ಜಗದ ರಕ್ಷಣೆಗಾಗಿ ಅಯೋಧ್ಯೆಯಲ್ಲಿ ದಶರಥನ ಮಗನಾಗಿ ಅವತರಿಸಿದನು.

**ಕೌಶಿಕಾಭ್ಯರ್ಥಿತೋ ಪಿತ್ರಾ ಪ್ರೇರಿತೋ ಯಜ್ಞಗುಪ್ತಯೇ ॥೬॥**

**ಲಕ್ಷ್ಮಣಾನುಚರೋ ಯಾತೋ ವಿಶ್ವಾಮಿತ್ರಾಶ್ರಮಂ ಪ್ರತಿ ।**
**ಹತ್ವಾ ತು ತಾಟಕಾಂ ಘೋರಾಂ ಸರ್ವಲೋಕಭಯಂಕರೀಮ್ ॥೭॥**

**ಕೃತ್ವಾಽಹಲ್ಯಾಂ ತತಃ ಪೂತಾಮಸಾಧ್ವೀಂ ಪಾದಪಾಂಸುಭಿಃ ।**
**ದೃಷ್ಟಮೈಥಿಲಯಜ್ಞೋಽಥ ಧನುರ್ಭಂಗಪುರಸ್ಸರಮ್ ॥೮॥**

**ಸೀತಾಮುದ್ವಾಹ್ಯ ಧರ್ಮಾತ್ಮಾ ಸಾಕ್ಷಾಲ್ಲಕ್ಷ್ಮೀಮಿವಾಪರಾಮ್ ।**
**ಭ್ರಾತೃಭಿಶ್ಚ ಕೃತೋದ್ವಾಹೋ ಜನಕೇನಾಭಿಪೂಜಿತಃ ॥೯॥**

---

೬ ರಾಮ, ಲಕ್ಷಣ, ಶತ್ರುಘ್ನ, ಭರತರೆಂಬ ನಾಲ್ಕು ರೂಪಗಳಿಂದ ಪರಮಾತ್ಮನು ಅವತರಿಸಿದನು. ವಿಶ್ವಾಮಿತ್ರರಿಂದ ಪ್ರಾರ್ಥಿತನಾಗಿ ತಂದೆಯ ಪ್ರೇರಣೆಯಿಂದ ಯಜ್ಞರಕ್ಷಣೆಗೋಸುಗ ತೆರಳಿದನು.

**ವಿಶೇಷ:** ರಾಮ, ಲಕ್ಷ್ಮಣ, ಭರತ, ಶತ್ರುಘ್ನರು ಸಾಕ್ಷಾತ್ತಾಗಿ ಭಗವಂತನ ಅವತಾರಗಳೆಂದು ಇಲ್ಲಿ ಹಾಗೂ ಇನ್ನೂ ಅನೇಕ ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ರಾಮನೊಬ್ಬನೇ ಸಾಕ್ಷಾತ್ ಶ್ರೀಹರಿಯ ಅವತಾರ. ಉಳಿದ ಮೂವರಲ್ಲಿ ಲಕ್ಷ್ಮಣನಲ್ಲಿ ಸಂಕರ್ಷಣ, ಭರತನಲ್ಲಿ ಪ್ರದ್ಯುಮ್ನ ಹಾಗೂ ಶತ್ರುಘ್ನನಲ್ಲಿ ಅನಿರುದ್ಧರೂಪಿಯಾದ ಪರಮಾತ್ಮನ ಆವೇಶವಿದೆ. ಆದ್ದರಿಂದ ಕೆಲವು ಕಡೆ ಹೀಗೆ ಹೇಳಿರುವರು ಎಂದು ಶ್ರೀಮದಾಚಾರ್ಯರು ನಿರ್ಣಯಿಸಿದ್ದಾರೆ.

**ಸಂಕರ್ಷಣಾದ್ಯೈಸ್ತ್ರಿಭಿರೇವ ರೂಪೈ-**
**ರಾವಿಷ್ಟ ಆಸೀತ್ ತ್ರಿಷು ತೇಷು ವಿಷ್ಣುಃ ॥** ಮ.ತಾ.ನಿ. ೩-೭೮

**ಅಂಶೇನ ವಾಸುದೇವಸ್ಯ ಜಾತೋ ರಾಮೋ ಮಹಾಯಶಾಃ ।**
**ಸಂಕರ್ಷಣಸ್ಯ ಚಾಂಶೇನ ಲಕ್ಷ್ಮಣಃ ಪರವೀರಹಾ ।**
**ಪ್ರದ್ಯುಮ್ನಸ್ಯ ತಥಾಂಶೇನ ಭರತೋ ಧರ್ಮವತ್ಸಲಃ ।**
**ಅನಿರುದ್ಧಸ್ಯ ಚಾಂಶೇನ ಶತ್ರುಘ್ನಸ್ತು ಮಹಾಬಲಃ ॥** ವಿಷ್ಣುಧರ್ಮೋತ್ತರ ಪುರಾಣ

೭ ಲಕ್ಷ್ಮಣನೊಡಗೂಡಿ ವಿಶ್ವಾಮಿತ್ರರ ಆಶ್ರಮಕ್ಕೆ ಹೋಗಿ, ಲೋಕಭಯಂಕರಳಾದ ತಾಟಕೆಯನ್ನು ಸಂಹಾರ ಮಾಡಿದನು.

೮ ಗೌತಮರ ಅಧಿಕವಾದ ತಪಸ್ಸನ್ನು ನಾಶ ಮಾಡಲು, ಇಂದ್ರನ ಸಂಗ ಮಾಡಿದ ಅಹಲ್ಯೆಯನ್ನು ತನ್ನ ಪಾದದ ಧೂಳಿನಿಂದ ಉದ್ಧರಿಸಿದ. ಜನಕನ ಯಜ್ಞದಲ್ಲಿ ಭಾಗವಹಿಸಿ ಅವನಲ್ಲಿದ್ದ ಶಿವ ಧನುಸ್ಸನ್ನು ಮುರಿದು ಹಾಕಿದ.

೯ ಸಾಕ್ಷಾತ್ತಾಗಿ ಲಕ್ಷ್ಮಿಯ ಅವತಾರಳೇ ಆದ ಸೀತೆಯನ್ನು ವಿವಾಹವಾದ. ತನ್ನ

**ಕೃತ್ವಾ ಪರಾಙ್ಮುಖಂ ಮಾರ್ಗೇ ಭಾರ್ಗವಂ ಕ್ಷತ್ರಿಯಾಂತಕಮ್ ।**
**ಪ್ರಾಪ್ಯಾಯೋಧ್ಯಾಂ ಮಹಾತೇಜಾಶ್ಚಂದ್ರಮಾ ಇವ ರಶ್ಮಿಭಿಃ ॥೧೦॥**

**ವ್ಯಾಜೀಕೃತ್ಯ ಪಿತುರ್ವಾಕ್ಯಂ ದಂಡಕಾನ್ ಪ್ರವಿವೇಶ ಹ ।**
**ಗುಹೇನ ಪರಮಪ್ರೀತೋ ಭರದ್ವಾಜಾಶ್ರಮಂ ಗತಃ ॥೧೧॥**

**ಚಿತ್ರಕೂಟಮನುಪ್ರಾಪ್ಯ ತತ್ರೋವಾಸ ಶರದ್ದ್ವಯಮ್ ।**

---

ಜತೆಯಲ್ಲೇ ಸಹೋದರರ ವಿವಾಹವನ್ನು ಮಾಡಿಸಿ ಜನಕನಿಂದ ಪೂಜಿತನಾದ.

೧೦ ಅಯೋಧ್ಯೆಯತ್ತ ಹೊರಟು ದಾರಿಯಲ್ಲಿ ಭೇಟಿಯಾದ ಕ್ಷತ್ರಕುಲಾಂತಕನಾದ ಪರಶುರಾಮನನ್ನು ಸ್ಪರ್ಧೆಯಲ್ಲಿ ಹಿಮ್ಮೆಟ್ಟಿಸಿ ಅಯೋಧ್ಯೆಯನ್ನು ಸೇರಿ ಪೂರ್ಣಿಮೆಯ ಚಂದ್ರನಂತೆ ಕಂಗೊಳಿಸಿದ.

**ವಿಶೇಷ :** ರಾಮನಿಂದ ಪರಶುರಾಮನು ಸೋತಂತೆ ಕಾಣುವ ಈ ಪ್ರಸಂಗದಲ್ಲಿ ರಾಮನನ್ನು ಯುದ್ಧಕ್ಕೆ ಕರೆಯುವ ಪರಶುರಾಮನ ಆಂತರ್ಯವು ಬೇರೆಯೇ ಇತ್ತು.

ತಮ್ಮಿಬ್ಬರ ಅಭೇದವೂ ತನ್ನ ಸರ್ವೋತ್ತಮತ್ವವೂ ಜಗತ್ತಿಗೆ ತಿಳಿಯಬೇಕು. ಹಾಗೂ ರುದ್ರದೇವರ ವರದಿಂದ ತನ್ನ ನಾಭಿಪ್ರದೇಶದಲ್ಲಿ ಕುಳಿತ ಅತುಲನೆಂಬ ಲೋಕಮಯನಾದ ಅಸುರನ ಸಂಹಾರವಾಗಬೇಕು. ಈ ಕಾರಣಕ್ಕಾಗಿ ಸೋಲಿನ ಪ್ರಸಕ್ತಿಯೇ ಇಲ್ಲದ ಪರಶುರಾಮನು ತನ್ನದೇ ಮತ್ತೊಂದು ರೂಪವಾದ ರಾಮನಿಂದ ಸೋತಂತೆ ನಟಿಸಿದ.

**ಅಜಾನತಾಂ ರಾಘವಮಾದಿಪೂರುಷಂ**
**ಸಮಾಗತಂ ಜ್ಞಾಪಯಿತುಂ ನಿದರ್ಶನೈಃ ।**
**ಸಮಾಹ್ವಯಂತಂ ರಘುಪಂ ಸ್ಪೃಧೇವ ।**
**ನೃಪೋ ಯಯಾಚೇ ಪ್ರಣಿಪತ್ಯ ಭೀತಃ ॥** ಮ.ತಾ.ನಿ. ೪-೪೧

**ಅತೋ ವಧಾರ್ಥಂ ಜಗದಂತಕಸ್ಯ**
**ಸರ್ವಾಜಿತೋಽಹಂ ಜಿತವದ್ವ್ಯವಸ್ಥಿತಃ ॥** ಮ.ತಾ.ನಿ.

೧೧ ಸರ್ವಜ್ಞನೂ, ಸರ್ವಶಕ್ತನೂ ಆದ ಶ್ರೀರಾಮನು ತಂದೆಯಾದ ದಶರಥನ ಮಾತನ್ನು ನಿಮಿತ್ತ ಮಾಡಿಕೊಂಡು ವನವಾಸಕ್ಕೆ ಹೊರಟು ದಂಡಕಾರಣ್ಯವನ್ನು ಪ್ರವೇಶಿಸಿದನು. ಗುಹನಿಂದ ಆತಿಥ್ಯ ಸ್ವೀಕರಿಸಿ ಪರಮಪ್ರೀತನಾಗಿ ಭಾರದ್ವಾಜರ ಆಶ್ರಮಕ್ಕೆ ಬಂದನು. (ರಾಮನಿಗೆ ಆತಿಥ್ಯ ನೀಡಿದ ಗುಹನೇ ಈಗ ಕೃಷ್ಣನಿಂದ ಉಪದೇಶ ಪಡೆಯುತ್ತಿರುವ ದಧಿಪಾಲನು ಎಂದು ಹಿಂದೆಯೇ ಹೇಳಿದೆ.)

**ರಾಜಾ ದಶರಥಃ ಸ್ವರ್ಗಂ ಪುತ್ರಶೋಕೇನ ಲಬ್ಧವಾನ್ ॥೧೨॥**

**ಭರತಃ ಪೈತೃಕಂ ಕೃತ್ವಾ ಕೌಸಲ್ಯಾಂ ಚಾಭಿವಾದಯನ್ ।**
**ಪ್ರತಿಜ್ಞಾಮಕರೋತ್ತತ್ರ ನಾಹಂ ರಾಜ್ಯಂ ಕರೋಮಿ ವೈ ।**
**ದಾಸೋಽಹಂ ಕೋಸಲೇಂದ್ರಸ್ಯ ರಾಮಸ್ಯಾಕ್ಲಿಷ್ಟಕರ್ಮಣಃ ॥೧೩॥**

**ಮಾತಾ ರಾಮೋ ಮತ್ಪಿತಾ ರಾಮಚಂದ್ರಃ**
**ಸ್ವಾಮೀ ರಾಮೋ ಮತ್ಸಖಾ ರಾಮಚಂದ್ರಃ ।**
**ಸರ್ವಸ್ವಂ ಮೇ ರಾಮಚಂದ್ರೋ ದಯಾಲು-**
**ರನ್ಯದ್ದೈವಂ ನೈವ ಜಾನೇ ನ ಜಾನೇ ॥೧೪॥**

**ಇತಿ ನಿಶ್ಚಿತ್ಯ ಮನಸಾ ಚಿತ್ರಕೂಟಗಿರಿಂ ಯಯೌ ।**
**ಭರತಂ ಭ್ರಾತರಂ ದೃಷ್ಟ್ವಾ ಸಾಷ್ಟಾಂಗಂ ಪ್ರಣತಂ ಭುವಿ ।**
**ಅಂಕಮಾರೋಪ್ಯ ಭರತಂ ರಾಮೋ ರಾಜೀವಲೋಚನಃ ॥೧೫॥**

**ತ್ವಮೇವ ಭವ ರಾಜೇತಿ ಪ್ರೀತ್ಯಾ ಭರತಮಬ್ರವೀತ್ ।**
**ನಾಹಂ ರಾಜ್ಯಂ ಕರೋಮೀತಿ ಸಾಂಜಲಿರ್ಭರತೋಽಬ್ರವೀತ್ ॥೧೬॥**

---

೧೨ ನಂತರ ಚಿತ್ರಕೂಟಕ್ಕೆ ಬಂದು ಅಲ್ಲಿ ಎರಡು ವರ್ಷಗಳ ಕಾಲ ವಾಸ ಮಾಡಿದನು. ದಶರಥರಾಜನು ಪುತ್ರವಿರಹದ ಶೋಕದಿಂದ ಮೃತನಾಗಿ ಸ್ವರ್ಗ ಸೇರಿದನು.

೧೩ ಭರತನು ತಂದೆಯ ಔರ್ಧ್ವದೇಹಿಕ ಕರ್ಮಗಳನ್ನೆಲ್ಲ ಮಾಡಿ ಮುಗಿಸಿ ಕೌಸಲ್ಯೆಯನ್ನು ನಮಸ್ಕರಿಸಿ ನಾನು ರಾಮನ ಬದಲು ರಾಜ್ಯಭಾರ ಮಾಡುವುದಿಲ್ಲ ಎಂದು ಪ್ರತಿಜ್ಞೆ ಮಾಡಿದ. ಯಾವುದೇ ಕ್ಲೇಶವಿಲ್ಲದೇ ಕಾರ್ಯ ನಿರ್ವಹಿಸುವ ಜಗತ್ಪ್ರಭುವಾದ ಅಯೋಧ್ಯಾಧಿಪತಿಯೂ ಆದ ರಾಮನಿಗೆ ನಾನು ದಾಸನು.

೧೪ ನನಗೆ ತಾಯಿ, ತಂದೆ, ಗೆಳೆಯ, ಸ್ವಾಮಿಯೆಲ್ಲವೂ ರಾಮನೇ ಆಗಿರುವನು. ನನಗೆ ಸರ್ವಸ್ವವೂ ರಾಮಚಂದ್ರನೇ ರಾಮನಲ್ಲದೇ ಮತ್ತೊಬ್ಬ ದೈವವನ್ನು ನಾನರಿಯೆ.

೧೫ ಹೀಗೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಚಿತ್ರಕೂಟಕ್ಕೆ ಬಂದನು. ತನ್ನೆದುರು ನೆಲದ ಮೇಲೆ ಸಾಷ್ಟಾಂಗ ನಮಸ್ಕರಿಸಿದ ಭರತನನ್ನು ಕಮಲನೇತ್ರನಾದ ರಾಮನು ತನ್ನ ತೊಡೆಯ ಮೇಲೆ ಕೂರಿಸಿಕೊಂಡನು.

೧೬ ರಾಮನು ಭರತನಿಗೆ ನೀನೇ ರಾಜ್ಯವನ್ನಾಳಬೇಕೆಂದು ಹೇಳಲು ಭರತನು ಕೈಮುಗಿದು ರಾಜ್ಯವನ್ನು ತಿರಸ್ಕರಿಸಿದನು.

**ಅಹಂ ಚಾಪಿ ವಸಾಮ್ಯತ್ರ ತ್ವದಾಸಕ್ತಮನಾಶ್ಚಿರಮ್ ।**
**ಇತಿ ಬ್ರುವಂತಂ ತಂ ರಾಮಃ ಪ್ರಶಸ್ಯ ಚ ಪುನಃ ಪುನಃ ॥೧೭॥**

**ತತೋ ರಾಮೋಽಪಿ ಧರ್ಮಾತ್ಮಾ ಸಧರ್ಮ್ಯಂ ವಾಕ್ಯಮಬ್ರವೀತ್ ।**
**ನಾಹಂ ರಾಜ್ಯೇ ವಸಾಮೀತಿ ಉಕ್ತ್ವಾ ಚ ಪಿತೃಸನ್ನಿಧೌ ।**
**ಕಥಂ ಸಾಕೇತಮಾಗಚ್ಛೇತ್ ಮಾದೃಶೋಽಪಿ ಮಹಾಪದಿ ॥೧೮॥**

**ಜೀವತೋರ್ವಾಕ್ಯಕರಣಾತ್ ಪ್ರತ್ಯಬ್ದಂ ಭೂರಿಭೋಜನಾತ್ ।**
**(ಗಯಾಯಾಂ) ಗಂಗಾಯಾಂ ಪಿಂಡದಾನಾಚ್ಚತ್ರಿಭಿಃ ಪುತ್ರಸ್ಯ ಪುತ್ರತಾ ॥೧೯॥**

**ಯಃ ಪುತ್ರಃ ಪಿತರಂ ದ್ವೇಷ್ಟಿ ತಂ ವಿದ್ಯಾದನ್ಯರೇತಸಮ್ ।**
**ಯಸ್ತು ನಾರಾಯಣಂ ದ್ವೇಷ್ಟಿ ತಂ ವಿದ್ಯಾದಂತ್ಯರೇತಸಮ್ ॥೨೦॥**

**ಭರ್ತಾರಂ ದ್ವೇಷ್ಟಿ ಯಾ ಭಾರ್ಯಾ ತಾಂ ವಿದ್ಯಾದ್ ವ್ಯಭಿಚಾರಿಣೀಮ್ ।**
**ಆಚಾರ್ಯಂ ದ್ವೇಷ್ಟಿ ಯಃ ಶಿಷ್ಯಸ್ತಂ ವಿದ್ಯಾದ್ರಾಕ್ಷಸಂ ಪರಮ್ ।**
**ತಸ್ಮಾತ್ತವ ಮಮಾಪೀಹ ಪಿತಾ ವೈ ದೈವತಂ ಮಹತ್ ॥೨೧॥**

---

೧೭ ನಿನ್ನನ್ನೇ ಸೇವಿಸುತ್ತ ನಾನೂ ವನವಾಸ ಮುಗಿಯುವವರೆಗೆ ಇಲ್ಲಿಯೇ ವಾಸ ಮಾಡುವೆನೆಂದ ಭರತನನ್ನು ರಾಮನು ಮತ್ತೆ ಮತ್ತೆ ಪ್ರಶಂಸೆ ಮಾಡಿದನು.

೧೮ ನಂತರ ಧರ್ಮಾತ್ಮನಾದ ರಾಮನು ಧರ್ಮವನ್ನು ಉಪದೇಶಿಸಿದನು. ನಾನು ತಂದೆಯ ಸನ್ನಿಧಿಯಲ್ಲಿ ರಾಜ್ಯದಲ್ಲಿ ವಾಸ ಮಾಡುವುದಿಲ್ಲವೆಂದು ವಚನ ನೀಡಿದ್ದೇನೆ. ಹೀಗಿರುವಾಗ ನನ್ನಂಥವನು ಮಹಾಪತ್ತಿನಲ್ಲಿದ್ದರೂ ಕೂಡ ಅಯೋಧ್ಯೆಗೆ ಹೇಗೆ ಬರಲು ಸಾಧ್ಯ.

೧೯ ಜೀವಿಸಿರುವಾಗ ತಂದೆತಾಯಿಗಳ ಆಜ್ಞೆಯನ್ನು ಪಾಲಿಸುವವನು, ಅವರ ಮರಣಾನಂತರ ಪ್ರತಿವರ್ಷ ಅವರ ಶ್ರಾದ್ಧ ಮಾಡಿ ಭೂರಿ ಭೋಜನ ಮಾಡಿಸುವವನು ಹಾಗೂ (ಗಯಾದಲ್ಲಿ) ಗಂಗೆಯಲ್ಲಿ ಪಿಂಡಪ್ರದಾನ ಮಾಡಿದವನು ಮಾತ್ರ ಮಗನೆನ್ನಿಸಲು ಯೋಗ್ಯನು.

೨೦ ತಂದೆಯನ್ನು ದ್ವೇಷಿಸುವ ಮಗನು ಬೇರೆ ಪುರುಷನಿಂದ ಜನಿಸಿದವನೇ ಸರಿ. ನಾರಾಯಣನನ್ನು ದ್ವೇಷಿಸುವವನು ಅಂತ್ಯಜನ ಮಗನೇ ಸರಿ.

೨೧ ಪತಿಯನ್ನು ದ್ವೇಷಿಸುವ ಹೆಂಡತಿಯು ವ್ಯಭಿಚಾರಿಣಿಯೇ ಸರಿ. ಗುರುಗಳನ್ನು ದ್ವೇಷಿಸುವ ಶಿಷ್ಯನು ರಾಕ್ಷಸನೇ ಸರಿ. ಆದುದರಿಂದ ನನಗೆ ಹಾಗೂ ನಿನಗೆ ತಂದೆಯೇ ಶ್ರೇಷ್ಠ ದೇವರು.

**ತದಯೋಧ್ಯಾಂ ದ್ರುತಂ ಗಚ್ಛ ತಾತ ವತ್ಸ ಮಹಾಮತೇ ।**
**ಆಚತುರ್ದಶವರ್ಷೇಭ್ಯಃ ಕುರು ರಾಜ್ಯಂ ಮದಾಜ್ಞಯಾ ॥೨೨॥**

**ರಾಜನೀತಿಂ ಪ್ರವಕ್ಷ್ಯಾಮಿ ತಚ್ಛೃಣುಷ್ವ ಸಮಾಹಿತಃ ।**
**ಮಾ ವಿಶ್ವಾಸಂ ಕೃಥಾಃ ಸ್ತ್ರೀಷು ನ ಸ್ತ್ರೈಣೋ ಭವ ನಿತ್ಯದಾ ॥೨೩॥**

**ನಾಸಾಕ್ಷಿಭೋಜನಂ ಕುರ್ಯಾ ನಾನ್ಯಥಾರ್ಥಪರೋ ಭವ ।**
**ಶೃಣುಷ್ವ ಚ ಕಥಾಂ ದಿವ್ಯಾಂ ನಾರಾಯಣಮನುಂ ಜಪ ॥೨೪॥**

**ನೈವೇದ್ಯಾನ್ನಂ ಹರೇರ್ಭುಂಕ್ಷ್ವ ಹ್ಯನಿವೇದ್ಯಂ ಪರಿತ್ಯಜ ।**
**ಬ್ರಹ್ಮಸ್ವಮಣುಮಾತ್ರಂ ಹಿ ವಿಷಾದಪ್ಯಧಿಕಂ ಸ್ಮರ ॥೨೫॥**

**ವಿಷಮೇಕಾಕಿನಂ ಹಂತಿ ಬ್ರಹ್ಮಸ್ವಂ ಕುಲನಾಶನಮ್ ।**
**ಪರಾನ್ನಂ ಪರನಿಂದಾಂ ಚ ಪರದ್ರವ್ಯಂ ಪರಸ್ತ್ರಿಯಮ್ ।**
**ನ ಕಾಮಯಾಪಿ ಸರ್ವಾಣಿ ನ ಸ್ಮರಾಪದಿ ಚೇತಸಾ ॥೨೬॥**

**ಗೋಬ್ರಾಹ್ಮಣಪರಾರ್ಥೇಷು ಸಮ್ಯಕ್ ಪ್ರಾಣಾನ್ಪರಿತ್ಯಜ ।**
**ಆತ್ಮವತ್ಸರ್ವಭೂತಾನಿ ಯಃ ಪಶ್ಯತಿ ಸ ಪಶ್ಯತಿ ।**
**ಸತ್ವಮಾರ್ಗೇಣ ಸತ್ವಸ್ಥೋ ಯಃ ಪಶ್ಯತಿ ಸದಾ ಶುಚಿಃ ॥೨೭॥**

---

೨೨ ಆದುದರಿಂದ ಜ್ಞಾನಿಯಾದ ಭರತನೇ ಶೀಘ್ರವಾಗಿ ಅಯೋಧ್ಯೆಗೆ ಹೊರಡು. ಹದಿನಾಲ್ಕು ವರುಷಗಳವರೆಗೆ ನನ್ನ ಆಜ್ಞೆಯಿಂದ ರಾಜ್ಯಭಾರ ಮಾಡು.

೨೩ ನಿನಗೆ ರಾಜನೀತಿಯನ್ನು ಉಪದೇಶ ಮಾಡುವೆನು. ಗಮನವಿರಿಸಿ ಕೇಳು. ಸ್ತ್ರೀಯರಲ್ಲಿ ಅತಿಯಾದ ವಿಶ್ವಾಸ ಮಾಡಬೇಡ, ಸ್ತ್ರೀವಶನಾಗಬೇಡ.

೨೪ ಒಬ್ಬನೇ ಎಂದಿಗೂ ಭೋಜನ ಮಾಡಬೇಡ. ಧನದ ಆಶೆಗೊಳಗಾಗಬೇಡ. ಭಗವಂತನ ಕಥೆಗಳನ್ನು ಶ್ರವಣ ಮಾಡು. ನಾರಾಯಣ ಮಂತ್ರವನ್ನು ಜಪಿಸು.

೨೫ ಶ್ರೀಹರಿಯ ನೈವೇದ್ಯವನ್ನೇ ಸೇವಿಸು. ನಿವೇದಿತವಲ್ಲದಿರುವುದನ್ನು ಎಂದಿಗೂ ಸ್ವೀಕರಿಸದಿರು. ಅಣುವಿನಷ್ಟು ಬ್ರಾಹ್ಮಣರ ಸಂಪತ್ತೂ ಕೂಡ ವಿಷಕ್ಕಿಂತಲೂ ಘೋರವೆಂದು ತಿಳಿ.

೨೬ ವಿಷವು ಕುಡಿದವನನ್ನು ಕೊಂದರೆ, ಬ್ರಹ್ಮಸ್ವವು ಕುಲವನ್ನು ನಾಶ ಮಾಡುತ್ತದೆ. ಪರಾನ್ನ, ಪರನಿಂದೆ, ಪರದ್ರವ್ಯಗಳನ್ನು ಅಪೇಕ್ಷಿಸಬೇಡ. ಮನಸ್ಸಿನಲ್ಲೂ ಸ್ಮರಿಸಬೇಡ.

೨೭ ಗೋವುಗಳು, ಬ್ರಾಹ್ಮಣರು, ಪರಹಿತಕ್ಕಾಗಿ ಪ್ರಾಣವನ್ನಾದರೂ ನೀಡು. ಸನ್ಮಾರ್ಗದಿಂದ ಸದಾ ಶುಚಿಯಾಗಿದ್ದು ತನ್ನಂತೆಯೇ ಬೇರೆಯವರನ್ನು ಭಾವಿಸುವವನು ದೇವರನ್ನು ಕಾಣುವನು.

ಏಕಾದಶ್ಯಾಂ ತುಲಸ್ಯರ್ಚಾಂ ಹರೇಸ್ತ್ವಂ ಶ್ರದ್ಧಯಾ ಕುರು ।
ನಿತ್ಯಂ ವಿಷ್ಣುಕಥಾಸಕ್ತೋ ಯಥಾಶಕ್ತಿ ಸ್ವಕರ್ಮಕೃತ್ ॥೨೮॥

ಕುರು ಮುದ್ಗಾನ್ನನೈವೇದ್ಯಂ ಧನುರ್ಮಾಸೇಽರುಣೋದಯೇ ।
ಶರ್ಕರಾಜ್ಯಫಲೋಪೇತಂ ಜೀವನ್ಮುಕ್ತೋ ಭವಿಷ್ಯಸಿ ॥೨೯॥

ಶ್ರುತ್ವಾ ರಾಮೇರಿತಂ ಧರ್ಮಂ ದಧ್ನಸ್ಸಾರಮಿವೋದ್ಧೃತಮ್ ।
ಭರತಃ ಪರಿಪಪ್ರಚ್ಛ ತತ್ತ್ವಂ ರಾಮಂ ಕೃತಾಂಜಲಿಃ ॥೩೦॥

ಧನುರ್ಮಾಸಃ ಕಥಂ ಶ್ಲಾಘ್ಯಃ ಚೈತ್ರಾದಿಷು ಹರಿಪ್ರಿಯಃ ।
ಆರ್ಯ ಬ್ರೂಹಿ ಸುವಿಸ್ತಾರ್ಯ ತತ್ತ್ವಮೇತದಶೇಷತಃ ॥೩೧॥

ಶ್ರೀರಾಮ ಉವಾಚ-

ಮಾರ್ಗಶೀರ್ಷೇ ಚ ಮುದ್ಗಾನ್ನಂ ಯೋಽರ್ಪಯೇದುಷಸೀಶ್ವರೇ ।
ತಸ್ಯ ಪೂಜಾಫಲಂ ವಕ್ತುಂ ಶಕ್ತೋ ನಾರಾಯಣಃ ಸ್ವಯಮ್ ॥೩೨॥

---

೨೮ ಏಕಾದಶಿಯಂದು ಭಗವಂತನಿಗೆ ಭಕ್ತಿಯಿಂದ ತುಲಸೀ ಅರ್ಚನೆಯನ್ನು ಮಾಡು. ನಿತ್ಯದಲ್ಲಿ ವಿಷ್ಣುವಿನ ಕಥಾಶ್ರವಣ ಮಾಡು. ನಿನ್ನ ಶಕ್ತಿಯಿದ್ದಷ್ಟು ವರ್ಣಾಶ್ರಮೋಚಿತ ಕರ್ಮಗಳನ್ನಾಚರಿಸು.

೨೯ ಧನುರ್ಮಾಸದ ಅರುಣೋದಯದಲ್ಲಿ ಸಕ್ಕರೆ, ತುಪ್ಪ, ಹಣ್ಣುಗಳಿಂದ ಕೂಡಿದ ಮುದ್ಗಾನ್ನವನ್ನು ನಿವೇದಿಸು. ಅದರಿಂದ ನೀನು ಜೀವನ್ಮುಕ್ತನೆನಿಸುವೆ.

೩೦ ಮೊಸರಿನ ಸಾರಭೂತವಾದ ಬೆಣ್ಣೆಯಂತೆ ರಾಮನು ಹೇಳಿದ ಧರ್ಮವನ್ನು ಕೇಳಿ ಭರತನು ರಾಮನಿಗೆ ಕೈಮುಗಿದು ತತ್ತ್ವವನ್ನು ಪ್ರಶ್ನೆ ಮಾಡಿದನು.

೩೧ ಚೈತ್ರಾದಿ ಹನ್ನೆರಡು ಮಾಸಗಳಲ್ಲಿ ಧನುರ್ಮಾಸವೇ ಏಕೆ ಶ್ರೇಷ್ಠವೂ, ಹರಿಪ್ರಿಯವೂ ಆಗಿದೆ ಎಂಬುದನ್ನು ಪೂಜ್ಯನಾದ ನೀನು ವಿಸ್ತಾರವಾಗಿ ತತ್ತ್ವೋಪದೇಶ ಮಾಡಬೇಕು.

೩೨ ಮಾರ್ಗಶೀರ್ಷದ (ಧನುರ್ಮಾಸ) ಉಷಃಕಾಲದಲ್ಲಿ ವಿಷ್ಣುವಿಗೆ ಮುದ್ಗಾನ್ನವನ್ನು ಸಮರ್ಪಿಸಿದ ಪೂಜೆಯ ಫಲವನ್ನು ಹೇಳಲು ಸ್ವಯಂ ನಾರಾಯಣನೇ ಶಕ್ತನು.

**ವಿಶೇಷ:** ಸ್ವಯಂ ನಾರಾಯಣನೇ ಆದ ರಾಮನು ಹೀಗೆ ಹೇಳುತ್ತಿರುವುದು ಧನುರ್ಮಾಸದ ಪೂಜಾಫಲವು ವಿಶಿಷ್ಟವೆಂದೂ, ತಾನು ಸ್ವಯಂ ನಾರಾಯಣನ ಅವತಾರನೇ ಎಂಬುದನ್ನು ಸೂಚಿಸಲು ಎಂದು ತಿಳಿಯಬೇಕು.

**ವೈಶಾಖೋऽಥರ್ವಣಾಕಾರಃ ಋಗ್ವೇದಃ ಕಾರ್ತಿಕೋ ಭವೇತ್ ।**
**ಸಾಮವೇದೋ ಮಾರ್ಗಶೀರ್ಷೋ ಮಾಘಮಾಸಸ್ತು ಯಾಜುಷಃ ॥೩೩॥**

**ಮಾರ್ಗಶೀರ್ಷಸ್ತು ಮಾಸಾನಾಂ ದೇವಾನಾಂ ಪ್ರವರೋऽಚ್ಯುತಃ ।**
**ಸಾಮವೇದಶ್ಚ ವೇದಾನಾಂ ಮಂತ್ರಾಣಾಂ ಪ್ರಣವೋ ವರಃ ॥೩೪॥**

**ಗಾನಂ ಪ್ರಶಸ್ಯತೇ ಹೃದ್ಯೇ ಧ್ಯಾನಂ ಶ್ರೇಷ್ಠಂ ತಪಸ್ಸು ಚ ।**
**ಸಾಮ್ನಸ್ತು ಗಾನರೂಪತ್ವಾತ್ ಸಾಮಗಾನಪ್ರಿಯೋ ಹರಿಃ ॥೩೫॥**

**ಜಗತ್ಪ್ರಭೋರ್ಬೋಧಕಾಲೇ ಸಾಮಗಾನಂ ಸಮಾಚರೇತ್ ।**
**ಅರುಣೋದಯಕಾಲೇ ತು ಮಾರ್ಗಶೀರ್ಷೇ ಮಹಾವಿಭೋಃ ॥೩೬॥**

**ಶರ್ಕರೈಲಾದ್ರ್ರಕಾಜ್ಯಾದಿಧಾತ್ರಿಮೂಲಫಲೋಜ್ವಲಮ್ ।**
**ಮುದ್ಗಾನ್ನಂ ಸ್ವರ್ಣಪಾತ್ರೇಷು ಸನ್ನಿಧೌ ಪರಮಾತ್ಮನಃ।**

---

೩೩ ವೈಶಾಖ ಮಾಸವು ಅಥರ್ವಣಾಕಾರವಾದುದು, ಕಾರ್ತಿಕಮಾಸವು ಋಗ್ವೇದಾಕಾರ, ಮಾರ್ಗಶೀರ್ಷವು ಸಾಮವೇದಾಕಾರವಾದುದು, ಮಾಘಮಾಸವು ಯಜುರ್ವೇದಾಕಾರವಾದುದು.

೩೪ ಮಾಸಗಳಲ್ಲಿ ಮಾರ್ಗಶೀರ್ಷವು, ದೇವತೆಗಳಲ್ಲಿ ಅಚ್ಯುತನು, ವೇದಗಳಲ್ಲಿ ಸಾಮವೇದವು ಮಂತ್ರಗಳಲ್ಲಿ ಓಂಕಾರವು ಶ್ರೇಷ್ಠವಾದವು.

೩೫ ಮನೋಹರ ಪದಾರ್ಥಗಳಲ್ಲಿ ಗಾನವೂ, ತಪಸ್ಸುಗಳಲ್ಲಿ ಧ್ಯಾನವೂ ಶ್ರೇಷ್ಠವಾದವು. ಸಾಮವೇದವು ಗಾನರೂಪವಾದುದರಿಂದ ಶ್ರೀಹರಿಯು ಸಾಮಗಾನ ಪ್ರಿಯನಾಗಿದ್ದಾನೆ.

೩೬ ಆದುದರಿಂದ ಜಗತ್ಪ್ರಭುವು ಯೋಗನಿದ್ರೆಯಿಂದ ಏಳುವ ಸಮಯವಾದ ಮಾರ್ಗಶೀರ್ಷ ಮಾಸದ ಅರುಣೋದಯಕಾಲದಲ್ಲಿ ಸಾಮಗಾನವನ್ನು ಮಾಡಬೇಕು.

**ವಿಶೇಷ :** ಮನುಷ್ಯರ ಒಂದು ವರುಷವು ದೇವತೆಗಳ ಒಂದು ದಿವಸವೆನಿಸುವುದು. ಉತ್ತರಾಯಣ ಹಗಲಾದರೆ, ದಕ್ಷಿಣಾಯನ ರಾತ್ರಿಯೆನ್ನಿಸುವುದು. ರಾತ್ರಿಯ ಆರನೇ ಒಂದು ಭಾಗದಷ್ಟಿದ್ದಾಗ ಅರುಣೋದಯವೆನ್ನಿಸುವುದು. ಆರು ತಿಂಗಳ ಆರನೇ ಒಂದು ಭಾಗವೆಂದರೆ ದಕ್ಷಿಣಾಯನದ ಕೊನೆಯ ತಿಂಗಳು. ಮಾರ್ಗಶೀರ್ಷ ಶುಕ್ಲದಿಂದ ಪುಷ್ಯಶುಕ್ಲದ ವರೆಗೆ ಇದೇ ಧನುರ್ಮಾಸ. ಇದೇ ದೇವತೆಗಳ ಅರುಣೋದಯ. ಆದುದರಿಂದ ಧನುರ್ಮಾಸದ ಅರುಣೋದಯದಲ್ಲಿ ದೇವದೇವನ ಎದುರು ಸಾಮಗಾನವನ್ನು ಮಾಡಬೇಕು.

ಸ್ಥಾಪಯಿತ್ವಾ ಸುಖೋಷ್ಣಂ ತು ಶ್ರದ್ಧಯಾ ವಿನಿವೇದಯ ॥೩೭॥

ಯಸ್ಮಾಚ್ಚಾಪೇನ ಮಹತಾ ವಿಷ್ಣುರ್ದೈತ್ಯಾನ್ ಜಘಾನ ಹ ।
ಸಂಕಲ್ಪೇನೈವ ಸಂಹರ್ತುಂ ಸಮರ್ಥೋಽಪಿ ಸುರೋತ್ತಮಃ ।
ತಸ್ಮಾದ್ಧರೇರ್ಧನುಷ್ಯರ್ಚಾ ಕೋಟಿಕೋಟಿಗುಣಾಧಿಕಾ ॥೩೮॥

ಉಪಾಸನಾರ್ಥಂ ದೇವಾನಾಮೇವಂ ಕ್ರೀಡತಿ ಕೇಶವಃ ।
ಇತಿಹಾಸಂ ಪ್ರವಕ್ಷ್ಯಾಮಿ ಸಂಕ್ಷೇಪೇಣಾದರಾಚ್ಛೃಣು ॥೩೯॥

ಪುರಾ ಕೃತಯುಗೇ ದೈತ್ಯೈಃ ದೇವತಾ ಬಾಧಿತಾಸ್ತದಾ ।
ರಕ್ಷ ರಕ್ಷೇತಿ ಭಗವತ್ಪಾದಾಬ್ಜಂ ಶರಣಂ ಗತಾಃ ॥೪೦॥

ನ್ಯವೇದಯಃ ಸ್ಮ ದೈತ್ಯಾನಾಮುದ್ಧತಾನಾಮುಪದ್ರವಮ್ ।
ತಾನ್ ದೃಷ್ಟ್ವಾ ಭಯವಿತ್ರಸ್ತಾನಿಂದ್ರಾದೀನ್ ಶರಣಂ ಗತಾನ್ ।
ಬಭಾಷೇ ಭಗವಾನ್ ದೇವಾನ್ ಮಾ ಭೈಷ್ಟೇತ್ಯುಚ್ಚಕೈರ್ಹರಿಃ ॥೪೧॥

---

೩೭ ಸಕ್ಕರೆ, ಏಲಕ್ಕಿ, ಶುಂಠಿ, ತುಪ್ಪ, ನೆಲ್ಲಿಕಾಯಿ ಮೊದಲಾದವುಗಳಿಂದ ಕೂಡಿದ ಮುದ್ಗಾನ್ನವನ್ನು ಬಂಗಾರದ ಪಾತ್ರೆಯಲ್ಲಿ ಭಗವಂತನ ಎದುರಿಗೆ ಹಿತವಾದ ಬಿಸಿಯಾದುದನ್ನು ಇರಿಸಿ ಭಕ್ತಿಯಿಂದ ನಿವೇದಿಸು.

೩೮ ಭಗವಂತನು ದೊಡ್ಡದಾದ ಧನುಸ್ಸಿನಿಂದ ದೈತ್ಯರನ್ನು ಸಂಹರಿಸಿದ. ಸಂಕಲ್ಪ ಮಾತ್ರದಿಂದಲೇ ದೈತ್ಯರನ್ನು ಸಂಹರಿಸಲು ಸಮರ್ಥನಾದರೂ ದೇವದೇವನು ಧನುಸ್ಸಿನಿಂದ ದೈತ್ಯರನ್ನು ಸಂಹರಿಸಿದ. ಆ ಕಾರಣದಿಂದ ಶ್ರೀಹರಿಗೆ ಧನುರ್ಮಾಸದ ಪೂಜೆಯು ಕೋಟಿ ಕೋಟಿ ಪಟ್ಟು ಹೆಚ್ಚು ಪ್ರಿಯವಾದುದು.

೩೯ ದೇವತೆಗಳ ಉಪಾಸನೆಗೆ ಅನುಕೂಲ ಮಾಡಲು ಕೇಶವನು ಹೀಗೆ ಲೀಲೆ ಮಾಡುವನು. ಇಲ್ಲೊಂದು ಇತಿಹಾಸವನ್ನು ಸಂಕ್ಷೇಪವಾಗಿ ಹೇಳುವೆನು. ಆದರದಿಂದ ಕೇಳು.

೪೦ ಹಿಂದೊಮ್ಮೆ ಕೃತಯುಗದಲ್ಲಿ ದೈತ್ಯರು ದೇವತೆಗಳನ್ನು ಬಾಧಿಸಿದರು. ದೇವತೆಗಳು ರಕ್ಷಿಸು ಎಂದು ಪ್ರಾರ್ಥಿಸುತ್ತ ಭಗವಂತನ ಪಾದಗಳನ್ನು ಶರಣು ಹೊಂದಿದರು.

೪೧ ಉದ್ಧಟರಾದ ದೈತ್ಯರ ಉಪದ್ರವವನ್ನು ಭಗವಂತನಲ್ಲಿ ಹೇಳಿಕೊಂಡರು. ದೈತ್ಯರ ಭಯದಿಂದ ತ್ರಸ್ತರಾದ ತನಗೆ ಶರಣುಬಂದ ಇಂದ್ರಾದಿ ದೇವತೆಗಳನ್ನು ನೋಡಿ ಭಗವಂತನು ಹೆದರಬೇಡಿರೆಂದು ಗಟ್ಟಿಯಾಗಿ ಅಭಯ ನೀಡಿದನು.

ತತೋ ವಿಷ್ಣುರ್ಮಹಾತೇಜಾ ಗರುಡೋಪರಿ ಕೇಶವಃ ।
ಆರುಹ್ಯ ಸತ್ವರೋ ದೇವೋ ಯುದ್ಧೇ ಕ್ರೀಡಾಮಹೋತ್ಸವೇ ।
ಯೋಧಯನ್ ದಾನವಾನ್ ಸರ್ವಾನ್ ದ್ರಾವಯಾಮಾಸ ಕೇಶವಃ ॥೪೨॥

ತದಾ ಹರಿಂ ಮಹಾಭಾಗಾ ಇಂದ್ರಾಣೀ ಚ ಪತಿವ್ರತಾ ।
ಉಷಃಕಾಲೇ ಚ ಮುದ್ಗಾನ್ನೈರ್ಧನುರ್ಮಾಸೇ ಹ್ಯಪೂಜಯತ್ ॥೪೩॥

ಮಾಸಾಂತೇ ಶಾರ್ಙನಿರ್ಮುಕ್ತೈಃ ಸ್ವರ್ಣಪುಂಖೈಃ ಶರೈಃ ಶುಭೈಃ ।
ಹತ್ವಾ ದೈತ್ಯಾನಶೇಷಾಂಸ್ತು ದೇವಾನಾಮಭಯಂ ದದೌ ॥೪೪॥

ದರಿದ್ರೋ ಬಹುದುಃಖಾರ್ತಃ ಕಾರ್ಮುಕೇ ಪ್ರಾತರಚ್ಯುತಮ್ ।
ಪೂಜಯನ್ ಭೋಜಯನ್ ವಿಪ್ರಾನ್ನಚಿರಾದ್ಧನವಾನ್ ಭವೇತ್ ॥೪೫॥

ತಸ್ಮಾತ್ತ್ವಂ ಶ್ರದ್ಧಯಾ ವತ್ಸ ಸರ್ವದೇವಸಮರ್ಚಿತಮ್ ।
ಪ್ರಾತಶ್ಚಾಪೇಽರ್ಚಯನ್ವಿಷ್ಣುಂ ಕೃತಕೃತ್ಯೋ ಭವಿಷ್ಯಸಿ ॥೪೬॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ ಚತುರ್ವಿಂಶೋಽಧ್ಯಾಯಃ ॥

---

೪೨ ನಂತರ ಅನಂತ ಸೂರ್ಯರ ತೇಜಸ್ಸುಳ್ಳ ಮಹಾವಿಷ್ಣುವು ಗರುಡನ ಮೇಲೇರಿ ಕ್ರೀಡಾಮಹೋತ್ಸವದಂತಿರುವ ಯುದ್ಧದಲ್ಲಿ ವೇಗದಿಂದ ಯುದ್ಧಮಾಡಿ ದಾನವರನ್ನೆಲ್ಲ ರಣರಂಗದಿಂದ ಓಡಿಸಿದನು.

೪೩ ಆಗ ಮಹಾಭಾಗ್ಯವಂತಳಾದ ಪತಿವ್ರತೆಯಾದ ಶಚೀದೇವಿಯು ಶ್ರೀಹರಿಯನ್ನು ಧನುರ್ಮಾಸದ ಉಷಃಕಾಲದಲ್ಲಿ ಮುದ್ಗಾನ್ನದಿಂದ ಪೂಜಿಸಿದಳು.

೪೪ ಶ್ರೀಹರಿಯು ಧನುರ್ಮಾಸದ ಕೊನೆಯಲ್ಲಿ ಸ್ವರ್ಣಮಯವಾದ ಬಾಣಗಳನ್ನು ಶಾರ್ಙಧನುಸ್ಸಿಗೆ ಹೂಡಿ ಎಲ್ಲ ದೈತ್ಯರನ್ನು ಸಂಹಾರ ಮಾಡಿ ದೇವತೆಗಳಿಗೆ ಅಭಯವನ್ನು ನೀಡಿದನು.

೪೫ ಬಡವನಾಗಿರಲಿ, ಅತಿ ದುಃಖಿತನಾಗಿರಲಿ ಧನುರ್ಮಾಸದಲ್ಲಿ ಬೆಳಗಿನ ಜಾವ ಶ್ರೀಹರಿಯನ್ನು ಪೂಜಿಸಿ ಬ್ರಾಹ್ಮಣರನ್ನು ಭೋಜನ ಮಾಡಿಸಿದರೆ ಶೀಘ್ರದಲ್ಲೇ ಧನವಂತನಾಗುವನು.

೪೬ ಆದುದರಿಂದ ಭರತನೇ ಸರ್ವದೇವತೆಗಳಿಂದಲೂ ಪೂಜಿತನಾದ ವಿಷ್ಣುವನ್ನು ಧನುರ್ಮಾಸದ ಉಷಃಕಾಲದಲ್ಲಿ ಪೂಜಿಸು. ಅದರ ಪುಣ್ಯದಿಂದ ನೀನು ಕೃತಕೃತ್ಯನಾಗುವೆ.

॥ ಇಲ್ಲಿಗೆ ಇಪ್ಪತ್ನಾಲ್ಕನೇ ಅಧ್ಯಾಯವು ಮುಗಿಯಿತು ॥

# ಅಥ ಪಂಚವಿಂಶೋಽಧ್ಯಾಯಃ

ಶ್ರೀಕೃಷ್ಣ ಉವಾಚ-

ರಾಮಸ್ಯ ವಚನಂ ಶ್ರುತ್ವಾ ಪಪ್ರಚ್ಛ ಭರತಃ ಪುನಃ ।
ವರ್ಣಾನಾಂ ಬ್ರಾಹ್ಮಣಶ್ರೈಷ್ಠ್ಯಂ ತನ್ಮೇ ಬ್ರೂಹಿ ವಿಶೇಷತಃ ।
ಕಥಂ ವಿಪ್ರಸ್ತು ಪೂಜ್ಯೋ ವೈ ದಾನಪಾತ್ರಂ ಹರಿಪ್ರಿಯಃ ॥೧॥

ಶ್ರೀರಾಮ ಉವಾಚ-

ದೈವಾಧೀನಂ ಜಗತ್ಸರ್ವಂ ಮಂತ್ರಾಧೀನಂ ತು ದೈವತಮ್ ।
ತನ್ಮಂತ್ರಂ ಬ್ರಾಹ್ಮಣಾಧೀನಂ ಬ್ರಾಹ್ಮಣೋ ಮಮ ದೈವತಮ್ ॥೨॥

ಮೂರ್ಖಂ ಹಿ ಪತಿತಂ ವಿಪ್ರಂ ಯೋಽವಮಂತಾ ನರಾಧಮಃ ।
ಸ ಪಾಪೀ ಪಿತೃಭಿರ್ಗಚ್ಛೇತ್ ನರಕಾನೇಕವಿಂಶತಿಮ್ ॥೩॥

ಕರ್ಮಣಾ ಮನಸಾ ವಾಚಾ ನ ತಸ್ಮಾದ್ ಬ್ರಾಹ್ಮಣಾಯ ವೈ ।
ಕುಪ್ಯೇನ್ನೋಚ್ಚೈರ್ವದೇದ್ವಾಪಿ ನ ಶಪೇದ್ವಾ ಕದಾಚನ ॥೪॥

ಏತಾನುಲ್ಲಂಘಯೇದ್ಯಸ್ತು ದ್ವಿಜಾನಿಂದ್ರೋಽಪ್ಯಧಃ ಪತೇತ್ ।
ಯೋ ನಮೇಚ್ಛಿರಸಾ ನಿತ್ಯಂ ಬ್ರಾಹ್ಮಣಂ ತ್ರಿಜಗದ್ಗುರುಮ್ ।

---

೧ ರಾಮನ ಮಾತುಗಳನ್ನು ಕೇಳಿದ ಭರತನು ಮತ್ತೆ ಪ್ರಶ್ನೆ ಮಾಡಿದನು. ವರ್ಣಗಳಲ್ಲಿ ಬ್ರಾಹ್ಮಣವರ್ಣವೇ ಏಕೆ ಶ್ರೇಷ್ಠವಾದುದೆಂದು ವಿಶೇಷವಾಗಿ ಹೇಳಬೇಕೆಂದು ಪ್ರಾರ್ಥಿಸಿದನು. ಬ್ರಾಹ್ಮಣನು ಹೇಗೆ ಪೂಜ್ಯನು ಮತ್ತು ವಿಶೇಷವಾಗಿ ದಾನಪಾತ್ರನೂ ಆಗಿರುವನು?

೨ ಜಗತ್ತೆಲ್ಲ ದೇವತೆಗಳ ಅಧೀನವಾಗಿದೆ. ಆ ದೇವತೆಗಳು ಮಂತ್ರಗಳ ಅಧೀನ-ರಾಗಿದ್ದಾರೆ. ಆ ಮಂತ್ರಗಳು ಬ್ರಾಹ್ಮಣರ ಅಧೀನದಲ್ಲಿವೆ. ಬ್ರಾಹ್ಮಣರು ನನ್ನ ದೇವರಾಗಿದ್ದಾರೆ.

೩ ಬ್ರಾಹ್ಮಣನು ಮೂರ್ಖನಾಗಿರಲಿ, ಪತಿತನಾಗಿರಲಿ ಅಂತಹ ಬ್ರಾಹ್ಮಣನನ್ನು ಅವಮಾನ ಮಾಡಿದ ಪಾಪಿಯು ತನ್ನ ಪಿತೃಗಳೊಡನೆ ಇಪ್ಪತ್ತೊಂದು ಪ್ರಸಿದ್ಧವಾದ ನರಕಗಳನ್ನು ಹೊಂದುವನು.

೪ ಆದುದರಿಂದ ಕೃತಿಯಿಂದಾಗಲೀ, ಮನದಲ್ಲಾಗಲೀ, ಮಾತಿನಿಂದಾಗಲೀ ಬ್ರಾಹ್ಮಣನ ಮೇಲೆ ಕೋಪಗೊಳ್ಳಬಾರದು. ಅವನೆದುರು ಜೋರುಧ್ವನಿಯಲ್ಲಿ ಮಾತನಾಡುವುದನ್ನಾಗಲೀ, ಶಪಿಸುವುದನ್ನಾಗಲೀ ಮಾಡಕೂಡದು.

**ವಾಚಾ ವಾ ಯೋऽರ್ಚಯೇದ್ಭಕ್ತ್ಯಾ ಸೋऽಹಮೇವ ನ ಸಂಶಯಃ ॥೫॥**

**ಮದ್ಭಕ್ತೋ ವಾ ದ್ವಿಜಶ್ರೇಷ್ಠೋ ವಾಜಪೇಯಾದಿಯಜ್ಞಕೃತ್ ।**
**ಯಃ ಕ್ರುಧ್ಯತಿ ದ್ವಿಜೇಭ್ಯಃ ಸ ನಾರಕೀ ಸ್ಯಾನ್ನ ಸಂಶಯಃ ॥೬॥**

**ಭೋಜಯೇದ್ ಬ್ರಾಹ್ಮಣಂ ಭಕ್ತ್ಯಾ ಸೂಪಾನ್ನೈಃ ಕ್ಷುತ್ಕೃಶಂ ಸಕೃತ್ ।**
**ಅರ್ಚಿತೋऽಹಂ ಪ್ರತಿಗ್ರಾಸಂ ಸ್ವರ್ಣಾಬ್ಜೈರಯುತಂ ಸಮಾಃ ॥೭॥**

**ತೃಪ್ತೇ ದ್ವಿಜೇ ಸುತೃಪ್ತೋऽಹಂ ಪೂಜಿತೇ ಪೂಜಿತೋऽಸ್ಮ್ಯಹಮ್ ।**
**ನಿಂದಿತೇ ನಿಂದಿತಶ್ಚಾಹಂ ವಿಪ್ರಮೇವಾರ್ಚಯೇತ್ಸದಾ ॥೮॥**

**ಆಯುಷ್ಯಮಾರೋಗ್ಯಮಭೀಷ್ಟಸಿದ್ಧಿಂ**
**ಪುತ್ರಾನ್ವಿನೀತಾನ್ ಶ್ರುತಿಶಾಸ್ತ್ರಸಿದ್ಧಾನ್ ।**
**ಕುಲಾಭಿವೃದ್ಧಿಂ ಧನಧಾನ್ಯವೃದ್ಧಿಂ**
**ಸರ್ವಾರ್ಥಿತಂ ಬ್ರಾಹ್ಮಣಪೂಜಯೈತಿ ॥೯॥**

---

೫ ಮೂರು ಲೋಕಗಳಿಗೂ ಗುರುವೆನಿಸಿದ ಬ್ರಾಹ್ಮಣನನ್ನು ನಿತ್ಯದಲ್ಲಿ ಯಾರು ತಲೆಬಾಗಿ ನಮಸ್ಕರಿಸುವರೋ ಮಾತಿನಿಂದಾಗಲೀ ಪೂಜಿಸುವರೋ ಅವರು ನಿಸ್ಸಂಶಯವಾಗಿ ನನ್ನನ್ನೇ ಹೊಂದುವರು.

೬ ಬ್ರಾಹ್ಮಣನ ಮೇಲೆ ಕೋಪಗೊಂಡವನು ವಾಜಪೇಯವೇ ಮೊದಲಾದ ಯಾಗಗಳನ್ನು ಮಾಡುವ ನನ್ನ ಶ್ರೇಷ್ಠಭಕ್ತನೇ ಆಗಿದ್ದರೂ ಸಂದೇಹರಹಿತವಾಗಿ ನರಕವನ್ನೇ ಹೊಂದುವನು.

೭ ಹಸಿವೆಯಿಂದ ಬಳಲಿ ಕೃಶನಾಗಿರುವ ಬ್ರಾಹ್ಮಣನನ್ನು ಅನ್ನ-ತೊವ್ವೆ ಮೊದಲಾದವುಗಳಿಂದ ಭಕ್ತಿಪೂರ್ವಕ ಭೋಜನ ಮಾಡಿಸಿದರೆ ಪ್ರತಿ ತುತ್ತಿಗೂ ಹತ್ತು ಸಾವಿರ ಬಂಗಾರದ ಕಮಲಗಳಿಂದ ನನ್ನನ್ನು ಪೂಜಿಸಿದ ಫಲವನ್ನು ಪಡೆಯುವನು.

೮ ಬ್ರಾಹ್ಮಣನು ತೃಪ್ತನಾದರೆ ನಾನು ಸುತೃಪ್ತನು. ಪೂಜಿತನಾದರೆ ನಾನು ಪೂಜಿತನು. ಬ್ರಾಹ್ಮಣನು ನಿಂದೆಗೊಳಗಾದರೆ ನಾನೇ ನಿಂದಿತನಾದಂತೆ. ಆದುದರಿಂದ ಯಾವಾಗಲೂ ಬ್ರಾಹ್ಮಣನನ್ನೇ ಪೂಜಿಸಬೇಕು.

೯ ಬ್ರಾಹ್ಮಣ ಪೂಜೆಯಿಂದ ಆಯುಷ್ಯ, ಆರೋಗ್ಯ, ವೇದಶಾಸ್ತ್ರಪಾರಂಗತರಾದ ಪುತ್ರರು, ಕುಲದ ಅಭಿವೃದ್ಧಿ, ಧನ-ಧಾನ್ಯಗಳ ಸಮೃದ್ಧಿ ಮೊದಲಾದ ಎಲ್ಲ ಅಭೀಷ್ಟಗಳನ್ನು ಹೊಂದುವನು.

**ಅಭ್ಯಸೇದ್ವಾ ಚತುರ್ವೇದಾನ್ ಭೂಮಿಂ ವಿಸ್ತಾರಯೇತ್ಕುಶೈಃ ।**
**ತಾಪಯೇತ್ತಪಸಾ ದೇವಾನ್ ವಿಪ್ರಶತ್ರುಃ ಪತೇದಧಃ ॥೧೦॥**

**ವಿಪ್ರಃ ಶಪತು ರುಷ್ಟೋ ವಾ ವಹ್ನಿಂ ತ್ಯಜತು ವಾ ಗೃಹೇ ।**
**ದಂಡಾದ್ಯೈರ್ಹಂತು ವಾ ಶೀರ್ಷಂ ಶ್ರೇಷ್ಠೋ ಯಃ ಸ್ಯಾತ್ ಕ್ಷಮೀ ದ್ವಿಜೇ ।**
**ಯಥಾ ಗ್ರಾಹೋ ಮುಖಂ ಪ್ರಾಪ್ತಂ ಹಂತಿ ವಿಪ್ರೋಽವಮಾನಿತಃ ॥೧೧॥**

**ನ ತೀರ್ಥಸೇವಾ ನ ಸುರಾರ್ಚನಾದಿ-**
**ರರ್ಧೋದಯೇ ಸೇತುತೀರ್ಥೇಽವಗಾಹಃ ।**
**ರಂಗೇ ತುಲಾರ್ಕೇ ಚ ಮರುದ್ವೃಧಾಯಾಂ**
**ಯಥೋದ್ಧರೇದ್ವಿಪ್ರಪದಾಬ್ಜತೀರ್ಥಮ್ ॥೧೨॥**

**ಬ್ರಹ್ಮಹತ್ಯಾದಿಪಾಪಾನಾಂ ಪ್ರಾಯಶ್ಚಿತ್ತಂ ದ್ವಯಂ ಸ್ಮೃತಮ್।**
**ವಿಪ್ರಸ್ಯ ಪಾದತೀರ್ಥಂ ಚ ತುಲಾರ್ಕೇ ಸಹ್ಯಜಾಜಲಮ್ ॥೧೩॥**

**ತಸ್ಮಾತ್ಸಪ್ತಾಬ್ಧಿಷು ಸ್ನಾನಂ ಸುರಪಾದಾಬ್ಜಪೂಜನಮ್ ।**
**ಅಗ್ನಿಷ್ಟೋಮಾದಿಕೋ ಯಜ್ಞೋ ಗಂಗಾದ್ಯಾಃ ಸರಿತೋಽಮಲಾಃ ।**

---

೧೦ ನಾಲ್ಕು ವೇದಗಳನ್ನು ಸಾಂಗವಾಗಿ ಅಭ್ಯಾಸ ಮಾಡಿರಲಿ, ಯಜ್ಞಕ್ಕಾಗಿ ದರ್ಭೆಗಳಿಂದ ಭೂಮಿಯನ್ನೇ ಮುಚ್ಚಲಿ, ತಪಸ್ಸಿನಿಂದ ದೇವತೆಗಳನ್ನು ಮೆಚ್ಚಿಸಲಿ, ಅಂತಹವನು ಬ್ರಾಹ್ಮಣನ ಶತ್ರುವಾಗಿದ್ದರೆ ನಿಶ್ಚಿತವಾಗಿ ಅಧಃಪತನ ಹೊಂದುವನು.

೧೧ ಬ್ರಾಹ್ಮಣನು ಕೋಪದಿಂದ ಶಪಿಸಲಿ, ಮನೆಗೆ ಬೆಂಕಿ ಇಡಲಿ, ಕೋಲಿನಿಂದ ಹೊಡೆಯಲಿ, ಬ್ರಾಹ್ಮಣನನ್ನು ಕ್ಷಮಿಸಿದ ಪುರುಷನೇ ಶ್ರೇಷ್ಠನು. ಮೊಸಳೆಯು ತನ್ನ ಬಾಯಲ್ಲಿ ಸಿಕ್ಕವನನ್ನು ಕೊಲ್ಲುವ ಹಾಗೆ ಅವಮಾನಿತನಾದ ಬ್ರಾಹ್ಮಣನು ಅಪಮಾನಿಸಿದವನನ್ನು ನಾಶಪಡಿಸುವನು.

೧೨ ತೀರ್ಥಯಾತ್ರೆಯಾಗಲೀ, ದೇವತೆಗಳ ಪೂಜೆಯಾಗಲೀ ಅರ್ಧೋದಯ ಪರ್ವಕಾಲದಲ್ಲಿ ಸೇತುತೀರ್ಥದಲ್ಲಿ ಸ್ನಾನವಾಗಲೀ, ಸೂರ್ಯನು ತುಲಾರಾಶಿಯಲ್ಲಿರುವಾಗ ಶ್ರೀರಂಗದಲ್ಲಿ ದಕ್ಷಿಣ ಗಂಗೆಯೆನಿಸಿದ ಕಾವೇರೀ ಸ್ನಾನವಾಗಲೀ, ಬ್ರಾಹ್ಮಣ ಪಾದೋದಕದಂತೆ ಉದ್ಧರಿಸಲಾರದು.

೧೩ ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾಪಗಳಿಗೆ ಎರಡು ಪ್ರಾಯಶ್ಚಿತ್ತಗಳು. ಮೊದಲನೆಯದು ಬ್ರಾಹ್ಮಣ ಪಾದತೀರ್ಥ, ಎರಡನೇಯದು ತುಲಾ-ಸಂಕ್ರಮಣದಲ್ಲಿ ಕಾವೇರಿಯ ಸ್ನಾನ.

**ವಿಪ್ರಸ್ಯ ಪಾದತೀರ್ಥಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥೧೪॥**

**ಸರ್ವತೀರ್ಥಫಲಾವಾಪ್ತ್ಯೈ ಬ್ರಹ್ಮಣಾ ಕಲ್ಪಿತಂ ಸ್ವಯಮ್ ।**
**ನ ತಥಾ ಸಾಧಯೇತ್ಸರ್ವಂ ಯಥಾ ವಿಪ್ರಾಂಘ್ರಿಪೂಜನಮ್ ॥೧೫॥**

**ತಸ್ಮಾತ್ಪೂಜ್ಯೋ ಮಹಾಭಾಗ ಬ್ರಾಹ್ಮಣೋ ಮಮ ದೈವತಮ್ ।**
**ಜನ್ಮಾಂತರತಪಃಸಿದ್ಧ್ಯಾ ಪ್ರಾಪ್ಯತೇ ಬ್ರಾಹ್ಮಣಾರ್ಚನಮ್ ॥೧೬॥**

**ಇತ್ಯೇತತ್ಕಥಿತಂ ಪೂರ್ವಮೀಶ್ವರೇಣ ಮಹಾತ್ಮನಾ ।**
**ಮಹಾದೇವೇನ ವಿಧಯೇ ಬ್ರಹ್ಮಮಾಹಾತ್ಮ್ಯಮುತ್ತಮಮ್ ॥೧೭॥**

**ತತ್ಸರ್ವಂ ಬೋಧಯೇ ತ್ವಾಹಂ ಶೃಣ್ವೇತತ್ ತ್ವಂ ಮಹಾಮತೇ ।**
**ಇತಿ ಶ್ರುತ್ವಾ ಗುರೋರ್ವಾಕ್ಯಂ ಧರ್ಮಗರ್ಭಂ ಸಹೇತುಕಮ್ ॥೧೮॥**

**ಸುನಿಶ್ಚಿತಾರ್ಥಂ ಧರ್ಮೇಷು ಭರತಃ ಪ್ರಾಂಜಲಿಃ ಸ್ಥಿತಃ ।**
**ಉವಾಚ ರಾಮಂ ಧರ್ಮಜ್ಞಂ ಜ್ಯೇಷ್ಠಂ ಲೋಕಹಿತೇ ರತಮ್ ॥೧೯॥**

---

೧೪ ಆದುದರಿಂದ ಏಳು ಸಮುದ್ರಗಳ ಸ್ನಾನ, ದೇವತೆಗಳ ಪೂಜೆ, ಅಗ್ನಿಷ್ಟೋಮಾದಿ ಯಜ್ಞಗಳು ಪಾವನವಾದ ಗಂಗಾದಿ ತೀರ್ಥಗಳು, ವಿಪ್ರಪಾದೋದಕದ ಹದಿನಾರನೇ ಒಂದಂಶಕ್ಕೂ ಸಾಟಿಯೆನಿಸಲಾರವು.

೧೫ ಎಲ್ಲ ತೀರ್ಥಗಳ ಸ್ನಾನದ ಫಲಪ್ರಾಪ್ತಿಗಾಗಿ ಬ್ರಹ್ಮದೇವರಿಂದಲೇ ಹೀಗೆ ಬ್ರಾಹ್ಮಣಪಾದೋದಕವು ಕಲ್ಪಿತವಾಗಿದೆ. ಬ್ರಾಹ್ಮಣ ಪಾದಪೂಜೆಯಂತೆ ಬೇರಾವುದೂ ಸರ್ವಾರ್ಥಗಳನ್ನು ನೀಡಲಾರದು.

೧೬ ಆದುದರಿಂದ ಭರತನೇ! ಪೂಜ್ಯರಾದ ಬ್ರಾಹ್ಮಣರು ನನಗೆ ದೇವರೆನಿಸಿದ್ದಾರೆ. ಜನ್ಮಾಂತರದ ತಪಸ್ಸುಳ್ಳವರಿಗೆ ಮಾತ್ರ ಬ್ರಾಹ್ಮಣಪೂಜೆಯ ಸದವಕಾಶವು ದೊರೆಯುವುದು.

೧೭ ಈ ಎಲ್ಲ ಬ್ರಾಹ್ಮಣಪೂಜೆಯ ಮಹಿಮೆಯು ಹಿಂದೆ ಮಹಾತ್ಮರಾದ ರುದ್ರದೇವರು ಬ್ರಹ್ಮದೇವರ ಮುಂದೆ ವಿಜ್ಞಾಪಿಸಿಕೊಂಡಿದ್ದರು.

೧೮ ಅದೆಲ್ಲವನ್ನು ನಾನು ನಿನಗೆ ಹೇಳುವೆನು. ಜ್ಞಾನಿಯಾದ ನೀನು ಕೇಳು. ಹೀಗೆಂದ ಗುರುವಾದ ರಾಮನ ಸಕಾರಣವಾದ ಧರ್ಮಯುಕ್ತವಾದ ಮಾತುಗಳನ್ನು ಕೇಳಿದನು.

೧೯ ಧರ್ಮವನ್ನರಿತ, ಲೋಕದ ಹಿತದಲ್ಲಿ ರತನಾದ, ಧರ್ಮ ನಿಶ್ಚಯವುಳ್ಳ ಹಿರಿಯ ಸಹೋದರ ರಾಮನಿಗೆ ಭರತನು ಕೈಮುಗಿದು ಹೇಳಿದ.

ಶ್ರೀ ಭರತ ಉವಾಚ-

ರಾಮ ರಾಮ ಮಹಾಬಾಹೋ ಭ್ರಾತಾ ತ್ವಂ ದೈವತಂ ಮಮ ।
ಧನುರ್ಮಾಸಪ್ರಭಾವಂ ಯದ್ಬೋಧಿತೋಽಹಂ ತ್ವಯಾ ಪ್ರಭೋ ॥೨೦॥

ತತಸ್ತು ರಾಮೋ ಗುರುಣಾಭಿಚೋದಿತೋ
ಭ್ರಾತ್ರೇ ಚ ದತ್ವಾ ಮಣಿಪಾದುಕಾದ್ವಯಮ್ ।
ಆರೋಪ್ಯ ಚಾಂಕಂ ಭರತಂ ಸಧೈರ್ಯಂ
ಆಲಿಂಗ್ಯ ಚಾಘ್ರಾಯ ಪುನಃ ಪುನಃ ಶಿರಃ ॥೨೧॥

ಅನುಜ್ಞಾತಸ್ತು ರಾಮೇಣ ರಾಜ್ಯಾಯ ಭರತಸ್ತದಾ ।
ನಂದಿಗ್ರಾಮೇಽಕರೋದ್ರಾಜ್ಯಂ ಸುಮಂತ್ರಾದ್ಯೈಶ್ಚ ಮಂತ್ರಿಭಿಃ ॥೨೨॥

ದಿವ್ಯಸಿಂಹಾಸನಾರೂಢಂ ಕೃತ್ವಾ ರಾಮಪದಾಂಬುಜಮ್ ।
ಅರ್ಚಯನ್ ಪ್ರತ್ಯಹಂ ಭಕ್ತ್ಯಾ ಸ್ವರ್ಣಪಂಕಜಕೋಟಿಭಿಃ ॥೨೩॥

ಪ್ರತ್ಯಬ್ದಂ ಚ ಧನುರ್ಮಾಸೇ ಮುದ್ಗಾನ್ನಮರುಣೋದಯೇ ।
ನಿವೇದಯಿತ್ವಾ ಭೂದೇವಾನ್ ಭೋಜಯಾಮಾಸ ಚಾನ್ವಹಮ್ ॥೨೪॥

ಏವಂ ಚಕಾರ ಧನುಷಿ ಭರತೋ ಭ್ರಾತೃವತ್ಸಲಃ ।

---

೨೦ ಮಹಾಪರಾಕ್ರಮಿಯಾದ ರಾಮನೇ! ನೀನೇ ನನಗೆ ಅಣ್ಣನೂ ದೇವತೆಯೂ ಆಗಿರುವೆ. ಹೇ ಪ್ರಭೋ! ಧನುರ್ಮಾಸದ ಪ್ರಭಾವವನ್ನು ನಾನು ನಿನ್ನಿಂದ ತಿಳಿದಿರುವೆ.

೨೧ ನಂತರ ಗುರುಗಳಿಂದ ಪ್ರೇರಿತನಾದ ರಾಮನು ತನ್ನ ಬಂಗಾರದ ಪಾದುಕೆಗಳನ್ನು ಭರತನಿಗೆ ನೀಡಿ ಅವನನ್ನು ತೊಡೆಯ ಮೇಲೆ ಕೂರಿಸಿಕೊಂಡು ಮತ್ತೆ ಮತ್ತೆ ಅವನ ತಲೆಯನ್ನು ಆಘ್ರಾಣಿಸಿದನು.

೨೨ ರಾಮನಿಂದ ಆಜ್ಞೆ ಪಡೆದ ಭರತನು ರಾಜ್ಯಕ್ಕೆ ನಡೆದನು. ಸುಮಂತ್ರನೇ ಮೊದಲಾದ ಮಂತ್ರಿಗಳಿಂದ ಕೂಡಿ ನಂದಿಗ್ರಾಮದಲ್ಲಿದ್ದು ರಾಜ್ಯವನ್ನಾಳತೊಡಗಿದನು.

೨೩ ರಾಮಪಾದುಕೆಗಳನ್ನು ಸಿಂಹಾಸನದ ಮೇಲಿರಿಸಿ ಪ್ರತಿದಿನ ಭಕ್ತಿಪೂರ್ವಕವಾಗಿ ಕೋಟಿ ಕೋಟಿ ಸ್ವರ್ಣಕಮಲಗಳಿಂದ ಪೂಜಿಸಿದನು.

೨೪ ಪ್ರತಿವರುಷ ಧನುರ್ಮಾಸದ ಅರುಣೋದಯದಲ್ಲಿ ಪ್ರತಿದಿನ ಮುದ್ಗಾನ್ನವನ್ನು ದೇವರಿಗೆ ಸಮರ್ಪಿಸಿ ಬ್ರಾಹ್ಮಣಭೋಜನ ಮಾಡಿಸಿದನು.

**ತತೋ ರಾಮೋ ಮಹಾತೇಜಾ ದಂಡಕಾನ್ ಪ್ರವಿವೇಶ ಹ ॥೨೫॥**

**ತೇಷಾಂ ನಿವಸತಾಂ ತತ್ರ ಅರಣ್ಯೇ ನಿರ್ಜಲೇ ತದಾ ।**
**ಸುಕಂದಮೂಲದೌರ್ಲಭ್ಯಾತ್ ಲಕ್ಷ್ಮಣಃ ಕ್ಲೇಶಮಾವಿಶತ್ ॥೨೬॥**

**ತಮಬ್ರವೀನ್ಮಹಾತೇಜಾ ರಾಮೋ ರಾಜೀವಲೋಚನಃ ।**
**ಪೃಥಿವ್ಯಾಮನ್ನಪೂರ್ಣಾಯಾಂ ವಯಮನ್ನಸ್ಯ ಕಾಂಕ್ಷಿಣಃ ॥೨೭॥**

**ಸೌಮಿತ್ರೇ ಅನ್ನಮಸ್ಮಾಭಿರ್ನ ಬ್ರಾಹ್ಮಣಮುಖೇ ಹುತಮ್ ।**
**ಇತಿ ದುಃಖತರಂ ಪ್ರಾಪ ರಾಮೋ ಧರ್ಮಭೃತಾಂ ವರಃ ॥೨೮॥**

**ರಾವಣೇನ ಹೃತಾ ಭಾರ್ಯಾ ಸೀತಾಕೃತಿರಸೌ ವನೇ ।**
**ತೇನ ದುಃಖೇನ ಸಂತಪ್ತೋ ವಿಲಲಾಪಾಕುಲೇಂದ್ರಿಯಃ ॥೨೯॥**

---

೨೫ ಭ್ರಾತೃವತ್ಸಲನಾದ ಭರತನು ಹೀಗೆ ಧನುರ್ಮಾಸಾಚರಣೆಯನ್ನು ಮಾಡಿದನು. ಇತ್ತ ಕಡೆ ಮಹಾಪರಾಕ್ರಮಿಯಾದ ರಾಮನು ದಂಡಕಾರಣ್ಯವನ್ನು ಪ್ರವೇಶ ಮಾಡಿದನು.

೨೬ ನೀರಿಲ್ಲದ ಅರಣ್ಯಪ್ರದೇಶದಲ್ಲಿ ವಾಸ ಮಾಡುತ್ತಿರಲು ಒಳ್ಳೆಯ ಗಡ್ಡೆ-ಗೆಣಸುಗಳು ದೊರೆಯದೇ ಲಕ್ಷ್ಮಣನು ದುಃಖಿತನಾದನು.

೨೭ ಕಮಲನೇತ್ರನಾದ ತೇಜಃಪುಂಜನಾದ ರಾಮನು ಲಕ್ಷ್ಮಣನಿಗೆ ಹೇಳಿದನು. ಪೃಥಿವಿಯೇ ಅನ್ನದಿಂದ ತುಂಬಿರುವಾಗ ನಾವು ಅನ್ನದ ಅಪೇಕ್ಷಿಗಳಾಗಿದ್ದೇವೆ.

೨೮ ಲಕ್ಷ್ಮಣನೇ! ಹಿಂದೆ ನಾವು ದಾನ ಮಾಡಿಲ್ಲ. ಬ್ರಾಹ್ಮಣರ ಮುಖದಲ್ಲಿ ಅನ್ನಾಹುತಿಯನ್ನು ನೀಡಿಲ್ಲ. ಆದುದರಿಂದ ಅನ್ನ ದೊರೆಯದೇ ಇದ್ದೇವೆ. ಎಂದು ನುಡಿದು ರಾಮನು ಬಹಳ ದುಃಖಿತನಾದನು.

ವಿಶೇಷ : ಅನ್ನದಾನವನ್ನು ಮಾಡದವರಿಗೆ ಅನ್ನ ದೊರೆಯುವುದಿಲ್ಲ. ಎಂಬುದನ್ನು ಲೋಕಕ್ಕೆ ತಿಳಿಸುವುದಕ್ಕಾಗಿ ರಾಮ ಹೀಗೆ ಹೇಳುತ್ತಿದ್ದಾನೆ. ಹೊರತು ದುಃಖದಿಂದ ಅಲ್ಲ. ರಾಮಚಂದ್ರನೇ ಸಮಸ್ತ ಪ್ರಪಂಚದ ಸೃಷ್ಟ್ಯಾದಿಗಳಿಗೆ ಕಾರಣನಾಗಿದ್ದಾನೆ. ಎಂದು ತಿಳಿಯಬೇಕು.

ಆಪ್ತಕಾಮನಾದ ಅವನಿಗೆ ಅಪೇಕ್ಷೆಗಳಿಲ್ಲ. ''ಆಪ್ತಕಾಮಸ್ಯ ಕಾ ಸ್ಪೃಹಾ'' ಅವನ ಅಪೇಕ್ಷೆಗಳಿಗೆ ಪ್ರತಿಬಂಧಕರೂ ಇಲ್ಲ. ಅವನಿಗೆ ಮೋಹ-ದುಃಖಗಳಿಲ್ಲ. ಅವನಂತೆಯೇ ಲಕ್ಷ್ಮೀದೇವಿಗೂ ಮೋಹ ದುಃಖಗಳಿಲ್ಲ.

೨೯ ಸೀತೆಯನ್ನು ಅಪಹರಿಸಲು ಬಂದ ರಾವಣನು ಸೀತೆಯಿಂದ ನಿರ್ಮಿತವಾದ ಸೀತಾಕೃತಿಯನ್ನು ಅಪಹರಿಸಿದ. ಪತ್ನಿಯ ವಿರಹದಿಂದ ಬೆಂದು ಹೋದ

**ಲಕ್ಷ್ಮಣೋಽಪಿ ಮಹಾತೇಜಾ ರಾಮಂ ಪ್ರತಿ ವಚೋಽಬ್ರವೀತ್ ।**
**ರಾಮ ರಾಮ ಮಹಾಬಾಹೋ ತ್ಯಜ ದುಃಖಂ ಚ ದುಸ್ಸಹಮ್ ॥೩೦॥**

**ಸೀತಾಗವೇಷಣಂ ಕುರ್ವ ಇತಿ ತೌ ಯಯತುಃ ಸ್ಮೃತಿಮ್ ।**
**ತತೋ ಗೃಧ್ರಂ ಹತಂ ದೃಷ್ಟ್ವಾ ರಾವಣೇನ ದುರಾತ್ಮನಾ ॥೩೧॥**

**ಚಿತಾಮಾರೋಪ್ಯ ತದ್ದೇಹಮಗ್ನಿಸಂಸ್ಕಾರಮಾತನೋತ್ ।**
**ತತೋ ರಾಮೋ ಮಹಾತೇಜಾ ಲಕ್ಷ್ಮಣಂ ತ್ವಬ್ರವೀತ್ತದಾ ॥೩೨॥**

**ರಾಜ್ಯಾದ್ ಭ್ರಂಶೋ ವನೇ ವಾಸಃ ಸೀತಾ ನಷ್ಟಾ ಹತೋ ದ್ವಿಜಃ ।**
**ಈದೃಶೀಯಂ ಮಮಾಲಕ್ಷ್ಮೀ ನಿರ್ದಹೇದಪಿ ಪಾವಕಮ್ ॥೩೩॥**

---

ರಾಮನು ಅತಿದುಃಖದಿಂದ ವಿಲಾಪ ಮಾಡಿದ.

**ವಿಶೇಷ :** ರಾಮ-ಸೀತೆಯರಿಗೆ ಎಂದಿಗೂ ವಿಯೋಗವಿಲ್ಲ. ಸೀತೆಯು ನಿತ್ಯಾವಿಯೋಗಿನೀ. ಭಗವಂತನಿಗೆ ವಿರಹಕಾತರತೆಯೂ ಇಲ್ಲ.

ರಾಮನ ಇಚ್ಛೆಯಿಂದಲೇ ಸೀತೆ ಅಪಹರಣಕ್ಕೊಳಗಾದಂತೆ ನಟಿಸಿದರೆ ರಾಮನು ಸೀತೆಯ ವಿರಹದಿಂದ ದುಃಖಿತನಾದಂತೆ ನಟಿಸಿದ. ಇಷ್ಟು ಮಾತ್ರದಿಂದ ಮಹಾಪ್ರಭುಗಳಾದ ಅವರ ವಿಷಯದಲ್ಲಿ ಅಣು ಮಾತ್ರ ದೋಷವನ್ನೂ ಶಂಕಿಸಕೂಡದು.

೩೦ ತೇಜಸ್ವಿಯಾದ ಲಕ್ಷ್ಮಣನು ರಾಮನನ್ನು ಕುರಿತು ಹೇಳಿದನು. ಪರಾಕ್ರಮಿಯಾದ ರಾಮನೇ ಸಹಿಸಲಾಗದ ಈ ದುಃಖವನ್ನು ತ್ಯಜಿಸು.

೩೧ ಸೀತೆಯನ್ನು ಹುಡುಕೋಣ ಎಂದು ರಾಮ-ಲಕ್ಷ್ಮಣರು ಹೊರಟರು. ದಾರಿಯಲ್ಲಿ ಪಾಪಿಯಾದ ರಾವಣನಿಂದ ಕೊಲ್ಲಲ್ಪಟ್ಟ ಜಟಾಯುವನ್ನು ನೋಡಿದರು.

೩೨ ಅದರ ದೇಹವನ್ನು ಚಿತೆಯ ಮೇಲಿರಿಸಿ ಅಗ್ನಿಸಂಸ್ಕಾರ ಮಾಡಿದರು. ಅನಂತರ ರಾಮನು ಲಕ್ಷ್ಮಣನಿಗೆ ನುಡಿದನು.

೩೩ ನಾನು ರಾಜ್ಯವನ್ನು ಕಳೆದುಕೊಂಡೆ. ವನದಲ್ಲಿ ವಾಸಿಸುತ್ತಿದ್ದೇನೆ. ಹೆಂಡತಿಯಾದ ಸೀತೆಯು ಕಾಣೆಯಾಗಿದ್ದಾಳೆ. ನನ್ನ ಹಿತೈಷಿಯಾದ ಜಟಾಯುವು ಮೃತನಾದನು. ನನಗೆ ಒದಗಿರುವ ಇಂತಹ ದೌರ್ಭಾಗ್ಯವು ಅಗ್ನಿಯನ್ನೇ ಸುಡಬಲ್ಲದು.

**ವಿಶೇಷ :** ಚಿಂತಾ-ಸಂತಾಪಗಳ ಲೇಪವಿಲ್ಲದ ಶ್ರೀರಾಮನು ಎಲ್ಲವನ್ನು ಸುಡುವ ಅಗ್ನಿಯನ್ನು ಚಿಂತೆಯು ಸುಡುವುದು ಎನ್ನುವ ಮೂಲಕ ಚಿಂತೆಯು ಎಷ್ಟು ಭಯಂಕರವಾದುದು ಎಂಬುದನ್ನು ಸೂಚಿಸಿರುವನೆಂದು ತಿಳಿಯಬೇಕು.

**ಏವಮುಕ್ತ್ವಾ ಮಹಾತೇಜಾ ರಾಮೋ ಧರ್ಮಪರಾಯಣಃ ।**
**ಕಬಂಧಸ್ಯ ವಧಂ ಕೃತ್ವಾ ಶಬರ್ಯಾ ದರ್ಶನಂ ತಥಾ ॥೩೪॥**

**ಪಂಪಾಯಾಶ್ಚಾಪಿ ಗಹನೇ ಹನುಮದ್ದರ್ಶನಂ ತಥಾ ।**
**ಹನುಮದ್ವಚನಾಚ್ಚೈವ ಸುಗ್ರೀವೇ ಸಖ್ಯಮಾಚರತ್ ॥೩೫॥**

**ವಾಲಿನಶ್ಚ ವಧಂ ಕೃತ್ವಾ ಸೀತಾನ್ವೇಷಣತತ್ಪರಃ ।**
**ಸಂಪಾತೇರ್ವಚನಾಚ್ಚೈವ ಹನೂಮಾನ್ಮಾರುತಾತ್ಮಜಃ ।**
**ಶತಯೋಜನವಿಸ್ತೀರ್ಣಂ ಸಮುದ್ರಂ ಲಂಘಯತ್ ತದಾ ॥೩೬॥**

**ಸೀತಾಯೈ ಮುದ್ರಿಕಾಂ ದತ್ವಾ ಲಂಕಾಂ ಭಸ್ಮೀಚಕಾರ ಸಃ ।**
**ಚೂಡಾಮಣಿಂ ಗೃಹೀತ್ವಾತು ರಾಮಪಾದಾಂಬುಜಂ ಯಯೌ ॥೩೭॥**

**ಹನುಮದ್ವಚನಾಚ್ಚೈವ ಪರಂ ಹರ್ಷಮುಪೇಯಿವಾನ್ ।**
**ದೃಷ್ಟ್ವಾ ಸೀತಾ ಮಯಾ ರಾಮ ನಾತ್ರ ಕಾರ್ಯಾ ವಿಚಾರಣಾ ॥೩೮॥**

**ತತಃ ಸುಗ್ರೀವಸಹಿತೋ ಮಹೇಂದ್ರಂ ಪರ್ವತಂ ಯಯೌ।**
**ಬದ್ಧ್ವಾ ಸೇತುಂ ಸಮುದ್ರೇ ಸ ನಲೇನ ಸಹ ವಾನರೈಃ ।**
**ಶತಯೋಜನವಿಸ್ತೀರ್ಣಂ ದಶಯೋಜನಮಾಯತಮ್ ॥೩೯॥**

---

೩೪ ಧರ್ಮಪರಾಯಣನಾದ ಪರಾಕ್ರಮಿ ರಾಮನು ಹೀಗೆ ನುಡಿದನು. ಅಲ್ಲಿಂದ ಹೊರಟು ಕಬಂಧನನ್ನು ಸಂಹರಿಸಿ ಶಬರಿಯನ್ನು ಕಂಡನು.

೩೫ ಕಿಷ್ಕಿಂಧೆಯ ಪಂಪಾತೀರದ ಅರಣ್ಯದಲ್ಲಿ ಹನುಮಂತನನ್ನು ಕಂಡನು. ಆ ಹನುಮಂತನ ಮಾತಿನಂತೆ ಸುಗ್ರೀವನೊಡನೆ ಸಖ್ಯ ಮಾಡಿಕೊಂಡನು.

೩೬ ವಾಲಿಯನ್ನು ಸಂಹಾರ ಮಾಡಿ ಸೀತೆಯನ್ನು ಹುಡುಕಲು ತೊಡಗಿದರು. ಸಂಪಾತಿಯ ವಚನದಂತೆ ವಾಯುಪುತ್ರನಾದ ಹನುಮಂತನು ನೂರು ಯೋಜನ ವಿಸ್ತೀರ್ಣದ ಸಾಗರವನ್ನು ನೆಗೆದು ಲಂಕೆಗೆ ಹೋದನು.

೩೭ ಸೀತೆಗೆ ರಾಮನ ಮುದ್ರಿಕೆಯನ್ನಿತ್ತು ಲಂಕೆಯನ್ನು ಸುಟ್ಟು ಹಾಕಿದನು. ಸೀತೆಯಿಂದ ಚೂಡಾಮಣಿಯನ್ನು ಪಡೆದುಕೊಂಡು ರಾಮನಲ್ಲಿಗೆ ಬಂದನು.

೩೮ ಸೀತೆಯನ್ನು ನಾನು ನೋಡಿದ್ದೇನೆ. ಯಾವ ವಿಚಾರವನ್ನೂ ಮಾಡುವ ಕಾರಣ ಇಲ್ಲ ಎಂಬ ಹನುಮಂತನ ಮಾತನ್ನು ಕೇಳಿ ರಾಮನು ಪರಮಸಂತುಷ್ಟನಾದನು.

೩೯ ಸುಗ್ರೀವನೊಡನೆ ಮಹೇಂದ್ರಪರ್ವತಕ್ಕೆ ಬಂದನು. ನಲನ ಮೇಲ್ವಿಚಾರಣೆಯಲ್ಲಿ ವಾನರರಿಂದ ಸಮುದ್ರದಲ್ಲಿ ನೂರು ಯೋಜನ ಉದ್ದ ಹಾಗೂ ಹತ್ತು ಯೋಜನ ಅಗಲವಾದ ಸೇತುವೆಯನ್ನು ನಿರ್ಮಿಸಿದರು.

ತೇನ ಗತ್ವಾ ಪುರೀಂ ಲಂಕಾಂ ರಾವಣಂ ಸಹ ಬಾಂಧವೈಃ ।
ಹತ್ವಾ ರಿಪೂನ್ ಸಹಾಮಾತ್ಯೈಃ ರಾಕ್ಷಸೈಃ ದೇವಕಂಟಕೈಃ ॥೪೦॥

ತಂ ದೃಷ್ಟ್ವಾ ದೇವತಾಸ್ಸರ್ವಾಃ ಪುಷ್ಪವೃಷ್ಟಿಮವಾಕಿರನ್ ।
ರಾಜ್ಯಂ ವಿಭೀಷಣಾಯೈವ ದತ್ವಾ ರಾಮೋ ಮಹಾಬಲಃ ॥೪೧॥

ಗಂಧಮಾದನಮಾಸಾದ್ಯ ಪ್ರತಿಷ್ಠಾಪ್ಯ ಮಹೇಶ್ವರಮ್ ।
ಸ್ವನಾಮ್ನಾ ರಾಮಲಿಂಗಂ ತು ದೇವದೇವಮುಮಾಪತಿಮ್ ॥೪೨॥

ವಿಧಿನೋಕ್ತಪ್ರಮಾಣೇನ ಪೂಜಯಾಮಾಸ ಶಂಕರಮ್ ।
ಧನುಷ್ಕೋಟ್ಯಾಭಿಧಂ ತೀರ್ಥಂ ಸರ್ವಾಘೌಘವಿನಾಶನಮ್ ॥೪೩॥

ಬ್ರಹ್ಮಹತ್ಯಾದಿಪಾಪಾನಾಂ ನಾಶಕಂ ಪಾವನೋತ್ತಮಮ್ ।
ಏವಂ ಕೃತ್ವಾ ರಘುಪತಿರ್ಲೋಕಾನಾಂ ಹಿತಕಾಮ್ಯಯಾ ॥೪೪॥

---

೪೦ ಆ ಸೇತುವೆಯ ಮೂಲಕ ಲಂಕೆಗೆ ಹೋಗಿ ದೇವಕಂಟಕರಾದ ರಾಕ್ಷಸರನ್ನು ಹಾಗೂ ಬಂಧುಸಹಿತನಾದ ರಾವಣನನ್ನು ಸಂಹರಿಸಿದನು.

೪೧ ಅದನ್ನು ಕಂಡ ದೇವತೆಗಳೆಲ್ಲ ಪುಷ್ಪಗಳನ್ನು ಸುರಿಸಿದರು. ಮಹಾಬಲನಾದ ರಾಮನು ರಾಜ್ಯವನ್ನು ವಿಭೀಷಣನಿಗೆ ನೀಡಿದನು.

೪೨ ಗಂಧಮಾದನ ಪರ್ವತಕ್ಕೆ ಬಂದು ಅಲ್ಲಿ ರಾಮೇಶ್ವರನೆಂಬ ಹೆಸರಿನಿಂದ ಈಶ್ವರನನ್ನು ಪ್ರತಿಷ್ಠಾಪಿಸಿದನು.

೪೩ ವಿಧ್ಯುಕ್ತವಾಗಿ ಶಂಕರನನ್ನು ಪೂಜಿಸಿ ಧನುಷ್ಕೋಟಿಯೆಂಬ ಸರ್ವ ಪಾಪವಿನಾಶಕವಾದ ತೀರ್ಥವನ್ನು ನಿರ್ಮಿಸಿದನು.

೪೪ ಈ ಧನುಷ್ಕೋಟಿತೀರ್ಥವು ಬ್ರಹ್ಮಹತ್ಯಾದಿ ಪಾಪಗಳನ್ನು ನಾಶಮಾಡುತ್ತದೆ. ಅತ್ಯಂತ ಪವಿತ್ರವಾಗಿದೆ. ಹೀಗೆ ಲೋಕಗಳ ಹಿತಕಾಮನೆಯಿಂದ ರಾಮೇಶ್ವರನನ್ನು ಸ್ಥಾಪಿಸಿದನು.

**ವಿಶೇಷ :** ರಾಮದೇವರು ರುದ್ರದೇವರ ಪೂಜೆಯನ್ನು ಮಾಡಿದುದರ ರಹಸ್ಯವನ್ನು ಆಚಾರ್ಯರು ತಮ್ಮ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಪದ್ಮಪುರಾಣದ ಶೈವಭಾಗದ ವಾಕ್ಯವನ್ನುದ್ಧರಿಸಿ ನಿರ್ಣಯಿಸಿದ್ದಾರೆ.

ಉಕ್ತಂ ಪದ್ಮಪುರಾಣೇ ಚ ಶೈವ ಏವ ಶಿವೇನ ತು
ಯದುಕ್ತಂ ಹರಿಣಾ ಪೂರ್ವಮುಮಾಯೈ ಪ್ರಾಹ ತದ್ಧರಃ ।

ತ್ವಾಮಾರಾಧ್ಯ ವರಂ ಶಂಭೋ ಗ್ರಹೀಷ್ಯಾಮಿ ವರಂ ಸದಾ ।
ದ್ವಾಪರಾದೌ ಯುಗೇ ಭೂತ್ವಾ ಕಲಯಾ ಮಾನುಷಾದಿಷು ॥

**ತತಃ ಪುಷ್ಪಕಮಾರುಹ್ಯ ನಂದಿಗ್ರಾಮಂ ಯಯೌ ತದಾ ।**
**ಧರ್ಮೇಣ ಪಾಲಯಾಮಾಸ ರಾಜ್ಯಂ ನಿಹತಕಂಟಕಮ್ ॥೪೫॥**

**ಏಕಾದಶಸಹಸ್ರಾಣಿ ಕೃತ್ವಾ ವೈ ರಾಜ್ಯಮುತ್ತಮಮ್ ।**
**ವಿಷ್ಣುಲೋಕಂ ಜಗಾಮಾಥ ರಾಮೋ ದಾಶರಥಿಸ್ತದಾ ॥೪೬॥**

---

ಸ್ವಾಗಮೈಃ ಕಲ್ಪಿತೈಸ್ತ್ವಂ ಚ ಜನಾನ್ ಮದ್ವಿಮುಖಾನ್ ಕುರು ।
ಮಾಂ ಚ ಗೋಪಯ ಯೇನ ಸ್ಯಾತ್ ಸೃಷ್ಟಿರೇಷೋತ್ತರಾಧರಾ ॥

(ಮ.ತಾ.ನಿ. ೧-೫೬-೫೭-೫೮)

ಹಿಂದೆ ಶ್ರೀಹರಿಯು ತನಗೆ ಹೇಳಿದ್ದನ್ನೇ ರುದ್ರದೇವರು ಉಮಾದೇವಿಗೆ ಹೀಗೆ ತಿಳಿಸಿದರು. ಹೇ ಹರನೇ ನಾನು ಕೃತ, ತ್ರೇತಾ, ದ್ವಾಪರ ಯುಗಗಳಲ್ಲಿ ಮನುಷ್ಯರೇ ಮೊದಲಾದ ರೂಪದಲ್ಲಿ ಅವತರಿಸಿ ನಿನ್ನನ್ನು ಆರಾಧಿಸಿ ವರಗಳನ್ನು ಪಡೆಯುವೆನು. ಕಲ್ಪಿತವಾದ ನಿನ್ನ ಶಾಸ್ತ್ರಗಳಿಂದ ಜನರನ್ನು ನನ್ನಿಂದ ವಿಮುಖರನ್ನಾಗಿ ಮಾಡು. ಇದರಿಂದ ಕೃತಾದಿಯುಗಗಳಲ್ಲಿ ಉತ್ತಮಮಾರ್ಗವನ್ನು ಅವಲಂಬಿಸಿದ ಅಯೋಗ್ಯರಾದ ದೈತ್ಯರು ಅಧಮಮಾರ್ಗವನ್ನು ಅನುಸರಿಸಿ ನಾಶ ಹೊಂದುವರು. ಇದರಿಂದ ಅಸುರಮೋಹನವೇ ಈ ಪೂಜೆಯ ಮರ್ಮವೆಂದು ತಿಳಿಯಬೇಕು.

೪೫ ನಂತರ ಪುಷ್ಪಕವಿಮಾನವನ್ನೇರಿ ನಂದಿಗ್ರಾಮವನ್ನು ಸೇರಿದನು. ಭರತನಿಂದ ರಾಜ್ಯ ಸ್ವೀಕರಿಸಿ ಕಂಟಕರಹಿತವಾಗಿ ರಾಜ್ಯವನ್ನು ಪಾಲನೆ ಮಾಡಿದ.

೪೬ ಹನ್ನೊಂದು ಸಾವಿರ ವರುಷಗಳವರೆಗೆ ರಾಜ್ಯವಾಳಿ ದಾಶರಥಿ ರಾಮನು ತನ್ನದೇ ಆದ ವಿಷ್ಣುಲೋಕಕ್ಕೆ ಹೋದನು.

**ವಿಶೇಷ :** ರಾಮನು ಹನ್ನೊಂದು ಸಾವಿರ ವರುಷಗಳ ಕಾಲ ರಾಜ್ಯವಾಳಿದನೆಂಬುದು ಇಲ್ಲಿಯ ಮಾತು. ರಾಮಾಯಣವೂ ಹೀಗೆಯೇ ಹೇಳುತ್ತದೆ.

ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ ।
ಭ್ರಾತೃಭಿಃ ಸಹಿತಃ ಶ್ರೀಮಾನ್ ರಾಮೋ ರಾಜ್ಯಮಕಾರಯತ್ ॥

ಆದರೆ ವಿಷ್ಣುಪುರಾಣವು ಹನ್ನೆರಡುಸಾವಿರ ವರುಷಗಳೆಂದು ಹೇಳುತ್ತದೆ.

ದ್ವಾದಶಾಬ್ದಸಹಸ್ರಂ ತು ರಾಮೋ ರಾಜ್ಯಂ ಚಕಾರ ಹ ।

ಭಾಗವತವು ಹದಿಮೂರು ಸಾವಿರ ವರುಷಗಳೆಂದು ಹೇಳಿದೆ.

ತ್ರಯೋದಶಾಬ್ದಸಾಹಸ್ರಮಗ್ನಿಹೋತ್ರಮಖಂಡಿತಮ್॥ ಭಾಗ- ೯-೯-೧೮

ಸೀತೆ ಭೂಮಿಯಲ್ಲಿ ಸೇರಿದ ಮೇಲೆ ರಾಮನು ಬೇರೆ ವಿವಾಹವಾಗದೆ ಬ್ರಹ್ಮಚರ್ಯವನ್ನು ಪಾಲಿಸಿದ. ಒಟ್ಟು ಹದಿಮೂರು ಸಾವಿರ ವರುಷಗಳ ಕಾಲ ಅಗ್ನಿಹೋತ್ರ ಮಾಡುತ್ತ

ರಾಜ್ಯಭಾರ ಮಾಡಿದ.

ಈ ಪುರಾಣಗಳಲ್ಲಿ ಪರಸ್ಪರ ವಿರೋಧ ಕಾಣುತ್ತದೆ. ಇದಕ್ಕೆ ಪರಿಹಾರ ಹೇಗೆ ಎಂಬ ಪ್ರಶ್ನೆಗೆ ರಾಮಾಯಣ ಭಾಗವತ, ವಿಷ್ಣುಪುರಾಣಗಳು ಹೇಳುವುದು ಬೇರೆ ಬೇರೆ ಕಲ್ಪದ ಕಥೆಗಳೆಂದೂ ಕೆಲವರು ಪರಿಹಾರ ಮಾಡಿದ್ದುಂಟು. ಆದರೆ ರಾಮಕಥೆ ಯಾವ ಕಲ್ಪದಲ್ಲೂ ವ್ಯತ್ಯಾಸ ಹೊಂದುವುದಿಲ್ಲವೆಂದು ಹಾಗೂ ಇಲ್ಲಿ ತೋರುವ ಕಥಾಭೇದವು ಅಸುರ ಮೋಹಕವೆಂದು ಆಚಾರ್ಯರೇ ಹಿಂದೆ ನಿರ್ಣಯಿಸಿದ್ದಾರೆ.

**ಋತೇ ತು ಪಾಂಡವಕಥಾಂ ಕಾರ್ಷ್ಣ್ಯಂ ರಾಮಾಯಣಂ ತಥಾ ।**
**ವಿಷ್ಣೋರ್ಬ್ರಹ್ಮಾದಿನಾಂ ಚೈವ ಕ್ರಮಾದ್ವ್ಯತ್ಯಸ್ತಶಕ್ತಿತಾಮ್ ।**
**ಏತದಾಪಾದಕಂ ಚಾನ್ಯದೃತೇ ಕಲ್ಪಾದಿಭೇದತಃ ।**
**ಕಥಾಭೇದಸ್ತು ವಿಜ್ಞೇಯೋ ಮೋಹಾಯ್ಯೆತೇಷು ಭಿನ್ನತಾ ॥**

(ಭಾಗವತತಾತ್ಪರ್ಯನಿರ್ಣಯ ೪-೧-೩೩)

ಭಾಗವತ ಹೇಳುವ ಕಾಲವೇ ಸರಿಯಾದುದು. ರಾಮಾಯಣ, ವಿಷ್ಣುಪುರಾಣಗಳನ್ನು ಅದಕ್ಕೆ ಹೊಂದಿಸಿಕೊಳ್ಳಬೇಕೆಂದು ಸ್ಕಂದಪುರಾಣ ಹೇಳಿದುದನ್ನು ಆಧರಿಸಿ ಶ್ರೀಮದಾಚಾರ್ಯರು ಇದನ್ನು ಪರಿಹರಿಸಿದ್ದಾರೆ.

**ನಾಕ್ಷತ್ರಮಾಸಗಣಿತಂ ತ್ರಯೋದಶಸಹಸ್ರಕಮ್ ।**
**ಬ್ರಹ್ಮಲೋಕಸಮಂ ಚಕ್ರೇ ಸಮಸ್ತಂ ಕ್ಷಿತಿಮಂಡಲಮ್ ॥**

(೯-೯-೧೮ ಭಾಗವತತಾತ್ಪರ್ಯೋದ್ಧೃತ ಸ್ಕಂದಪುರಾಣ ವಚನ)

ಭಾಗವತವು ಹೇಳುವ ಹದಿಮೂರು ಸಾವಿರ ವರುಷಗಳು ನಕ್ಷತ್ರಮಾನದ ವರುಷಗಳು. ಇಪ್ಪತ್ತೇಳು ನಕ್ಷತ್ರಗಳಿಂದ ಇಪ್ಪತ್ತೇಳು ದಿನಗಳಿಗೆ ಒಂದು ನಕ್ಷತ್ರ ಮಾಸವೆನಿಸುವುದು. ಈ ನಕ್ಷತ್ರಮಾಸದ ಪ್ರಕಾರ ಹದಿಮೂರು ಸಾವಿರ ವರುಷಗಳೆಂದರೆ ಈಗ ಬಳಕೆಯಲ್ಲಿರುವ ಮುನ್ನೂರ ಅರವತ್ತು ದಿವಸಗಳ ಹನ್ನೊಂದು ಸಾವಿರದ ಮೇಲೆ ಏಳು ನೂರು ವರುಷಗಳಾಗುತ್ತವೆ. ಇದರಲ್ಲಿ ಏಳು ನೂರು ವರುಷಗಳು ಸೀತೆ ಭೂಮಿ ಪ್ರವೇಶ ಮಾಡಿದ ಮೇಲೆ ರಾಮನು ರಾಜ್ಯಭಾರ ಮಾಡಿದ ಕಾಲ. ಇದು ಮಹಾಭಾರತತಾತ್ಪರ್ಯನಿರ್ಣಯದಲ್ಲಿರುವ ವಿಚಾರ.

**ರಾಮಸ್ಯ ದೃಶ್ಯಾ ತ್ವನ್ಯೇಷಾಮದೃಶ್ಯಾ ಜನಕಾತ್ಮಜಾ ।**
**ಭೂಮಿಪ್ರವೇಶಾದೂರ್ಧ್ವಂ ಸಾ ರೇಮೇ ಸಪ್ತಶತಂ ಸಮಾಃ ॥** ಮ.ತಾ.ನಿ.-೪೨

ಈ ಏಳುನೂರು ವರುಷಗಳನ್ನು ಬಿಟ್ಟರೆ ಸೀತೆಯೊಂದಿಗೆ ರಾಜ್ಯಭಾರ ಮಾಡಿದ ಕಾಲ ಹನ್ನೊಂದುಸಾವಿರವೆಂದು ರಾಮಾಯಣ ಹಾಗೂ ಇಲ್ಲಿಯ ಆಗ್ನೇಯ ಪುರಾಣದ ವಾಕ್ಯಗಳನ್ನು ಹೊಂದಿಸಬೇಕು.

**ಶ್ರೀರಾಮಚರಿತಂ ದಿವ್ಯಂ ಸಂಕ್ಷೇಪೇಣ ಮಯೋದಿತಮ್ ।**
**ಭರತೇನ ಧನುರ್ಮಾಸೇ ಕೃತಂ ವೈ ಭಕ್ತಿಪೂರ್ವಕಮ್ ॥೪೭॥**

**ತತ್ಸರ್ವಮಖಿಲಂ ಪ್ರೋಕ್ತಂ ಯತ್ ಪೃಷ್ಟೋಽಹಂ ತ್ವಯಾ ಸಖೇ ।**
**ಸಕೃತ್ ಶ್ರುತ್ವೇದಮಾಖ್ಯಾನಂ ಮುಚ್ಯತೇ ಸರ್ವಪಾತಕೈಃ ।**
**ಶ್ರೀರಾಮಚರಿತಂ ದಿವ್ಯಂ ದಧಿಪಾಲೋದಿತಂ ಪುರಾ ॥೪೮॥**

**॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ ಪಂಚವಿಂಶೋಽಧ್ಯಾಯಃ ॥**

---

ಒಟ್ಟಾರೆ ಹನ್ನೊಂದು ಸಾವಿರ ಏಳುನೂರು ವರುಷಗಳೇ ರಾಮನ ರಾಜ್ಯಭಾರದ ಕಾಲ. ಅದು ಹನ್ನೆರಡು ಸಾವಿರಕ್ಕೆ ಸಮೀಪದ ಸಂಖ್ಯೆ ಎಂಬ ಅಭಿಪ್ರಾಯದಿಂದ ವಿಷ್ಣು ಪುರಾಣವು ಹನ್ನೆರಡು ಸಾವಿರ ವರುಷಗಳನ್ನು ಹೇಳಿದೆ. ನಕ್ಷತ್ರಮಾನದ ಪ್ರಕಾರ ಹದಿಮೂರು ಸಾವಿರ ವರುಷಗಳೆಂದು ಭಾಗವತ ಹೇಳಿದೆ. ಆದುದರಿಂದ ಇವುಗಳಲ್ಲಿ ಯಾವುದೇ ವಿರೋಧವಿಲ್ಲ. ಈ ಭಾಗವತದ ಅಭಿಪ್ರಾಯವನ್ನಾಧರಿಸಿಯೇ ಶ್ರೀಮದಾಚಾರ್ಯರು ಹದಿಮೂರು ಸಾವಿರ ವರ್ಷಗಳ ಕಾಲ ರಾಜ್ಯಭಾರವೆಂದು ನಿರ್ಣಯಿಸಿದ್ದಾರೆ.

**ಏವಂತ್ರಯೋದಶ ಸಹಸ್ರಮಸೌ ಸಮಾಸ್ತು ।**
**ಪೃಥ್ವೀಂ ರರಕ್ಷ ವಿಜಿತಾರಿರಮೋಘವೀರ್ಯಃ ॥** (ಮ.ತಾ.ನಿ. ೯-೧೬)

೪೭ ದಿವ್ಯವಾದ ಶ್ರೀರಾಮ ಚರಿತೆಯ ಹಾಗೂ ಭರತನು ಧನುರ್ಮಾಸದಲ್ಲಿ ಭಕ್ತಿಪೂರ್ವಕ ಮಾಡಿದ ಪೂಜೆಯ ವಿಚಾರವು ನನ್ನಿಂದ ಸಂಕ್ಷೇಪದಲ್ಲಿ ಹೇಳಲ್ಪಟ್ಟಿದೆ.

೪೮ ನೀನು ಕೇಳಿದ್ದರಿಂದ ಇದೆಲ್ಲವನ್ನು ಸಂಕ್ಷೇಪದಲ್ಲಿ ತಿಳಿಸಿದ್ದೇನೆ. ಶ್ರೀಕೃಷ್ಣನು ದಧಿಪಾಲನಿಗೆ ಹೇಳಿದ ಈ ದಿವ್ಯ ರಾಮ ಚರಿತೆಯನ್ನು ಒಮ್ಮೆ ಕೇಳಿದವನು ಕೂಡ ಸಕಲ ಪಾಪ ಮುಕ್ತನಾಗುವನು.

**॥ ಇಲ್ಲಿಗೆ ಇಪ್ಪತ್ತೈದನೇ ಅಧ್ಯಾಯವು ಮುಗಿಯಿತು ॥**

ರಾಜ್ಯಭಾರ ಮಾಡಿದ.

ಈ ಪುರಾಣಗಳಲ್ಲಿ ಪರಸ್ಪರ ವಿರೋಧ ಕಾಣುತ್ತದೆ. ಇದಕ್ಕೆ ಪರಿಹಾರ ಹೇಗೆ ಎಂಬ ಪ್ರಶ್ನೆಗೆ ರಾಮಾಯಣ ಭಾಗವತ, ವಿಷ್ಣುಪುರಾಣಗಳು ಹೇಳುವುದು ಬೇರೆ ಬೇರೆ ಕಲ್ಪದ ಕಥೆಗಳೆಂದೂ ಕೆಲವರು ಪರಿಹಾರ ಮಾಡಿದ್ದುಂಟು. ಆದರೆ ರಾಮಕಥೆ ಯಾವ ಕಲ್ಪದಲ್ಲೂ ವ್ಯತ್ಯಾಸ ಹೊಂದುವುದಿಲ್ಲವೆಂದು ಹಾಗೂ ಇಲ್ಲಿ ತೋರುವ ಕಥಾಭೇದವು ಅಸುರ ಮೋಹಕವೆಂದು ಆಚಾರ್ಯರೇ ಹಿಂದೆ ನಿರ್ಣಯಿಸಿದ್ದಾರೆ.

**ಋತೇ ತು ಪಾಂಡವಕಥಾಂ ಕಾರ್ಷ್ಣ್ಯಂ ರಾಮಾಯಣಂ ತಥಾ ।**
**ವಿಷ್ಣೋರ್ಬ್ರಹ್ಮಾದಿನಾಂ ಚೈವ ಕ್ರಮಾದ್ವ್ಯತ್ಯಸ್ತಶಕ್ತಿತಾಮ್ ।**
**ಏತದಾಪಾದಕಂ ಚಾನ್ಯದೃತೇ ಕಲ್ಪಾದಿಭೇದತಃ ।**
**ಕಥಾಭೇದಸ್ತು ವಿಜ್ಞೇಯೋ ಮೋಹಾಯೈತೇಷು ಭಿನ್ನತಾ ॥**

(ಭಾಗವತತಾತ್ಪರ್ಯನಿರ್ಣಯ ೪-೧-೩೩)

ಭಾಗವತ ಹೇಳುವ ಕಾಲವೇ ಸರಿಯಾದುದು. ರಾಮಾಯಣ, ವಿಷ್ಣು ಪುರಾಣಗಳನ್ನು ಅದಕ್ಕೆ ಹೊಂದಿಸಿಕೊಳ್ಳಬೇಕೆಂದು ಸ್ಕಂದಪುರಾಣ ಹೇಳಿದುದನ್ನು ಆಧರಿಸಿ ಶ್ರೀಮದಾಚಾರ್ಯರು ಇದನ್ನು ಪರಿಹರಿಸಿದ್ದಾರೆ.

**ನಾಕ್ಷತ್ರಮಾಸಗಣಿತಂ ತ್ರಯೋದಶಸಹಸ್ರಕಮ್ ।**
**ಬ್ರಹ್ಮಲೋಕಸಮಂ ಚಕ್ರೇ ಸಮಸ್ತಂ ಕ್ಷಿತಿಮಂಡಲಮ್ ॥**

(೯-೯-೧೮ ಭಾಗವತತಾತ್ಪರ್ಯೋದ್ಧೃತ ಸ್ಕಂದಪುರಾಣ ವಚನ)

ಭಾಗವತವು ಹೇಳುವ ಹದಿಮೂರು ಸಾವಿರ ವರುಷಗಳು ನಕ್ಷತ್ರಮಾನದ ವರುಷಗಳು. ಇಪ್ಪತ್ತೇಳು ನಕ್ಷತ್ರಗಳಿಂದ ಇಪ್ಪತ್ತೇಳು ದಿನಗಳಿಗೆ ಒಂದು ನಕ್ಷತ್ರ ಮಾಸವೆನಿಸುವುದು. ಈ ನಕ್ಷತ್ರಮಾಸದ ಪ್ರಕಾರ ಹದಿಮೂರು ಸಾವಿರ ವರುಷಗಳೆಂದರೆ ಈಗ ಬಳಕೆಯಲ್ಲಿರುವ ಮುನ್ನೂರ ಅರವತ್ತು ದಿವಸಗಳ ಹನ್ನೊಂದು ಸಾವಿರದ ಮೇಲೆ ಏಳು ನೂರು ವರುಷಗಳಾಗುತ್ತವೆ. ಇದರಲ್ಲಿ ಏಳು ನೂರು ವರುಷಗಳು ಸೀತೆ ಭೂಮಿ ಪ್ರವೇಶ ಮಾಡಿದ ಮೇಲೆ ರಾಮನು ರಾಜ್ಯಭಾರ ಮಾಡಿದ ಕಾಲ. ಇದು ಮಹಾಭಾರತತಾತ್ಪರ್ಯನಿರ್ಣಯದಲ್ಲಿರುವ ವಿಚಾರ.

**ರಾಮಸ್ಯ ದೃಶ್ಯಾ ತ್ವನ್ಯೇಷಾಮದೃಶ್ಯಾ ಜನಕಾತ್ಮಜಾ ।**
**ಭೂಮಿಪ್ರವೇಶಾದೂರ್ಧ್ವಂ ಸಾ ರೇಮೇ ಸಪ್ತಶತಂ ಸಮಾಃ ॥** ಮ.ತಾ.ನಿ.೯-೪೨

ಈ ಏಳುನೂರು ವರುಷಗಳನ್ನು ಬಿಟ್ಟರೆ ಸೀತೆಯೊಂದಿಗೆ ರಾಜ್ಯಭಾರ ಮಾಡಿದ ಕಾಲ ಹನ್ನೊಂದುಸಾವಿರವೆಂದು ರಾಮಾಯಣ ಹಾಗೂ ಇಲ್ಲಿಯ ಆಗ್ನೇಯ ಪುರಾಣದ ವಾಕ್ಯಗಳನ್ನು ಹೊಂದಿಸಬೇಕು.

**ಶ್ರೀರಾಮಚರಿತಂ ದಿವ್ಯಂ ಸಂಕ್ಷೇಪೇಣ ಮಯೋದಿತಮ್ ।**
**ಭರತೇನ ಧನುರ್ಮಾಸೇ ಕೃತಂ ವೈ ಭಕ್ತಿಪೂರ್ವಕಮ್ ॥೪೭॥**

**ತತ್ಸರ್ವಮಖಿಲಂ ಪ್ರೋಕ್ತಂ ಯತ್ ಪೃಷ್ಟೋऽಹಂ ತ್ವಯಾ ಸಖೇ ।**
**ಸಕೃತ್ ಶ್ರುತ್ವೇದಮಾಖ್ಯಾನಂ ಮುಚ್ಯತೇ ಸರ್ವಪಾತಕೈಃ ।**
**ಶ್ರೀರಾಮಚರಿತಂ ದಿವ್ಯಂ ದಧಿಪಾಲೋದಿತಂ ಪುರಾ ॥೪೮॥**

**॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ ಪಂಚವಿಂಶೋऽಧ್ಯಾಯಃ ॥**

---

ಒಟ್ಟಾರೆ ಹನ್ನೊಂದು ಸಾವಿರ ಏಳುನೂರು ವರುಷಗಳೇ ರಾಮನ ರಾಜ್ಯಭಾರದ ಕಾಲ. ಅದು ಹನ್ನೆರಡು ಸಾವಿರಕ್ಕೆ ಸಮೀಪದ ಸಂಖ್ಯೆ ಎಂಬ ಅಭಿಪ್ರಾಯದಿಂದ ವಿಷ್ಣು ಪುರಾಣವು ಹನ್ನೆರಡು ಸಾವಿರ ವರುಷಗಳನ್ನು ಹೇಳಿದೆ. ನಕ್ಷತ್ರಮಾನದ ಪ್ರಕಾರ ಹದಿಮೂರು ಸಾವಿರ ವರುಷಗಳೆಂದು ಭಾಗವತ ಹೇಳಿದೆ. ಆದುದರಿಂದ ಇವುಗಳಲ್ಲಿ ಯಾವುದೇ ವಿರೋಧವಿಲ್ಲ. ಈ ಭಾಗವತದ ಅಭಿಪ್ರಾಯವನ್ನಾಧರಿಸಿಯೇ ಶ್ರೀಮದಾಚಾರ್ಯರು ಹದಿಮೂರು ಸಾವಿರ ವರ್ಷಗಳ ಕಾಲ ರಾಜ್ಯಭಾರವೆಂದು ನಿರ್ಣಯಿಸಿದ್ದಾರೆ.

**ಏವಂತ್ರಯೋದಶ ಸಹಸ್ರಮಸೌ ಸಮಾಸ್ತು ।**
**ಪೃಥ್ವೀಂ ರರಕ್ಷ ವಿಜಿತಾರಿರಮೋಘವೀರ್ಯಃ ॥** (ಮ.ತಾ.ನಿ. ೯-೧೬)

೪೭ ದಿವ್ಯವಾದ ಶ್ರೀರಾಮ ಚರಿತೆಯ ಹಾಗೂ ಭರತನು ಧನುರ್ಮಾಸದಲ್ಲಿ ಭಕ್ತಿಪೂರ್ವಕ ಮಾಡಿದ ಪೂಜೆಯ ವಿಚಾರವು ನನ್ನಿಂದ ಸಂಕ್ಷೇಪದಲ್ಲಿ ಹೇಳಲ್ಪಟ್ಟಿದೆ.

೪೮ ನೀನು ಕೇಳಿದ್ದರಿಂದ ಇದೆಲ್ಲವನ್ನು ಸಂಕ್ಷೇಪದಲ್ಲಿ ತಿಳಿಸಿದ್ದೇನೆ. ಶ್ರೀಕೃಷ್ಣನು ದಧಿಪಾಲನಿಗೆ ಹೇಳಿದ ಈ ದಿವ್ಯ ರಾಮ ಚರಿತೆಯನ್ನು ಒಮ್ಮೆ ಕೇಳಿದವನು ಕೂಡ ಸಕಲ ಪಾಪ ಮುಕ್ತನಾಗುವನು.

**॥ ಇಲ್ಲಿಗೆ ಇಪ್ಪತ್ತೈದನೇ ಅಧ್ಯಾಯವು ಮುಗಿಯಿತು ॥**

# ಅಥ ಷಡ್ವಿಂಶೋಽಧ್ಯಾಯಃ

**ಋಷಯ ಊಚುಃ -**

**ಧನುರ್ಮಾಸಪ್ರಭಾವಂ ತು ಶ್ರುತ್ವಾ ವೈ ತ್ವನ್ಮುಖೋದಿತಮ್ ।**
**ತೃಪ್ತಿರ್ನ ಜಾಯತೇ ಬ್ರಹ್ಮನ್ ಕಥಾಂ ಕಥಯತಾಂ ವರ ॥೧॥**

**ಕಿಂ ಜಪನ್ಮುಚ್ಯತೇ ಜಂತುಃ ಸರ್ವಲೋಕಭಯಾದಿಭಿಃ ।**
**ಸರ್ವಪಾಪವಿನಿರ್ಮುಕ್ತಃ ಪ್ರಾಪ್ನೋತಿ ಪರಮಾಂ ಗತಿಮ್ ॥೨॥**

**ಅಲಕ್ಷ್ಮೀಂ ವಾಽಥ ಸಂತ್ಯಜ್ಯ ಕ್ಷಿಪ್ರಂ ಕಸ್ಯ ಜಪೇನ ವೈ ।**
**ಲಕ್ಷ್ಮೀವಾಸೋ ಭವೇನ್ಮರ್ತ್ಯಃ ಸೂತ ವಕ್ತುಮಿಹಾರ್ಹಸಿ ॥೩॥**

**ಶ್ರೀಸೂತ ಉವಾಚ-**

**ಪುರಾ ಪಿತಾಮಹೇನೋಕ್ತಂ ವಸಿಷ್ಠಾಯ ಮಹಾತ್ಮನಾ ।**
**ಸಂಕ್ಷೇಪೇಣ ವದಾಮ್ಯದ್ಯ ಸರ್ವಲೋಕಹಿತಾಯ ವೈ ॥೪॥**

**ಶೃಣುಧ್ವಂ ವಚನಂ ಸರ್ವೇ ಪ್ರಣಿಪತ್ಯ ಜನಾರ್ದನಮ್ ।**
**ದೇವದೇವಮಜಂ ವಿಷ್ಣುಂ ಕೃತಮಚ್ಯುತಮವ್ಯಯಮ್ ॥೫॥**

**ಸರ್ವಪಾಪಹರಂ ಶುದ್ಧಂ ಮೋಕ್ಷದಂ ಸರ್ವಕಾಮದಮ್ ।**

---

೧ ಹೇ ಸೂತಾಚಾರ್ಯರೇ! ವಿಷ್ಣುಸಂಬಂಧಿಯಾದ ಕಥೆಗಳನ್ನು ಹೇಳುವವರಲ್ಲಿ ನೀವು ನಿಷ್ಣಾತರಾಗಿದ್ದೀರಿ. ನೀವು ಬ್ರಹ್ಮಜ್ಞಾನಿಗಳಾಗಿದ್ದೀರಿ. ನೀವು ಹೇಳುತ್ತಿರುವ ಧನುರ್ಮಾಸಪ್ರಭಾವವನ್ನು ಕೇಳಿ ನಮಗೆ ತೃಪ್ತಿಯಾಗುತ್ತಿಲ್ಲ.

೨ ಯಾವುದನ್ನು ಜಪಿಸುವ ಮನುಜನು ಎಲ್ಲ ಭಯಗಳಿಂದ ಮುಕ್ತನಾಗಿ ಎಲ್ಲ ಪಾಪಗಳನ್ನು ಕಳೆದುಕೊಂಡು ಪರಮಗತಿಯನ್ನು ಹೊಂದುವನು?

೩ ಯಾವುದರ ಜಪದಿಂದ ಮಾನವನು ಅಲಕ್ಷ್ಮಿಯನ್ನು ದೂರಮಾಡಿಕೊಳ್ಳುತ್ತಾನೆ? ಲಕ್ಷ್ಮಿಯ ಕೃಪೆಗೆ ಪಾತ್ರನಾಗುತ್ತಾನೆ? ಈ ವಿಷಯವನ್ನು ತಾವು ಹೇಳಬೇಕು.

೪ ಹಿಂದೆ ಮಹಾತ್ಮರಾದ ಬ್ರಹ್ಮದೇವರು ವಸಿಷ್ಠರಿಗೆ ಹೇಳಿದುದನ್ನು ಎಲ್ಲ ಲೋಕಗಳ ಹಿತಕ್ಕಾಗಿ ಸಂಕ್ಷೇಪವಾಗಿ ಹೇಳುವೆನು.

೫ ವಿಷ್ಣುವು ದೇವೋತ್ತಮನಾಗಿದ್ದಾನೆ. ಜನ್ಮರಹಿತನಾಗಿದ್ದಾನೆ. ನಾಶರಹಿತನಾಗಿದ್ದಾನೆ. ಚ್ಯುತಿಯೂ ಇಲ್ಲದವ. ಅಂಥ ಜನಾರ್ದನನನ್ನು ನಮಸ್ಕರಿಸಿ ಈ ವಿಷಯವನ್ನು ನೀವೆಲ್ಲರೂ ಶ್ರವಣ ಮಾಡಿರಿ.

ದ್ವಾದಶಾಕ್ಷರಮಂತ್ರಂ ತು ದಿವ್ಯಸ್ಥಾನಂ ಮಹಾತ್ಮನಃ ॥೬॥

ನಾರಾಯಣಂ ಜಪೇನ್ನಿತ್ಯಂ ಪ್ರಣಮ್ಯ ಪುರುಷೋತ್ತಮಮ್ ।
ಸರ್ವಪಾಪವಿನಿರ್ಮುಕ್ತಃ ಪ್ರಾಪ್ನೋತಿ ಪರಮಾಂ ಗತಿಮ್ ॥೭॥

ಅಲಕ್ಷ್ಮೀ ಚ ಮಯಾ ಪ್ರೋಕ್ತಾ ಪತ್ನೀ ಯಾ ದುಸ್ಸಹಸ್ಯ ಚ ।
ನಾರಾಯಣಪದಂ ಶ್ರುತ್ವಾ ಗಚ್ಛತ್ಯೇವ ನ ಸಂಶಯಃ ॥೮॥

ಯಾ ಲಕ್ಷ್ಮೀರ್ದೇವದೇವಸ್ಯ ಹರೇಃ ಕೃಷ್ಣಸ್ಯ ವಲ್ಲಭಾ ।
ಸಾ ಲಕ್ಷ್ಮೀರ್ಜಪಿತುರ್ಗೇಹೇ ನಿತ್ಯಂ ವಸತಿ ಸುವ್ರತಾ ॥೯॥

ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ।
ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ॥೧೦॥

ಕಿಂ ತಸ್ಯ ಬಹುಭಿರ್ಮಂತ್ರೈಃ ಕಿಂ ತಸ್ಯ ಬಹುಭಿಃ ವ್ರತೈಃ ।
ಮಂತ್ರೋ ಯಸ್ಯ ಮಯಾ ಪ್ರೋಕ್ತಃ ಸರ್ವವೇದಾರ್ಥಸಾಧಕಃ ॥೧೧॥

ದ್ವಾದಶಾಕ್ಷರಸಂಯುಕ್ತೋ ದ್ವಾದಶಾತ್ಮಾ ಪುರಾತನಃ ।

---

೬ ವಾಸುದೇವದ್ವಾದಶಾಕ್ಷರ ಮಂತ್ರವು ಎಲ್ಲ ಪಾಪಗಳನ್ನು ಕಳೆಯುತ್ತದೆ. ಎಲ್ಲ ಕಾಮನೆಗಳನ್ನು ನೀಡುತ್ತದೆ. ಮೋಕ್ಷದಾಯಕವೂ ಆಗಿದೆ. ಈ ಮಂತ್ರವು ಪರಮಾತ್ಮನಿಗೆ ದಿವ್ಯಸ್ಥಾನವಾಗಿದೆ.

೭ ನಿತ್ಯದಲ್ಲಿ ಪುರುಷೋತ್ತಮನಾದ ನಾರಾಯಣನನ್ನು ನಮಸ್ಕರಿಸಿ ಈ ಮಂತ್ರವನ್ನು ಜಪಿಸಬೇಕು. ಹೀಗೆ ಜಪಿಸಿದವನು ಸರ್ವಪಾಪ ಮುಕ್ತನಾಗಿ ಪರಮಗತಿಯೆನ್ನಿಸಿದ ಮೋಕ್ಷವನ್ನೇ ಹೊಂದುವನು.

೮ ನಾನು ಹಿಂದೆ ಹೇಳಿದ ಸಹಿಸಲು ಅಸಾಧ್ಯನಾದ ಕಲಿಯ ಪತ್ನಿಯೆನಿಸಿದ ಅಲಕ್ಷ್ಮೀಯು ನಾರಾಯಣನೆಂಬ ಪದವನ್ನು ಕೇಳಿ ಅಲ್ಲಿಂದ ನಿಸ್ಸಂಶಯವಾಗಿ ತೊಲಗುವಳು.

೯ ದೇವದೇವನಾದ ಕೃಷ್ಣನ ಪತ್ನಿಯೆನಿಸಿದ ಸೌಭಾಗ್ಯದೇವತೆಯಾದ ಲಕ್ಷ್ಮೀಯು ಈ ಮಂತ್ರವನ್ನು ಜಪಿಸುವವನ ಮನೆಯಲ್ಲಿ ನಿತ್ಯದಲ್ಲೂ ವಾಸಿಸುವಳು.

೧೦ ಎಲ್ಲ ಶಾಸ್ತ್ರಗಳನ್ನು ಮಥನ ಮಾಡಿ, ಮತ್ತೆ ಮತ್ತೆ ವಿಚಾರಿಸಿದ ನಂತರ ಇದೇ ನಿರ್ಧಾರವಾಗಿದೆ. ಏನೆಂದರೆ ಯಾವಾಗಲೂ ನಾರಾಯಣನನ್ನೇ ಧ್ಯಾನಿಸಬೇಕು.

೧೧ ಸಕಲವೇದಗಳ ಅರ್ಥವನ್ನು ಸಾಧಿಸುವ, ನನ್ನಿಂದ ಹೇಳಲ್ಪಟ್ಟ ದ್ವಾದಶಾಕ್ಷರ ಮಂತ್ರವನ್ನು ಜಪಿಸುವವನಿಗೆ ಅನೇಕ ವ್ರತಗಳೇಕೆ? ಬೇರೆಲ್ಲ ಮಂತ್ರಗಳೇಕೆ?

**ತಸ್ಯ ವೇದ್ಮಿ ಚ ಮಾಹಾತ್ಮ್ಯಂ ಸಂಕ್ಷೇಪಾತ್ ಪ್ರವದಾಮಿ ವಃ ॥೧೨॥**

**ಅಂಬರೀಷೋ ಧ್ರುವಶ್ಚೈವ ವಿಷ್ಣುಭಕ್ತೌ ಜಿತೇಂದ್ರಿಯೌ ।**
**ದ್ವಾದಶಾಕ್ಷರಮಂತ್ರೇಣ ತ್ವಯಾತಾಂ ಪರಮಾಂ ಗತಿಮ್ ॥೧೩॥**

**ಋಷಯ ಊಚುಃ –**

**ಐಕ್ಷ್ವಾಕುಸ್ತ್ವಂಬರೀಷೋ ವೈ ವಾಸುದೇವಪರಾಯಣಃ ।**
**ಪಾಲಯಾಮಾಸ ಪೃಥಿವೀಂ ವಿಷ್ಣೋರಾಜ್ಞಾಪುರಸ್ಸರಮ್ ॥೧೪॥**

**ಶ್ರುತಮೇತನ್ಮಹಾಬಾಹೋ ತತ್ಸರ್ವಂ ವಕ್ತುಮರ್ಹಸಿ ।**
**ತಂ ರಕ್ಷತಿ ಹರೇಶ್ಚಕ್ರಂ ಸ್ಮೃತಮೇವ ಮಹಾತ್ಮನಾ ॥೧೫॥**

---

೧೨ ಹನ್ನೆರಡು ಅಕ್ಷರಗಳಿಂದ ಪ್ರತಿಪಾದ್ಯವಾದ ಹನ್ನೆರಡು ರೂಪಗಳಿಂದ ಕೂಡಿದುದು ಈ ವಾಸುದೇವ ದ್ವಾದಶಾಕ್ಷರ ಮಂತ್ರ. ನಾನದರ ಮಹಿಮೆಯನ್ನು ಬಲ್ಲೆ. ನಿಮಗೆ ಸಂಕ್ಷೇಪದಲ್ಲಿ ಹೇಳುತ್ತೇನೆ.

ವಿಶೇಷ : ಈ ವಾಸುದೇವದ್ವಾದಶಾಕ್ಷರ ಮಂತ್ರದಲ್ಲಿರುವ ಹನ್ನೆರಡು ವರ್ಣಗಳಿಗೆ ಕೇಶವಾದಿ ದ್ವಾದಶಮೂರ್ತಿಗಳೇ ದೇವತೆಗಳು. ಇದನ್ನೇ ಇಲ್ಲಿ ದ್ವಾದಶಾತ್ಮಾ ಎಂದು ಹೇಳಿರುವುದು.

**ನಾರಾಯಣಾಷ್ಟಾಕ್ಷರಾಚ್ಚ ವ್ಯಾಹೃತಿಭ್ಯಸ್ತಥೈವ ಚ ।**
**ವಿಭೇಧೋ ದ್ವಾದಶಾರ್ಣಾನಾಂ ಕೇಶವಾದ್ಯಾಶ್ಚ ದೇವತಾಃ ॥**

(ತಂತ್ರಸಾರ ಸಂಗ್ರಹ ೧-೧೩)

ಈ ಹನ್ನೆರಡು ವರ್ಣಗಳಿಗೆ ಕೇಶವಾದಿ ದ್ವಾದಶ ಮೂರ್ತಿಗಳೇ ದೇವತೆಗಳು.

೧) **ಓಂ** ಕೇಶವ ೨) **ನ** ನಾರಾಯಣ ೩) **ಮೋ** ಮಾಧವ ೪) **ಭ** ಗೋವಿಂದ ೫) **ಗ** ವಿಷ್ಣು ೬) **ವ** ಮಧೂಸೂದನ ೭) **ತೇ** ತ್ರಿವಿಕ್ರಮ ೮) **ವಾ** ವಾಮನ ೯) **ಸು** ಶ್ರೀಧರ ೧೦) **ದೇ** ಹೃಷೀಕೇಶ ೧೧) **ವಾ** ಪದ್ಮನಾಭ ೧೨) **ಯ** ದಾಮೋದರ

೧೩ ಜಿತೇಂದ್ರಿಯರೂ ವಿಷ್ಣುಭಕ್ತರೂ ಆದ ಅಂಬರೀಷ ಹಾಗೂ ಧ್ರುವರು ದ್ವಾದಶಾಕ್ಷರ ಮಂತ್ರದಿಂದಲೇ ಶ್ರೇಷ್ಠವಾದ ಗತಿಯನ್ನು ಹೊಂದಿದರು.

೧೪ ಇಕ್ಷ್ವಾಕು ಕುಲೋತ್ಪನ್ನನಾದ ಅಂಬರೀಷನು ವಾಸುದೇವ ಪರಾಯಣನು. ಅವನು ವಿಷ್ಣುವಿನ ಆಜ್ಞೆಯಿಂದ ಈ ಪೃಥ್ವಿಯನ್ನು ಪಾಲಿಸಿದನು.

೧೫ ಈ ವಿಷಯವನ್ನು ನಾವು ಕೇಳಿದ್ದೇವೆ. ಅದೆಲ್ಲವನ್ನು ಹೇಳಿರಿ. ಆತನು ಸ್ಮರಿಸಿದ ಮಾತ್ರದಿಂದ ಹರಿಯ ಚಕ್ರವು ಆತನನ್ನು ರಕ್ಷಿಸಲು ಧಾವಿಸುತ್ತಿತ್ತು.

ಇತಿ ಶ್ರುತಂ ಯಶೋ ಲೋಕೇ ಧಾರ್ಮಿಕಸ್ಯ ಮಹಾತ್ಮನಃ ।
ಅಂಬರೀಷಸ್ಯ ಚರಿತಂ ತತ್ಸರ್ವಂ ಬ್ರೂಹಿ ಸತ್ತಮ ॥೧೬॥

ಮಾಹಾತ್ಮ್ಯಂ ಮನುಭಾವಂ ಚ ಭಕ್ತಿಯೋಗಮನುತ್ತಮಮ್ ।
ಯಥಾವಚ್ಛ್ರೋತುಮಿಚ್ಛಾಮೋ ವದ ಸೂತ ಮಹಾಮತೇ ॥೧೭॥

ಸೂತ ಉವಾಚ-

ಶ್ರೂಯತಾಮೃಷಿಶಾರ್ದೂಲಾಶ್ಚರಿತಂ ತಸ್ಯ ಧೀಮತಃ ।
ಅಂಬರೀಷಸ್ಯ ಮಾಹಾತ್ಮ್ಯಂ ಸರ್ವಪಾಪಹರಂ ಪರಮ್ ॥೧೮॥

ನಾಭಾಗದಯಿತಾ ಭಾರ್ಯಾ ಸರ್ವಲಕ್ಷಣಶೋಭಿತಾ ।
ಅಂಬರೀಷಸ್ಯ ಜನನೀ ನಿತ್ಯಂ ಶೌಚಸಮನ್ವಿತಾ ॥೧೯॥

ಯೋಗನಿದ್ರಾಸಮಾರೂಢಂ ಶೇಷಪರ್ಯಂಕಶಾಯಿನಮ್ ।
ನಾರಾಯಣಂ ಮಹಾತ್ಮಾನಂ ಬ್ರಹ್ಮಾಂಡಕಮಲೋದ್ಭವಮ್ ।
ಅರ್ಚಯಾಮಾಸ ಗೋವಿಂದಂ ಗಂಧಪುಷ್ಪಾದಿಭಿಃ ಶುಚಿಃ ॥೨೦॥

ತುಲಸೀಪತ್ರಸಾಹಸ್ರೈರರ್ಚಯಂತೀ ದಿನೇ ದಿನೇ ।
ಭೂಮೇರಾಲೇಪನಾದೀನಿ ಹವಿಷಾಂ ಪಚನಂ ತಥಾ ॥೨೧॥

---

೧೬ ಹೀಗೆಂದು ಧಾರ್ಮಿಕನಾದ ಮಹಾಮಹಿಮನ ಕೀರ್ತಿಯನ್ನು ಕೇಳಿದ್ದೇವೆ. ಅಂತಹ ಅಂಬರೀಷನ ಎಲ್ಲ ಚರಿತೆಯನ್ನು ಹೇಳಿರಿ.

೧೭ ಅಂಬರೀಷನ ಮಾಹಾತ್ಮ್ಯ, ಮಂತ್ರದ ಮಹಿಮೆ, ಭಕ್ತಿಯೋಗದ ಗರಿಮೆಗಳನ್ನು ಯಥಾರ್ಥವಾಗಿ ಕೇಳಲಿಚ್ಛಿಸಿದ್ದೇವೆ. ಜ್ಞಾನಿಯಾದ ಸೂತರೇ ದಯಮಾಡಿ ಹೇಳಿರಿ.

೧೮ ಹೇ ಋಷಿಶ್ರೇಷ್ಠರೇ! ಎಲ್ಲ ಪಾಪಗಳನ್ನು ಪರಿಹರಿಸುವ ಮಹಾಮಹಿಮನಾದ ಅಂಬರೀಷನ ಚರಿತೆಯನ್ನು ಹೇಳುವೆನು ಕೇಳಿರಿ.

೧೯ ನಾಭಾಗನ ಪತ್ನಿಯಾದ ಅಂಬರೀಷನ ತಾಯಿಯು ಸರ್ವಲಕ್ಷಣ ಶೋಭಿತಳು. ನಿತ್ಯದಲ್ಲಿ ಶೌಚಾಚಾರಯುಕ್ತಳಾಗಿದ್ದಳು.

೨೦ ಶೇಷನ ಮೇಲೆ ಯೋಗನಿದ್ರಾಸಕ್ತನಾಗಿರುವ ತನ್ನ ನಾಭಿಯಿಂದ ಬ್ರಹ್ಮಾಂಡಾತ್ಮಕ ಕಮಲವನ್ನು ಸೃಜಿಸಿರುವ ಮಹಾಮಹಿಮನಾದ ನಾರಾಯಣನನ್ನು ಪ್ರತಿದಿನ ಸಾವಿರ ತುಲಸೀ ಪತ್ರಗಳಿಂದ ಪೂಜಿಸುತ್ತಿದ್ದಳು.

೨೧ ದೇವತಾರ್ಚನೆಗೆ ಭೂಮಿಯನ್ನು ಗೋಮಯಗಳಿಂದ ಸಾರಿಸಿ ಶುದ್ಧಗೊಳಿಸುವುದು,

**ಮುದ್ಗಾನ್ನೈಶ್ಚ ಧನುರ್ಮಾಸೇ ಉಷಃಕಾಲಾರ್ಚನಂ ಹರೇಃ ।**
**ಕೃತ್ವಾ ಕದಾಚಿತ್ಸಾ ದೇವೀ ದ್ವಾದಶೀಂ ಸಮುಪೋಷ್ಯ ವೈ ।**
**ಹರೇರಗ್ರೇ ಮಹಾಭಾಗಾ ಸುಗಾಪಯತಿ ಯೋಷಿತಃ ॥೨೨॥**

**ತತ್ರ ನಾರಾಯಣೋ ದೇವಸ್ತಾಮಾಹ ಪುರುಷೋತ್ತಮಃ ।**
**ಕಿಮಿಚ್ಛಸಿ ವರಂ ಭದ್ರೇ ಮತಂ ತ್ವಂ ಬ್ರೂಹಿ ಭಾಮಿನಿ ॥೨೩॥**

**ಸಾ ತುಷ್ಟಾಥ ವರಂ ವವ್ರೇ ಪುತ್ರೋ ಮೇ ವೈಷ್ಣವೋ ಭವೇತ್ ।**
**ಸಾರ್ವಭೌಮೋ ಮಹಾತೇಜಾಃ ಸ್ವಕರ್ಮನಿರತಃ ಶುಚಿಃ ।**
**ತಥೇತ್ಯುಕ್ತ್ವಾ ದದೌ ತಸ್ಯೈ ಫಲಮೇಕಂ ಜನಾರ್ದನಃ ॥೨೪॥**

**ಸಾಪಿ ದತ್ತಂ ಫಲಂ ದೃಷ್ಟ್ವಾ ತದಾ ಸರ್ವಮಭಕ್ಷಯತ್ ।**
**ಸುಸಂತುಷ್ಟಾ ಫಲಂ ಭುಕ್ತ್ವಾ ಮಾನಸಾಹ್ಲಾದಸಂಯುತಾ ॥೨೫॥**

**ತತಃ ಕಾಲೇನ ಸಾ ದೇವೀ ಪುತ್ರಂ ಕುಲವಿವರ್ಧನಮ್ ।**
**ಪ್ರಾಸೂತ ಸಾ ಸದಾಚಾರಂ ವಾಸುದೇವಪರಾಯಣಮ್ ॥೨೬॥**

---

ಯಜ್ಞದ ಆಹುತಿಗೆ ಬೇಕಾಗುವ ಹವಿಸ್ಸನ್ನು ತಯಾರಿಸುವುದು ಮುಂತಾಗಿ ಸೇವಿಸುತ್ತಿದ್ದಳು.

೨೨ ಧನುರ್ಮಾಸದಲ್ಲಿ ಮುದ್ಗಾನ್ನದಿಂದ ಉಷಃಕಾಲದಲ್ಲಿ ಹರಿಯನ್ನು ಅರ್ಚಿಸುತ್ತಿದ್ದಳು. ಹೀಗೊಮ್ಮೆ ಉಪವಾಸ ಮಾಡಿ ದ್ವಾದಶಿಯಂದು ಶ್ರೀಹರಿಯ ಎದುರಲ್ಲಿ ಸುವಾಸಿನಿಯರಿಂದ ಗಾನ ಮಾಡಿಸುತ್ತಿದ್ದಳು.

೨೩ ಅಲ್ಲಿ ದೇವನು ಪ್ರತ್ಯಕ್ಷನಾಗಿ ಅವಳಿಗೆ ಹೇಳಿದ. ಮಂಗಳೆಯೇ! ನಿನಗಾವ ವರಬೇಕು? ನಿನ್ನ ಮನದ ಇಚ್ಛೆಯನ್ನು ಹೇಳು ಎಂದನು.

೨೪ ಆ ಪುತ್ರನು ಶುದ್ಧಚರಿತನೂ, ಸ್ವಕರ್ಮಗಳಲ್ಲಿ ಆಸಕ್ತನೂ, ಮಹಾತೇಜಸ್ವಿಯೂ, ಸಾರ್ವಭೌಮ ಚಕ್ರವರ್ತಿಯೂ ಆಗಬೇಕೆಂದು ಬೇಡಿದಳು. ಹಾಗೇ ಆಗಲೆಂದು ನುಡಿದು ಜನಾರ್ದನನು ಅವಳಿಗೊಂದು ಫಲವನ್ನು ನೀಡಿದನು.

೨೫ ಭಗವಂತನು ನೀಡಿದ ಆ ಫಲವನ್ನು ಪೂರ್ಣವಾಗಿ ಭಕ್ಷಿಸಿದಳು. ಅವಳು ಸಂತುಷ್ಟಳಾಗಿ ಮನದಲ್ಲಿ ಉಲ್ಲಸಿತಳಾದಳು.

೨೬ ನಂತರ ಯೋಗ್ಯವಾದ ಕಾಲದಲ್ಲಿ ಅವಳು ವಂಶೋದ್ಧಾರಕನೂ, ಸದಾಚಾರಿಯೂ, ವಾಸುದೇವಭಕ್ತನೂ ಆದ ಪುತ್ರನಿಗೆ ಜನ್ಮ ನೀಡಿದಳು.

ಶುಭಲಕ್ಷಣಸಂಪನ್ನಂ ಚಕ್ರಾಂಕಿತಮನುತ್ತಮಮ್ ।
ಜಾತಂ ಪುತ್ರಂ ಮಹಾತ್ಮಾನಂ ಸರ್ವಲಕ್ಷಣಸಂಯುತಮ್ ॥೨೭॥

ಪಿತಾ ತು ಪುತ್ರಂ ದೃಷ್ಟ್ವೈವ ಕ್ರಿಯಾಃ ಸರ್ವಾಶ್ಚಕಾರ ವೈ ।
ಅಂಬರೀಷ ಇತಿ ಖ್ಯಾತೋ ಲೋಕೇ ಸಮಭವತ್ಪ್ರಭುಃ ॥೨೮॥

ಪಿತರ್ಯುಪರತೇ ಶ್ರೀಮಾನಭಿಷಿಕ್ತೋ ಮಹಾಪ್ರಭುಃ ।
ಸಮಧಿಷ್ಠಾಯ ರಾಜ್ಯಂ ವೈ ತಪ ಉಗ್ರಂ ಚಕಾರ ಸಃ ॥೨೯॥

ತಸ್ಮಿನ್ನವಸರೇ ಪ್ರಾಪ್ತೋ ಮೃಕಂಡೋಸ್ತು ತನೂಭವಃ ।
ತಂ ಪೂಜಯಿತ್ವಾ ಪಪ್ರಚ್ಛ ಮಾರ್ಕಂಡೇಯಂ ಮಹೀಪತಿಃ ॥೩೦॥

ವೈಷ್ಣವಾ ಇತಿ ವೈ ಪ್ರೋಕ್ತಾ ವಾಸುದೇವಪರಾಯಣಾಃ ।
ಕಾನಿ ಚಿಹ್ನಾನಿ ತೇಷಾಂ ವೈ ತನ್ಮೇ ಬ್ರೂಹಿ ಮಹಾಮುನೇ ।
ತೇಷಾಂ ವೈ ಕಿಂ ಕರೋತ್ಯೇಷಃ ಭಗವಾನ್ ಭೂತಭಾವನಃ ॥೩೧॥

ಶೃಣು ರಾಜನ್ ಪ್ರವಕ್ಷ್ಯಾಮಿ ಯನ್ಮಾಂ ತ್ವಂ ಪರಿಪೃಚ್ಛಸಿ ।
ಯತ್ರಾಸತೇ ವಿಷ್ಣುಭಕ್ತಾಃ ತತ್ರ ನಾರಾಯಣಃ ಸ್ಥಿತಃ ॥೩೨॥

---

೨೭ ಚಕ್ರವೇ ಮೊದಲಾದ ಎಲ್ಲ ರೀತಿಯ ಸಂಪೂರ್ಣ ಶುಭಲಕ್ಷಣಗಳಿಂದ ಯುಕ್ತನಾದ ಮಹಾತ್ಮನಾದ ಪುತ್ರನು ಜನಿಸಿದನು.

೨೮ ಶುಭಲಕ್ಷಣಸಂಪನ್ನನಾದ ಮಗನನ್ನು ನೋಡಿದ ತಂದೆಯು ಜಾತಕರ್ಮ, ನಾಮಕರಣ ಮುಂತಾದ ಎಲ್ಲ ಕರ್ಮಗಳನ್ನು ಮಾಡಿದನು. ಆ ಮಗುವೇ ಮುಂದೆ ಲೋಕದಲ್ಲಿ ಅಂಬರೀಷನೆಂಬ ಹೆಸರಿನಿಂದ ಖ್ಯಾತನಾದನು.

೨೯ ತಂದೆಯ ಮರಣದ ನಂತರ ಪಟ್ಟಾಭಿಷಕ್ತನಾದ ಮಹಾಪ್ರಭು ಅಂಬರೀಷನು ರಾಜ್ಯವನ್ನಾಳುತ್ತ ಉಗ್ರವಾದ ತಪವನ್ನಾಚರಿಸಿದನು.

೩೦ ಆ ಸಂದರ್ಭದಲ್ಲಿ ಆಗಮಿಸಿದ ಮೃಕಂಡು ಋಷಿಗಳ ಮಕ್ಕಳಾದ ಮಾರ್ಕಂಡೇಯರನ್ನು ಪೂಜಿಸಿದ ಅಂಬರೀಷನು ಅವರನ್ನು ಪ್ರಶ್ನೆ ಮಾಡಿದನು.

೩೧ ವಾಸುದೇವ ಪರಾಯಣರಾದ ವಿಷ್ಣುಭಕ್ತರ ಲಕ್ಷಣಗಳು ಏನು? ಎಂಬುದನ್ನು ಮಹಾಜ್ಞಾನಿಗಳಾದ ತಾವು ನನಗೆ ತಿಳಿಸಬೇಕು. ಅಂತಹ ವಿಷ್ಣುಭಕ್ತರಿಗೆ ಜಗತ್ತನ್ನು ಸೃಜಿಸುವ ಭಗವಂತನು ಮಾಡುವ ಅನುಗ್ರಹವೆಂಥದು?

೩೨ ಹೇ ರಾಜನೇ! ನೀನು ಕೇಳಿದುದನ್ನು ಹೇಳುವೆ ಕೇಳು. ವಿಷ್ಣುಭಕ್ತರು ಇರುವೆಡೆಯಲ್ಲೇ ನಾರಾಯಣನು ಸನ್ನಿಹಿತನಾಗಿರುವನು.

**ವಿಷ್ಣುರೇವ ಹಿ ಸರ್ವತ್ರ ಯೇಷಾಂ ವೈ ದೇವತಾ ಸ್ಮೃತಾ ।**
**ವಿಷ್ಣುಭಕ್ತಮಥಾಯಾತಂ ಯೋ ದೃಷ್ಟ್ವಾ ಸಮ್ಮುಖಸ್ಥಿತಃ ।**
**ಪ್ರಣಾಮಾದಿ ಕರೋತ್ಯೇವ ವಾಸುದೇವಂ ಯಥಾ ತಥಾ ॥೩೩॥**

**ಕೀರ್ತ್ಯಮಾನೇ ಹರೌ ನಿತ್ಯಂ ರೋಮಾಂಚೋ ಯಸ್ಯ ವರ್ತತೇ ।**
**ಕಂಪಃ ಸ್ವೇದಸ್ತಥಾಕ್ಷೇಷು ದೃಶ್ಯಂತೇ ಜಲಬಿಂದವಃ ॥೩೪॥**

**ವಿಷ್ಣುಭಕ್ತಿಸಮಾಯುಕ್ತಾನ್ ಶ್ರೌತಸ್ಮಾರ್ತಪ್ರವರ್ತಕಾನ್ ।**
**ಪ್ರೀತೋ ಭವತಿ ಯೋ ದೃಷ್ಟ್ವಾ ವೈಷ್ಣವೋಽಸೌ ಪ್ರಕೀರ್ತಿತಃ ॥೩೫॥**

**ವಿಷ್ಣುಕ್ಷೇತ್ರೇ ಶುಭಾನ್ಯೇವ ಕರೋತಿ ಸ್ನೇಹಸಂಯುತಃ ।**
**ಪ್ರತಿಮಾಂ ಚ ಹರೇರ್ನಿತ್ಯಂ ಪೂಜಯೇತ್ ಪ್ರಯತಾತ್ಮನಾ ॥೩೬॥**

**ಅನ್ಯಭಕ್ತಿಸಹಸ್ರೇಭ್ಯೋ ವಿಷ್ಣುಭಕ್ತಿರ್ವಿಶಿಷ್ಯತೇ ।**
**ತಸ್ಮಾತ್ತು ವೈಷ್ಣವಂ ಚಾಪಿ ಬ್ರಾಹ್ಮಣಂ ಸರ್ವಕಾಮದಮ್ ।**
**ಪೂಜಯೇತ್ಸರ್ವಯತ್ನೇನ ಧರ್ಮಕಾಮಾರ್ಥಮುಕ್ತಯೇ ॥೩೭॥**

---

೩೩ ಎಲ್ಲ ಕಡೆಗೂ ಇವರಿಗೆ ವಿಷ್ಣುವೇ ದೇವತೆಯಾಗಿರುತ್ತಾನೆ. ವಿಷ್ಣು ಸರ್ವತ್ರ ವ್ಯಾಪ್ತ ಎಂದು ಇವರು ತಿಳಿದಿರುತ್ತಾರೆ. ವಿಷ್ಣುಭಕ್ತರು ತನ್ನ ಎದುರಾಗಿ ಬಂದರೇ ವಿಷ್ಣುವೇ ಬಂದನೆಂದು ಇವರು ಸಂಭ್ರಮಿಸುತ್ತಾರೆ. ವಿಷ್ಣುಭಕ್ತರು ವಿಷ್ಣುಪ್ರತಿಮೆ ಎಂದು ತಿಳಿಯುತ್ತಾರೆ. ನಮಸ್ಕಾರಾದಿ ಪೂಜೆಗಳನ್ನು ಮಾಡುತ್ತಾರೆ. ಇವರು ವಿಷ್ಣುಭಕ್ತರೆನಿಸುತ್ತಾರೆ.

೩೪ ಹರಿಕಥೆಯನ್ನು ಕೀರ್ತಿಸುವಾಗ ರೋಮಾಂಚಿತಗಾತ್ರರಾಗುತ್ತಾರೆ. ಭಕ್ತ್ಯುದ್ರೇಕದಿಂದಾಗಿ ಅವರ ದೇಹವು ನಡುಗುತ್ತದೆ. ಬೆವರುತ್ತಾರೆ. ಕಣ್ಣಲ್ಲಿ ಆನಂದಾಶ್ರುಗಳು ತೋರುತ್ತವೆ. ಇವರು ವಿಷ್ಣುಭಕ್ತರೆನಿಸುತ್ತಾರೆ.

೩೫ ವಿಷ್ಣುಭಕ್ತಿಯಿಂದ ಸಂಪನ್ನರಾದ, ಸ್ವಯಂ ಶ್ರುತಿವಿಹಿತವಾದ, ಸ್ಮೃತಿವಿಹಿತವಾದ ಸತ್ಕರ್ಮಗಳಲ್ಲಿ ತೊಡಗಿರುವ ಜನರನ್ನು ನೋಡಿ, ಯಾರು ಪ್ರೀತರಾಗುವರೋ ಅವರು ವೈಷ್ಣವರೆನಿಸುತ್ತಾರೆ.

೩೬ ಪವಿತ್ರವಾದ ವಿಷ್ಣುಕ್ಷೇತ್ರಗಳಲ್ಲಿ ಭಕ್ತಿಯಿಂದ ಪುಣ್ಯಕರ್ಮಗಳನ್ನು ಆಚರಿಸುವವನು, ಪ್ರತಿನಿತ್ಯವೂ ನಿಗ್ರಹದಿಂದ ಶ್ರೀಹರಿಯ ಪ್ರತಿಮೆಗಳನ್ನು ಪೂಜಿಸುವವನು ವೈಷ್ಣವನೆನಿಸುತ್ತಾನೆ.

೩೭ ಬೇರೆ ಸಾವಿರಾರು ದೇವತೆಗಳಲ್ಲಿ ಮಾಡಿದ ಭಕ್ತಿಗಿಂತಲೂ, ವಿಷ್ಣುಭಕ್ತಿಯು ಅತಿ ಶ್ರೇಷ್ಠವಾದುದು. ಆದುದರಿಂದ ಪ್ರಯತ್ನಪೂರ್ವಕವಾಗಿ ಧರ್ಮ,

ಏವಂ ವೈ ಭಗವದ್ಭಕ್ತಾ ವಿಷ್ಣುಭಕ್ತಿಪರಾಯಣಾಃ ।
ಅನ್ಯೇ ಚ ಬಹವಃ ಸಂತಿ ಮಯಾ ವಕ್ತುಂ ನ ಶಕ್ಯತೇ ॥೩೮॥

ಅಂಬರೀಷ ಉವಾಚ-

ಕೇನೋಪಾಯೇನ ಲಘುನಾ ಬ್ರಹ್ಮನ್ ವಿಷ್ಣುಃ ಪ್ರಸೀದತಿ ।
ತತ್ಸರ್ವಂ ವೇತ್ಸಿ ತತ್ತ್ವಜ್ಞ ವದ ಶೀಘ್ರಂ ದಯಾನಿಧೇ ॥೩೯॥

ಧನ್ಯೋಽಸಿ ಕೃತಕೃತ್ಯೋಽಸಿ ವಿಷ್ಣುಭಕ್ತ್ಯೈಕತತ್ಪರಃ ।
ಶೃಣು ಮೇ ವಚನಂ ಗುಹ್ಯಂ ಧರ್ಮಸಾರಮನುತ್ತಮಮ್ ॥೪೦॥

ಹೇಮಂತೇ ಚ ಧನುರ್ಮಾಸೇ ಸ್ನಾತ್ವೋಷಸ್ಯರ್ಚಯನ್ ಹರಿಮ್ ।
ಕುರು ಮುದ್ಗಾನ್ನನೈವೇದ್ಯಂ ವಿಷ್ಣವೇ ಪರಮಾತ್ಮನೇ ॥೪೧॥

ದ್ವಾದಶಾಕ್ಷರಮಂತ್ರಂ ವೈ ಜಪ ತ್ವಂ ಚ ನಿರಂತರಮ್ ।
ಏವಂ ವೈ ಕುರ್ವತೋ ಭಕ್ತ್ಯಾ ವಿಷ್ಣುಃ ಶೀಘ್ರಂ ಪ್ರಸೀದತಿ ॥೪೨॥

ಮಾರ್ಕಂಡೇಯವಚಃ ಶ್ರುತ್ವಾ ಅಂಬರೀಷೋ ಮಹಾಯಶಾಃ ।
ಪ್ರತ್ಯಬ್ದಂ ಚ ಧನುರ್ಮಾಸೇ ಮುದ್ಗಾನ್ನೈರ್ಹರಿಪೂಜಕಃ ॥೪೩॥

---

ಅರ್ಥ, ಕಾಮ, ಮೋಕ್ಷಗಳನ್ನು ಪಡೆಯಲು ವೈಷ್ಣವನಾದ ಸರ್ವೇಷ್ಟ-ಪೂರಕನಾದ ಬ್ರಾಹ್ಮಣನನ್ನು ಪೂಜಿಸಬೇಕು.

೩೮ ಈ ರೀತಿ ಭಗವದ್ಭಕ್ತರು ವಿಷ್ಣುವಿನಲ್ಲೇ ಮನವಿರಿಸುವರು. ಇದಲ್ಲದೇ ಇನ್ನು ಅನೇಕರೀತಿಯ ವಿಷ್ಣುಭಕ್ತರಿರುವರು. ಅವರನ್ನೆಲ್ಲ ಹೇಳಲು ನನ್ನಿಂದ ಆಗದು.

೩೯ ಮಾರ್ಕಂಡೇಯರರೇ! ಯಾವ ಸುಲಭೋಪಾಯದಿಂದ ವಿಷ್ಣುವು ಪ್ರೀತನಾಗುವನು? ದಯಾಪೂರ್ಣರಾದ ತಾವೆಲ್ಲವನ್ನು ಅರಿತವರು. ಅದನ್ನು ಶೀಘ್ರವಾಗಿ ನನಗೆ ತಿಳಿಸಿರಿ.

೪೦ ವಿಷ್ಣುಭಕ್ತಿಯಲ್ಲೇ ರತನಾದ ನೀನು ಧನ್ಯನೂ, ಕೃತಕೃತ್ಯನೂ ಆಗಿರುವೆ. ಧರ್ಮಗಳ ಸಾರದಂತಿರುವ ಉತ್ತಮವಾದ ನನ್ನ ಮಾತುಗಳನ್ನು ಕೇಳು.

೪೧ ಹೇಮಂತ ಋತುವಿನ ಧನುರ್ಮಾಸದಲ್ಲಿ, ಉಷಃಕಾಲದಲ್ಲಿ ಹರಿಯನ್ನು ಪೂಜಿಸಿ ಪರಮಾತ್ಮನಾದ ವಿಷ್ಣುವಿಗೆ ಮುದ್ಗಾನ್ನವನ್ನು ನಿವೇದಿಸು.

೪೨ ನಿತ್ಯವೂ ವಾಸುದೇವದ್ವಾದಶಾಕ್ಷರಮಂತ್ರವನ್ನು ಜಪಿಸು. ಹೀಗೆ ಮಾಡಿದ್ದಾದರೆ ವಿಷ್ಣುವು ಶೀಘ್ರದಲ್ಲೇ ಒಲಿಯುವನು.

೪೩ ಮಾರ್ಕಂಡೇಯರ ಉಪದೇಶದಿಂದ ಕೀರ್ತಿವಂತನಾದ ಅಂಬರೀಷನು

**ದ್ವಾದಶಾಕ್ಷರಜಾಪೀ ಚ ತತಾಪ ಪರಮಂ ತಪಃ ।**
**ಸಂವತ್ಸರಸಹಸ್ರಂ ವೈ ಸ್ಮರನ್ನಾರಾಯಣಂ ಪ್ರಭುಮ್ ॥೪೪॥**

**ಹೃತ್ಪುಂಡರೀಕಮಧ್ಯಸ್ಥಂ ಸೂರ್ಯಮಂಡಲಮಧ್ಯಗಮ್ ।**
**ಶಂಖಚಕ್ರಗದಾಪದ್ಮಧಾರಿಣಂ ವೈ ಚತುರ್ಭುಜಮ್ ॥೪೫॥**

**ಶ್ರೀವತ್ಸವಕ್ಷಸಂ ದೇವಂ ಪುರುಷಂ ಪುರುಷೋತ್ತಮಮ್ ।**
**ಸರ್ವಾಭರಣಸಂಯುಕ್ತಂ ಪೀತಾಂಬರಧರಂ ಹರಿಮ್ ॥೪೬॥**

**ತತೋ ಗರುಡಮಾರುಹ್ಯ ಸರ್ವದೇವೈರಭಿಷ್ಟುತಃ ।**
**ಆಜಗಾಮ ಸ ವಿಶ್ವಾತ್ಮಾ ಸರ್ವಲೋಕನಮಸ್ಕೃತಃ ॥೪೭॥**

**ಐರಾವತಮಿವಾಚಿಂತ್ಯಂ ಕೃತ್ವಾ ವೈ ಗರುಡಂ ಹರಿಃ ।**
**ಸ್ವಯಂ ಶಕ್ರ ಇವಾಸೀನಃ ತಮಾಹ ನೃಪಸತ್ತಮಮ್ ॥೪೮॥**

---

ಪ್ರತಿವರ್ಷ ಧನುರ್ಮಾಸದಲ್ಲಿ ಮುದ್ಗಾನ್ನದಿಂದ ಶ್ರೀಹರಿಯನ್ನು ಪೂಜಿಸಿದನು.

೪೪ ಪ್ರತಿನಿತ್ಯವೂ ವಾಸುದೇವದ್ವಾದಶಾಕ್ಷರಮಂತ್ರವನ್ನು ಜಪಿಸುತ್ತ ಒಂದು ಸಾವಿರ ವರ್ಷಗಳವರೆಗೆ ಪ್ರಭುವಾದ ನಾರಾಯಣನನ್ನು ಸ್ಮರಿಸುತ್ತ ಶ್ರೇಷ್ಠವಾದ ತಪವನ್ನಾಚರಿಸಿದನು.

೪೫ ಹೃದಯಕಮಲದ ಮಧ್ಯದಲ್ಲಿರುವ ಹಾಗೂ ಸೂರ್ಯಮಂಡಲದಲ್ಲಿ ನೆಲೆಸಿರುವ ಶಂಖ-ಚಕ್ರ-ಗದಾ-ಪದ್ಮಗಳನ್ನು ಧರಿಸಿರುವ ಚತುರ್ಭುಜನಾದ ಪರಮಾತ್ಮನ ಸ್ಮರಣೆ ಮಾಡಿದ.

೪೬ ಎದೆಯಲ್ಲಿ ಶ್ರೀವತ್ಸವನ್ನು ಧರಿಸಿದ, ಎಲ್ಲರ ಶರೀರಗಳಲ್ಲಿ ನೆಲೆಸಿ ಪುರುಷನೆನಿಸಿದ, ಕ್ಷರಾಕ್ಷರಪುರುಷರನ್ನು ತನ್ನ ವಶದಲ್ಲಿರಿಸಿಕೊಂಡು ಪುರುಷೋತ್ತಮನೆನಿಸಿದ, ಹಳದಿ ಬಣ್ಣದ ವಸ್ತ್ರಗಳನ್ನು ಹಾಗೂ ಎಲ್ಲ ಆಭರಣಗಳನ್ನು ಧರಿಸಿದ ಹರಿಯನ್ನು ಚಿಂತಿಸಿದನು.

೪೭ ಅನಂತರ ಸಕಲದೇವತೆಗಳಿಂದ ಸ್ತುತ್ಯನೂ, ಸಮಸ್ತಲೋಕವಾಸಿಗಳಿಂದ ನಮಸ್ಕೃತನೂ ಆದ ಆ ವಿಶ್ವವ್ಯಾಪಿಯಾದ ಹರಿಯು ಗರುಡನನ್ನೇರಿ ಅಂಬರೀಷನಲ್ಲಿಗೆ ಬಂದನು.

೪೮ ಗರುಡನನ್ನು ಐರಾವತದಂತೆ ಮಾಡಿ ತಾನು ಅದರ ಮೇಲೆ ಇಂದ್ರನಂತೆ ಕುಳಿತು ಬಂದು ನೃಪೋತ್ತಮನಾದ ಅಂಬರೀಷನಿಗೆ ಹೇಳಿದ.

ಇಂದ್ರೋಽಹಮಸ್ಮಿ ಭದ್ರಂ ತೇ ಕಿಂ ದದಾಮಿ ವರಂ ಚ ತೇ ।
ಸರ್ವಲೋಕೇಶ್ವರೋಽಹಂ ತ್ವಾಂ ರಕ್ಷಿತುಂ ಸಮುಪಾಗತಃ ॥೪೯॥

ಅಂಬರೀಷ ಉವಾಚ-

ನಾಹಂ ತ್ವಾಮಭಿಸಂಧಾಯ ತಪ ಆಸ್ಥಿತವಾನ್ ಹಿ ವೈ ।
ತ್ವಯಾ ದತ್ತಂ ಚ ನೇಕ್ಷ್ಯಾಮಿ ಗಚ್ಛ ಶಕ್ರ ಯಥಾಸುಖಮ್ ॥೫೦॥

ಮಮ ನಾರಾಯಣಂ ನಾಥಂ ತಂ ನಮಾಮಿ ಜಗತ್ಪತಿಮ್ ।
ಗಚ್ಛೇಂದ್ರ ಮಾ ಕೃಥಾಸ್ತ್ವಂ ವಾ ಮಮ ಬುದ್ಧಿವಿಲೋಭನಮ್ ॥೫೧॥

ತತಃ ಪ್ರಹಸ್ಯ ಭಗವಾನ್ ವಿಷ್ಣುರೂಪೋಽಭವದ್ಧರಿಃ ।
ಶಾರ್ಙ್ಗಚಕ್ರಗದಾಬಾಣಖಡ್ಗಹಸ್ತೋ ಜನಾರ್ದನಃ ॥೫೨॥

ಗರುಡೋಪರಿ ಸರ್ವಾತ್ಮಾ ನೀಲಾಚಲ ಇವಾಪರಃ ।
ದೇವಗಂಧರ್ವಸಂಘೈಶ್ಚ ಸ್ತೂಯಮಾನಸ್ಸಮಂತತಃ ॥೫೩॥

ಪ್ರಣಮ್ಯ ಸ ಹರಿಂ ದೃಷ್ಟ್ವಾ ತುಷ್ಟಾವ ಗರುಡಧ್ವಜಮ್ ।
ಪ್ರಸೀದ ಲೋಕನಾಥ ತ್ವಂ ಮಮ ನಾಥ ಜನಾರ್ದನ ॥೫೪॥

---

೪೯ ನಾನು ಇಂದ್ರನು. ನಿನಗೆ ಮಂಗಲವಾಗಲಿ. ನಿನಗೇನು ವರ ನೀಡಲಿ? ಸರ್ವಲೋಕಗಳೊಡೆಯನಾದ ನಾನು ನಿನ್ನನ್ನು ರಕ್ಷಿಸಲು ಆಗಮಿಸಿದ್ದೇನೆ.

೫೦ ಅಂಬರೀಷನು ಹೇಳಿದನು. ನಾನು ನಿನ್ನನ್ನು ಉದ್ದೇಶಿಸಿ ತಪದಲ್ಲಿ ತೊಡಗಿದವನಲ್ಲ. ನೀನು ನೀಡುವ ವರಗಳ ಅಪೇಕ್ಷೆಯೂ ಎನಗಿಲ್ಲ. ಇಂದ್ರನೇ! ನೀನು ಸುಖವಾಗಿ ಹೊರಟು ಹೋಗು.

೫೧ ನನ್ನ ಸ್ವಾಮಿಯಾದ ಜಗತ್ಪತಿಯಾದ ನಾರಾಯಣನನ್ನು ನಮಸ್ಕರಿಸುವೆ. ಇಂದ್ರನೇ! ನೀನು ಹೊರಟು ಹೋಗು. ನನ್ನ ಬುದ್ಧಿಯನ್ನು ಲೋಭಿಯನ್ನಾಗಿಸದಿರು.

೫೨ ನಂತರ ನಸುನಕ್ಕು ಭಗವಂತನು ಶಾರ್ಙ್ಗ, ಚಕ್ರ, ಗದೆ, ಬಾಣ, ಖಡ್ಗಗಳನ್ನು ಧರಿಸಿ ವಿಷ್ಣುರೂಪನಾದನು.

೫೩ ದೇವ-ಗಂಧರ್ವರು ಮುಂತಾದವರು ಸುತ್ತುವರೆದು ಸ್ತುತಿಸುತ್ತಿರಲು ಗರುಡನ ಮೇಲೆ ಕುಳಿತ ವಿಶ್ವವ್ಯಾಪಿಯಾದ ಶ್ರೀಹರಿಯು ಇಂದ್ರನೀಲಪರ್ವತದಂತೆ ಶೋಭಿಸಿದನು.

೫೪ ಗರುಡವಾಹನನಾದ ಶ್ರೀಹರಿಯನ್ನು ಕಂಡು ಅಂಬರೀಷನು ನಮಸ್ಕರಿಸಿ ಸ್ತೋತ್ರ ಮಾಡಿದನು. ಜನಾರ್ದನನೇ! ನೀನು ನನ್ನ ಸ್ವಾಮಿಯೂ, ಲೋಕದ ಸ್ವಾಮಿಯೂ ಆಗಿರುವೆ. ನನ್ನನ್ನು ಅನುಗ್ರಹಿಸು.

ಕೃಷ್ಣ ವಿಷ್ಣೋ ಜಗನ್ನಾಥ ಸರ್ವಲೋಕನಮಸ್ಕೃತ ।
ತ್ವಮಾದಿಸ್ತ್ವಮನಾದಿಸ್ತ್ವಮನಂತಃ ಪುರುಷಃ ಪ್ರಭುಃ ॥೫೫॥

ಅಪ್ರಮೇಯೋ ವಿಭುರ್ವಿಷ್ಣುಃ ಗೋವಿಂದಃ ಕಮಲೇಕ್ಷಣಃ ।
ತ್ವಾಂ ಪ್ರಪನ್ನೋಽಸ್ಮಿ ಗೋವಿಂದ ಪಾಹಿ ಮಾಂ ಪುಷ್ಕರೇಕ್ಷಣ ।
ನಾನ್ಯಾ ಗತಿರ್ವಿನಾ ತ್ವಾಂ ವೈ ತ್ವಮೇವ ಶರಣಂ ಮಮ ॥೫೬॥

ಸೂತ ಉವಾಚ-

ತಮಾಹ ಭಗವಾನ್ವಿಷ್ಣುಃ ಕಿಂ ತೇ ಹೃದಿ ಚಿಕೀರ್ಷಿತಮ್ ।
ತತ್ಸರ್ವಂ ತೇ ಪ್ರದಾಸ್ಯಾಮಿ ಭಕ್ತೋಽಸಿ ಮಮ ಸುವ್ರತ ॥೫೭॥

ಮುದ್ಗಾನ್ನಪೂಜಯಾ ಪ್ರೀತಃ ಸ್ಮಯಮಾನ ಉವಾಚ ಹ ।
ಭಕ್ತಪ್ರಿಯೋಽಸ್ಮಿ ಸತತಂ ತಸ್ಮಾದ್ದಾತುಮಿಹಾಗತಃ ॥೫೮॥

ಅಂಬರೀಷ ಉವಾಚ-

ಲೋಕನಾಥ ಪರಾನಂದ ತ್ವಯಿ ಮೇ ವರ್ತತಾಂ ಮತಿಃ ।
ವಾಸುದೇವಪರೋ ನಿತ್ಯಂ ವಾಙ್ಮನಃಕಾಯಕರ್ಮಭಿಃ ॥೫೯॥

---

೫೫ ನೀನು ಭಕ್ತರನ್ನು ಸೆಳೆವವನು, ಎಲ್ಲ ಪದಾರ್ಥಗಳಲ್ಲಿ ಇರುವವನು, ಜಗನ್ನಿಯಾಮಕನು. ಎಲ್ಲ ಲೋಕಗಳಿಂದ ನಮಸ್ಕೃತನು. ಎಲ್ಲದಕ್ಕೂ ನೀನೇ ಆದಿಯು. ಉತ್ಪತ್ತಿರಹಿತನು, ಅನಂತಗುಣಗಳುಳ್ಳವನು, ಪ್ರಭುವಾದ ಪುರುಷನು.

೫೬ ನೀನು ಯಾರಿಂದಲೂ ಪೂರ್ಣವಾಗಿ ಅರಿಯಲಾಗದವನು. ಸರ್ವವ್ಯಾಪ್ತನು. ಸರ್ವವೇದಗಳಿಂದ ಮುಖ್ಯಪ್ರತಿಪಾದ್ಯನು. ಕಮಲನೇತ್ರನು. ಗೋವಿಂದನೇ! ನಿನಗೆ ಶರಣಾಗಿದ್ದೇನೆ. ನನ್ನನ್ನು ರಕ್ಷಿಸು. ನಿನ್ನನ್ನು ಹೊರತು ನನಗಾರೂ ಗತಿಯಿಲ್ಲ. ನೀನೇ ನನಗೆ ಶರಣ್ಯನು.

೫೭ ಅಂಬರೀಷನಿಗೆ ಭಗವಂತನು ನುಡಿದನು. ನಿನ್ನ ಮನದ ಇಚ್ಛೆಯೇನು? ಅದೆಲ್ಲವನ್ನು ನಿನಗೆ ನೀಡುವೆ. ನೀನು ನನ್ನ ಭಕ್ತನಾಗಿರುವೆ.

೫೮ ಮುದ್ಗಾನ್ನಪೂಜೆಯಿಂದ ಪ್ರೀತನಾದ ದೇವನು ನಗುತ್ತ ನುಡಿದನು. ನಾನು ಯಾವಾಗಲೂ ಭಕ್ತಪ್ರಿಯನು. ಆದುದರಿಂದ ವರ ನೀಡಲು ಇಲ್ಲಿಗೆ ಆಗಮಿಸಿದ್ದೇನೆ.

೫೯ ಲೋಕೇಶ್ವರನೇ! ಆನಂದಸ್ವರೂಪಿಯೇ! ನನ್ನ ಮನವು ನಿನ್ನಲ್ಲಿರಲಿ. ನನ್ನ ಮಾತು, ಮನಸ್ಸು, ಶರೀರ, ಕೆಲಸಗಳೆಲ್ಲ ನಿನ್ನ ಸೇವೆಯಲ್ಲಿ ತೊಡಗಲಿ.

**ಯಥಾ ಭವಾಮ್ಯಹಂ ವಿಷ್ಣೋ ವಾಸುದೇವ ಜನಾರ್ದನ ।**
**ಪಾಲಯಿಷ್ಯಾಮಿ ಪೃಥಿವೀಂ ಕೃತ್ವಾ ವೈ ವೈಷ್ಣವಂ ಜಗತ್ ॥೬೦॥**

**ಯಜ್ಞಹೋಮಾರ್ಚನೈಶ್ಚೈವ ತರ್ಪಯನ್ವೈಸುರೋತ್ತಮಾನ್ ।**
**ವೈಷ್ಣವಾನ್ ಪಾಲಯಿಷ್ಯಾಮಿ ಪ್ರಕುರ್ವನ್ ದುಷ್ಟನಿಗ್ರಹಮ್ ।**
**ಲೋಕತಾಪಭಯಾದ್ಭೀತಃ ತಥಾ ಮೇ ದೀಯತಾಂ ವರಃ ॥೬೧॥**

**ಏವಮೇವ ಯಥೇಚ್ಛಂ ವೈ ಚಕ್ರಮೇತತ್ಸುದರ್ಶನಮ್ ।**
**ಜ್ವಾಲಾಮಾಲಾಕುಲಂ ದಿವ್ಯಂ ಕೋಟಿಸೂರ್ಯಸಮಪ್ರಭಮ್ ॥೬೨॥**

**ಋಷಿಶಾಪಾದಿಕಂ ದುಃಖಂ ಶತ್ರುರೋಗಾದಿಕಂ ತಥಾ ।**
**ನಿಹನಿಷ್ಯತಿ ತೇ ನಿತ್ಯಮಿತ್ಯುಕ್ತ್ವಾ ವೈ ದದೌ ತದಾ ॥೬೩॥**

**॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ ಷಡ್ವಿಂಶೋಽಧ್ಯಾಯಃ ॥**

---

೬೦ ಹೇ ವಾಸುದೇವನೇ! ನಾನು ಎಲ್ಲರನ್ನೂ ವಿಷ್ಣುಭಕ್ತರನ್ನಾಗಿಸಬೇಕು. ಎಲ್ಲರಿಂದಲು ವಿಷ್ಣುಧರ್ಮಗಳನ್ನು ಪಾಲನೆ ಮಾಡಿಸಬೇಕು. ಅಂಥ ವೈಷ್ಣವರನ್ನು ಸುಖವಾಗಿ ಪಾಲಿಸಬೇಕು. ಈ ಸುಯೋಗವನ್ನು ನನಗೆ ನೀಡು.

೬೧ ಯಜ್ಞ, ಹೋಮ, ಪೂಜೆಗಳಿಂದ ದೇವತೆಗಳನ್ನು ತೃಪ್ತಿಪಡಿಸಿ, ದುಷ್ಟರನ್ನು ನಿಗ್ರಹಿಸಿ ವೈಷ್ಣವರನ್ನು ಪಾಲಿಸುವಂತಾಗಬೇಕು. ಈ ಸಂಸಾರದ ತಾಪಗಳಿಂದ ಭೀತನಾಗಿ ನಿನ್ನಲ್ಲಿ ರತನಾಗಬೇಕು. ಹಾಗೆ ವರ ನೀಡು.

೬೨ ದೇವನು ನುಡಿದನು. ನೀನು ಇಚ್ಛಿಸಿದಂತೆ ಆಗಲಿ. ಜ್ವಾಲೆಯ ಮಾಲೆಗಳಿಂದ ಸುತ್ತುವರೆದಿರುವ ಕೋಟಿಸೂರ್ಯರ ಕಾಂತಿಯಿಂದ ಜ್ವಲಿಸುವ ಈ ಸುದರ್ಶನಚಕ್ರವು,

೬೩ ನಿನಗೆ ಬಂದೊದಗುವ ಋಷಿಶಾಪ, ಶತ್ರುಭಯ, ರೋಗಗಳು ಮೊದಲಾದವು-ಗಳನ್ನು ಪರಿಹರಿಸುವುದು. ಇದನ್ನು ನಿನಗೆ ನೀಡುತ್ತಿದ್ದೇನೆ ಎಂದು ತನ್ನ ಆಯುಧವಾದ ಸುದರ್ಶನ ಚಕ್ರವನ್ನು ಅಂಬರೀಷನಿಗೆ ನೀಡಿದನು.

**॥ ಇಲ್ಲಿಗೆ ಇಪ್ಪತ್ತಾರನೇ ಅಧ್ಯಾಯವು ಮುಗಿಯಿತು ॥**

# ಅಥ ಸಪ್ತವಿಂಶೋಽಧ್ಯಾಯಃ

**ಸೂತ ಉವಾಚ-**

**ತತಃ ಪ್ರಣಮ್ಯ ಮುಮುದೇ ರಾಜಾ ನಾರಾಯಣಂ ಪ್ರಭುಮ್ ।**
**ತತೋ ನಾರಾಯಣೋ ದೇವೋ ಅಂತರ್ಧಾನಗತೋ ಯಯೌ ॥೧॥**

**ಅಂಬರೀಷೋ ಮಹಾರಾಜಸ್ತ್ವಯೋಧ್ಯಾಂ ಪ್ರವಿವೇಶ ಹ ।**
**ಬ್ರಾಹ್ಮಣಾದೀಂಶ್ಚ ವರ್ಣಾಂಶ್ಚ ಸ್ವಸ್ವಕರ್ಮಣ್ಯಯೋಜಯತ್ ॥೨॥**

**ನಾರಾಯಣಪರೋ ನಿತ್ಯಂ ವಿಷ್ಣುಭಕ್ತಾನಕಲ್ಮಷಾನ್ ।**
**ಪಾಲಯಾಮಾಸ ಹೃಷ್ಟಾತ್ಮಾ ವಿಶೇಷೇಣ ಜನಾಧಿಪಃ ॥೩॥**

**ದಾನಧರ್ಮಾನನೇಕಾಂಶ್ಚ ಯಜ್ಞಕರ್ಮಾಣಿ ಸರ್ವಶಃ ।**
**ಪಾನಕಂ ಚ ದದೌ ಚೈತ್ರೇ ದಧ್ಯನ್ನಂ ಮಾಧವೇ ತಥಾ ॥೪॥**

**ಚಾತುರ್ಮಾಸ್ಯಾದಿಧರ್ಮಾನ್ವೈ ಚಕಾರ ಚ ಮಹಾಯಶಾಃ ।**
**ಶಾಕಂ ಚ ವರ್ಜಯಿತ್ವಾ ತು ದಧಿದುಗ್ಧಾಢಕಾದಿಕಮ್ ॥೫॥**

**ದೀಪಾಂಶ್ಚ ಕಾರ್ತಿಕೇ ಚಕ್ರೇ ಲಕ್ಷಂ ಕೋಟಿಂ ಚ ಸಂಖ್ಯಯಾ ।**

---

೧ ರಾಜನಾದ ಅಂಬರೀಷನು ನಾರಾಯಣನನ್ನು ಸಂತೋಷದಿಂದ ನಮಿಸಿದನು. ನಂತರ ನಾರಾಯಣನು ಅಂತರ್ಧಾನ ಹೊಂದಿದನು.

೨ ಮಹಾರಾಜನಾದ ಅಂಬರೀಷನು ಅಯೋಧ್ಯೆಯನ್ನು ಪ್ರವೇಶಿಸಿದನು. ಸುಖವಾಗಿ ರಾಜ್ಯವನ್ನು ಪಾಲಿಸಿದನು. ಬ್ರಾಹ್ಮಣರು ಮೊದಲಾದ ಚಾತುರ್ವರ್ಣಿಕರನ್ನು ತಮ್ಮ ತಮ್ಮ ವರ್ಣಾಶ್ರಮೋಚಿತವಾದ ಕರ್ಮಗಳಲ್ಲಿ ತೊಡಗಿಸಿದನು.

೩ ನಿತ್ಯ ನಾರಾಯಣನಲ್ಲಿ ಆಸಕ್ತನಾಗಿ ದೋಷರಹಿತರಾದ ವಿಷ್ಣುಭಕ್ತರನ್ನು ವಿಶೇಷವಾಗಿ ಪಾಲಿಸಿದನು.

೪ ಅನೇಕ ರೀತಿಯ ದಾನಧರ್ಮಗಳನ್ನು, ಯಜ್ಞಯಾಗಾದಿಗಳನ್ನು ಮಾಡಿದನು. ಚೈತ್ರಮಾಸದಲ್ಲಿ ಪಾನಕವನ್ನು ವೈಶಾಖದಲ್ಲಿ ಮೊಸರನ್ನವನ್ನು ದಾನ ಮಾಡಿದನು.

೫ ಮಹಾಕೀರ್ತಿಶಾಲಿಯಾದ ಅಂಬರೀಷನು ಚಾತುರ್ಮಾಸ್ಯದಲ್ಲಿ ಕಾಯಿಪಲ್ಲೆ, ಮೊಸರು, ಹಾಲು, ಬೇಳೆಗಳನ್ನು ತ್ಯಜಿಸಿ ವ್ರತವನ್ನಾಚರಿಸಿದನು.

ಮಾರ್ಗಶೀರ್ಷೇ ಧನುರ್ಮಾಸೇ ಮುದ್ಗಾನ್ನೈರ್ಹರಿಪೂಜನಮ್ ॥೬॥

ಉಷಃಕಾಲೇ ಚ ಹೇಮಂತೇ ಪ್ರತ್ಯಬ್ದಂ ಚ ಚಕಾರ ಸಃ ।
ಮಾಘೇ ಮಾಸ್ಯಕರೋತ್ ಸ್ನಾನಂ ಕಂಬಲಾದೀನ್ ದದೌ ಚ ಸಃ ॥೭॥

ಬ್ರಾಹ್ಮಣಾನ್ ಭೋಜಯಾಮಾಸ ಮೃಷ್ಟಾನ್ನಾನಿ ಸಹಸ್ರಶಃ ।
ಅಶ್ವಮೇಧಶತಂ ಚಕ್ರೇ ವಾಜಪೇಯಶತಾನಿ ಚ ॥೮॥

ಗೃಹೇ ಗೃಹೇಽಗ್ನಿಹೋತ್ರಂ ಚ ವೇದಘೋಷಸ್ತಥೈವ ಚ ।
ನಾಮಘೋಷೋ ಹರೇಶ್ಚೈವ ಯಜ್ಞಘೋಷಸ್ತಥೈವ ಚ ॥೯॥

ಅಭವನ್ ನೃಪಶಾರ್ದೂಲೇ ತಸ್ಮಿನ್ ರಾಜ್ಯಂ ಪ್ರಶಾಸತಿ ।
ಆಸೀತ್ ಸಸ್ಯಾವೃತಾ ಭೂಮಿರ್ನ ದುರ್ಭಿಕ್ಷಾದಿಭಿರ್ವೃತಾ ॥೧೦॥

ರೋಗಹೀನಾಃ ಪ್ರಜಾ ಆಸನ್ ಸರ್ವೋಪದ್ರವವರ್ಜಿತಾಃ ।
ಏವಂ ರಾಜಾ ತ್ವಂಬರೀಷಃ ಪಾಲಯಾಮಾಸ ಮೇದಿನೀಮ್ ॥೧೧॥

ತಸ್ಯೈವಂ ವರ್ತಮಾನಸ್ಯ ಕನ್ಯಾ ಕಮಲಲೋಚನಾ ।

---

೬ ಕಾರ್ತಿಕಮಾಸದಲ್ಲಿ ಕೋಟಿ ಕೋಟಿ ದೀಪಗಳನ್ನು ಹಚ್ಚಿದನು. ಮಾರ್ಗಶೀರ್ಷದ ಧನುರ್ಮಾಸದಲ್ಲಿ ಮುದ್ಗಾನ್ನದಿಂದ ಹರಿಯನ್ನು ಪೂಜಿಸಿದನು.

೭ ಹೇಮಂತಋತುವಿನ ಪ್ರಾತಃಕಾಲದಲ್ಲಿ ಪ್ರತಿವರ್ಷವೂ ಧನುರ್ಮಾಸವನ್ನು ಪಾಲಿಸಿದನು. ಮಾಘಮಾಸದಲ್ಲಿ ಪ್ರಾತಃಸ್ನಾನವನ್ನು ಮಾಡಿ ಕಂಬಳಿಯನ್ನು ದಾನ ಮಾಡಿದನು.

೮ ಸಾವಿರಾರು ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನ ಮಾಡಿಸಿದನು. ನೂರಾರು ಅಶ್ವಮೇಧಗಳು ಹಾಗೂ ವಾಜಪೇಯಯಾಗಗಳನ್ನು ಮಾಡಿದನು.

೯ ಮನೆಮನೆಯಲ್ಲೂ ಅಗ್ನಿಹೋತ್ರ ನಡೆಯುತ್ತಿತ್ತು. ಎಲ್ಲ ಗೃಹಗಳಿಂದ ವೇದಘೋಷಗಳೂ, ಹರಿಯ ನಾಮಸ್ಮರಣೆಯೂ, ಯಜ್ಞಮಂತ್ರಗಳೂ ಕೇಳಿ ಬರುತ್ತಿದ್ದವು.

೧೦ ರಾಜಶ್ರೇಷ್ಠನಾದ ಅಂಬರೀಷನು ರಾಜ್ಯವಾಳುತ್ತಿರಲು ದುರ್ಭಿಕ್ಷಾದಿಗಳಿಲ್ಲದೇ ಭೂಮಿಯು ಸಸ್ಯಗಳಿಂದ ಸಮೃದ್ಧವಾಗಿದ್ದಿತು.

೧೧ ಪ್ರಜೆಗಳೆಲ್ಲ ರೋಗಾದಿರಹಿತರಾಗಿ ಯಾವುದೇ ಉಪದ್ರವಗಳಿಲ್ಲದೇ ಸುಖವಾಗಿದ್ದರು. ಹೀಗೆ ರಾಜನಾದ ಅಂಬರೀಷನು ಧರ್ಮದಿಂದ ರಾಜ್ಯವನ್ನು ಪರಿಪಾಲಿಸಿದನು.

**ಶ್ರೀಮತೀ ನಾಮ ವಿಖ್ಯಾತಾ ಸರ್ವಲಕ್ಷಣಸಂಯುತಾ ॥೧೨॥**

**ಪ್ರದಾನಸಮಯಂ ಪ್ರಾಪ್ತಾ ದೇವಮಾಯೇವ ಶೋಭನಾ ।**
**ತಸ್ಮಿನ್ ಕಾಲೇ ಮುನಿಃ ಶ್ರೀಮಾನ್ ನಾರದೋಽಭ್ಯಾಗತಶ್ಚ ವೈ ॥೧೩॥**

**ಅಂಬರೀಷಸ್ಯ ರಾಜ್ಞೋ ವೈ ಪರ್ವತಶ್ಚ ಮಹಾಮತಿಃ ।**
**ತಾವುಭಾವಾಗತೌ ದೃಷ್ಟ್ವಾ ಪ್ರಣಿಪತ್ಯ ಯಥಾವಿಧಿ ॥೧೪॥**

**ಅಂಬರೀಷೋ ಮಹಾತೇಜಾಃ ಸ ತಾಮಾಹ ವರಂ ವೃಣು ।**
**ಕನ್ಯಾಂ ತಾಂ ಭಾಷಮಾಣಾಂ ವೈ ಸಭಾಮಧ್ಯೇ ಸಗದ್ಗದಮ್ ।**
**ತದಾ ತು ಪ್ರೇಕ್ಷ್ಯ ಭಗವಾನ್ ನಾರದಃ ಸಸ್ಮಿತಸ್ತದಾ ॥೧೫॥**

**ಕೇಯಂ ರಾಜನ್ ಮಹಾಭಾಗ ಕನ್ಯಾ ಸುರಸುತೋಪಮಾ ।**
**ಬ್ರೂಹಿ ಧರ್ಮಭೃತಾಂ ಶ್ರೇಷ್ಠ ಸರ್ವಲಕ್ಷಣಶೋಭಿತಾ ॥೧೬॥**

**ದುಹಿತೇಯಂ ಮಮ ವಿಭೋ ಶ್ರೀಮತೀ ನಾಮ ನಾಮತಃ ।**
**ಪ್ರದಾನಸಮಯಂ ಪ್ರಾಪ್ತಾ ತತೋಽನ್ವೇಷೇ ವರಂ ಶುಭಮ್ ॥೧೭॥**

---

೧೨ ಹೀಗಿರುತ್ತಿದ್ದ ಅಂಬರೀಷನಿಗೆ ಕಮಲದಂತೆ ಕಣ್ಣುಗಳುಳ್ಳ ಸರ್ವಲಕ್ಷಣ ಸಂಪನ್ನೆಯಾದ ಶ್ರೀಮತಿ ಎಂಬ ಹೆಸರಿನ ಮಗಳಿದ್ದಳು.

೧೩ ದೇವಮಾಯೆಯಂತೆ ಶೋಭಾಯಮಾನಳಾದ ಆ ಶ್ರೀಮತಿಯು ಕನ್ಯಾದಾನಕ್ಕೆ ಯೋಗ್ಯವಾದ ವಯಸ್ಸನ್ನು ಹೊಂದಿದಳು. ಅದೇ ಸಮಯದಲ್ಲಿ ಮುನಿಶ್ರೇಷ್ಠರಾದ ನಾರದರು ಅಂಬರೀಷನ ಅರಮನೆಗೆ ಆಗಮಿಸಿದರು.

೧೪ ಹಾಗೆಯೇ ಜ್ಞಾನಿವರೇಣ್ಯರಾದ ಪರ್ವತಮುನಿಗಳೂ ಆಗಮಿಸಿದರು. ತನ್ನರಮನೆಗೆ ಆಗಮಿಸಿದ ಆ ಇಬ್ಬರು ಮಹಾಮುನಿಗಳನ್ನು ವಿಧಿಪೂರ್ವಕವಾಗಿ ನಮಸ್ಕರಿಸಿದನು.

೧೫ ಅಂಬರೀಷನು ನಾರದರು ಮತ್ತು ಪರ್ವತರಿಗೆ ನಮಸ್ಕರಿಸಿ ವರಬೇಡುವಂತೆ ಮಗಳಿಗೆ ತಿಳಿಸಿದ. ಸಭಾಮಧ್ಯೆ ಗದ್ಗದಕಂಠದಿಂದ ಮಾತನ್ನಾಡುತ್ತಿದ್ದ ಆ ಕನ್ಯೆಯನ್ನು ನೋಡಿದ ನಾರದರು ಆಶ್ಚರ್ಯದಿಂದ ಕೇಳಿದರು.

೧೬ ರಾಜನೇ! ದೇವಕನ್ಯೆಯಂತೆ ಶೋಭಿಸುವ ಈ ಯುವತಿ ಯಾರು? ಧರ್ಮಪಾಲಕರಲ್ಲಿ ಶ್ರೇಷ್ಠನಾದ ರಾಜನೇ! ಈ ಎಲ್ಲ ಲಕ್ಷಣಗಳಿಂದ ಪರಿಶೋಭಿತಳಾದ ಈ ಕನ್ಯೆಯು ಯಾರೆಂದು ಹೇಳು.

೧೭ ನಾರದರೇ! ಇವಳು ನನ್ನ ಮಗಳು. ಹೆಸರು ಶ್ರೀಮತಿ ಎಂದು. ವಿವಾಹಕ್ಕೆ ಪ್ರಾಪ್ತ ವಯಸ್ಕಳಾಗಿರುವಳು. ಆದುದರಿಂದ ಉತ್ತಮನಾದ ವರನನ್ನು

ಇತ್ಯುಕ್ತೋ ಮುನಿಶಾರ್ದೂಲಸ್ತಾಮೈಚ್ಛನ್ನಾರದೋ ದ್ವಿಜಃ ।
ಪರ್ವತೋಽಪಿ ವಧೂಂ ತಾಂ ವೈ ಚಕಮೇ ಮುನಿಸತ್ತಮಃ ॥೧೮॥

ಅನುಜ್ಞಾಪ್ಯ ಚ ರಾಜಾನಂ ನಾರದೋ ವಾಕ್ಯಮಬ್ರವೀತ್ ।
ರಹಸಿ ಪ್ರಾಹ ಧರ್ಮಾತ್ಮನ್ ಮಹ್ಯಂ ದೇಹಿ ಸುತಾಮಿಮಾಮ್ ॥೧೯॥

ಪರ್ವತೋಽಪಿ ತಥಾ ಪ್ರಾಹ ರಾಜಾನಂ ರಹಸಿ ಪ್ರಭುಮ್ ।
ತಾವುಭೌ ಸ ತು ಧರ್ಮಾತ್ಮಾ ಪ್ರಣಿಪತ್ಯ ಭಯಾರ್ದಿತಃ ॥೨೦॥

ಭೌ ಭವಂತೌ ಕನ್ಯಾಂ ಮೇ ಪ್ರಾರ್ಥಯೇತೇ ಕಥಂ ತ್ವಹಮ್ ।
ಕರಿಷ್ಯಾಮಿ ಮಹಾಪ್ರಾಜ್ಞ ಶ್ರುಣು ನಾರದ ಮೇ ವಚಃ ॥೨೧॥

ತ್ವಂ ಚ ಪರ್ವತ ಮೇ ವಾಕ್ಯಂ ಶ್ರುಣು ವಕ್ಷ್ಯಾಮಿ ಯನ್ಮುನೇ ।
ಕನ್ಯೇಯಂ ಯುವಯೋರೇಕಂ ವರಯಿಷ್ಯತಿ ಚೇಚ್ಛುಭಾ ।
ತಸ್ಮೈ ಕನ್ಯಾಂ ಪ್ರಯಚ್ಛಾಮಿ ನಾನ್ಯಥಾ ಶಕ್ತಿರಸ್ತಿ ಮೇ ॥೨೨॥

ಇತ್ಯುಕ್ತೌ ಮುನಿಶಾರ್ದೂಲೌ ಜಗ್ಮತುಃ ಪ್ರೀತಮಾನಸೌ ।
ವಾಸುದೇವಪರೌ ನಿತ್ಯಮುಭೌ ಜ್ಞಾನವಿದಾಂ ವರೌ ॥೨೩॥

---

ಹುಡುಕುತ್ತಿದ್ದೇನೆ.

೧೮ ಹೀಗೆ ಹೇಳಲು ನಾರದರು ಆ ಕನ್ಯೆಯನ್ನು ವಿವಾಹವಾಗಲು ಇಚ್ಛಿಸಿದರು. ಮುನಿಶ್ರೇಷ್ಠರಾದ ಪರ್ವತರೂ ಅವಳನ್ನೇ ಅಪೇಕ್ಷಿಸಿದರು.

೧೯ ನಾರದರು ಏಕಾಂತದಲ್ಲಿ ರಾಜನನ್ನು ಭೇಟಿಯಾದರು. ಆದೇಶಿಸುತ್ತಾ ಹೇಳಿದರು. ಧರ್ಮಾತ್ಮನಾದ ರಾಜನೇ! ನಿನ್ನ ಮಗಳನ್ನು ನನಗೆ ನೀಡೆಂದರು.

೨೦ ಪರ್ವತರೂ ಕೂಡ ಏಕಾಂತದಲ್ಲಿ ರಾಜನನ್ನು ಕುರಿತು ಶ್ರೀಮತಿಯನ್ನು ತನಗೇ ನೀಡುವಂತೆ ಹೇಳಿದರು. ಭೀತನಾದ ರಾಜನು ಇಬ್ಬರಿಗೂ ನಮಸ್ಕರಿಸಿ ಹೇಳಿದನು.

೨೧ ನೀವಿಬ್ಬರೂ ನನ್ನ ಮಗಳನ್ನು ಇಚ್ಛಿಸುತ್ತಿರುವಿರಿ. ನಾನೇನು ಮಾಡಲಿ. ನಾರದರೇ! ನನ್ನ ಮಾತನ್ನು ಕೇಳಿರಿ.

೨೨ ಹೇ ಪರ್ವತ ಮುನಿಗಳೇ! ನೀವು ಕೂಡ ನಾನು ಹೇಳುವ ಮಾತನ್ನಾಲಿಸಿರಿ. ನನ್ನ ಮಗಳು ಶ್ರೀಮತಿಯು ನಿಮ್ಮಿಬ್ಬರಲ್ಲಿ ಒಬ್ಬರನ್ನು ಇಚ್ಛಿಸಿದರೆ ಅವರಿಗೆ ಅವಳನ್ನು ನೀಡಿ ವಿವಾಹ ಮಾಡುವೆನು. ಇಲ್ಲವಾದಲ್ಲಿ ನಾನೇನೂ ಮಾಡಲಾರೆ.

೨೩ ಹೀಗೆಂದ ರಾಜನ ಮಾತನ್ನು ಕೇಳಿ ಪ್ರೀತರಾದ ಆ ಮುನಿಶ್ರೇಷ್ಠರು ಸಂತುಷ್ಟ

ವಿಷ್ಣುಲೋಕಂ ತತೋ ಗತ್ವಾ ನಾರದೋ ಮುನಿಸತ್ತಮಃ ।
ಪ್ರಣಿಪತ್ಯ ಹೃಷೀಕೇಶಂ ವಾಕ್ಯಮೇತದುವಾಚ ಹ ॥೨೪॥

ಶ್ರೋತ್ರವ್ಯಮಸ್ತಿ ಭಗವನ್ ಕಿಂಚಿನ್ನಾರಾಯಣಾದ್ಯ ಮೇ ।
ರಹಸಿ ತ್ವಾಂ ತು ಪೃಚ್ಛಾಮಿ ನಮಸ್ತೇ ಭುವನೇಶ್ವರ ॥೨೫॥

ತತಃ ಪ್ರಹಸ್ಯ ಗೋವಿಂದಃ ಪೀಠಾದುತ್ಥಾಯ ತಂ ಮುನಿಮ್ ।
ಬ್ರೂಹೀತ್ಯಾಚಷ್ಟ ವಿಶ್ವಾತ್ಮಾ ಮುನಿರಾಹ ಚ ಕೇಶವಮ್ ॥೨೬॥

ತ್ವದೀಯೋ ನೃಪತಿಃ ಶ್ರೀಮಾನಂಬರೀಷೋ ಮಹಾಮತಿಃ ।
ತಸ್ಯ ಕನ್ಯಾ ಮಹಾಭಾಗಾ ಶ್ರೀಮತೀ ನಾಮ ನಾಮತಃ ।
ಪರಿಣೇತುಮಹಂ ತಾಂ ವೈ ಪ್ರಯತ್ನಂ ಕೃತವಾನ್ ಹಿ ವೈ ॥೨೭॥

ಪರ್ವತೋಽಯಂ ಮುನಿಃ ಶ್ರೀಮಾನ್ ವಾಸುದೇವ ತಪೋನಿಧಿಃ ।
ತಾಮೈಚ್ಛತ್ ಸೋಽಪಿ ಭಗವಾನ್ ಸ ಜಗಾದ ಜನಾಧಿಪಃ ॥೨೮॥

ಅಂಬರೀಷೋ ಮಹಾತೇಜಾಃ ಕನ್ಯೈಕಂ ಯುವಯೋರ್ವರಮ್ ।
ಲಾವಣ್ಯಯುಕ್ತಂ ವೃಣುಯಾದ್ಯಂ ತು ತಸ್ಮೈ ದದಾಮ್ಯಹಮ್ ॥೨೯॥

---

ಮನಸ್ಕರಾಗಿ ಅಲ್ಲಿಂದ ಹೊರಟರು. ಅವರಿಬ್ಬರೂ ಜ್ಞಾನಿಶ್ರೇಷ್ಠರು. ನಿತ್ಯದಲ್ಲೂ ವಾಸುದೇವನನ್ನೇ ಭಜಿಸುವವರು.

೨೪ ನಂತರ ಮುನಿಶ್ರೇಷ್ಠರಾದ ನಾರದರು ವಿಷ್ಣುಲೋಕಕ್ಕೆ ಹೋಗಿ ಸರ್ವೇಂದ್ರಿಯ ನಿಯಾಮಕನಾದ ವಿಷ್ಣುವಿಗೆ ನಮಸ್ಕರಿಸಿ ಹೀಗೆಂದು ನುಡಿದರು.

೨೫ ಭಗವಂತನೇ ಇಂದು ನಾನೇನನ್ನೋ ಕೇಳಲು ಬಂದಿರುವೆ. ಜಗದೊಡೆಯನೇ ನಿನಗೆ ನಮಸ್ಕಾರಗಳು. ನಾನು ನಿನ್ನನ್ನು ರಹಸ್ಯದಲ್ಲಿ ಕೇಳುವೆನು.

೨೬ ಹೀಗೆನ್ನಲು ಗೋವಿಂದನು ನಗುತ್ತ ತನ್ನ ಪೀಠದಿಂದೆದ್ದು ನಾರದರ ಹತ್ತಿರ ಬಂದು ಅದೇನು ಹೇಳೆನ್ನಲು ನಾರದರು ನುಡಿದರು.

೨೭ ಲಕ್ಷ್ಮೀಪತಿಯೇ! ನಿನ್ನ ಭಕ್ತನಾದ ಅಂಬರೀಷನು ಮಹಾಜ್ಞಾನಿಯು. ಅವನಿಗೆ ಮಹಾಭಾಗ್ಯವಂತಳಾದ ಶ್ರೀಮತಿ ಎಂಬ ಹೆಸರಿನ ಕನ್ಯೆಯೊಬ್ಬಳಿದ್ದಾಳೆ. ನಾನು ಅವಳನ್ನು ವಿವಾಹವಾಗಲು ಪ್ರಯತ್ನಿಸಿದೆ.

೨೮ ಹೇ ವಾಸುದೇವನೇ! ತಪೋನಿಧಿಯಾದ ಪರ್ವತ ಮುನಿಯು ಕೂಡ ಅವಳನ್ನೇ ಇಚ್ಛಿಸಿದನು. ಇದನ್ನು ಕಂಡ ಅಂಬರೀಷನು ಹೀಗೆ ನುಡಿದನು.

೨೯ ನಿಮ್ಮಿಬ್ಬರಲ್ಲಿ ಸುಂದರಾಂಗನೂ, ಶ್ರೇಷ್ಠನೂ ಆದ ಯಾರನ್ನು ಶ್ರೀಮತಿಯು ಇಚ್ಛಿಸುವಳೋ ಅವರಿಗೆ ಅವಳನ್ನು ನೀಡುವೆ.

**ಇತ್ಯುಕ್ತೋಽಹಂ ನೃಪೇಣೇಶ ತಥೇತ್ಯುಕ್ತ್ವಾ ಸಮಾಗತಃ ।**
**ಆಗಮಿಷ್ಯಾಮಿ ತೇ ರಾಜನ್ ಶ್ವಃ ಪ್ರಭಾತೇ ಗೃಹಂ ತ್ವಿತಿ ॥೩೦॥**

**ಏವಮುಕ್ತ್ವಾ ವಚ ಮಾನಾಥ ವಕ್ತುಮರ್ಹಸಿ ಮೇ ಪ್ರಿಯಮ್ ।**
**ವಾನರಾನನವದ್ಭಾತಿ ಪರ್ವತಸ್ಯ ಮುಖಂ ಯಥಾ ॥೩೧॥**

**ತಥಾ ಕುರು ಜಗನ್ನಾಥ ಮಮ ಚೇದಿಚ್ಛಸಿ ಪ್ರಿಯಮ್ ।**
**ತಥೇತ್ಯುಕ್ತ್ವಾ ಸ ಗೋವಿಂದಃ ಪ್ರಹಸ್ಯ ಮಧುಸೂದನಃ ॥೩೨॥**

**ತ್ವಯೋಕ್ತಂ ಚ ಕರಿಷ್ಯಾಮಿ ಗಚ್ಛ ಸೌಮ್ಯ ಯಥಾಗತಮ್ ।**
**ಏವಮುಕ್ತೋ ಮುನಿರ್ಹೃಷ್ಟಃ ಪ್ರಣಿಪತ್ಯ ಜನಾರ್ದನಮ್ ।**
**ಮನ್ಯಮಾನಃ ಕೃತಾರ್ಥಂ ಸ್ವಂ ತತೋಽಯೋಧ್ಯಾಂ ಜಗಾಮ ಸಃ ॥೩೩॥**

**ಗತೇ ಮುನಿವರೇ ತಸ್ಮಿನ್ ಪರ್ವತೋಽಪಿ ಮಹಾಮುನಿಃ ।**
**ಪ್ರಣಮ್ಯ ಮಾಧವಂ ಹೃಷ್ಟೋ ರಹಸ್ಯೇನಮುವಾಚ ಹ ॥೩೪॥**

**ವೃತ್ತಂ ತಸ್ಯ ನಿವೇದ್ಯಾಗ್ರೇ ನಾರದಸ್ಯ ಜಗತ್ಪತೇ ।**
**ಗೋಲಾಂಗೂಲಮುಖಂ ಯದ್ವನ್ಮುಖಂ ಭಾತಿ ತಥಾ ಕುರು ॥೩೫॥**

---

೩೦ ರಾಜನು ಹೀಗೆ ಹೇಳಲು ನಾನು ಹಾಗೇ ಆಗಲಿ. ನಾಳೆ ಪ್ರಾತಃಕಾಲದಲ್ಲಿ ನಿನ್ನ ಮನೆಗೆ ಬರುವೆನೆಂದು ತಿಳಿಸಿ ಬಂದಿದ್ದೇನೆ.

೩೧ ಹೀಗೆಂದು ನಾರದರು ನುಡಿದು ಮತ್ತೆ ಹೇಳಿದರು. ಲಕ್ಷ್ಮೀಪತಿಯೇ! ನನಗೆ ಪ್ರಿಯವಾದುದನ್ನು ಮಾಡಬೇಕು. ನಾಳೆ ಮುಂಜಾವಿನ ಸಮಯ ಪರ್ವತಋಷಿಯ ಮುಖವು ಶ್ರೀಮತಿಗೆ ಕೆಂಪು ಕೋತಿಯಂತೆ ಕಾಣಬೇಕು.

೩೨ ಜಗದೊಡೆಯನೇ! ನನ್ನ ಪ್ರಿಯವನ್ನು ಇಚ್ಛಿಸುವೆಯಾದರೆ ಹೀಗೆ ಮಾಡಬೇಕೆನ್ನಲು ಗೋವಿಂದನು ಹಾಗೇ ಆಗಲೆಂದು ನಗುತ್ತ ನುಡಿದನು.

೩೩ ನೀನು ಹೇಳಿದ ರೀತಿಯೇ ಮಾಡುವೆನು. ನೀನು ಹೋಗಿ ಬಾ ಎನ್ನಲು ಸಂತೋಷ ಹೊಂದಿದ ನಾರದರು ಜನಾರ್ದನನನ್ನು ನಮಸ್ಕರಿಸಿದರು. ತನ್ನ ಇಷ್ಟಾರ್ಥವು ಸಿದ್ಧಿಸಿತೆಂದು ಭಾವಿಸಿ ಅಯೋಧ್ಯೆಗೆ ನಡೆದರು.

೩೪ ನಾರದರು ಅತ್ತ ಹೋಗುತ್ತಿದ್ದಂತೆ ಪರ್ವತಮುನಿಗಳು ಬಂದರು. ಅಲ್ಲಿಗೆ ಆಗಮಿಸಿ ಮಾಧವನನ್ನು ನಮಸ್ಕರಿಸಿ ಮಾತನಾಡಿದರು.

೩೫ ಪರ್ವತರು ನಾರದರ ವೃತ್ತಾಂತವನ್ನು ಭಗವಂತನಿಗೆ ಅರುಹಿದರು. ನಾರದರ ಮುಖವು ಕಪ್ಪು ಮುಖದ ವಾನರನ ಹಾಗೆ ಕಾಣುವಂತೆ ಮಾಡೆಂದರು.

**ತಚ್ಛ್ರುತ್ವಾ ಭಗವಾನ್ವಿಷ್ಣುಸ್ತ್ವಯೋಕ್ತಂ ಚ ಕರೋಮಿ ವೈ ।**
**ಗಚ್ಛ ಶೀಘ್ರಮಯೋಧ್ಯಾಂ ವೈ ನಾವೇದೀನ್ನಾರದೋ ಯಥಾ ।**
**ತ್ವಯಾ ಮೇ ಸಂವಿದಂ ತತ್ರ ತಥೇತ್ಯುಕ್ತ್ವಾ ಜಗಾಮ ಸಃ ॥೩೬॥**

**ತತೋ ರಾಜಾ ಸಮಾಜ್ಞಾಯ ಪ್ರಾಪ್ತೌ ಮುನಿವರೌ ತದಾ ।**
**ಮಾಂಗಲ್ಯೈರ್ವಿವಿಧೈಸ್ಸರ್ವಾಮಯೋಧ್ಯಾಂ ಧ್ವಜಮಾಲಿನೀಮ್ ।**
**ಮಂಡಯಾಮಾಸ ಪುಷ್ಪೈಶ್ಚ ಲಾಜೈಶ್ಚೈವ ಸಮಂತತಃ ॥೩೭॥**

**ವಧೂಸಿಕ್ತಗೃಹದ್ವಾರಾಂ ಸಿಕ್ತಾಪಣಮಹಾಪಥಾಮ್ ।**
**ದಿವ್ಯಗಂಧರಸೋಪೇತಾಂ ಧೂಪಿತಾಂ ದಿವ್ಯಧೂಪಕೈಃ ।**
**ಕೃತ್ವಾ ಚ ನಗರೀಂ ರಾಜಾ ಮಂಡಯಾಮಾಸ ತಾಂ ಸಭಾಮ್ ॥೩೮॥**

**ವ್ಯಗಂಧೈಸ್ತಥಾ ಧೂಪೈಃ ಕೃತ್ವಾ ರತ್ನಮಯೀಂ ತದಾ ।**
**ಅಲಂಕೃತಮಣಿಸ್ತಂಭಾಂ ನಾನಾಮಾಲ್ಯೋಪಶೋಭಿತಾಮ್ ॥೩೯॥**

**ಪರಾರ್ಘ್ಯಾಸ್ತರಣೋಪೇತೈಃ ದಿವ್ಯಭದ್ರಾಸನೈರ್ವೃತಾಮ್ ।**
**ಕೃತ್ವಾ ನೃಪೇಂದ್ರಸ್ತಾಂ ಕನ್ಯಾಮಾದಾಯ ಪ್ರವಿವೇಶ ಹ ॥೪೦॥**

---

೩೬ ಅದನ್ನು ಕೇಳಿದ ಭಗವಂತನು ಹಾಗೆಯೇ ಮಾಡುವೆನೆಂದನು. ನಾರದರು ನಮ್ಮಿಬ್ಬರ ಭೇಟಿಯನ್ನು ಅರಿಯದಂತೆ ಶೀಘ್ರದಲ್ಲಿ ಅಯೋಧ್ಯೆಗೆ ಪಯಣಿಸು. ಎನ್ನಲು ಹಾಗೆಯೇ ಆಗಲೆಂದು ಪರ್ವತಮುನಿಗಳು ಅಯೋಧ್ಯೆಗೆ ನಡೆದರು.

೩೭ ಅವರಿಬ್ಬರು ಮುನಿಗಳ ಆಗಮನವನ್ನರಿತ ರಾಜನು ವಿವಿಧ ಮಂಗಲದ್ರವ್ಯಗಳು ಹಾಗೂ ಧ್ವಜಮಾಲೆಗಳಿಂದ, ಹೂವುಗಳು ಮತ್ತು ಅರಳುಗಳಿಂದ ಸಂಪೂರ್ಣ ಅಯೋಧ್ಯೆಯನ್ನು ಅಲಂಕರಿಸಿದನು.

೩೮ ಸುವಾಸಿನಿಯರು ಮನೆಯ ಅಂಗಳವನ್ನು ಅಲಂಕರಿಸಿದರು. ಹಾಗೂ ಅಂಗಡಿಗಳನ್ನು, ರಾಜಬೀದಿಗಳನ್ನು ಅಲಂಕರಿಸಿದರು. ಅಯೋಧ್ಯೆಯನ್ನು ಶ್ರೇಷ್ಠಗಂಧಗಳಿಂದಲೂ, ಉತ್ತಮ ಧೂಪಗಳಿಂದಲೂ ಸುವಾಸಿತವನ್ನಾಗಿ ಮಾಡಿ ಆ ಸಭೆಯನ್ನು ಅಲಂಕರಿಸಿದರು.

೩೯ ಉತ್ತಮವಾದ ಗಂಧ-ಧೂಪಗಳಿಂದ, ಶ್ರೇಷ್ಠವಾದ ರತ್ನಗಳಿಂದ ಅಲಂಕೃತ ರತ್ನಕಂಬಗಳಿಂದ ವಿವಿಧ ರೀತಿಯ ಮಾಲೆಗಳಿಂದ ಅಲಂಕರಿಸಿದರು.

೪೦ ಅತ್ಯುತ್ತಮ ಹೊದಿಕೆಗಳಿಂದ ಯುಕ್ತವಾದ ದಿವ್ಯಾಸನಗಳಿಂದ ಕೂಡಿದ ಆ ಸಭೆಗೆ ರಾಜನು ಮಗಳ ಜತೆ ಪ್ರವೇಶ ಮಾಡಿದನು.

**ಸರ್ವಾಭರಣಸಂಪನ್ನಾಂ ಶ್ರೀರಿವಾಯತಲೋಚನಾಮ್ ।**
**ಕರಸಮ್ಮಿತಮಧ್ಯಾಂಗೀಂ ಪಂಚಸ್ನಿಗ್ಧಾಂ ಶುಭೋನ್ನಸಾಮ್ ॥೪೧॥**

**ತಸ್ಯಾಂ ಸಭಾಯಾಂ ತು ಪರಿಷ್ಕೃತಾಯಾಂ**
**ಸಿಂಹಾಸನೇಽಸ್ಥಾಪಯದುಜ್ವಲಾಂ ತಾಮ್ ।**
**ನ್ಯಸ್ತಾ ಸುತಾ ಮಾಲ್ಯವತೀ ಸಭಾಂ ವೈ**
**ತಾಮಾಯಯುಸ್ತೇ ನರರಾಜವರ್ಗಾಃ ॥೪೨॥**

**ಅಥಾಯಯೌ ಬ್ರಹ್ಮವರಾತ್ಮಜೋ ಹಿ**
**ತ್ರೈವಿದ್ಯವಿದ್ಯೋ ಭಗವಾನ್ ಮಹಾತ್ಮಾ ।**
**ಸಪರ್ವತೋ ಬ್ರಹ್ಮವಿದಾಂ ವರಿಷ್ಠೌ**
**ಮಹಾಮುನೀ ಪರ್ವತನಾರದೌ ತೌ ॥೪೩॥**

**ತಾವಾಗತೌ ಸಮೀಕ್ಷ್ಯಾಥ ರಾಜಾ ಸಂಭ್ರಾಂತಮಾನಸಃ ।**
**ದಿವ್ಯಮಾಸನಮಾದಾಯ ಪೂಜಯಾಮಾಸ ತಾವುಭೌ ॥೪೪॥**

**ಉಭೌ ದೇವರ್ಷಿವರ್ಯೌ ತಾವುಭೌ ಜ್ಞಾನವಿದಾಂ ವರೌ ।**
**ಸಮಾಸೀನೌ ಮಹಾತ್ಮಾನೌ ಕನ್ಯಾರ್ಥಂ ಮುನಿಸತ್ತಮೌ ॥೪೫॥**

---

೪೧ ಎಲ್ಲ ಆಭರಣಗಳಿಂದ ಯುಕ್ತಳಾದ ಲಕ್ಷ್ಮೀಯಂತೆ ವಿಶಾಲ ನೇತ್ರಗಳುಳ್ಳ, ಒಂದು ಹಿಡಿಯಷ್ಟು ತೆಳುವಾದ ಮಧ್ಯದೇಶವುಳ್ಳ, ಐದು ಅವಯವಗಳು ಸೂಕ್ಷ್ಮವಾಗಿರುವ ಹಾಗೂ ಶುಭವಾದ ನೀಳವಾದ ನಾಸಿಕಾಯುಕ್ತಳಾದ ಮಗಳೊಂದಿಗೆ ಸಭೆಯನ್ನು ಪ್ರವೇಶ ಮಾಡಿದರು.

**ವಿಶೇಷ :** ಪಂಚಸ್ನಿಗ್ಧಾಂ - ಚರ್ಮ, ಕೇಶ, ಬೆರಳುಗಳು, ಹಲ್ಲುಗಳು ಹಾಗೂ ಅಂಗುಲಿ ಪರ್ವಗಳು ಸೂಕ್ಷ್ಮವಾಗಿರಬೇಕು. ಇವು ದೈಹಿಕವಾದ ಲಕ್ಷಣಗಳಾಗಿವೆ.

೪೨ ವಿಸ್ತಾರವಾದ ಆ ಸಭೆಯಲ್ಲಿ ಮಾಲೆ ಹಿಡಿದ ಶ್ರೀಮತಿಯು ಪ್ರವೇಶಿಸಿ ಆಸನದಲ್ಲಿ ಕೂರುತ್ತಿದ್ದಂತೆ ಅವಳಿಗಾಗಿ ಅನೇಕ ರಾಜರುಗಳು ಅಲ್ಲಿಗೆ ಆಗಮಿಸಿದರು.

೪೩ ಅನಂತರ ಬ್ರಹ್ಮದೇವರ ತೊಡೆಯಿಂದ ಜನಿಸಿದ ಮಹಾತ್ಮರಾದ ನಾರದರು, ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರೆನಿಸಿದ ಪರ್ವತರು ಇವರೀರ್ವರು ಅಲ್ಲಿಗೆ ಆಗಮಿಸಿದರು.

೪೪ ಅಲ್ಲಿಗೆ ಆಗಮಿಸಿದ ಅವರೀರ್ವರನ್ನು ಕಂಡು ದಿಗ್ಭ್ರಾಂತನಾದ ರಾಜನು ಉತ್ತಮ ಆಸನಗಳ ಮೇಲೆ ಕೂರಿಸಿ ಅವರನ್ನು ಪೂಜಿಸಿದನು.

೪೫ ಅವರಿಬ್ಬರು ದೇವರ್ಷಿಗಳು ಜ್ಞಾನಿಶ್ರೇಷ್ಠರು. ಆ ಇಬ್ಬರು ಮಹಾತ್ಮರಾದ

**ತಾವುಭೌ ಪ್ರಣಿಪತ್ಯಾಗ್ರೇ ಕನ್ಯಾಂ ತಾಂ ಶ್ರೀಮತೀಂ ಶುಭಾಮ್ ।**
**ಸುತಾಂ ಕಮಲಪತ್ರಾಕ್ಷೀಂ ಪ್ರಾಹ ರಾಜಾ ಯಶಸ್ವಿನೀಮ್ ॥೪೬॥**

**ಅನಯೋರ್ಯಂ ವರಂ ಭದ್ರೇ ಮನಸಾ ತ್ವಮಿಹೇಚ್ಛಸಿ ।**
**ತಸ್ಮೈ ಮಾಲಾಮಿಮಾಂ ದೇಹಿ ಪ್ರಣಿಪತ್ಯ ಯಥಾವಿಧಿ ॥೪೭॥**

**ಏವಮುಕ್ತಾ ತು ಸಾ ಕನ್ಯಾ ಸ್ತ್ರೀಭಿಃ ಪರಿವೃತಾ ತದಾ ।**
**ಮಾಲಾಂ ಹಿರಣ್ಮಯೀಂ ದಿವ್ಯಾಮಾದಾಯ ಶುಭಲೋಚನಾ ॥೪೮॥**

**ಯತ್ರಾಸೀನೌ ಮಹಾತ್ಮಾನೌ ತತ್ರಾಗತ್ಯ ಸ್ಥಿತಾ ತದಾ ।**
**ವೀಕ್ಷ್ಯಮಾಣಾ ಮುನಿಶ್ರೇಷ್ಠೌ ನಾರದಂ ಪರ್ವತಂ ತಥಾ ॥೪೯॥**

**ಗೋಲಾಂಗೂಲಮುಖಂ ಕನ್ಯಾ ಕಿಂಚಿತ್ ತ್ರಾಸಸಮನ್ವಿತಾ ।**
**ಸಂಭ್ರಾಂತಮಾನಸಾ ತತ್ರ ಪ್ರವಾತೇ ಕದಲೀ ಯಥಾ ॥೫೦॥**

**ತ್ರಸ್ತಾಂ ತಾಮಬ್ರವೀದ್ರಾಜಾ ಪತಿಂ ತ್ವಂ ಕಂ ಕರಿಷ್ಯಸಿ ।**
**ಅನಯೋರೇಕಮುದ್ದಿಶ್ಯ ದೇಹಿ ಮಾಲಾಮಿಮಾಂ ಶುಭೇ ॥೫೧॥**

---

ಮುನಿಶ್ರೇಷ್ಠರು ಆ ಸಭೆಯಲ್ಲಿ ಕನ್ಯೆಗೋಸುಗ ಆಸೀನರಾದರು.

೪೬ ಅವರನ್ನು ಕೂರಿಸಿ ಎದುರಿಗೆ ಬಂದು ನಮಸ್ಕರಿಸಿ ರಾಜನು ಕಮಲಲೋಚನೆಯಾದ ಆ ಶ್ರೀಮತಿಗೆ ಹೇಳಿದನು.

೪೭ ಇವರೀರ್ವರಲ್ಲಿ ಯಾರನ್ನು ನೀನು ಮನಃಪೂರ್ವಕ ಬಯಸುವೆಯೋ ಅವರಿಗೆ ವಿಧಿಪೂರ್ವಕ ನಮಸ್ಕರಿಸಿ ಈ ಮಾಲೆಯನ್ನು ಅರ್ಪಿಸು.

೪೮ ತಂದೆಯು ಹೀಗೆ ನುಡಿಯಲು ಮಂಗಳದೃಷ್ಟಿಯುಳ್ಳ ಆ ಶ್ರೀಮತಿಯು ಸ್ತ್ರೀಯರಿಂದ ಸುತ್ತುವರೆಯಲ್ಪಟ್ಟವಳಾಗಿ ಸುವರ್ಣಮಾಲೆಯನ್ನು ಹಿಡಿದು ಬಂದಳು.

೪೯ ನಾರದರು ಹಾಗೂ ಪರ್ವತರು ಕುಳಿತ ಸ್ಥಳಕ್ಕೆ ಬಂದು ಆ ಮುನಿಶ್ರೇಷ್ಠರನ್ನು ವೀಕ್ಷಿಸಿದಳು.

೫೦ ವಾನರರಂತಿರುವ ಅವರ ಮುಖವನ್ನು ಕಂಡ ಶ್ರೀಮತಿಯು ಬಿರುಗಾಳಿಗೆ ಸಿಕ್ಕ ಬಾಳೆಯ ಗಿಡದಂತೆ ವಿಚಲಿತಳಾದಳು.

೫೧ ತ್ರಸ್ತಮನಸ್ಕಳಾದ ಅವಳಿಗೆ ರಾಜನು ಹೇಳಿದ. ನೀನು ಯಾರನ್ನು ಪತಿಯನ್ನಾಗಿ ಪಡೆಯಲು ಇಚ್ಛಿಸುವೆ? ಇವರೀರ್ವರಲ್ಲಿ ನೀನು ಇಚ್ಛಿಸುವ ಒಬ್ಬರಿಗೆ ಈ ಮಾಲೆಯನ್ನು ಕೊರಳಲ್ಲಿ ಹಾಕು.

**ಸಾ ಪ್ರಾಹ ಪಿತರಂ ತ್ರಸ್ತಾ ಇಮೌ ತು ನರವಾನರೌ ।**
**ಮುನಿಶ್ರೇಷ್ಠಂ ನ ಪಶ್ಯಾಮಿ ನಾರದಂ ಪರ್ವತಂ ತಥಾ ॥೫೨॥**

**ಅನಯೋರ್ಮಧ್ಯತಸ್ತ್ವೇಕಂ ಊನಷೋಡಶವಾರ್ಷಿಕಮ್ ।**
**ಸರ್ವಾಭರಣಸಂಪನ್ನಮತಸೀಪುಷ್ಪಸನ್ನಿಭಮ್ ॥೫೩॥**

**ದೀರ್ಘಬಾಹುಂ ವಿಶಾಲಾಕ್ಷಂ ತುಂಗೋರುಸ್ಥಲಮುತ್ತಮಮ್ ।**
**ನಮ್ರಚಾಪಾನುಕರಣಪಟುಭ್ರೂಯುಗಶೋಭಿತಮ್ ॥೫೪॥**

**ವಿಲಸತ್ತ್ರಿವಲೀಯುಕ್ತನಾಭಿವ್ಯಕ್ತಶುಭೋದರಮ್ ।**
**ಹಿರಣ್ಯಾಂಬರಸಂವೀತಂ ತುಂಗರಕ್ತನಖಂ ಶುಭಮ್ ॥೫೫॥**

**ಪದ್ಮಾಕಾರಕರದ್ವಂದ್ವಂ ಪದ್ಮಾಸ್ಯಂ ಪದ್ಮಲೋಚನಮ್ ।**
**ಪದ್ಮಾಸುಪದ್ಮಹೃದಯಂ ಪದ್ಮನಾಭಂ ಶ್ರಿಯಾವೃತಮ್ ॥೫೬॥**

**ಬಿಭ್ರತಂ ದಂತಪಂಕ್ತಿಂ ತಂ ಕುಂದಕುಡ್ಮಲಸನ್ನಿಭಮ್ ।**
**ಹಸಂತಂ ಮಾಂ ಸಮಾಲೋಕ್ಯ ದಕ್ಷಿಣಂ ಚ ಪ್ರಸಾರ್ಯ ವೈ ॥೫೭॥**

---

೫೨ ದುಃಖಿತಳಾದ ಅವಳು ತಂದೆಗೆ ಹೇಳಿದಳು. ಇವರಿಬ್ಬರು ಮನುಷ್ಯಶರೀರದ ಕೋತಿಯ ಮುಖದ ನರವಾನರರು. ಇಲ್ಲಿ ನಾರದರಾಗಲೀ ಪರ್ವತರಾಗಲೀ ಕಾಣಿಸುತ್ತಿಲ್ಲ.

೫೩ ಇವರೀರ್ವರ ಮಧ್ಯದಲ್ಲಿ ಓರ್ವ ಹದಿನೈದರ ಹರೆಯದವನಿದ್ದಾನೆ. ಆತ ಸರ್ವಾಭರಣಗಳಿಂದ ವಿಭೂಷಿತನಾಗಿದ್ದಾನೆ. ಅಗಸೆಯ ಹೂವಿನಂತೆ ನೀಲವರ್ಣದಿಂದ ಶೋಭಿಸುತ್ತಿದ್ದಾನೆ.

೫೪ ಉದ್ದನೆಯ ತೋಳುಗಳುಳ್ಳವನಾಗಿದ್ದಾನೆ. ಎತ್ತರವಾದ ಎದೆಯಿಂದ ಶೋಭಿತನಾಗಿದ್ದಾನೆ. ಬಾಗಿದ ಬಿಲ್ಲಿನಂತೆ ತೋರುವ ಹುಬ್ಬುಗಳಿಂದ ಕಂಗೊಳಿಸುತ್ತಿದ್ದಾನೆ.

೫೫ ಶೋಭಿಸುವ ತ್ರಿವಳಿಗಳಿಂದ ಕೂಡಿದ ಆಳವಾದ ನಾಭಿಯಿಂದ ವ್ಯಕ್ತವಾದ ತೆಳುವಾದ ಹೊಟ್ಟೆಯುಳ್ಳವನು. ಬಂಗಾರ ವರ್ಣದ ಬಟ್ಟೆಯನ್ನು ಧರಿಸಿದವನು. ಎತ್ತರವಾದ ಕೆಂಪಾದ ಶ್ರೇಷ್ಠ ಉಗುರುಗಳಿಂದ ಕೂಡಿದವನಾಗಿದ್ದಾನೆ.

೫೬ ಕಮಲದಂತಿರುವ ಕೈಗಳು, ಕಮಲಮುಖ, ನಲಿನನೇತ್ರ, ಪದ್ಮಿನಿಯಾದ ಸಿರಿಯಲ್ಲಿ ಮನವಿರಿಸಿದ, ಲಕ್ಷ್ಮಿಯಿಂದೊಡಗೂಡಿದ ಪದ್ಮನಾಭನಾಭನು ಕಾಣಿಸುತ್ತಿದ್ದಾನೆ.

೫೭ ಕಮಲದ ಮೊಗ್ಗಿನಂತಹ ಹಲ್ಲುಗಳಿಂದ ಶೋಭಿಸುತ್ತಿದ್ದಾನೆ. ನನ್ನೆಡೆಗೆ ಬಲಗೈ ಬೀಸಿ ನನ್ನನ್ನು ಕಂಡು ನಗುತ್ತಿದ್ದಾನೆ.

ಪಾಣಿಂ ಸ್ಥಿತಮಿಮಂ ಚಾತ್ರ ಪಶ್ಯಾಮಿ ಶುಭಮಂಜುಲಮ್ ।
ಏವಮುಕ್ತೋ ಮುನಿಃ ಪ್ರಾಹ ನಾರದೋ ಸಂಶಯಂ ಗತಃ ॥೫೮॥

ಕಿಯಂತೋ ಬಾಹವಸ್ತಸ್ಯ ಕನ್ಯೇ ಬ್ರೂಹಿ ಯಥಾತಥಮ್ ।
ಬಾಹುದ್ವಯಂ ಚ ಪಶ್ಯಾಮೀತ್ಯಾಹ ಕನ್ಯಾ ಸುವಿಸ್ಮಿತಾ ॥೫೯॥

ಪ್ರಾಹ ತಾಂ ಪರ್ವತಸ್ತತ್ರ ತಸ್ಯ ವಕ್ಷಃಸ್ಥಲೇ ಶುಭೇ ।
ಕಿಂ ಚ ಪಶ್ಯಸಿ ಮೇ ಬ್ರೂಹಿ ಕರೇ ಕಿಂ ಧಾರಯತ್ಯಸೌ ॥೬೦॥

ಕನ್ಯಾ ತಮಾಹ ಮಾಲಾಂ ವೈ ಪಂಚರೂಪಾಮನುತ್ತಮಾಮ್ ।
ವಕ್ಷಸ್ಥಲೇಽಸ್ಯ ಪಶ್ಯಾಮಿ ಕರೇ ಕಾರ್ಮುಕಸಾಯಕೌ ॥೬೧॥

ಏವಮುಕ್ತೌ ಮುನಿಶ್ರೇಷ್ಠೌ ಪರಸ್ಪರಮನುತ್ತಮೌ ।
ಇಯಂ ತು ಕಸ್ಯ ಮಾಯೇತಿ ತೌ ಸ್ಮ ಚಿಂತಯತೋ ಹೃದಾ ॥೬೨॥

ಮಾಯಯೈತತ್ಕೃತೋ ನೂನಂ ಸ್ವಯಮೇವ ಜನಾರ್ದನಃ ।
ಆಗತಸ್ತೋಽನ್ಯಥಾಕುರ್ಯಾದೇವಮಸ್ಮನ್ಮುಖಂ ಕಥಮ್ ॥೬೩॥

ತತೋ ರಾಜಾ ಪ್ರಣಮ್ಯಾಸೌ ನಾರದಂ ಪರ್ವತಂ ತಥಾ ।

---

೫೮ ಹೀಗೆ ಮನೋಹರನಾದವನು ಇವರ ಮಧ್ಯದಲ್ಲಿ ತೋರುತ್ತಿದ್ದಾನೆ. ಶ್ರೀಮತಿಯು ಹೀಗೆನ್ನಲು ಸಂಶಯಗೊಂಡ ನಾರದರು ಕೇಳಿದರು.

೫೯ ನಮ್ಮ ಮಧ್ಯೆ ತೋರುತ್ತಿರುವ ಅವನಿಗಿರುವ ಕೈಗಳೆಷ್ಟು? ಸತ್ಯ ಹೇಳೆನ್ನಲು ವಿಸ್ಮಿತಳಾದ ಶ್ರೀಮತಿಯು ಎರಡು ಕೈಗಳು ತೋರುತ್ತಿವೆ ಎಂದಳು.

೬೦ ಆಗ ಪರ್ವತರು ಅವಳನ್ನು ಕೇಳಿದರು. ಅವನ ಎದೆಯಲ್ಲೇನಿದೆ, ಅವನು ಕೈಗಳಲ್ಲಿ ಏನನ್ನು ಧರಿಸಿದ್ದಾನೆ ಹೇಳು ಎಂದರು.

೬೧ ಶ್ರೀಮತಿಯು ಹೇಳಿದಳು. ಅವನ ವಕ್ಷಸ್ಥಲದಲ್ಲಿ ಉತ್ತಮವಾದ ಪಂಚರೂಪದ ಮಾಲೆಯನ್ನು ಹಾಗೂ ಕೈಗಳಲ್ಲಿ ಬಿಲ್ಲು-ಬಾಣಗಳು ಕಾಣುತ್ತಿವೆ.

೬೨ ಶ್ರೀಮತಿಯು ಹೀಗೆ ನುಡಿಯಲು ಆ ಮುನಿಶ್ರೇಷ್ಠರು ಪರಸ್ಪರವಾಗಿ ಇದಾರ ಮಾಯೆಯೆಂದು ಮನದಲ್ಲಿ ಚಿಂತಿಸತೊಡಗಿದರು.

೬೩ ಸಾಕ್ಷಾತ್ ಜನಾರ್ದನನೇ ಇಲ್ಲಿ ಆಗಮಿಸಿದ್ದಾನೆ. ತನ್ನ ಮಾಯೆಯಿಂದ ಹೀಗೆ ಮಾಡಿರುವನು. ಇಲ್ಲವಾದರೆ ನಮ್ಮ ಮುಖಗಳು ವಾನರರಂತಾಗಲು ಹೇಗೆ ಸಾಧ್ಯ?

**ಭವದ್ಭ್ಯಾಂ ಕಿಮಿದಂ ತ್ವತ್ರ ಕೃತಂ ಬುದ್ಧಿವಿಮೋಹನಮ್ ॥೬೪॥**

**ಏವಮುಕ್ತೌ ಮುನಿಶ್ರೇಷ್ಠೌ ನೃಪಮೂಚತುರುಲ್ಬಣಮ್ ।**
**ತ್ವಮೇವ ಮೋಹಂ ಕುರುಷೇ ನಾವಾಮಿಹ ಕಥಂಚನ ।**
**ಆವಯೋರೇಕಮೇಷಾ ತೇ ವರಯತ್ವೇವ ಮಾ ಚಿರಮ್ ॥೬೫॥**

**ತತೋऽಸೌ ಕನ್ಯಕಾ ಭೂಯಃ ಪ್ರಣಿಪತ್ಯ ಜನಾರ್ದನಮ್ ।**
**ಮಾಲಾಮಾದಾಯ ತಿಷ್ಠಂತೀ ತಯೋರ್ಮಧ್ಯೇ ಸಮಾಹಿತಾ ।**
**ಪೂರ್ವವತ್ ಪುರುಷಂ ದೃಷ್ಟ್ವಾ ಸಸ್ವಜೇ ಚ ಪುನಃ ಪುನಃ ॥೬೬॥**

**ತತೋ ನಾದಃ ಸಮಭವತ್ಕಿಮೇತದಿತಿ ಸರ್ವತಃ ।**
**ತಾಮಾದಾಯ ಗತೋ ವಿಷ್ಣುಃ ಸ್ವಸ್ಥಾನಂ ಪುರುಷೋತ್ತಮಃ ॥೬೭॥**

**॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ ಸಪ್ತವಿಂಶೋऽಧ್ಯಾಯಃ ॥**

---

೬೪ ನಂತರ ರಾಜನು ಪರ್ವತ ನಾರದರಿಗೆ ನಮಸ್ಕರಿಸಿ ಹೇಳಿದನು. ನೀವಿಬ್ಬರು ಇದೇನು ಬುದ್ಧಿವಿಮೋಹನ ಮಾಡಿರುವಿರಿ?

೬೫ ಹೀಗೆ ಹೇಳಲು ಕುಪಿತರಾದ ಆ ಮುನಿಶ್ರೇಷ್ಠರು ಕೋಪದಿಂದ ನುಡಿದರು. ನೀನೇ ಮೋಹಗೊಳಿಸುತ್ತಿರುವೆ ನಾವುಗಳಲ್ಲ.

೬೬ ನಮ್ಮಿಬ್ಬರಲ್ಲಿ ಒಬ್ಬರನ್ನು ಶ್ರೀಮತಿಯು ಶೀಘ್ರದಲ್ಲೇ ವರಿಸಲೇ ಬೇಕೆಂದರು. ನಂತರ ಆ ಕನ್ಯೆಯು ಮತ್ತೆ ಜನಾರ್ದನನಿಗೆ ನಮಸ್ಕರಿಸಿ ಮಾಲೆಯನ್ನು ಹಿಡಿದು ಅವರೀರ್ವರ ಮಧ್ಯೆ ನಿಂತು ಮತ್ತೆ ಮೊದಲಿನಂತೆ ಆ ಪುರುಷನನ್ನು ನೋಡಿ ಅವನನ್ನೇ ವರಿಸಿದಳು. ಮತ್ತೆ ಮತ್ತೆ ಆಲಿಂಗಿಸಿಕೊಂಡಳು.

೬೭ ಆಗ ಎಲ್ಲೆಡೆ ಒಂದು ನಾದ ಕೇಳಿ ಬಂತು. ಪುರುಷೋತ್ತಮನಾದ ವಿಷ್ಣುವು ಶ್ರೀಮತಿಯನ್ನು ಕರೆದುಕೊಂಡು ತನ್ನ ಸ್ಥಾನವನ್ನು ಸೇರಿದನು.

**॥ ಇಲ್ಲಿಗೆ ಇಪ್ಪತ್ತೇಳನೇ ಅಧ್ಯಾಯವು ಮುಗಿಯಿತು ॥**

# ಅಥ ಅಷ್ಟಾವಿಂಶೋಽಧ್ಯಾಯಃ

**ಸೂತ ಉವಾಚ-**

**ಪುರಾ ತದರ್ಥಮನಿಶಂ ತಪಸ್ತಪ್ತ್ವಾ ವರಾಂಗನಾ ।**
**ಶ್ರೀಮತೀ ನಾಮ ಸೋತ್ಪನ್ನಾ ಸಂಗತಾ ಚ ತಥಾ ಹರಿಮ್ ॥೧॥**

**ತಾವುಭೌ ಮುನಿಶಾರ್ದೂಲೌ ಧಿಕ್ಕಾಮಿತ್ಯೇವ ದುಃಖಿತೌ ।**
**ವಾಸುದೇವಸ್ಯ ತು ತದಾ ಜಗ್ಮತುರ್ಭವನಂ ಹರೇಃ ॥೨॥**

**ತಾವಾಗತೌ ಸಮೀಕ್ಷ್ಯಾಹ ಶ್ರೀಮತೀಂ ಭಗವಾನ್ ಹರಿಃ ।**
**ಮುನಿಶ್ರೇಷ್ಠೌ ಸಮಾಯಾತೌ ಗೂಢಮಾತ್ಮಾನಮಾಕುರು ॥೩॥**

**ತಥೇತ್ಯುಕ್ತ್ವಾ ಚ ಸಾ ದೇವೀ ಪ್ರಹಸಂತೀ ಚಕಾರ ಹ ।**
**ನಾರದಃ ಪ್ರಣಿಪತ್ಯಾಗ್ರೇ ಜಗಾದ ಚ ತದಾ ಹರಿಮ್ ॥೪॥**

**ಅಪ್ರಿಯಂ ಕೃತವಾನದ್ಯ ಮಮ ತ್ವಂ ಪರ್ವತಸ್ಯ ಹಿ ।**
**ತ್ವಮೇವ ನೂನಂ ಗೋವಿಂದ ಕನ್ಯಾಮಾಹೃತವಾನಸಿ ॥೫॥**

**ಇತ್ಯುಕ್ತೋಽತಿರುಷೋ ವಿಷ್ಣುಃ ಪಿಧಾಯ ಶ್ರೋತ್ರಮಚ್ಯುತಃ ।**
**ಪಾಣಿಭ್ಯಾಂ ಪ್ರಾಹ ಭಗವಾನ್ ಭವದ್ಭ್ಯಾಂ ಕಿಮುದೀರಿತಮ್ ॥೬॥**

---

೧ ಹಿಂದೆ ಆ ಉತ್ತಮ ಸ್ತ್ರೀಯು ಭಗವಂತನನ್ನು ಪಡೆಯಲು ನಿರಂತರ ತಪವನ್ನಾಚರಿಸಿ ಶ್ರೀಮತಿ ಎಂಬ ಹೆಸರಿನಿಂದ ಅವತರಿಸಿ ಶ್ರೀಹರಿಯನ್ನು ಹೊಂದಿದಳು.

೨ ಅವರಿಬ್ಬರು ಮುನಿಶ್ರೇಷ್ಠರು ಅವಳನ್ನು ಧಿಕ್ಕರಿಸುತ್ತ ದುಃಖಿತರಾಗಿ ವಾಸುದೇವನ ಸದನಕ್ಕೆ ಹೊರಟರು.

೩ ತನ್ನೆಡೆಗೆ ಆಗಮಿಸುತ್ತಿದ್ದ ಅವರನ್ನು ಕಂಡು ಶ್ರೀಹರಿಯು ಶ್ರೀಮತಿಗೆ ಆ ಇಬ್ಬರು ಮುನಿಗಳು ಆಗಮಿಸುತ್ತಿದ್ದಾರೆ. ನೀನು ಅದೃಶ್ಯಳಾಗೆಂದು ಹೇಳಿದನು.

೪ ಹಾಗೇ ಆಗಲಿ ಎಂದು ನುಡಿದು ಆ ದೇವಿಯು ಅದೃಶ್ಯಳಾದಳು. ನಾರದರು ಹರಿಯ ಎದುರು ಬಂದು ನಮಸ್ಕರಿಸಿ ಹೀಗೆ ನುಡಿದರು.

೫ ನೀನಿಂದು ನನಗೆ ಮತ್ತು ಪರ್ವತರಿಗೂ ಕೂಡ ಅಪ್ರಿಯವನ್ನು ಮಾಡಿರುವೆ. ಗೋವಿಂದ! ನೀನೇ ಆ ಕನ್ಯೆಯನ್ನು ಕರೆ ತಂದಿರುವೆ.

೬ ಹೀಗೆನ್ನಲು ಅತಿ ಕುಪಿತನಾದ ವಿಷ್ಣುವು ತನ್ನೆರಡು ಕೈಗಳಿಂದ ಕಿವಿಗಳನ್ನು ಮುಚ್ಚಿಕೊಂಡು ನೀವಿದೇನನ್ನು ಹೇಳುತ್ತಿದ್ದೀರಿ? ಎಂದನು.

**ಕಥಂ ವಾಮಪಿ ಭಾವೋಽಯಂ ಮುನಿವೃತ್ತ್ಯೋರಹೋ ಕಿಲ ।**
**ಇತ್ಯುಕ್ತ್ವಾ ಶ್ರುಣ್ವತೋಸ್ತತ್ರ ಪ್ರಾಹ ದಾಮೋದರೋ ವಚಃ ॥೭॥**

**ಪ್ರಿಯಂ ಭವದ್ಭ್ಯಾಂ ಕೃತವಾನ್ ಸತ್ಯಮಾತ್ಮಾನಮಾಲಭೇ ।**
**ನಾರದಃ ಪ್ರಾಹ ಧರ್ಮಾತ್ಮಾ ಆವಯೋರ್ಮಧ್ಯತಃ ಸ್ಥಿತಃ ॥೮॥**

**ಧನುಷ್ಮಾನ್ ಪುರುಷಃ ಕೋಽಸೌ ತಾಂ ಗೃಹೀತ್ವಾ ಗತಃ ಕಿಲ ।**
**ತಚ್ಛ್ರುತ್ವಾ ವಾಸುದೇವೋಽಸೌ ಪ್ರಾಹ ತೌ ಮುನಿಸತ್ತಮೌ ॥೯॥**

**ಮಾಯಾವಿನೋ ಮಹಾತ್ಮಾನೋ ಬಹವಃ ಸಂತಿ ಸತ್ತಮೌ ।**
**ಚಕ್ರಪಾಣಿರಹಂ ನಿತ್ಯಂ ಚತುರ್ಬಾಹುರಿತಿ ಶ್ರುತಃ ॥೧೦॥**

**ತಾಂ ತಸ್ಮಾನ್ನಾಹರೇಯಂ ಹಿ ಭವದ್ಭ್ಯಾಂ ವಿದಿತಂ ಹಿ ತತ್ ।**
**ಇತ್ಯುಕ್ತೌ ಪ್ರಣಿಪತ್ಯೈನಮೂಚತುಃ ಪ್ರೀತಮಾನಸೌ ॥೧೧॥**

**ಕೋಽತ್ರ ದೋಷಸ್ತವ ವಿಭೋ ನಾರಾಯಣ ಜಗತ್ಪತೇ ।**
**ದೌರಾತ್ಮ್ಯಂ ತು ನೃಪಸ್ಯೈವ ಮಾಯಾಂ ಹಿ ಕೃತವಾನಸೌ ॥೧೨॥**

---

೭ ಮುನಿಗಳಾದ ತಮಗೆ ಈ ರೀತಿಯ ಭಾವನೆ ಹೇಗೆ ಬಂದಿತು? ಇದು ಆಶ್ಚರ್ಯವು. ಹೀಗೆಂದು ದಾಮೋದರನು ಅವರೀರ್ವರಿಗೆ ನುಡಿದನು.

೮ ನಾನು ನಿಮ್ಮಿಬ್ಬರಿಗೆ ಸತ್ಯವಾಗಿ ಪ್ರಿಯವನ್ನೇ ಮಾಡಿರುವೆನು. ಹೀಗೆನ್ನಲು ಧರ್ಮಾತ್ಮರಾದ ನಾರದರು ನುಡಿದರು. ನಮ್ಮಿಬ್ಬರ ಮಧ್ಯದಲ್ಲಿ ನಿಂತಿದ್ದ,

೯ ಆ ಶ್ರೀಮತಿಯನ್ನು ಕರೆದುಕೊಂಡು ಹೋದ ಧನುರ್ಧಾರಿ ಪುರುಷನಾರು? ಹೀಗೆನ್ನಲು ವಾಸುದೇವನು ಆ ಇಬ್ಬರು ಮುನಿಗಳಿಗೆ ಹೇಳಿದನು.

೧೦ ಹೇ ಋಷಿಶ್ರೇಷ್ಠರೇ! ಮಾಯಾವಿಗಳೂ, ಮಹಾತ್ಮರೂ, ಅನೇಕ ಜನರಿದ್ದಾರೆ. ನಾನು ಯಾವಾಗಲೂ ನಾಲ್ಕು ಕೈಗಳುಳ್ಳವನು. ಚಕ್ರವನ್ನು ಧರಿಸಿದವನು ಎಂದೇ ಹೇಳಲ್ಪಟ್ಟಿದೆ.

೧೧ ಆದುದರಿಂದ ನಾನವಳನ್ನು ಅಪಹರಿಸಿಲ್ಲ. ನಿಮಗಿದು ತಿಳಿದೇ ಇದೆ. ಹೀಗೆನ್ನಲು ಪ್ರೀತರಾದ ಆ ಇಬ್ಬರು ಮುನಿಗಳು ಅವನಿಗೆ ನಮಸ್ಕರಿಸಿ ನುಡಿದರು.

೧೨ ಜಗತ್ಪತಿಯಾದ ನಾರಾಯಣನೇ! ಇದರಲ್ಲಿ ನಿನ್ನದೇನು ದೋಷ? ದೋಷವೆಲ್ಲ ಆ ದುರಾತ್ಮನಾದ ರಾಜನದು. ಅವನು ನಮಗೆ ಮಾಯೆಯನ್ನೇ ಮಾಡಿರುವನು.

**ಇತ್ಯುಕ್ತ್ವಾ ಜಗ್ಮತುಸ್ತಸ್ಮಾತ್ ಮುನೀ ನಾರದಪರ್ವತೌ ।**
**ಅಂಬರೀಷಂ ಸಮಾಸಾದ್ಯ ಶೇಪತುಸ್ತಮುಭೌ ದ್ವಿಜೌ ॥೧೩॥**

**ನಾರದಃ ಪರ್ವತಶ್ಚೈವ ಯಸ್ಮಾದಾವಾಮಿಹಾಗತೌ ।**
**ಆಹೂಯ ಪಶ್ಚಾದನ್ಯಸ್ಮೈ ಕನ್ಯಾಂ ತ್ವಂ ದತ್ತವಾನಸಿ ॥೧೪॥**

**ಮಾಯಾಯೋಗೇನ ತಸ್ಮಾತ್ತ್ವಾಂ ತಮೋ ಹ್ಯಂಧೀಭವಿಷ್ಯತಿ ।**
**ತೇನ ತ್ವಮಾತ್ಮನೋಽತ್ಯರ್ಥಂ ತತ್ತ್ವಂ ರೂಪಂ ನ ವೇತ್ಸ್ಯಸಿ ॥೧೫॥**

**ವಿಸಸರ್ಜ ನೃಪಶ್ಚಕ್ರಂ ಶಾಪಂ ಶ್ರುತ್ವಾ ದ್ವಿಜೇರಿತಮ್ ।**
**ಚಕ್ರಂ ವಿಸರ್ಜಿತಂ ಘೋರಂ ತಾವುಭೌ ಪೃಷ್ಠತೋಽನ್ವಗಾತ್ ॥೧೬॥**

**ತತಃ ಸಂತ್ರಸ್ತಸರ್ವಾಂಗೌ ಧಾವಮಾನೌ ಮಹಾತ್ಮನೌ ।**
**ಪುರಸ್ತಾತ್ ಚಕ್ರಮಾಲೋಕ್ಯ ತಮೋನಾಶಂ ದುರಾಸದಮ್ ॥೧೭॥**

**ಲೋಕಾಲೋಕಾಂತಮನಿಶಂ ಧಾವಮಾನೌ ಭಯಾರ್ದಿತೌ ।**

---

೧೩ ಹೀಗೆ ನುಡಿದು ನಾರದ-ಪರ್ವತರು ಅಲ್ಲಿಂದ ಹೊರಟರು. ಅಂಬರೀಷನಿದ್ದಲ್ಲಿಗೆ ಬಂದು ಅವನಿಗೆ ಶಾಪ ನೀಡಿದರು.

೧೪ ನಾವಿಬ್ಬರೂ ಕನ್ಯಾಪೇಕ್ಷೆಯಿಂದ ಇಲ್ಲಿಗೆ ಬಂದೆವು. ಕನ್ಯೆಯನ್ನು ನೀಡುವೆನೆಂದು ನಮ್ಮಿಬ್ಬರನ್ನು ಆಹ್ವಾನಿಸಿ ನಂತರ ಬೇರೊಬ್ಬರಿಗೆ ಕನ್ಯೆಯನ್ನು ನೀಡಿರುವೆ.

೧೫ ನೀನು ಮಾಯೆಯಿಂದ ನಮ್ಮನ್ನು ಮೋಸಗೊಳಿಸಿರುವಿ. ಆದ್ದರಿಂದ ನಿನ್ನನ್ನು ಅಜ್ಞಾನವು ಆವರಿಸುತ್ತದೆ. ಆದ್ದರಿಂದ ನೀನು ಪರಮಾತ್ಮತತ್ವವನ್ನು ಚೆನ್ನಾಗಿ ಅರಿಯಲಾರೆ.

೧೬ ಶಾಪದಿಂದ ಕ್ರುದ್ಧನಾದ ಅಂಬರೀಷನು ಸುದರ್ಶನಚಕ್ರವನ್ನು ಅವರ ಮೇಲೆ ಪ್ರಯೋಗಿಸಿದನು. ಹಾಗೆ ಪ್ರಯುಕ್ತವಾದ ಘೋರವಾದ ಸುದರ್ಶನಚಕ್ರವು ಅವರೀರ್ವರನ್ನು ಬೆನ್ನಟ್ಟಿತು.

೧೭ ನಂತರ ಚಕ್ರಪ್ರಭಾವದಿಂದ ನಾರದ-ಪರ್ವತರೀರ್ವರಿಗೆ ತ್ರಾಸವಾಯಿತು. ಆದರಿಂದ ಸಂರಕ್ಷಿಸಿಕೊಳ್ಳಲು ಓಡತೊಡಗಿದರು. ಘನವಾದ ಕತ್ತಲನ್ನೂ ನಾಶಪಡಿಸಲು ಸಮರ್ಥವಾಗಿತ್ತು ಆ ಚಕ್ರ. ಅಂಥ ಚಕ್ರವನ್ನು ನೋಡಿ ಕಂಗಾಲಾದರು.

ಇಲ್ಲಿ ''ಮಹಾತ್ಮಾನೌ'' ಎಂದು ಆಗಬೇಕು. ಆದರೂ ಇದು ಪುರಾಣ ಆದ್ದರಿಂದ ಮಹಾತ್ಮನೌ ಎಂದಾಗಿದೆ ಎಂದು ತಿಳಿಯಬಹುದು.

**ತ್ರಾಹಿ ತ್ರಾಹೀತಿ ಗೋವಿಂದ ಭಾಷಮಾಣೌ ಭಯಾರ್ದಿತೌ ॥೧೮॥**

**ವಿಷ್ಣುಲೋಕಂ ತತೋ ಗತ್ವಾ ನಾರಾಯಣ ಜಗತ್ಪತೇ ।**
**ವಾಸುದೇವ ಹೃಷೀಕೇಶ ಪದ್ಮನಾಭ ಜನಾರ್ದನ ।**
**ತ್ರಾಹ್ಯಾವಾಂ ಪುಂಡರೀಕಾಕ್ಷ ನಾಥೋಽಸಿ ಪುರುಷೋತ್ತಮ ॥೧೯॥**

**ತತೋ ನಾರಾಯಣೋಽಚಿಂತ್ಯಃ ಶ್ರೀಮಾನ್ ಶ್ರೀವತ್ಸಲಾಂಛನಃ ।**
**ನಿವಾರ್ಯ ಚಕ್ರಮುದ್ಧೂತಂ ಭಕ್ತಾನುಗ್ರಹಕಾಮ್ಯಯಾ ॥೨೦॥**

**ಅಂಬರೀಷಶ್ಚ ಮದ್ಭಕ್ತಸ್ತಥೈವ ಮುನಿಪುಂಗವೌ ।**
**ಅನಯೋರಸ್ಯ ಚ ತಥಾ ಹಿತಂ ಕಾರ್ಯಂ ಮಯಾಽಧುನಾ ॥೨೧॥**

**ಆಹೂತಸ್ತತ್ತತಃ ಶ್ರೀಮಾನ್ ಪ್ರಶ್ರಯಾತ್ ಪ್ರಹಸನ್ ಹರಿಃ ।**
**ಪ್ರೋವಾಚ ವಚನಂ ವಿಷ್ಣುಃ ಶೃಣು ತ್ವಂ ಚಕ್ರ ಮೇ ವಚಃ ॥೨೨॥**

**ಋಷಿಶಾಪೋ ನ ಚೈವಸ್ಯಾದನ್ಯಥಾ ಚ ವರೋ ಮಯಾ ।**
**ದತ್ತೋ ನೃಪಾಯ ರಕ್ಷಾರ್ಥಂ ನಾಸ್ತಿ ತಸ್ಯಾನ್ಯಥಾ ಪುನಃ ॥೨೩॥**

---

೧೮ ಗೋವಿಂದನೇ! ನಮ್ಮನ್ನು ರಕ್ಷಿಸು, ಕಾಪಾಡು ಎಂದು ಕೂಗಿದರು. ಲೋಕಾಲೋಕ ಪರ್ವತದ ವರೆಗೆ ಓಡಿದರು.

೧೯ ನಂತರ ವಿಷ್ಣುಲೋಕಕ್ಕೆ ಹೋದರು. ನಾರಾಯಣ, ವಾಸುದೇವ, ಜಗತ್ಪತೇ, ಪದ್ಮನಾಭ, ಜನಾರ್ದನ ಎಂದು ಸ್ತುತಿಸಿದರು. ಪುರುಷಶ್ರೇಷ್ಠ, ಕಮಲನಯನ, ಲಕ್ಷ್ಮೀಪತೇ, ನೀನೇ ನಮಗೆಲ್ಲ ಒಡೆಯನಾಗಿರುವೆ. ನಮ್ಮನ್ನು ರಕ್ಷಿಸು ಎಂದು ಪ್ರಾರ್ಥಿಸಿದರು.

೨೦ ಆಗ ಶ್ರೀವತ್ಸಾಂಕಿತನಾದ ಅಚಿಂತ್ಯನಾದ ನಾರಾಯಣನು ಭಕ್ತಾನುಗ್ರಹ, ಕಾಮನೆಯಿಂದ ಅವರನ್ನು ಬೆನ್ನಟ್ಟಿದ ಚಕ್ರವನ್ನು ನಿವಾರಿಸಿದನು.

೨೧ ಅಂಬರೀಷನು ನನ್ನ ಭಕ್ತನು. ಹಾಗೆಯೇ ಇವರಿಬ್ಬರು ಮುನಿಗಳು ಸಹ ನನ್ನ ಭಕ್ತರು. ಈ ಇಬ್ಬರು ಋಷಿಗಳಿಗೆ ಹಾಗೂ ಅಂಬರೀಷನಿಗೆ ನಾನು ಹಿತವನ್ನುಂಟು ಮಾಡಬೇಕೆಂದು ಯೋಚಿಸಿದನು.

೨೨ ನಾರದ-ಪರ್ವತರು ವಿನಯದಿಂದ ಪರಮಾತ್ಮನಿಗೆ ಶರಣು ಹೋದರು. ಹರಿಯು ನಗುತ್ತ ಹೇಳಿದನು. ಚಕ್ರವೇ! ನೀನು ನನ್ನ ಮಾತನ್ನಾಲಿಸು.

೨೩ ಋಷಿಶಾಪವು ವ್ಯರ್ಥವಾಗಕೂಡದು. ನನ್ನ ವರವೂ ಸುಳ್ಳಾಗಕೂಡದು. ರಾಜನ ರಕ್ಷಣೆಗೆ ನಾನು ನೀಡಿದ ವರವನ್ನು ಬದಲಿಸಲಾಗದು.

ಅಂಬರೀಷಸ್ಯ ಪೌತ್ರಸ್ಯ ನಪ್ತೃಪುತ್ರೋ ಮಹಾಯಶಾಃ ।
ಶ್ರೀಮಾನ್ ದಶರಥೋ ನಾಮ ಭವಿತಾ ಧಾರ್ಮಿಕೋ ನೃಪಃ ॥೨೪॥

ತಸ್ಯಾಹಮಗ್ರಜಃ ಪುತ್ರೋ ಭವಿತಾಸ್ಮೀತ್ಯಹಂ ಪುನಃ ।
ತತ್ರ ಮೇ ದಕ್ಷಿಣೋ ಬಾಹುರ್ಭರತಸ್ತು ಭವಿಷ್ಯತಿ ।
ಶತ್ರುಘ್ನೋ ನಾಮ ಸವ್ಯಶ್ಚ ಶೇಷೋಽಸೌ ಲಕ್ಷ್ಮಣಃ ಸ್ಮೃತಃ ॥೨೫॥

ತತ್ರ ಮಾಂ ಸಮುಪಾಗಚ್ಛ ಗಚ್ಛೇದಾನೀಂ ನೃಪಂ ಪುನಃ ।
ಮುನಿಶ್ರೇಷ್ಠೌ ಚ ಹಿತ್ವಾ ತ್ವಮಿತಿ ಸ್ಮಾಹ ಚ ಮಾಧವಃ ॥೨೬॥

ಏವಮುಕ್ತಸ್ತತೋ ನಾಶಂ ತತ್‌ಕ್ಷಣಾಚ್ಚ ಜಗಾಮ ವೈ ।
ನಿವಾರಿತಂ ಹರೇಶ್ಚಕ್ರಂ ಯಥಾಪೂರ್ವಮತಿಷ್ಠತ ॥೨೭॥

---

೨೪ ಅಂಬರೀಷನ ಮೊಮ್ಮಗನ ಮರಿಮಗನಿಗೆ ಪುತ್ರನಾಗಿ ಕೀರ್ತಿವಂತನಾದ ಧಾರ್ಮಿಕನಾದ ದಶರಥನೆಂಬ ರಾಜನು ಆಗುವನು.

೨೫ ನಾನು ಶ್ರೀರಾಮಚಂದ್ರನೆಂಬ ಹೆಸರಿನಿಂದ ಅವನ ಹಿರಿಯ ಪುತ್ರನಾಗಿ ಜನಿಸುವೆನು. ಆಗ ನನ್ನ ಬಲಬಾಹುವಾಗಿ ಭರತನು, ಎಡಕೈಯಾಗಿ ಶತ್ರುಘ್ನನು ಹಾಗೂ ಶೇಷನು ಲಕ್ಷ್ಮಣನಾಗಿ ಜನಿಸುವನು.

**ವಿಶೇಷ :** ಬಲಗೈಯೆಂದರೆ ಬಲಗೈಯಲ್ಲಿ ಹಿಡಿದಿರುವ ಚಕ್ರಕ್ಕೆ ಅಭಿಮಾನಿಯಾದ ಭರತ, ಎಡಗೈ ಎಂದರೆ ಎಡಗೈಯಲ್ಲಿ ಹಿಡಿದಿರುವ ಶಂಖಕ್ಕೆ ಅಭಿಮಾನಿಯಾದ ಶತ್ರುಘ್ನ ಎಂದರ್ಥ. ಶೇಷನೆಂದರೆ ಲಕ್ಷ್ಮಣ ಎಂದು ತಿಳಿಯಬೇಕು.

ಸಾಕ್ಷಾಚ್ಚಕ್ರತನುಸ್ತಥೈವ ಭರತಶ್ಚಕ್ರಂ ದಧದ್ದಕ್ಷಿಣೇ-
ನಾಯಾತ್ ಸವ್ಯತ ಏವ ಶಂಖವರಭೃಚ್ಛಂಖಾತ್ಮಕಃ ಶತ್ರುಹಾ ॥ಮ.ತಾ.ನಿ. ೯-೯೦

ತಾವೇವ ಜಾತೌ ಭರತಶ್ಚ ನಾಮ್ನಾ
ಶತ್ರುಘ್ನ ಇತ್ಯೇವ ಚ ರಾಮತೋಽನು ।
ಪೂರ್ವಂ ಸುಮಿತ್ರಾತನಯಶ್ಚ ಶೇಷಃ
ಸಲಕ್ಷ್ಮಣೋ ನಾಮ ರಘೂತ್ತಮಾದನು ॥ ಮ.ತಾ.ನಿ. ೩-೭೬

೨೬ ಆಗ ನೀನು ನನ್ನನ್ನು ಕುರಿತು ಬಾ. ಈಗ ಮತ್ತೆ ಅಂಬರೀಷನಲ್ಲಿಗೆ ಹೋಗು. ಈ ಇಬ್ಬರು ಮುನಿಶ್ರೇಷ್ಠರನ್ನು ಬಿಟ್ಟು ಬಿಡು. ಎಂದು ಶ್ರೀಹರಿಯು ನುಡಿದನು.

೨೭ ದೇವದೇವನು ಹೀಗೆ ನುಡಿಯಲು ಋಷಿಗಳನ್ನು ಬಿಟ್ಟು ಚಕ್ರವು ಕಾಣೆಯಾಗಿ ಮೊದಲಿನಂತೆ ರಾಜನ ಬಳಿಗೆ ಸೇರಿತು.

**ಮುನಿಶ್ರೇಷ್ಠೌ ಭಯಾನ್ಮುಕ್ತೌ ಪ್ರಣಿಪತ್ಯ ಜನಾರ್ದನಮ್ ।**
**ನಿಗರ್ವೌ ಶೋಕಸಂತಪ್ತಾವೂಚತುಸ್ತೌ ಪರಸ್ಪರಮ್ ॥೨೮॥**

**ಅದ್ಯ ಪ್ರಭೃತಿ ದೇಹಾಂತಮಾವಾಂ ಕನ್ಯಾಪರಿಗ್ರಹಮ್ ।**
**ನ ಕರಿಷ್ಯಾವ ಇತ್ಯುಕ್ತ್ವಾ ಪ್ರತಿಜ್ಞಾಯ ಚ ತಾವೃಷೀ ॥೨೯॥**

**ಯೋಗಧ್ಯಾನಪರೌ ಶುದ್ಧೌ ಯಥಾಪೂರ್ವಂ ವ್ಯವಸ್ಥಿತೌ ।**
**ಮಾನಾರ್ಥಮಂಬರೀಷಸ್ಯ ತಥೈವ ಮುನಿಸಿಂಹಯೋಃ ।**
**ರಾಮೋ ದಾಶರಥಿರ್ಭೂತ್ವಾ ಹ್ಯಾತ್ಮವೇದಿವಶೋಽಭವನ್ ॥೩೦॥**

**ನಾರದಃ ಪರ್ವತಶ್ಚೈವ ಚಿರಂ ಜ್ಞಾತ್ವಾ ವಿಚೇಷ್ಟಿತಮ್ ।**
**ಮಾಯಾಂ ವಿಷ್ಣೋಶ್ಚ ವಿಜ್ಞಾಯ ವಿಷ್ಣುಭಕ್ತೌ ಬಭೂವತುಃ ॥೩೧॥**

**ಅಂಬರೀಷೋ ಮಹಾರಾಜೋ ವಿಷ್ಣುಭಕ್ತೋ ಜಿತೇಂದ್ರಿಯಃ ।**
**ಸರ್ವಧರ್ಮಪರಿಷ್ವಕ್ತೋ ಹರಿಭಕ್ತಿಂ ಚಕಾರ ಸಃ ॥೩೨॥**

**ಏಕಾದಶೀಮುಪೋಷ್ಯೈವ ದ್ವಾದಶೀಪಾರಣೋತ್ಸುಕಃ ।**
**ಬಭೂವ ತತ್ರ ದುರ್ವಾಸಾ ಭೋಜನಾರ್ಥಂ ಸಮಾಗತಃ ॥೩೩॥**

---

೨೮ ಚಕ್ರದ ಭಯದಿಂದ ಮುಕ್ತರಾದ ಆ ಋಷಿಶ್ರೇಷ್ಠರು ಜನಾರ್ದನನಿಗೆ ನಮಸ್ಕರಿಸಿ ಗರ್ವರಹಿತರಾಗಿ ಶೋಕಸಂತಪ್ತರಾಗಿ ಪರಸ್ಪರ ನುಡಿದರು.

೨೯ ಇಂದಿನಿಂದ ಆರಂಭಿಸಿ ನಮ್ಮ ಕೊನೆ ಕಾಲದವರೆಗೂ ಯಾವುದೇ ಕನ್ಯೆಯನ್ನು ಪರಿಗ್ರಹ ಮಾಡುವುದಿಲ್ಲ ಎಂದು ಆ ಇಬ್ಬರು ಋಷಿಗಳು ಪ್ರತಿಜ್ಞೆ ಮಾಡಿದರು.

೩೦ ಮತ್ತು ಮೊದಲಿನಂತೆ ಶುದ್ಧಮನದಿಂದ ಯೋಗಧ್ಯಾನಗಳಲ್ಲಿ ನಿರತರಾದರು. ಅಂಬರೀಷನ ಹಾಗೂ ಆ ಈರ್ವರು ಮುನಿಗಳ ಗೌರವರಕ್ಷಣೆಗಾಗಿ ಶ್ರೀಹರಿಯು ದಶರಥನ ಮಗನಾಗಿ ರಾಮನಾಮಕನಾಗಿ ಅವತರಿಸಿದನು. ಆತ್ಮಜ್ಞಾನಿಗಳ ವಶನೆನಿಸಿದನು.

೩೧ ನಾರದರು ಹಾಗೂ ಪರ್ವತ ಋಷಿಗಳು ನಡೆದುದೆಲ್ಲವನ್ನು ತಿಳಿದು ಅದೆಲ್ಲ ವಿಷ್ಣುವಿನ ಮಾಯೆಯೆಂದರಿತು ಮತ್ತಷ್ಟು ವಿಷ್ಣುಭಕ್ತರಾದರು.

೩೨ ವಿಷ್ಣುಭಕ್ತನೂ ಜಿತೇಂದ್ರಿಯನೂ ಆದ ಅಂಬರೀಷ ಮಹಾರಾಜನು ಸ್ವೋಚಿತ ಎಲ್ಲ ಧರ್ಮಗಳಿಂದ ಯುಕ್ತನಾಗಿ ಹರಿಭಕ್ತಿ ಮಾಡುತ್ತಿದ್ದನು.

೩೩ ಹೀಗೊಮ್ಮೆ ಏಕಾದಶೀ ಉಪವಾಸ ಮಾಡಿ ದ್ವಾದಶೀ ಪಾರಣೆಯನ್ನಾಚರಿಸಲು ಉತ್ಸುಕನಾಗಿದ್ದಾಗ, ಅಲ್ಲಿಗೆ ದೂರ್ವಾಸರು ಭೋಜನಕ್ಕಾಗಿ ಆಗಮಿಸಿದರು.

**ತಂ ದೃಷ್ಟ್ವಾಽಸೌ ಮಹಾರಾಜಃ ಸಾಷ್ಟಾಂಗಂ ಪ್ರಣಿಪತ್ಯ ಚ ।**
**ಉವಾಚ ಮಧುರಂ ವಾಕ್ಯಂ ನೃಪೋ ದುರ್ವಾಸಸಂ ತದಾ ॥೩೪॥**

**ಸ್ವಲ್ಪಾ ಚ ದ್ವಾದಶೀ ಬ್ರಹ್ಮನ್ ಸಾಧನೀ ತ್ವದ್ಯ ವರ್ತತೇ ।**
**ತಸ್ಮಾತ್ ಸ್ನಾನಾದಿಕಂ ಕರ್ಮ ಸಂಕೋಚ್ಯಾಗಚ್ಛ ಸತ್ವರಮ್ ॥೩೫॥**

**ನೃಪಸ್ಯ ವಚನಂ ಶ್ರುತ್ವಾ ಸ್ನಾನಾರ್ಥಂ ಚ ನದೀಂ ಗತಃ ।**
**ಸಾವಕಾಶಾಸ್ತಥಾ ಚಕ್ರೇ ಸ್ನಾನಸಂಧ್ಯಾದಿಕಾಃ ಕ್ರಿಯಾಃ ॥೩೬॥**

**ಅಂಬರೀಷೋ ಮಹಾರಾಜೋ ಹ್ಯದೃಷ್ಟ್ವಾಽನಾಗತಂ ಮುನಿಮ್ ।**
**ದ್ವಾದಶೀಪಾರಣಾರ್ಥಂ ವೈ ತೀರ್ಥಪಾರಣಮಾಚರತ್ ॥೩೭॥**

**ದೃಷ್ಟ್ವಾ ಚ ಮುನಿಕೋಪಂ ಸ ಶಾಪದಾನಾಯ ವೈ ತದಾ ।**
**ಚಕ್ರಂ ತು ಪ್ರೇಷಯಾಮಾಸ ರಾಜಾ ದುರ್ವಾಸಸೇ ಮಹತ್ ॥೩೮॥**

**ದುರ್ವಾಸಾಃ ತ್ರಾಸಿತಶ್ಚಕ್ರಾತ್ತಂ ವಿಷ್ಣುಂ ಶರಣಂ ಯಯೌ ।**
**ವಿಷ್ಣುಃ ಪ್ರೋವಾಚ ತಂ ವಿಪ್ರಂ ಗಚ್ಛೇದಾನೀಂ ನೃಪಂ ಪುನಃ ॥೩೯॥**

---

೩೪ ಅವರನ್ನು ನೋಡಿ ಮಹಾರಾಜನು ಸಾಷ್ಟಾಂಗ ನಮಸ್ಕರಿಸಿ ಮೃದು ಮಾತುಗಳಿಂದ ದುರ್ವಾಸರನ್ನು ಇಂತು ವಿಜ್ಞಾಪಿಸಿದ.

೩೫ ಬ್ರಾಹ್ಮಣಶ್ರೇಷ್ಠರೇ! ಇಂದು ಸಾಧನೀದ್ವಾದಶೀ. ಇನ್ನು ದ್ವಾದಶಿಯು ಸ್ವಲ್ಪವೇ ಉಳಿದಿದೆ. ಆದುದರಿಂದ ಸ್ನಾನಾದಿ ಕರ್ಮಗಳನ್ನು ಸಂಕೋಚ ಮಾಡಿ ಮುಗಿಸಿ ಬೇಗ ಆಗಮಿಸಿರಿ.

೩೬ ಹೀಗೆಂದ ಆ ರಾಜನ ಮಾತುಗಳನ್ನು ಕೇಳಿ ಸ್ನಾನಕ್ಕಾಗಿ ನದಿಗೆ ತೆರಳಿದರು. ಸ್ನಾನ ಸಂಧ್ಯಾದಿ ಸಮಸ್ತ ಕರ್ಮಗಳನ್ನು ನಿಧಾನವಾಗಿ ಮಾಡತೊಡಗಿದರು.

೩೭ ಮಹಾರಾಜನಾದ ಅಂಬರೀಷನು ದೂರ್ವಾಸರು ಬಾರದಿರುವುದನ್ನು ಕಂಡು ದ್ವಾದಶೀ ಪಾರಣೆಯನ್ನಾಚರಿಸಲು ತೀರ್ಥವನ್ನು ಸ್ವೀಕರಿಸಿ ಪಾರಣ ಮಾಡಿದನು.

೩೮ ಶಾಪವನ್ನು ಕೊಡಲು ಉದ್ಯುಕ್ತರಾದ ದುರ್ವಾಸರ ಕೋಪವನ್ನು ಕಂಡು ರಾಜನು ಚಕ್ರವನ್ನು ಕಳಿಸಿದನು.

೩೯ ಚಕ್ರದಿಂದ ತ್ರಸ್ತರಾದ ದುರ್ವಾಸರು ವಿಷ್ಣುವಿನ ಶರಣು ಹೋದರು. ವಿಷ್ಣುವು ಮತ್ತೆ ಆ ರಾಜನನ್ನೇ ಶರಣು ಹೋಗುವಂತೆ ದೂರ್ವಾಸರಿಗೆ ಹೇಳಿದನು.

**ತತಸ್ತ್ವಾಗತ್ಯ ದುರ್ವಾಸಾ ರಾಜಾನಂ ಶರಣಂ ತದಾ ।**
**ನಿವಾರಿತಂ ಹರೇಶ್ಚಕ್ರಂ ಯಥಾಪೂರ್ವಮತಿಷ್ಠತ ॥೪೦॥**

**ಏವಂ ವೈ ಬಹವೋ ವಿಘ್ನಾ ರಾಜಾನಂ ತು ಬಬಾಧಿರೇ ।**
**ತಸ್ಮಾತ್ತದ್ರಕ್ಷಣಾರ್ಥಂ ವೈ ಸದಾಽತಿಷ್ಠತ್ಸುದರ್ಶನಃ ॥೪೧॥**

**ಅಂಬರೀಷೋ ಮಹಾತೇಜಾ ವಿಷ್ಣುಭಕ್ತೋ ದೃಢವ್ರತಃ ।**
**ದೇವಬ್ರಾಹ್ಮಣಪೂಜಾವಾನ್ ಸರ್ವದಾನೈಕತತ್ಪರಃ ।**
**ಏವಂ ಬಹುವಿಧಾನ್ ಧರ್ಮಾನಕರೋಚ್ಚ ದಿನೇ ದಿನೇ ॥೪೨॥**

**ಹೇಮಂತೇ ಚ ಧನುರ್ಮಾಸೇ ಮಾರ್ಗಶೀರ್ಷೇ ವಿಶೇಷತಃ ।**
**ಅಕರೋತ್ ಶ್ರದ್ಧಯಾ ಭಕ್ತ್ಯಾ ಹ್ಯುಷಃಕಾಲೇ ಚ ಪೂಜನಮ್ ॥೪೩॥**

**ಹರಿಪೂಜಾಂ ವಿಶೇಷೇಣ ಮುದ್ಗಾನ್ನಂ ಚ ಸಮರ್ಪಯತ್ ।**
**ಏವಂ ಸ್ಮ ಕುರುತೇ ನಿತ್ಯಂ ಮಾಸಮೇಕಂ ನಿರಂತರಮ್ ॥೪೪॥**

**ಬ್ರಾಹ್ಮಣಾನ್ ಭೋಜಯನ್ನಿತ್ಯಂ ವಸ್ತ್ರಾಲಂಕಾರಭೂಷಣೈಃ ।**
**ತೇನ ಪುಣ್ಯಪ್ರಭಾವೇನ ವಿಷ್ಣುಲೋಕಂ ಜಗಾಮ ವೈ ॥೪೫॥**

---

೪೦ ದೂರ್ವಾಸರು ಮತ್ತೆ ತಿರುಗಿ ಬಂದು ಅಂಬರೀಷನನ್ನು ಶರಣು ಹೋದರು. ಅಂಬರೀಷನಿಂದ ನಿವಾರಿತವಾದ ಚಕ್ರವು ಮೊದಲಿನಂತೆ ಸುಮ್ಮನಾಯಿತು.

೪೧ ಈ ರೀತಿ ಅನೇಕ ವಿಘ್ನಗಳು ಬಾಧಿಸಿದವು. ಆದುದರಿಂದ ಅವನ ರಕ್ಷಣೆಗಾಗಿ ಯಾವಾಗಲೂ ಸುದರ್ಶನವು ಸಿದ್ಧವಾಗಿ ಇರುತ್ತಿತ್ತು.

೪೨ ವಿಷ್ಣುಭಕ್ತನೂ ದೃಢವ್ರತನೂ ಆದ ಅಂಬರೀಷನು ದೇವತೆಗಳ, ಬ್ರಾಹ್ಮಣರ, ಪೂಜೆ ಹಾಗೂ ಸರ್ವಸ್ವದಾನದಲ್ಲಿ ತತ್ಪರನಾದನು. ಪ್ರತಿದಿನವೂ ಇಂತಹ ಅನೇಕ ಧರ್ಮಗಳನ್ನು ಆಚರಿಸುತ್ತಿದ್ದನು.

೪೩ ಹೇಮಂತ ಋತುವಿನ ಮಾರ್ಗಶೀರ್ಷ ಮಾಸದ ಧನುರ್ಮಾಸದಲ್ಲಿ ವಿಶೇಷವಾದ ಶ್ರದ್ಧಾಭಕ್ತಿಗಳಿಂದ ಉಷಃಕಾಲದಲ್ಲಿ ಹರಿಪೂಜೆಯನ್ನು ಮಾಡಿದನು.

೪೪ ವಿಶೇಷವಾಗಿ ಹರಿಯನ್ನು ಪೂಜಿಸಿ ಮುದ್ಗಾನ್ನವನ್ನು ಸಮರ್ಪಿಸಿದನು. ಹೀಗೆ ಒಂದು ಮಾಸದ ವರೆಗೆ ನಿರಂತರವಾಗಿ ಆಚರಿಸುತ್ತಿದ್ದನು.

೪೫ ಪ್ರತಿನಿತ್ಯ ಬ್ರಾಹ್ಮಣರಿಗೆ ಭೋಜನ ಮಾಡಿಸಿ ವಸ್ತ್ರ-ಅಲಂಕಾರ-ಆಭರಣಗಳಿಂದ ಪೂಜಿಸಿದನು. ಆ ಪುಣ್ಯದ ಪ್ರಭಾವದಿಂದ ವಿಷ್ಣುಲೋಕವನ್ನು ಹೊಂದಿದನು.

**ಏತದ್ಧಿ ಕಥಿತಂ ಸರ್ವಂ ವೈಷ್ಣವಸ್ಯ ವಿಶೇಷತಃ ।**
**ಅಂಬರೀಷಸ್ಯ ಮಾಹಾತ್ಮ್ಯಂ ಮಾಯಾವಿತ್ತ್ವಂ ಚ ವೈ ಹರೇಃ ॥೪೬॥**

**ಯಃ ಪಠೇತ್ ಶ್ರುಣುಯಾದ್ವಾಪಿ ಶ್ರಾವಯೇದ್ವಾಪಿ ಮಾನವಃ ।**
**ಮಾಯಾಂ ವಿಸೃಜ್ಯ ಪುಣ್ಯಾತ್ಮಾ ವಿಷ್ಣುಲೋಕಂ ಸ ಗಚ್ಛತಿ ॥೪೭॥**

**॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ**
**ಅಷ್ಟಾವಿಂಶೋऽಧ್ಯಾಯಃ ॥**

---

೪೬ ಇಲ್ಲಿ ಹೇಳಲ್ಪಟ್ಟ ವೈಷ್ಣವನಾದ ಅಂಬರೀಷನ ಮಹಿಮೆಯನ್ನು ವಿಶೇಷವಾಗಿ ಶ್ರೀಹರಿಯ ಮಾಯಾವಿಲಾಸವೈಭವವನ್ನು,

೪೭ ಯಾರು ಹೇಳುವರೋ, ಕೇಳುವರೋ ಅಥವಾ ಬೇರೆಯವರಿಗೆ ಕೇಳಿಸುವರೋ ಅವರು ಬಂಧಕವಾದ ಮಾಯೆಯನ್ನು ದಾಟಿ ವಿಷ್ಣುಲೋಕವನ್ನು ಹೊಂದುವರು.

**॥ ಇಲ್ಲಿಗೆ ಇಪ್ಪತ್ತೆಂಟನೇ ಅಧ್ಯಾಯವು ಮುಗಿಯಿತು ॥**

# ಅಥ ಏಕೋನತ್ರಿಂಶೋಽಧ್ಯಾಯಃ

**ಋಷಯ ಊಚುಃ -**

**ಧ್ರುವೋ ನಾಮ ಮಹಾರಾಜೋ ವಿಷ್ಣುಭಕ್ತ್ಯೈಕತತ್ಪರಃ ।**
**ಬಾಲಕಸ್ಸಪ್ತವರ್ಷಶ್ಚ ಕಥಂ ವಿಷ್ಣುಮಪೂಜಯತ್ ॥೧॥**

**ಕೇನ ಪುಣ್ಯಪ್ರಭಾವೇನ ಶಾಶ್ವತಂ ಪದಮಾಪ ಚ ।**
**ಏತನ್ನೋ ವಿಸ್ತರಾತ್ಸರ್ವಂ ಕೃಪಯಾ ವದ ಸೂತಜ ॥೨॥**

**ಶ್ರೀಸೂತ ಉವಾಚ-**

**ಏತಮರ್ಥಂ ಮಯಾ ಪೃಷ್ಟೋ ನಾನಾಶಾಸ್ತ್ರವಿಶಾರದಃ ।**
**ಮಾರ್ಕಂಡೇಯಃ ಪುರಾ ಪ್ರಾಹ ಮಹ್ಯಂ ಶುಶ್ರೂಷವೇ ದ್ವಿಜಾಃ ॥೩॥**

**ಕಥಂ ವಿಷ್ಣುಪ್ರಸಾದಾದ್ವೈ ಧ್ರುವೋ ಬುದ್ಧಿಮತಾಂ ವರಃ ।**
**ಮೂರ್ಧ್ನಿ ಸ್ಥಿತೋ ಗ್ರಹಾಣಾಂ ವೈ ವಕ್ತುಮರ್ಹಸಿ ಸಾಂಪ್ರತಮ್ ॥೪॥**

**ಮಾರ್ಕಂಡೇಯ ಉವಾಚ-**

**ಸಾರ್ವಭೌಮೋ ಮಹಾತೇಜಾಃ ಸರ್ವಶಾಸ್ತ್ರಭೃತಾಂ ವರಃ ।**
**ಉತ್ತಾನಪಾದೋ ರಾಜಾ ವೈ ಪಾಲಯಾಮಾಸ ಮೇದಿನೀಮ್ ॥೫॥**

---

೧ ಋಷಿಗಳು ಕೇಳಿದರು. ಧ್ರುವಮಹಾರಾಜನು ಕೇವಲ ಏಳು ವರ್ಷದ ಬಾಲಕನಾಗಿದ್ದನು. ವಿಷ್ಣುಭಕ್ತಿಯಲ್ಲಿಯೇ ತತ್ಪರನಾಗಿದ್ದನು. ಆತ ಹೇಗೆ ವಿಷ್ಣುವನ್ನು ಪೂಜಿಸಿದನು.

೨ ಯಾವ ಪುಣ್ಯಪ್ರಭಾವದಿಂದ ಶಾಶ್ವತವಾದ ಸ್ಥಾನವನ್ನು ಹೊಂದಿದನು? ಸೂತಾಚಾರ್ಯರೇ! ಕೃಪೆ ಮಾಡಿ ನಮಗೆ ವಿಸ್ತಾರವಾಗಿ ಹೇಳಿರಿ.

೩ ಸೂತಾಚಾರ್ಯರು ಹೇಳಿದರು. ಋಷಿಗಳೇ! ಇದೇ ಪ್ರಶ್ನೆಯನ್ನು ಹಿಂದೆ ನಾನು ಕೇಳಿದಾಗ ಸರ್ವಶಾಸ್ತ್ರವಿಶಾರದರಾದ ಮಾರ್ಕಂಡೇಯ ಮಹರ್ಷಿಗಳು ಶುಶ್ರೂಷುವಾದ ನನಗೆ ಹೇಳಿದರು.

೪ ಧ್ರುವನು ಜ್ಞಾನಿಗಳಲ್ಲಿ ಶ್ರೇಷ್ಠನು. ವಿಷ್ಣುಪ್ರಸಾದವನ್ನು ಹೊಂದಿ ಅದು ಹೇಗೆ ಎಲ್ಲ ಗ್ರಹಗಳ ಮೇಲೆ ಸ್ಥಿತನಾದನು? ಎಂಬುದನ್ನು ನನಗೆ ಹೇಳಬೇಕು ಎಂದು ಸೂತರು ಪ್ರಾರ್ಥಿಸಿದರು.

೫ ಮಾರ್ಕಂಡೇಯರು ಹೇಳಲಾರಂಭಿಸಿದರು. ಸಾರ್ವಭೌಮನೂ, ಮಹಾ-ತೇಜಸ್ವಿಯೂ, ಸಕಲಶಾಸ್ತ್ರಜ್ಞನೂ ಆದ ಉತ್ತಾನಪಾದ ರಾಜನು ಭೂಮಿಯನ್ನು ಪರಿಪಾಲಿಸುತ್ತಿದ್ದನು.

**ತಸ್ಯ ಭಾರ್ಯಾದ್ವಯಮಭೂತ್ಸುನೀತಿಃ ಸುರುಚಿಸ್ತಥಾ ।**
**ಅಗ್ರಜಾಯಾಮಭೂತ್ಪುತ್ರಃ ಸುನೀತ್ಯಾಂ ಸುಮಹಾಯಶಾಃ ॥೬॥**

**ಧ್ರುವೋ ನಾಮ ಮಹಾಪ್ರಾಜ್ಞಃ ಕುಲದೀಪೋ ಮಹಾಮತಿಃ ।**
**ಕದಾಚಿತ್ಸಪ್ತವರ್ಷೋಽಪಿ ಪಿತುರಂಕಮುಪಾವಿಶತ್ ॥೭॥**

**ಸುರುಚಿಸ್ತಂ ವಿನಿರ್ಭರ್ತ್ಸ್ಯ ಸ್ವಪುತ್ರಂ ಪ್ರೀತಮಾನಸಾ ।**
**ಅಂಕೇ ನ್ಯವೇಶಯದ್ರಾಜ್ಞಃ ಪುತ್ರರೂಪೇಣ ಮಾನಿತಮ್ ॥೮॥**

**ಅಲಬ್ಧ್ವಾ ತತ್ಪಿತುರ್ಧೀಮಾನ್ ಧೃವೋ ದುಃಖಿತಮಾನಸಃ ।**
**ಮಾತುಸ್ಸಮೀಪಮಾಗತ್ಯ ರುರೋದ ಸ ಪುನಃ ಪುನಃ ॥೯॥**

**ರುದಂತಂ ಪುತ್ರಮಾಹೇದಂ ಮಾತಾ ಶೋಕಪರಿಪ್ಲುತಾ ।**
**ಸುರುಚಿರ್ದಯಿತಾ ಭರ್ತುಃ ತಸ್ಯಾಃ ಪುತ್ರೋಽಪಿ ತಾದೃಶಃ ॥೧೦॥**

**ಮಮ ತ್ವಂ ಮಂದಭಾಗ್ಯಾಯಾ ಜಾತಃ ಪುತ್ರೋಽಲ್ಪಭಾಗ್ಯವಾನ್ ।**
**ಕಿಂ ಶೋಚಸಿ ಕಿಮರ್ಥಂ ವಾ ರೋದಿಷಿ ತ್ವಂ ಪುನಃ ಪುನಃ ॥೧೧॥**

---

೬ ಉತ್ತಾನಪಾದ ರಾಜನಿಗೆ ಸುನೀತಿ ಹಾಗೂ ಸುರುಚಿ ಎಂಬ ಇಬ್ಬರು ಪತ್ನಿಯರು. ಹಿರಿಯ ಪತ್ನಿಯಾದ ಸುನೀತಿಯಲ್ಲಿ ಮಹಾಕೀರ್ತಿವಂತನಾದ ಪುತ್ರನು ಜನಿಸಿದನು.

೭ ಧ್ರುವನೆಂಬ ಹೆಸರಿನ ಮಹಾಜ್ಞಾನಿಯೂ ಕುಲದೀಪನೂ ಆದ ಏಳು ವರುಷಗಳ ಆ ಬಾಲಕನು ಒಂದು ದಿನ ತಂದೆಯ ತೊಡೆಯನ್ನೇರಿದನು.

೮ ಸುರುಚಿಯ ಧ್ರುವನನ್ನು ನಿಂದಿಸಿ ಕೆಳಗಿಳಿಸಿ ರಾಜನ ಕುವರನೆಂದು ಮಾನ್ಯತೆ ಹೊಂದಿದ ತನ್ನ ಮಗನನ್ನು ರಾಜನ ತೊಡೆಯಲ್ಲಿ ಕುಳ್ಳಿರಿಸಿದಳು.

೯ ತಂದೆಯ ತೊಡೆಯ ಮೇಲೆ ಸ್ಥಾನ ದೊರಕದೇ ದುಃಖಿತನಾದ ಧೃವನು ತಾಯಿಯಾದ ಸುನೀತಿಯ ಹತ್ತಿರ ಬಂದು ಮತ್ತೆ ಮತ್ತೆ ಅಳತೊಡಗಿದನು.

೧೦ ಅಳುತ್ತಿರುವ ಮಗನನ್ನು ನೋಡಿ ಶೋಕಾಕುಲಳಾದ ಸುನೀತಿಯು ಮಗನಿಗೆ ಹೇಳಿದಳು. ಸುರುಚಿಯು ರಾಜನಿಗೆ ಪ್ರಿಯಳಾದ ಹೆಂಡತಿ. ಅವಳ ಮಗನೂ ಹಾಗೆಯೇ ರಾಜನಿಗೆ ಪ್ರಿಯನಾಗಿರುವನು.

೧೧ ಅಲ್ಪ ಭಾಗ್ಯವುಳ್ಳ ನನ್ನಲ್ಲಿ ನೀನು ಅಲ್ಪಭಾಗ್ಯದಿಂದ ಜನಿಸಿರುವೆ. ಏಕೆ ದುಃಖಿಸುತ್ತಿರುವಿ? ಯಾವ ಕಾರಣಕ್ಕಾಗಿ ಮತ್ತೆ ಮತ್ತೆ ಅಳುತ್ತಿರುವಿ?

**ಸಂತಪ್ತಹೃದಯಸ್ತ್ವಂ ಚೇತ್ ಮಮ ವಾಕ್ಯಂ ಕರಿಷ್ಯಸಿ ।**
**ಸ್ವಸ್ಥಂ ಸ್ಥಾನಂ ಧ್ರುವಂ ಪುತ್ರ ಸ್ವಶಕ್ತ್ಯಾ ತ್ವಂ ಸಮಾಪ್ನುಯಾಃ ॥೧೨॥**

**ಇತ್ಯುಕ್ತಸ್ಸ ತು ಮಾತ್ರಾ ವೈ ನಿರ್ಜಗಾಮ ತದಾ ವನಮ್ ।**
**ವಿಶ್ವಾಮಿತ್ರಂ ತತೋ ದೃಷ್ಟ್ವಾ ಪ್ರಣಿಪತ್ಯ ಯಥಾವಿಧಿ ॥೧೩॥**

**ಉವಾಚ ಪ್ರಾಂಜಲಿರ್ಭೂತ್ವಾ ಭಗವನ್ವಕ್ತುಮರ್ಹಸಿ ।**
**ಸರ್ವೇಷಾಮುಪರಿ ಸ್ಥಾನಂ ಕೇನ ಪ್ರಾಪ್ಸ್ಯಾಮಿ ಸತ್ತಮ ॥೧೪॥**

**ಪಿತುರಂಕೇ ಸಮಾಸೀನಂ ಮಾತಾ ಮೇ ಸುರುಚಿರ್ಮುನೇ ।**
**ಸಾ ಮಾಂ ವ್ಯಧೂನಯದ್ರಾಜಾ ಪಿತಾ ನೋವಾಚ ಕಿಂಚನ ॥೧೫॥**

**ಏತಸ್ಮಾತ್ಕಾರಣಾತ್ ಬ್ರಹ್ಮನ್ ತ್ರಸ್ತೋಽಹಂ ಮಾತರಂ ಗತಃ ।**
**ಸುನೀತಿರಾಹ ಮೇ ಮಾತಾ ಮಾ ಕೃಥಾಃ ಶೋಕಮುತ್ತಮಮ್ ॥೧೬॥**

**ಸ್ವಕರ್ಮಣಾ ಪರಂ ಸ್ಥಾನಂ ಪ್ರಾಪ್ತುಮರ್ಹಸಿ ಪುತ್ರಕ ।**
**ತಸ್ಯಾ ಹಿ ವಚನಂ ಶ್ರುತ್ವಾ ಸ್ಥಾನಂ ತವ ಮಹಾಮುನೇ ॥೧೭॥**

---

೧೨ ನೀನು ಮನದಲ್ಲಿ ದುಃಖಿತನಾಗಿದ್ದರೆ ನಾನು ಹೇಳಿದಂತೆ ಕೇಳು. ಶಾಶ್ವತವಾದ ಉತ್ತಮಸ್ಥಾನವನ್ನು ನೀನು ನಿನ್ನ ಶಕ್ತಿಯಿಂದ ಪಡೆದುಕೊ.

೧೩ ತಾಯಿಯು ಹೀಗೆ ಹೇಳಲು, ಧ್ರುವನು ಅರಣ್ಯಕ್ಕೆ ನಡೆದನು. ಅಲ್ಲಿ ವಿಶ್ವಾಮಿತ್ರ ಮಹರ್ಷಿಗಳನ್ನು ಕಂಡು ವಿಧ್ಯುಕ್ತವಾಗಿ ನಮಸ್ಕರಿಸಿದನು.

೧೪ ಕೈಮುಗಿದು ಕೇಳಿದನು. ಶ್ರೇಷ್ಠರಾದ ಮಹರ್ಷಿಗಳೇ! ನಾನಾವ ಉಪಾಯದಿಂದ ಎಲ್ಲಕ್ಕಿಂತ ಉತ್ತಮವಾದ ಸ್ಥಾನವನ್ನು ಪಡೆಯುವೆನು? ಎಂಬುದನ್ನು ಹೇಳಬೇಕು.

೧೫ ತಂದೆಯ ತೊಡೆಯಲ್ಲಿ ಕುಳಿತ ನನ್ನನ್ನು ಮಲತಾಯಿಯಾದ ಸುರುಚಿಯು ತಳ್ಳಿ ತಿರಸ್ಕರಿಸಿದಳು. ತಂದೆಯಾದ ರಾಜನು ಏನೂ ಹೇಳದೇ ಸುಮ್ಮನೆ ಕುಳಿತಿದ್ದನು.

೧೬ ಆ ಕಾರಣದಿಂದ ಅತ್ಯಂತ ದುಃಖಿತನಾದ ನಾನು ತಾಯಿಯ ಬಳಿ ಹೋದೆನು. ಅಳುವ ನನ್ನನ್ನು ನೋಡಿ ಸುನೀತಿಯು ನುಡಿದಳು. ಪುತ್ರನೇ! ಬಹಳ ಶೋಕಿಸದಿರು.

೧೭ ಮಗನೇ! ನಿನ್ನ ಕರ್ಮಾಚರಣೆಯಿಂದ ಉತ್ತಮವಾದ ಸ್ಥಾನವನ್ನು ಹೊಂದಲು ನೀನು ಯೋಗ್ಯನಾಗಿರುವೆ. ಹೀಗೆಂದ ಅವಳ ಮಾತುಗಳನ್ನು ಕೇಳಿ ನೀವಿರುವ ಸ್ಥಾನವಾದ ಇಲ್ಲಿಗೆ ಬಂದಿರುವೆ.

ಪ್ರಾಪ್ತೋ ವನಮಿದಂ ಬ್ರಹ್ಮನ್ನದ್ಯ ತ್ವಾಂ ದೃಷ್ಟವಾನ್ ಪ್ರಭೋ ।
ತವ ಪ್ರಸಾದಾತ್ ಪ್ರಾಪ್ಸ್ಯೇಽಹಂ ಸ್ಥಾನಮುತ್ತಮಮದ್ಭುತಮ್ ॥೧೮॥

ಇತ್ಯುಕ್ತಃ ಸ ಮುನಿಃ ಶ್ರೀಮಾನ್ ಪ್ರಹಸನ್ನಿದಮಬ್ರವೀತ್ ।
ರಾಜಪುತ್ರ ಶೃಣುಷ್ವೇದಮುತ್ತಮಂ ಸ್ಥಾನಮಾಪ್ಸ್ಯಸಿ ॥೧೯॥

ಆರಾಧ್ಯ ಜಗದೀಶಂ ವೈ ಕೇಶವಂ ಕ್ಲೇಶನಾಶನಮ್ ।
ಕುರು ಪುಣ್ಯಮಹಂ ವಕ್ಷ್ಯೇ ಚಾಪಮಾಹಾತ್ಮ್ಯಮುತ್ತಮಮ್ ॥೨೦॥

ಹೇಮಂತೇ ಚ ಧನುರ್ಮಾಸೇ ಮುದ್ಗಾನ್ನೈರ್ಹರಿಪೂಜನಮ್ ।
ದ್ವಾದಶಾಕ್ಷರಜಾಪಂ ಚ ಸರ್ವಪಾಪವಿನಾಶನಮ್ ।
ಇಷ್ಟದಂ ಪರಮಂ ಶುದ್ಧಂ ಪವಿತ್ರಂ ಮಂಗಲಂ ಪರಮ್ ॥೨೧॥

ಧ್ರುವ ಉವಾಚ-

ಬ್ರೂಹಿ ಮೇ ಸರ್ವಧರ್ಮಜ್ಞ ಬ್ರಹ್ಮರ್ಷೀಣಾಂ ತಪೋಧನ ।
ಕಥಂ ಕಾರ್ಯಾ ಧನುರ್ಮಾಸೇ ಹರಿಪೂಜಾ ಮಹಾಮುನೇ ।
ಕಥಂ ದ್ವಾದಶಮಂತ್ರಸ್ಯ ಜಪಃ ಕಾರ್ಯಸ್ತು ಮೇ ವದ ॥೨೨॥

---

೧೮ ಈ ವನಕ್ಕೆ ಬಂದು ಇಂದು ತಮ್ಮ ದರ್ಶನ ಭಾಗ್ಯ ಪಡೆದಿದ್ದೇನೆ. ನಿಮ್ಮ ಅನುಗ್ರಹದಿಂದ ಅದ್ಭುತವಾದ ಉತ್ತಮ ಸ್ಥಾನವನ್ನು ಹೊಂದುವೆನು.

೧೯ ಹೀಗೆ ನುಡಿದ ಧ್ರುವನ ಮಾತನ್ನು ಕೇಳಿ ವಿಶ್ವಾಮಿತ್ರರು ನಗುತ್ತ ನುಡಿದರು. ರಾಜಕುವರನೇ! ನಾನು ಹೇಳುವುದನ್ನು ಕೇಳು. ನೀನು ಉತ್ತಮಸ್ಥಾನವನ್ನು ಪಡೆಯುವೆ.

೨೦ ಜಗದೊಡೆಯನೂ, ಕ್ಲೇಶನಾಶಕನೂ ಆದ ಕೇಶವನನ್ನು ಆರಾಧಿಸಿ ಪುಣ್ಯಗಳಿಸು. ನಿನಗೆ ಉತ್ತಮವಾದ ಧನುರ್ಮಾಸದ ಮಹಿಮೆಯನ್ನು ಹೇಳುವೆನು.

೨೧ ಹೇಮಂತ ಋತುವಿನ ಧನುರ್ಮಾಸದಲ್ಲಿ ಮುದ್ಗಾನ್ನದಿಂದ ಹರಿಯ ಪೂಜೆ ಮತ್ತು ವಾಸುದೇವದ್ವಾದಶಾಕ್ಷರ ಮಂತ್ರದ ಜಪ ಇವೆರಡು ಎಲ್ಲ ರೀತಿಯ ಪಾಪಗಳನ್ನು ನಾಶ ಮಾಡುವವು. ಎಲ್ಲ ಇಚ್ಛೆಗಳನ್ನು ಪೂರೈಸುವದೂ, ಅತಿಶುದ್ಧವೂ, ಮಂಗಲಕರವೂ, ಉತ್ತಮವೂ ಆಗಿದೆ.

೨೨ ಎಲ್ಲ ಧರ್ಮಗಳನ್ನು ಬಲ್ಲವರೆ, ಬ್ರಹ್ಮರ್ಷಿಗಳ ತಪವೇ ಧನವಾಗಿವುಳ್ಳವರೇ, ಧನುರ್ಮಾಸದಲ್ಲಿ ಹರಿಯ ಪೂಜೆಯನ್ನು ಹೇಗೆ ಮಾಡಬೇಕೆಂದು ತಿಳಿಸಿರಿ. ದ್ವಾದಶಾಕ್ಷರ ಮಂತ್ರ ಜಪದ ವಿಧಾನವೇನೆಂಬುದನ್ನು ನನಗೆ ತಿಳಿಸಿರಿ.

ವಿಶ್ವಾಮಿತ್ರ ಉವಾಚ-

ಧನುರ್ಮಾಸೇಽಪ್ಯುಷಃಕಾಲೇ ಮುದ್ಗಾನ್ನೈಃ ಕುರು ಪೂಜನಮ್ ।
ನಮೋಽಸ್ತು ವಾಸುದೇವಾಯೇತ್ಯೇತತ್ತ್ವಂ ನಿಯತೇಂದ್ರಿಯಃ ॥೨೩॥

ಜಪ ನಿತ್ಯಂ ಮಹಾಪ್ರಾಜ್ಞ ಸರ್ವಪಾಪವಿನಾಶನಮ್ ।
ಧ್ಯಾಯನ್ಸನಾತನಂ ವಿಷ್ಣುಂ ಜಪಹೋಮಸಮನ್ವಿತಮ್ ॥೨೪॥

ಶಾಕಮೂಲಫಲಾಹಾರಃ ಸಂವತ್ಸರಮತಂದ್ರಿತಃ ।
ಜಪ್ಯೈತಂ ಪರಮಂ ಮಂತ್ರಮನಿಶಂ ತ್ವಂ ಪುನಃ ಪುನಃ ॥೨೫॥

ಇತ್ಯೇತತ್ಕಥಿತಂ ದಿವ್ಯಂ ದ್ವಾದಶಾಕ್ಷರಮುತ್ತಮಮ್ ।
ಕುರು ಪುಣ್ಯಮಹೋರಾತ್ರಂ ಪ್ರಾಪ್ಸ್ಯಸಿ ತ್ವಂ ಮಹಾಪದಮ್ ॥೨೬॥

ಋಷೇಸ್ತು ವಚನಂ ಶ್ರುತ್ವಾ ರಾಜಪುತ್ರಶ್ಚ ಬಾಲಕಃ ।
ಅಕರೋನ್ನಿಯಮಂ ನಿತ್ಯಂ ಧನುರ್ಮಾಸೇ ವಿಶೇಷತಃ ॥೨೭॥

ತೇನ ಪುಣ್ಯಪ್ರಭಾವೇನ ಹರಿಭಕ್ತಿರಜಾಯತ ।
ಏತಸ್ಮಿನ್ನೇವ ಕಾಲೇ ತು ಉತ್ಪಾತಾಶ್ಚ ಭಯಂಕರಾಃ ॥೨೮॥

---

೨೩ ಧನುರ್ಮಾಸದ ಉಷಃಕಾಲದಲ್ಲಿ ಮುದ್ಗಾನ್ನದಿಂದ ಹರಿಯನ್ನು ಪೂಜಿಸು. ವಾಸುದೇವಮಂತ್ರವನ್ನು ಜಿತೇಂದ್ರಿಯನಾಗಿ ಜಪಿಸು.

೨೪ ನಿತ್ಯದಲ್ಲೂ ಸರ್ವಪಾಪ ವಿನಾಶಕವಾದ ಮಂತ್ರವನ್ನು ಜಪಿಸು. ಜ್ಞಾನಿಶ್ರೇಷ್ಠನೇ! ನಿತ್ಯದಲ್ಲೂ ಜಪ-ಹೋಮಾದಿಗಳನ್ನು ಆಚರಿಸುತ್ತ ಸನಾತನನಾದ ವಿಷ್ಣುವಿನ ಧ್ಯಾನ ಮಾಡು.

೨೫ ಹಣ್ಣು, ಗಡ್ಡೆ, ಗೆಣಸುಗಳನ್ನು ಸ್ವೀಕರಿಸಿ, ಒಂದು ವರುಷದ ವರೆಗೆ ಆಲಸ್ಯರಹಿತನಾಗಿ ಈ ಶ್ರೇಷ್ಠಮಂತ್ರವನ್ನು ಪ್ರತಿನಿತ್ಯ ನಿರಂತರವಾಗಿ ಜಪಿಸು.

೨೬ ಈ ರೀತಿ ದ್ವಾದಶಾಕ್ಷರಮಂತ್ರದ ಮಹಿಮೆಯನ್ನು ಹೇಳಿದ್ದೇನೆ. ನೀನು ಹಗಲು ರಾತ್ರಿಯೆನ್ನದೇ ಪುಣ್ಯವನ್ನು ಸಂಪಾದಿಸು. ಅದರಿಂದ ಉತ್ತಮವಾದ ಸ್ಥಾನವನ್ನು ಹೊಂದುವೆ.

೨೭ ವಿಶ್ವಾಮಿತ್ರರ ಮಾತುಗಳನ್ನಾಲಿಸಿ ರಾಜಪುತ್ರನಾದ ಬಾಲಕ ಧ್ರುವನು ನಿತ್ಯದಲ್ಲಿ ವಿಶೇಷವಾಗಿ ಧನುರ್ಮಾಸದ ನಿಯಮಗಳನ್ನೆಲ್ಲ ಆಚರಿಸಿದನು.

೨೮ ಅದೆಲ್ಲದರ ಪುಣ್ಯಪ್ರಭಾವದಿಂದ ಧ್ರುವನಿಗೆ ಸಂಸಾರಮೋಚಕವಾದ ಶ್ರೇಷ್ಠವಾದ ಹರಿಭಕ್ತಿಯು ಪ್ರಾಪ್ತವಾಯಿತು. ಅದೇ ಕಾಲದಲ್ಲಿಯೇ ಅನೇಕ ಭಯಂಕರ ಉತ್ಪಾತಗಳು ತೋರಿದವು.

ವೇತಾಲಾ ರಾಕ್ಷಸಾ ಘೋರಾಃ ಸಿಂಹಾದ್ಯಾಶ್ಚ ಮಹಾಮೃಗಾಃ ।
ತಪಸ್ಯಂತಂ ಮಹಾತ್ಮಾನಂ ಧೀಮೋಹಾಯ ಹ್ಯಭೀಷಯನ್ ॥೨೯॥

ಜಪನ್ ಸ ವಾಸುದೇವೇತಿ ನ ಕಿಂಚಿತ್ ಪ್ರತ್ಯಪದ್ಯತ ।
ಸುನೀತಿರಸ್ಯ ಯಾ ಮಾತಾ ತಸ್ಯಾ ರೂಪೇಣ ಸಂವೃತಾ ।
ಪಿಶಾಚೀ ಸಮನುಪ್ರಾಪ್ತಾ ರುರೋದ ಭೃಶದುಃಖಿತಾ ॥೩೦॥

ಮಮ ತ್ವಮೇವ ಪುತ್ರೋಽಸಿ ಕಿಮರ್ಥಂ ತ್ವಂ ತು ಕ್ಲಿಶ್ಯಸಿ ।
ಮಾಮನಾಥಾಂ ಸಮಾಧೂಯ ತಪ ಆಸ್ಥಿತವಾನಸಿ ॥೩೦॥

ಏವಮಾದೀನಿ ವಾಕ್ಯಾನಿ ಭಾಷಮಾಣಾಂ ಮಹಾತಪಾಃ ।
ಅನಿರೀಕ್ಷ್ಯೈವ ಹೃಷ್ಟಾತ್ಮಾ ಹರೇರ್ನಾಮ ಜಜಾಪ ಸಃ ॥೩೨॥

ತತಃ ಪ್ರೀತೋ ಹರಿಸ್ತತ್ರ ತಸ್ಯ ವಿಘ್ನಾನ್ನಿರಸ್ಯ ವೈ ।
ತತೋ ಗರುಡಮಾರುಹ್ಯ ಕಾಲಮೇಘಸಮದ್ಯುತಿಃ ।
ಸರ್ವದೇವೈಃ ಪರಿವೃತಃ ಸ್ತೂಯಮಾನೋ ಮಹರ್ಷಿಭಿಃ ॥೩೩॥

---

೨೯ ತಪಸ್ಸು ಮಾಡುತ್ತಿರುವ ಮಹಾತ್ಮನಾದ ಧ್ರುವನ ಮನಸ್ಸನ್ನು ಮೋಹಿಸಿ ಕೆಡಿಸಲು ವೇತಾಲಗಳು, ರಾಕ್ಷಸರು, ಸಿಂಹವೇ ಮೊದಲಾದ ಕ್ರೂರಮೃಗಗಳು ಬೆದರಿಸಿದವು.

೩೦ ವಾಸುದೇವಮಂತ್ರವನ್ನು ಜಪಿಸುತ್ತಿದ್ದ ಧ್ರುವನು ಅದಾವುದನ್ನು ಗಮನಿಸದೇ ಇದ್ದನು. ಆಗ ಅವನ ಮಾತೆಯಾದ ಸುನೀತಿಯ ರೂಪವನ್ನು ಧರಿಸಿದ ಪಿಶಾಚವೊಂದು ಅಲ್ಲಿಗೆ ಬಹಳವಾಗಿ ದುಃಖಿಸುತ್ತ ಅಳತೊಡಗಿತು.

೩೧ ನನಗೆ ನೀನೊರ್ವನೇ ಮಗನಾಗಿರುವೆ. ಹೀಗೇಕೆ ಇಲ್ಲಿ ಕಷ್ಟಪಡುತ್ತಿರುವೆ. ಅನಾಥಳಾದ ನನ್ನನ್ನು ತ್ಯಜಿಸಿ ತಪಸ್ಸಿಗೇಕೆ ಕುಳಿತಿರುವೆ?

೩೨ ಇತ್ಯಾದಿಯಾಗಿ ನುಡಿಯುತ್ತ ತನ್ನ ತಪಸ್ಸಿಗೆ ವಿಘ್ನಪಡಿಸುತ್ತಿರುವ ಆ ಪಿಶಾಚರೂಪದ ಅವಳನ್ನು ನೋಡದೆಯೇ ಸಂತುಷ್ಟಚಿತ್ತದಿಂದ ಹರಿನಾಮವನ್ನು ಜಪಿಸುತ್ತಿದ್ದನು.

೩೩ ಅದರಿಂದ ಪ್ರೀತನಾದ ಶ್ರೀಹರಿಯು ಧ್ರುವನ ಎಲ್ಲ ವಿಘ್ನಗಳನ್ನು ನಿವಾರಿಸಿದನು. ಅನಂತರ ಪ್ರಲಯಕಾಲದ ಮೇಘದಂತೆ ಪೊಳೆಯುತ್ತಿರುವ ಹರಿಯು ಗರುಡನ ಮೇಲೇರಿ ಎಲ್ಲ ದೇವತೆಗಳಿಂದ ಸುತ್ತುವರೆದವನಾದನು. ಮಹರ್ಷಿಗಳೆಲ್ಲ ಆ ಪರಮಾತ್ಮನನ್ನು ಸ್ತುತಿಸಿದರು.

ಆಯಯೌ ಭಗವಾನ್ವಿಷ್ಣುಃ ಧ್ರುವಾಭ್ಯರ್ಣಂ ಸುರಾರಿಹಾ ।
ಸಮಾಗತಂ ವಿಲೋಕ್ಯಾಥ ಕೋಽಸಾವಿತ್ಯೇವ ಚಿಂತಯನ್ ॥೩೪॥

ಬನ್ನಿವ ಹೃಷೀಕೇಶಂ ನಯನಾಭ್ಯಾಂ ಜಗತ್ಪತಿಮ್ ।
ಜಪನ್ ಸ ವಾಸುದೇವೇತಿ ಧ್ರುವಸ್ತಸ್ಥೌ ಮಹಾದ್ಯುತಿಃ ॥೩೫॥

ಶಂಖಪ್ರಾಂತೇನ ಗೋವಿಂದೋಽಸ್ಪೃಶತ್ ಶೀರ್ಷಂ ತು ತಸ್ಯ ವೈ ।
ತತಃ ಸ ಪರಮಂ ಜ್ಞಾನಮವಾಪ್ಯ ಪುರುಷೋತ್ತಮಮ್ ।
ತುಷ್ಟಾವ ಪ್ರಾಂಜಲಿರ್ಭೂತ್ವಾ ಸರ್ವಲೋಕೇಶ್ವರಂ ಹರಿಮ್ ॥೩೬॥

ಧ್ರುವ ಉವಾಚ-

ಪ್ರಸೀದ ದೇವದೇವೇಶ ಶಂಖಚಕ್ರಗದಾಧರ ।
ಲೋಕಾತ್ಮಾ ತ್ವಂ ಚ ಗುಹ್ಯಾತ್ಮಾ ತ್ವಾಂ ಪ್ರಪನ್ನೋಽಸ್ಮಿ ಕೇಶವ ॥೩೭॥

ನ ವಿದುಸ್ತ್ವಾಂ ಮಹಾತ್ಮಾನಂ ಸನಕಾದ್ಯಾ ಮಹರ್ಷಯಃ ।
ತತ್ಕಥಂ ತ್ವಾಮಹಂ ವಿದ್ಯಾಂ ನಮಸ್ತೇ ಭುವನೇಶ್ವರ ॥೩೮॥

---

೩೪ ಅಸುರನಾಶಕನಾದ, ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವು ಧ್ರುವನ ಹತ್ತಿರ ಆಗಮಿಸಿದನು. ಅಲ್ಲಿಗೆ ಬಂದ ಹರಿಯನ್ನು ನೋಡಿ ಇವರು ಯಾರೆಂದು ಯೋಚಿಸಿದನು.

೩೫ ಸರ್ವೇಂದ್ರಿಯಗಳೊಡೆಯನೂ, ಜಗದೊಡೆಯನೂ ಆದ ಶ್ರೀಪತಿಯನ್ನು ಕಣ್ಣುಗಳಿಂದಲೇ ಕುಡಿದವನಂತೆ ನಿರೀಕ್ಷಿಸುತ್ತ ವಾಸುದೇವಮಂತ್ರವನ್ನು ಜಪಿಸುತ್ತಿದ್ದನು.

೩೬ ಗೋವಿಂದನು ತನ್ನ ಕೈಯಲ್ಲಿದ್ದ ಲಕ್ಷ್ಮೀಯಿಂದ ಅಭಿಮನ್ಯಮಾನವಾದ ಶಂಖವನ್ನು ಅವನ ತಲೆಗೆ ಮುಟ್ಟಿಸಿದನು. ಅದರಿಂದ ಮಹಾಜ್ಞಾನವನ್ನು ಹೊಂದಿದ ಧ್ರುವನು ಪುರುಷೋತ್ತಮನಾದ ಸರ್ವಲೋಕಗಳೊಡೆಯನಾದ ಹರಿಯನ್ನು ಕೈಜೋಡಿಸಿ ಸ್ತುತಿಸಿದನು.

೩೭ ಹೇ ದೇವತೆಗಳ ಒಡೆಯನೇ! ಶಂಖಚಕ್ರಗದಾಧಾರಿಯೇ ಪ್ರಸನ್ನನಾಗು. ನೀನು ಸರ್ವವ್ಯಾಪಿಯಾಗಿ ಲೋಕಾತ್ಮನೆನಿಸಿರುವೆ. ಹಾಗೇಯೇ ಯಾರಿಗೂ ತೋರದಂತೆ ಹೃದಯಗುಹೆಯಲ್ಲಿ ನೆಲೆಸಿ ಗುಹ್ಯಾತ್ಮನೂ ಆಗಿರುವೆ. ಕೇಶವನೇ! ನಾನು ನಿನ್ನನ್ನು ಶರಣು ಹೊಂದಿರುವೆ.

೩೮ ಮಹಾಮಹಿಮನಾದ ನಿನ್ನನ್ನು ಸನಕಾದಿಮಹರ್ಷಿಗಳೇ ಸಾಕಲ್ಯೇನ ತಿಳಿಯಲಾರರು ಎಂದ ಮೇಲೆ ನನ್ನಂಥವನು ನಿನ್ನನ್ನು ಹೇಗೆ ಅರಿಯಲು ಸಾಧ್ಯ? ಜಗದೊಡೆಯನಾದ ನಿನಗೆ ನಮಸ್ಕಾರ.

ಇತಿ ಸ್ತುತೋ ಮಹಾವಿಷ್ಣುಃ ಪ್ರಸನ್ನೋ ಕಮಲೇಕ್ಷಣಃ ।
ಮೇಘಗಂಭೀರಯಾ ವಾಚಾ ದೇವದೇವೋ ಜನಾರ್ದನಃ ॥೩೯॥

ತಮಾಹ ಪ್ರಹಸನ್ವಿಷ್ಣುರೇಹಿ ವತ್ಸ ಮಮಾಂತಿಕಮ್ ।
ಹೇ ಬಾಲ ಧ್ರುವ ಹೇ ವತ್ಸ ತುಷ್ಟೋಽಹಂ ತೇ ಚ ಭಕ್ತಿತಃ ॥೪೦॥

ಚಾಪೇ ಮುದ್ಗಾನ್ನಪೂಜಾತಃ ವರಂ ತುಭ್ಯಂ ದದಾಮಿ ವೈ ।
ಮತ್ಸ್ಥಾನಮೇತತ್ಪರಮಂ ಧ್ರುವಂ ನಿತ್ಯಂ ಸುಶೋಭನಮ್ ॥೪೧॥

ತಪಸಾಽಽರಾಧ್ಯ ಮಾಂ ದೇವೈಃ ಲಬ್ಧಂ ಸ್ಥಾನಂ ಮಮಾಜ್ಞಯಾ ।
ವಾಸುದೇವೇತಿ ಯೋ ನಿತ್ಯಂ ಪ್ರಣವೇನ ಸಮನ್ವಿತಮ್ ॥೪೨॥

ನಮಃಶಬ್ದಸಮಾಯುಕ್ತಂ ಭಗವಚ್ಛಬ್ದಸಂಯುತಮ್ ।
ಪ್ರಜಪೇದ್ಯ ಇಮಂ ಮಂತ್ರಂ ಧ್ರುವಂ ಸ್ಥಾನಂ ಪ್ರಪದ್ಯತೇ ॥೪೩॥

ತತೋ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ।
ಮಾತ್ರಾ ಸಹ ಧ್ರುವಂ ಸರ್ವೇ ತಸ್ಮಿನ್ ಸ್ಥಾನೇ ನ್ಯವೇಶಯನ್ ॥೪೪॥

---

೩೯ ಹೀಗೆ ಧ್ರುವನಿಂದ ಸ್ತುತನಾದ ಕಮಲನೇತ್ರನೂ, ದೇವದೇವನೂ ಆದ ಜನಾರ್ದನನು ಮೋಡದಂತೆ ಗಂಭೀರವಾದ ಧ್ವನಿಯಿಂದ,

೪೦ ನಸುನಗುತ್ತ ಧ್ರುವನಿಗೆ ಹೇಳಿದನು. ಹೇ ಮಗುವೇ! ನನ್ನ ಹತ್ತಿರ ಬಾ. ಹೇ ಧ್ರುವನೇ! ನಿನ್ನ ಭಕ್ತಿಯಿಂದ ನಾನು ಅತ್ಯಂತ ಪ್ರೀತನಾಗಿದ್ದೇನೆ.

೪೧ ಧನುರ್ಮಾಸದ ಮುದ್ಗಾನ್ನ ಪೂಜೆಯಿಂದ ಪ್ರೀತನಾಗಿ ನಿನಗೆ ವರ ನೀಡುವೆನು. ಶಾಶ್ವತವೂ ನಿತ್ಯಮಂಗಲವೂ ಆದ ಈ ನನ್ನ ಸ್ಥಾನವನ್ನು,

೪೨ ದೇವತೆಗಳು ನನ್ನನ್ನು ತಪಸ್ಸಿನಿಂದ ಆರಾಧಿಸಿ ಪಡೆದುಕೊಂಡರು. ಓಂಕಾರದಿಂದ ಯುಕ್ತವಾದ ವಾಸುದೇವ ಎಂಬ ಶಬ್ದವನ್ನು,

೪೩ ನಮಃ ಶಬ್ದ ಹಾಗೂ ಭಗವಚ್ಛಬ್ದ ಯುಕ್ತವಾಗಿ ಯಾರು ಜಪಿಸುವರೋ ಅವರು ಶಾಶ್ವತ ಸ್ಥಾನ ಪಡೆಯುವರು.

**ವಿಶೇಷ :** ಪ್ರಣವ, ನಮಃ ಶಬ್ದ, ಭಗವಚ್ಛಬ್ದ, ವಾಸುದೇವ ಶಬ್ದಗಳಿಂದ ಕೂಡಿದ ಮಂತ್ರವೆಂದರೆ ''ಓಂ ನಮೋ ಭಗವತೇ ವಾಸುದೇವಾಯ'' ಎಂಬ ವಾಸುದೇವ ದ್ವಾದಶಾಕ್ಷರಮಂತ್ರವು ನಿಷ್ಪನ್ನವಾಗುತ್ತದೆ.

೪೪ ದೇವನು ಹೀಗೆ ಅನುಗ್ರಹಿಸಿದ ನಂತರ ದೇವತೆಗಳು, ಗಂಧರ್ವರು, ಸಿದ್ಧರು, ಮಹರ್ಷಿಗಳೆಲ್ಲ ಸುನೀತಿಯ ಸಹಿತವಾಗಿ ಧ್ರುವನನ್ನು ಆ ಶಾಶ್ವತಸ್ಥಾನದಲ್ಲಿ ಕುಳ್ಳಿರಿಸಿದರು.

**ವಿಷ್ಣೋರಾಜ್ಞಾಂ ಪುರಸ್ಕೃತ್ಯ ಜ್ಯೋತಿಷಾಂ ಸ್ಥಾನಮಾಪ್ತವಾನ್ ।**
**ಏವಂ ಧ್ರುವೋ ಮಹಾತೇಜಾ ಧನುರ್ಮಾಸಪ್ರಭಾವತಃ ॥೪೫॥**

**ದ್ವಾದಶಾಕ್ಷರಮಂತ್ರಸ್ಯ ಜಪೇನ ಚ ವಿಶೇಷತಃ ।**
**ಅವಾಪ ಪರಮಾಂ ಸಿದ್ಧಿಮೇತತ್ತೇ ಕಥಿತಂ ಮಯಾ ॥೪೬॥**

**ತಸ್ಮಾದ್ಯೋ ವಾಸುದೇವಾಯ ಪ್ರಣಾಮಂ ಕುರುತೇ ನರಃ ।**
**ಧನುರ್ಮಾಸೇ ಚ ಮುದ್ಗಾನ್ನೈಃ ಹರಿಪೂಜಾಂ ವಿಶೇಷತಃ ॥೪೭॥**

**ಕರೋತಿ ಶ್ರದ್ಧಯಾ ಯುಕ್ತೋ ಮಾಸಮೇಕಂ ನಿರಂತರಮ್ ।**
**ಸ ಗತ್ವಾ ಧ್ರುವಸಾಯುಜ್ಯಂ ಧ್ರುವೇಣ ಸಹ ಮೋದತೇ ॥೪೮॥**

**ತಸ್ಮಾತ್ಸರ್ವಪ್ರಯತ್ನೇನ ವಿಷ್ಣುಪೂಜಾರತೋ ಭವೇತ್ ।**
**ವಿಷ್ಣುಭಕ್ತಿಪರೋ ನಿತ್ಯಂ ತೇ ಯಾಂತಿ ಪರಮಾಂ ಗತಿಮ್ ॥೪೯॥**

**ಧ್ರುವಸ್ಯ ಚರಿತಂ ಪುಣ್ಯಂ ಸರ್ವಪಾಪಪ್ರಣಾಶನಮ್ ।**

---

**ವಿಶೇಷ :** ಶಾಶ್ವತವಾದ ಆ ಸ್ಥಾನದಲ್ಲಿ ಕುಳ್ಳಿರಿಸಿದರೆಂದರೆ ಮುಂದೆ ಆ ಸ್ಥಾನವು ಅವನಿಗೇ ನಿಶ್ಚಿತವಾಗಿ ದೊರಕುವಂತೆ ಆಶೀರ್ವದಿಸಿದರೆಂದರ್ಥ. ಏಕೆಂದರೆ ಬೇರೆ ಭಾಗವತಾದಿ ಮಹಾಪುರಾಣಗಳಲ್ಲಿ ಧ್ರುವನು ಪಟ್ಟಾಭಿಷಕ್ತನಾಗಿ ರಾಜ್ಯವಾಳಿದ ನಂತರ ಆ ಸ್ಥಾನವನ್ನು ಪಡೆದ ಉಲ್ಲೇಖವಿರುವುದರಿಂದ ಹೀಗೆ ಅರ್ಥೈಸಬೇಕು.

೪೫ ಹೀಗೆ ವಿಷ್ಣುವಿನ ಆಜ್ಞೆಯಂತೆ ಜ್ಯೋತಿರ್ಮಂಡಲದಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆದನು. ಹೀಗೆ ಧ್ರುವ ಮಹಾರಾಜನು ಧನುರ್ಮಾಸದ ಪ್ರಭಾವದಿಂದ,

೪೬ ಹಾಗೂ ವಿಶೇಷವಾಗಿ ದ್ವಾದಶಾಕ್ಷರಮಂತ್ರ ಜಪದ ಪ್ರಭಾವದಿಂದ ಅತಿಶ್ರೇಷ್ಠ-ವಾದ ಸಿದ್ಧಿಯನ್ನು ಪಡೆದನು. ಇದೆಲ್ಲವನ್ನು ನಾನು ನಿನಗೆ ಹೇಳಿದ್ದೇನೆ.

೪೭ ಆದುದರಿಂದ ಯಾವ ಮನುಜನು ವಾಸುದೇವನನ್ನು ನಮಸ್ಕರಿಸುವನೋ, ವಿಶೇಷವಾಗಿ ಧನುರ್ಮಾಸದಲ್ಲಿ ಮುದ್ಗಾನ್ನದಿಂದ ಹರಿಯನ್ನು ಪೂಜಿಸುತ್ತಾನೋ,

೪೮ ಒಂದು ತಿಂಗಳಿನ ವರೆಗೆ ಶ್ರದ್ಧೆಯಿಂದ ಪೂಜಿಸುವನೋ ಅವನು ಧ್ರುವ ಸಾಯುಜ್ಯವನ್ನು ಹೊಂದಿ ಧ್ರುವನೊಂದಿಗೆ ಆನಂದ ಹೊಂದುವನು.

೪೯ ಆದುದರಿಂದ ಎಲ್ಲ ರೀತಿಯ ಪ್ರಯತ್ನಗಳಿಂದ ವಿಷ್ಣುಪೂಜೆಯಲ್ಲಿ ಆಸಕ್ತ-ನಾಗಿರಬೇಕು. ನಿತ್ಯದಲ್ಲಿಯೂ ವಿಷ್ಣುಭಕ್ತಿಪರನಾಗಿರಬೇಕು. ಹೀಗಿರುವವರು ಉತ್ತಮಗತಿಯನ್ನು ಹೊಂದುವರು.

ಯಃ ಪಠೇತ್ ಶ್ರುಣುಯಾದ್ವಾಪಿ ಸ ಯಾತಿ ಪರಮಾಂ ಗತಿಮ್ ॥೫೦॥

ಸಕೃತ್ ಶ್ರುತ್ವೇದಮಾಖ್ಯಾನಂ ಮುಚ್ಯತೇ ಸರ್ವಪಾತಕೈಃ ।
ವಿಷ್ಣುಭಕ್ತಿಂ ಪರಾಂ ಶ್ರೇಷ್ಠಾಂ ಯೇ ಕುರ್ವಂತಿ ನರಾ ಭುವಿ ।
ತೇನೈವ ಸಕಲಾನಿಷ್ಟಾನ್ ಪ್ರಾಪ್ನುವಂತಿ ನ ಸಂಶಯಃ ॥೫೧॥

ಗಣ್ಯಂತೇ ಪಾಂಸವೂ ಭೂಮೇಃ ಗಣ್ಯಂತೇ ದಿವಿ ತಾರಕಾಃ ।
ಚಾಪಮಾಹಾತ್ಮ್ಯಜಂ ಪುಣ್ಯಂ ಶೇಷೇಣಾಪಿ ನ ಗಣ್ಯತೇ ॥೫೨॥

ಕೋಟಿಕನ್ಯಾಪ್ರದಾನಂ ಚ ಯಜ್ಞಾನಾಮಯುತಂ ತಥಾ ।
ಭೂಮಿದಾನಂ ಚ ಬಹುಲಂ ವಿದ್ಯಾದಾನಮಸಂಖ್ಯಯಾ ॥೫೩॥

ಚಾಪೇ ಮುದ್ಗಾನ್ನದಾನಸ್ಯ ಕಲಾಂ ನಾರ್ಹಂತಿ ಷೋಡಶೀಮ್ ।
ತಸ್ಯ ಪುಣ್ಯಂ ಮಹದ್ವಕ್ತುಂ ಬ್ರಹ್ಮಣಾಪಿ ನ ಶಕ್ಯತೇ ॥೫೪॥

॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ ಏಕೋನತ್ರಿಂಶೋಽಧ್ಯಾಯಃ ॥

---

೫೦ ಸಕಲಪಾಪನಾಶಕವೂ, ಪುಣ್ಯಪ್ರದವೂ ಆದ ಧ್ರುವನ ಚರಿತೆಯನ್ನು ಹೇಳಿದವರು, ಕೇಳಿದವರು, ಉತ್ತಮವಾದ ಗತಿಯನ್ನು ಹೊಂದುವರು.

೫೧ ಈ ಧ್ರುವಚರಿತೆಯನ್ನು ಒಂದು ಸಾರಿ ಕೇಳಿದವನು ತನ್ನೆಲ್ಲ ಪಾಪಗಳಿಂದ ದೂರನಾಗುವನು. ಅತಿಶ್ರೇಷ್ಠವಾದ ವಿಷ್ಣುಭಕ್ತಿಯನ್ನು ಆಚರಿಸುವ ಜನರು ಆ ವಿಷ್ಣುಭಕ್ತಿಯ ಪ್ರಭಾವದಿಂದಲೇ ತಮ್ಮೆಲ್ಲ ಇಚ್ಛೆಗಳನ್ನು ಪೂರೈಸಿಕೊಳ್ಳುವರು. ಇದರಲ್ಲಾವ ಸಂದೇಹವಿಲ್ಲ.

೫೨ ಭೂಮಿಯಲ್ಲಿನ ಧೂಳಿನ ಕಣಗಳನ್ನು ಎಣಿಸಬಹುದು. ಆಕಾಶದಲ್ಲಿನ ನಕ್ಷತ್ರಗಳನ್ನು ಎಣಿಸಬಹುದು. ಧನುರ್ಮಾಸದ ಮಹಿಮೆಯಿಂದೊದಗುವ ಪುಣ್ಯವನ್ನು ಸಾವಿರ ಮುಖಗಳ ಶೇಷದೇವರೂ ಎಣಿಸಲಾರರು.

೫೩ ಕೋಟಿ ಸಂಖ್ಯೆಯ ಕನ್ಯಾದಾನವಾಗಲೀ ಹತ್ತು ಸಾವಿರ ಯಜ್ಞಗಳಾಗಲೀ ಬಹಳಷ್ಟು ಭೂದಾನವಾಗಲೀ, ಅಸಂಖ್ಯ ಜನಗಳಿಗೆ ವಿದ್ಯಾದಾನವಾಗಲೀ,

೫೪ ಧನುರ್ಮಾಸದ ಮುದ್ಗಾನ್ನದಾನದ ಹದಿನಾರನೆಯ ಒಂದಂಶಕ್ಕೂ ಸಾಟಿಯಾಗಲಾರದು. ಆ ಧನುರ್ಮಾಸದ ಮಹಾಪುಣ್ಯವನ್ನು ವರ್ಣಿಸಲು ನಾಲ್ಮೊಗನಾದ ಬ್ರಹ್ಮದೇವರಿಗೂ ಸಾಧ್ಯವಿಲ್ಲ.

**ವಿಶೇಷ:** ''ಈಶ್ವರಾದನ್ಯತ್ರ ಆಲೋಚನೇ ಸರ್ವವಿಷಯಕಜ್ಞಾನಂ ಋಜುಯೋಗಿಜ್ಞಾನಂ'' ಎಂದು ಹೇಳಿರುವುದರಿಂದ ಬ್ರಹ್ಮದೇವರೂ ತಿಳಿಯಲಾರರೆಂಬುದು ವ್ಯಾಮೋಹನ ಮಾತ್ರ ಎಂದು ತಿಳಿಯಬೇಕು.

# ಅಥ ತ್ರಿಂಶೋಽಧ್ಯಾಯಃ

**ಋಷಯ ಊಚುಃ -**

**ಯುಗೇ ಯುಗೇ ಚ ಕೋ ದೇವಸ್ತಥಾ ಮಾಸಾಶ್ಚ ಕೇ ವರಾಃ ।**
**ಚತುರ್ಯುಗೇಷು ಯೇ ಮುಖ್ಯಾಸ್ಸರ್ವಾನ್ನೋ ವದ ಸೂತಜ ॥೧॥**

**ಸೂತ ಉವಾಚ-**

**ಕೃತೇ ವರದರಾಜಃ ಸ್ಯಾತ್ತ್ರೇತಾಯಾಂ ರಂಗನಾಯಕಃ ।**
**ದ್ವಾಪರೇ ತು ಜಗನ್ನಾಥಃ ಕಲೌ ವೇಂಕಟನಾಯಕಃ ॥೨॥**

**ಕೃತೇ ತು ಕಾರ್ತಿಕೋ ಮಾಸಃ ತ್ರೇತಾಯಾಂ ಮಾರ್ಗಶೀರ್ಷಕಃ ।**
**ದ್ವಾಪರೇ ಮಾಘಮಾಸಃ ಸ್ಯಾತ್ ಕಲೌ ವೈಶಾಖ ಉತ್ತಮಃ ॥೩॥**

**ಕೃತೇ ತು ತಪಸಃ ಶ್ರೈಷ್ಠ್ಯಂ ತ್ರೇತಾಯಾಂ ಯಜ್ಞಕರ್ಮಣಃ ।**
**ದ್ವಾಪರೇ ಹರಿಪೂಜಾಯಾಃ ಕೀರ್ತನಸ್ಯ ಕಲೌ ಹರೇಃ ॥೪॥**

**ಕೃತೇ ತು ಪುಷ್ಕರಂ ತೀರ್ಥಂ ತ್ರೇತಾಯಾಂ ರಾಮಸೇತುಕೇ ।**
**ಧನುಷ್ಕೋಟ್ಯಭಿದಂ ತೀರ್ಥಂ ಬ್ರಹ್ಮಹತ್ಯಾದಿಮೋಚನಮ್ ॥೫॥**

---

೧ ಋಷಿಗಳು ಕೇಳಿದರು. ಯಾವ ಯಾವ ಯುಗದಲ್ಲಿ ದೇವರು ಯಾವ ರೂಪದಿಂದ ಉಪಾಸ್ಯನಾಗಿದ್ದಾನೆ? ಪ್ರತಿಯುಗದಲ್ಲೂ ಯಾವ ಮಾಸಗಳು ಶ್ರೇಷ್ಠವಾಗಿವೆ? ಹಾಗೂ ಯಾವ ಯುಗದಲ್ಲಿ ಯಾವುದು ಪ್ರಮುಖವಾಗಿದೆ? ಸೂತಾಚಾರ್ಯರೇ! ಇದೆಲ್ಲವನ್ನು ನಮಗೆ ದಯಮಾಡಿ ಉಪದೇಶಿಸಬೇಕು.

೨ ಕೃತಯುಗದಲ್ಲಿ ವರದರಾಜನು, ತ್ರೇತಾಯುಗದಲ್ಲಿ ರಂಗನಾಥನು, ದ್ವಾಪರದಲ್ಲಿ ಜಗನ್ನಾಥನು, ಕಲಿಯುಗದಲ್ಲಿ ವೆಂಕಟೇಶನು ಮುಖ್ಯೋಪಾಸ್ಯನಾಗಿದ್ದಾನೆ.

೩ ಕೃತಯುಗದಲ್ಲಿ ಕಾರ್ತಿಕಮಾಸ, ತ್ರೇತಾಯುಗದಲ್ಲಿ ಮಾರ್ಗಶೀರ್ಷ ಮಾಸ, ದ್ವಾಪರದಲ್ಲಿ ಮಾಘಮಾಸ, ಕಲಿಯುಗದಲ್ಲಿ ವೈಶಾಖಮಾಸಗಳು ಶ್ರೇಷ್ಠವಾದವುಗಳು.

೪ ಕೃತಯುಗದಲ್ಲಿ ತಪಸ್ಸು ಶ್ರೇಷ್ಠವಾದುದು. ತ್ರೇತೆಯಲ್ಲಿ ಯಜ್ಞ, ದ್ವಾಪರದಲ್ಲಿ ಹರಿಯ ಪೂಜೆ, ಕಲಿಯುಗದಲ್ಲಿ ನಾಮ ಸಂಕೀರ್ತನೆ ಶ್ರೇಷ್ಠವಾದುದು.

೫ ಕೃತಯುಗದಲ್ಲಿ ಪುಷ್ಕರವು ಶ್ರೇಷ್ಠತೀರ್ಥವಾಗಿದೆ. ತ್ರೇತೆಯಲ್ಲಿ ಬ್ರಹ್ಮಹತ್ಯೆಯೇ ಮುಂತಾದ ಸರ್ವಪಾಪ ವಿನಾಶಕವಾದ ರಾಮಸೇತು ಹಾಗೂ ಧನುಷ್ಕೋಟಿ ತೀರ್ಥಗಳು ಶ್ರೇಷ್ಠವಾಗಿವೆ.

**ದ್ವಾಪರೇ ಸರ್ವತೀರ್ಥಂ ಚ ಕಲೌ ಸ್ವಾಮಿಸರೋವರಃ ।**
**ಕೃತೇ ಚ ವೃದ್ಧಗಂಗೇತಿ ನಾಮ್ನಾ ಗೋದಾವರೀ ವರಾ ॥೬॥**

**ತ್ರೇತಾಯಾಂ ಜಾಹ್ನವೀ ಶ್ರೇಷ್ಠಾ ದ್ವಾಪರೇ ಯಮುನಾ ನದೀ ।**
**ಕಲೌ ಸಹ್ಯೋದ್ಭವಾ ದೇವೀ ಕಾವೇರೀ ಪಾಪನಾಶನೀ ॥೭॥**

**ಕಾವೇರೀ ಚೋಲಭೂಮಾತಾ ಜಗದ್ರಕ್ಷಣಪಾವನೀ ।**
**ನದೀ ದಕ್ಷಿಣಗಂಗೇತಿ ತ್ರಿಷು ಲೋಕೇಷು ವಿಶ್ರುತಾ ॥೮॥**

**ತುಲಾರ್ಕೇ ಸಹ್ಯಜಾಸ್ನಾನಂ ಶ್ರೇಷ್ಠಂ ಗಂಗಾದಿತೀರ್ಥತಃ ।**
**ವೈಶಾಖೇ ನರ್ಮದಾಸ್ನಾನಂ ಕಾರ್ತಿಕ್ಯಾಂ ಗೋಮತೀಪ್ಲವಃ ॥೯॥**

**ತಥಾ ಕಾಶ್ಯಾಂ ಚ ಗಂಗಾಯಾಂ ಸ್ನಾನಮಾಹುರ್ವಿಶೇಷತಃ ।**
**ಪ್ರಯಾಗೇ ಮಕರಸ್ನಾನಂ ಧನುಷ್ಕೋಟ್ಯಾಂ ಚ ವೈ ತಥಾ ॥೧೦॥**

---

೬ ದ್ವಾಪರಯುಗದಲ್ಲಿ ಸರ್ವತೀರ್ಥ ಉತ್ತಮವಾಗಿದೆ. ಕಲಿಯುಗದಲ್ಲಿ ಸ್ವಾಮಿಪುಷ್ಕರಿಣಿಯು ಶ್ರೇಷ್ಠವೆನಿಸುವುದು. ಇನ್ನು ನದಿಗಳಲ್ಲಿ ವೃದ್ಧಗಂಗೆಯೆಂದು ಹೆಸರಾದ ಗೋದಾವರಿಯು ಕೃತಯುಗದಲ್ಲಿ ಶ್ರೇಷ್ಠವಾದುದು.

೭ ತ್ರೇತಾಯುಗದಲ್ಲಿ ಜಾಹ್ನವಿ (ಗಂಗೆಯು) ಶ್ರೇಷ್ಠಳೆನಿಸಿದರೆ, ದ್ವಾಪರದಲ್ಲಿ ಯಮುನೆ, ಕಲಿಯುಗದಲ್ಲಿ ಸಹ್ಯಪರ್ವತದಲ್ಲಿ ಜನಿಸಿದ ಕಾವೇರೀನದಿಯು ಶ್ರೇಷ್ಠವಾದುದು.

೮ ಚೋಲ ರಾಜ್ಯದ ಮಾತೆಯೆನಿಸಿರುವ ಕಾವೇರಿಯು ಜಗವನ್ನು ರಕ್ಷಿಸಿ ಪಾವನಗೊಳಿಸುವಳು. ಈ ಕಾವೇರಿ ನದಿಯು ಮೂರು ಲೋಕಗಳಲ್ಲಿ ದಕ್ಷಿಣಗಂಗಾ ಎಂದು ಖ್ಯಾತಳಾಗಿರುವಳು.

೯ ತುಲಾಮಾಸದಲ್ಲಿ (ಸೂರ್ಯನು ತುಲಾರಾಶಿಯಲ್ಲಿರುವಾಗ) ಕಾವೇರಿಯ ಸ್ನಾನವು ಗಂಗಾದಿತೀರ್ಥಗಳಿಗಿಂತಲೂ ಶ್ರೇಷ್ಠವಾದುದು, ವೈಶಾಖಮಾಸದಲ್ಲಿ ನರ್ಮದಾಸ್ನಾನ ಹಾಗೂ ಕಾರ್ತಿಕಮಾಸದಲ್ಲಿ ಗೋಮತೀ ನದಿಯ ಸ್ನಾನವು ಶ್ರೇಷ್ಠವೆನಿಸುವವು.

೧೦ ಅದೇ ರೀತಿ ಕಾರ್ತಿಕಮಾಸದಲ್ಲಿ ಕಾಶೀನಗರಿಯಲ್ಲಿ ಗಂಗಾಸ್ನಾನವು ಅತಿಶ್ರೇಷ್ಠವಾದುದು. ಮಕರದಲ್ಲಿ (ಸೂರ್ಯನು ಮಕರ ರಾಶಿಯಲ್ಲಿರುವಾಗ) ಪ್ರಯಾಗ ಹಾಗೂ ಧನುಷ್ಕೋಟಿತೀರ್ಥದ ಸ್ನಾನವು ವಿಶೇಷ ಪುಣ್ಯದಾಯಕವೆನಿಸುವುದು.

**ಸ್ವಾಮಿಪುಷ್ಕರಣೀ ಸ್ನಾನಂ ಧನುರ್ಮಾಸೇ ವಿಶೇಷತಃ ।**
**ಏತತ್ಪುಷ್ಕರಣೀಸ್ನಾನಂ ರಾಕಾಯಾಂ ಮೇಷಗೇ ರವೌ ॥೧೧॥**

**ಕೃತೇ ತು ಕಾಂಚೀ ನಗರೀ ಕಾಶೀ ತ್ರೇತಾಯುಗೇ ವರಾ ।**
**ದ್ವಾಪರೇ ದ್ವಾರಕಾ ಚೈವ ಕುಂಭಘೋಣಂ ಕಲೌ ಯುಗೇ ॥೧೨॥**

**ಕೃತೇ ಸುವರ್ಣದಾನಂ ಚ ತ್ರೇತಾಯಾಂ ರಾಜತಂ ತಥಾ ।**
**ದ್ವಾಪರೇ ವಸ್ತ್ರದಾನಂ ಚ ಅನ್ನದಾನಂ ಕಲೌ ಯುಗೇ ॥೧೩॥**

**ಸರ್ವೇಷಾಮಪಿ ದೇವಾನಾಂ ಸಾಕ್ಷಾನ್ನಾರಾಯಣೋ ವರಃ ।**
**ವರಾ ಮರುದ್ವೃಧಾ ಗಂಗಾ ಸರ್ವಾಸಾಂ ಸರಿತಾಮಪಿ ॥೧೪॥**

**ವೃಕ್ಷಾಣಾಮಪಿ ಚಾಶ್ವತ್ಥಃ ಪತ್ರಾಣಾಂ ತುಲಸೀ ತಥಾ ।**
**ಪುಷ್ಪಾಣಾಮುತ್ತಮಂ ಪದ್ಮಂ ದೇವರ್ಷೀಣಾಂ ಚ ನಾರದಃ ॥೧೫॥**

**ಬ್ರಹ್ಮರ್ಷೀಣಾಂ ವಸಿಷ್ಠಶ್ಚ ಋಷೀಣಾಂ ಗೌತಮಸ್ತಥಾ ।**

---

೧೧ ಸ್ವಾಮಿಪುಷ್ಕರಣೀ ಸ್ನಾನವು ಧನುರ್ಮಾಸದಲ್ಲಿ ವಿಶೇಷವಾದುದು. ಹಾಗೆಯೇ ಈ ಪುಷ್ಕರಣಿಯಲ್ಲಿ ಸೂರ್ಯನು ಮೇಷರಾಶಿಯಲ್ಲಿರುವಾಗ ಬರುವ ಹುಣ್ಣಿಮೆಯಂದು ಮಾಡುವ ಸ್ನಾನವು ಅತಿಶ್ರೇಷ್ಠವಾದುದು. ಎಂದರೆ ಚೈತ್ರ ಶುದ್ಧ ಹುಣ್ಣಿಮೆ.

**ವಿಶೇಷ :** ವೈಶಾಖ ಸ್ನಾನವು ಚೈತ್ರ ಶುದ್ಧ ಪೂರ್ಣಿಮಾದಿಂದ ವೈಶಾಖ ಶುದ್ಧ ಪೂರ್ಣಿಮಾದವರೆಗೆ ಇರುವುದು. ವೈಶಾಖ ಸ್ನಾನದ ಆರಂಭದ ದಿವಸ ಪುಷ್ಕರಣಿಯ ಸ್ನಾನವು ಅತ್ಯಂತ ಪುಣ್ಯದಾಯಕವಾದುದೆಂದು ಭಾವ.

೧೨ ಕೃತಯುಗದಲ್ಲಿ ಕಂಚಿನಗರವು ತ್ರೇತಾಯುಗದಲ್ಲಿ ಕಾಶಿಯು, ದ್ವಾಪರದಲ್ಲಿ ದ್ವಾರಕೆಯು, ಕಲಿಯುಗದಲ್ಲಿ ಕುಂಭಕೋಣವು ಶ್ರೇಷ್ಠವೆನಿಸುವವು.

೧೩ ಕೃತಯುಗದಲ್ಲಿ ಸುವರ್ಣದಾನವು, ತ್ರೇತೆಯಲ್ಲಿ ಬೆಳ್ಳಿಯ ದಾನವು, ದ್ವಾಪರದಲ್ಲಿ ವಸ್ತ್ರದಾನವು ಹಾಗೂ ಕಲಿಯುಗದಲ್ಲಿ ಅನ್ನದಾನವು ಶ್ರೇಷ್ಠವೆನಿಸುವವು.

೧೪ ಎಲ್ಲ ದೇವತೆಗಳಲ್ಲೂ ನಾರಾಯಣನೇ ಉತ್ತಮನು. ಎಲ್ಲ ನದಿಗಳಲ್ಲೂ ಗಂಗಾನದಿಯು ಉತ್ತಮವಾದುದು.

೧೫ ವೃಕ್ಷಗಳಲ್ಲಿ ಅಶ್ವತ್ಥವು ಶ್ರೇಷ್ಠವಾದುದು. ಪತ್ರಗಳಲ್ಲಿ ತುಲಸಿಯು, ಪುಷ್ಪಗಳಲ್ಲಿ ಕಮಲವು, ದೇವರ್ಷಿಗಳಲ್ಲಿ ನಾರದರು ಉತ್ತಮರೆನಿಸುವರು.

ರಾಜರ್ಷೀಣಾಂ ಚಾಂಬರೀಷೋ ರಾಜ್ಞಾಂ ಚ ಭರತಸ್ತಥಾ ॥೧೬॥

ಕಾಮಧೇನುಶ್ಚ ಧೇನೂನಾಂ ವರ್ಣಾನಾಂ ಬ್ರಾಹ್ಮಣೋ ವರಃ ।
ಮಂತ್ರಾಣಾಂ ಚೈವ ಗಾಯತ್ರೀ ಓಂಕಾರಃ ಪ್ರಣವಸ್ತಥಾ ॥೧೭॥

ವೇದಾನಾಂ ಸಾಮವೇದಶ್ಚ ಮಾಸಾನಾಂ ಮಾರ್ಗಶೀರ್ಷಕಃ ।
ಇತ್ಯೇತತ್ಕಥಿತಂ ಸರ್ವಂ ಸಂಕ್ಷೇಪೇಣ ಮಯಾಧುನಾ ।
ಅನ್ಯೇ ಚ ಬಹುಧಾ ಸಂತಿ ವಕ್ತುಂ ಶಕ್ನೋಮಿ ತಾನ್ನ ಹಿ ॥೧೮॥

ಋಷಯ ಊಚುಃ -

ಪುರಾಣಾನಾಂ ಗ್ರಂಥಸಂಖ್ಯಾಂ ವೇತ್ಸಿ ತ್ವಂ ನಿಖಿಲಾಮಪಿ ।
ತತ್ಸರ್ವಂ ಬ್ರೂಹಿ ನಃ ಸೂತ ವ್ಯಾಸಶಿಷ್ಯ ದಯಾನಿಧೇ ॥೧೯॥

ಶ್ರೀಸೂತ ಉವಾಚ-

ಅಷ್ಟಾದಶಪುರಾಣಾನಾಂ ನಾಮಧೇಯಪುರಸ್ಸರಮ್ ।
ಗ್ರಂಥಸಂಖ್ಯಾಂ ಪ್ರವಕ್ಷ್ಯಾಮಿ ಚಾತುರ್ಲಕ್ಷಪ್ರಮಾಣತಃ ॥೨೦॥

ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ ।
ತಥೈವ ನಾರದೀಯಂ ಚ ಮಾರ್ಕಂಡೇಯಮತಃ ಪರಮ್ ॥೨೧॥

---

೧೬ ಬ್ರಹ್ಮರ್ಷಿಗಳಲ್ಲಿ ವಸಿಷ್ಠರು, ಋಷಿಗಳಲ್ಲಿ ಗೌತಮರು, ರಾಜರ್ಷಿಗಳಲ್ಲಿ ಅಂಬರೀಷನು, ರಾಜರುಗಳಲ್ಲಿ ಭರತನು ಉತ್ತಮನಾಗಿದ್ದಾನೆ.

೧೭ ಆಕಳುಗಳಲ್ಲಿ ಕಾಮಧೇನುವೂ, ಚತುರ್ವರ್ಣಗಳಲ್ಲಿ ಬ್ರಾಹ್ಮಣವರ್ಣವೂ, ಮಂತ್ರಗಳಲ್ಲಿ ಗಾಯತ್ರಿ ಹಾಗೂ ಓಂಕಾರವು ಶ್ರೇಷ್ಠವೆನಿಸುವವು.

೧೮ ವೇದಗಳಲ್ಲಿ ಸಾಮವೇದವೂ, ಮಾಸಗಳಲ್ಲಿ ಮಾರ್ಗಶೀರ್ಷವೂ ಶ್ರೇಷ್ಠವೆನಿಸುವವು. ಇದೆಲ್ಲವನ್ನು ನಾನೀಗ ಸಂಕ್ಷೇಪವಾಗಿ ಹೇಳಿರುವೆನು. ಇನ್ನೂ ಅನೇಕ ಶ್ರೇಷ್ಠ ಪದಾರ್ಥಗಳುಂಟು. ಅವೆಲ್ಲವುಗಳನ್ನು ಹೇಳಲಾಗದು.

೧೯ ಪುರಾಣಗಳ ಗ್ರಂಥಸಂಖ್ಯೆಯನ್ನು ನೀವು ಬಲ್ಲಿರಿ. ವ್ಯಾಸಶಿಷ್ಯರಾದ ದಯಾನಿಧಿಗಳಾದ ಸೂತರೇ ಅದೆಲ್ಲವನ್ನು ನಮಗೆ ಹೇಳಿರಿ.

೨೦ ಹದಿನೆಂಟು ಪುರಾಣಗಳನ್ನು ಅವುಗಳ ಹೆಸರಿನ ಸಹಿತವಾಗಿ ಗ್ರಂಥಸಂಖ್ಯೆಯನ್ನು ಹೇಳುವೆನು. ಹದಿನೆಂಟು ಪುರಾಣಗಳ ಒಟ್ಟು ಗ್ರಂಥ ಸಂಖ್ಯೆಯು ನಾಲ್ಕು ಲಕ್ಷಗಳು.

೨೧ ೧) ಬ್ರಹ್ಮಪುರಾಣ ೨) ಪದ್ಮಪುರಾಣ ೩) ವಿಷ್ಣುಪುರಾಣ ೪) ಶೈವಪುರಾಣ ೫)

**ಆಗ್ನೇಯಂ ಚಾಷ್ಟಮಂ ಪ್ರೋಕ್ತಂ ಭವಿಷ್ಯನ್ನವಮಂ ಸ್ಮೃತಮ್ ।**
**ದಶಮಂ ಬ್ರಹ್ಮವೈವರ್ತಂ ಲೈಂಗಮೇಕಾದಶಂ ಸ್ಮೃತಮ್ ॥೨೨॥**

**ದ್ವಾದಶಂ ವಾಮನಂ ಪ್ರೋಕ್ತಂ ವಾರಾಹಂ ತು ತ್ರಯೋದಶಮ್ ।**
**ಮಾತ್ಸ್ಯಂಚತುರ್ದಶಂಪ್ರೋಕ್ತಂಕೌರ್ಮಂಪಂಚದಶಂಸ್ಮೃತಮ್ ॥೨೩॥**

**ಷೋಡಶಂ ಗಾರುಡಂ ಪ್ರೋಕ್ತಂ ಸ್ಕಂದಂ ಸಪ್ತದಶಂ ಸ್ಮೃತಮ್ ।**
**ಅಷ್ಟಾದಶಂ ತು ಬ್ರಹ್ಮಾಂಡಂ ಪುರಾಣಂ ತು ಯಥಾಕ್ರಮಮ್ ॥೨೪॥**

**ತಾಮಸಂ ಸಾತ್ವಿಕಂ ಚೈವ ರಾಜಸಂ ತದಹಂ ಬ್ರುವೇ ।**
**ಮಾತ್ಸ್ಯಂ ಕೌರ್ಮಂ ತಥಾ ಲೈಂಗಂ ಶೈವಂ ಸ್ಕಾಂದಂ ತಥೈವ ಚ ॥೨೫॥**

**ಆಗ್ನೇಯಮೇತತ್ ಷಟ್ಕಂ ವೈ ತಾಮಸಂ ಚೇತಿ ವಿಶ್ರುತಮ್ ।**
**ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಂಡೇಯಂ ತಥೈವ ಚ ॥೨೬॥**

**ಭವಿಷ್ಯದ್ವಾಮನಂ ಬ್ರಾಹ್ಮಂ ರಾಜಸಾನೀತಿ ವಿದ್ಧಿ ವೈ ।**
**ವೈಷ್ಣವಂ ನಾರದೀಯಂ ತು ತಥಾ ಭಾಗವತಂ ಶುಭಮ್ ॥೨೭॥**

---

ಭಾಗವತಪುರಾಣ ೬) ನಾರದೀಯಪುರಾಣ ೭) ಮಾರ್ಕಂಡೇಯಪುರಾಣ,

೨೨ ೮) ಆಗ್ನೇಯಪುರಾಣ ೯) ಭವಿಷ್ಯಪುರಾಣ ೧೦) ಬ್ರಹ್ಮವೈವರ್ತಪುರಾಣ ೧೧) ಲಿಂಗಪುರಾಣ

೨೩ ೧೨) ವಾಮನಪುರಾಣ ೧೩) ವರಾಹಪುರಾಣ ೧೪) ಮತ್ಸ್ಯಪುರಾಣ ೧೫) ಕೂರ್ಮಪುರಾಣ

೨೪ ೧೬) ಗರುಡಪುರಾಣ ೧೭) ಸ್ಕಂದಪುರಾಣ ೧೮) ಬ್ರಹ್ಮಾಂಡಪುರಾಣ ಹೀಗೆ ಪುರಾಣಗಳ ಕ್ರಮವಿರುವುದು.

೨೫ ಪುರಾಣಗಳಲ್ಲಿ ತಾಮಸ, ಸಾತ್ವಿಕ, ರಾಜಸ ಎಂಬ ವಿಭಾಗವನ್ನು ತಿಳಿಸುವೆ. ಮತ್ಸ್ಯಪುರಾಣ, ಕೂರ್ಮಪುರಾಣ, ಲಿಂಗಪುರಾಣ, ಶೈವಪುರಾಣ, ಸ್ಕಂದಪುರಾಣ

೨೬ ಮತ್ತು ಆಗ್ನೇಯಪುರಾಣ ಈ ಆರು ಪುರಾಣಗಳು ತಾಮಸಪುರಾಣಗಳೆಂದು ಹೇಳಲ್ಪಟ್ಟಿವೆ. ಬ್ರಹ್ಮಾಂಡಪುರಾಣ, ಬ್ರಹ್ಮವೈವರ್ತಪುರಾಣ, ಮಾರ್ಕಂಡೇಯ ಪುರಾಣ

೨೭ ಭವಿಷ್ಯಪುರಾಣ, ವಾಮನಪುರಾಣ ಹಾಗೂ ಬ್ರಹ್ಮಪುರಾಣ ಈ ಆರು ಪುರಾಣ ಗಳು ರಾಜಸಪುರಾಣಗಳೆಂದು ತಿಳಿ. ವಿಷ್ಣುಪುರಾಣ, ನಾರದೀಯಪುರಾಣ, ಭಾಗವತಪುರಾಣ

**ಗಾರುಡಂ ಚ ತಥಾ ಪಾದ್ಮಂ ವಾರಾಹಃ ಸಾತ್ವಿಕಾನಿ ಷಟ್ ।**
**ಸಾತ್ವಿಕಾ ಮೋಕ್ಷದಾಃ ಪ್ರೋಕ್ತಾಃ ರಾಜಸಾಃ ಸ್ವರ್ಗದಾಃ ಶುಭಾಃ ॥೨೮॥**

**ತಥೈವ ತಾಮಸಾ ಏತೇ ನಿರಯಪ್ರಾಪ್ತಿಹೇತವಃ ।**
**ಏತಾನಿ ಕಥಿತಾನೀಹ ಪುರಾಣಾನಿ ಮಹರ್ಷಿಭಿಃ ॥೨೯॥**

**ಅಥ ತಂ ಸಂಪ್ರವಕ್ಷ್ಯಾಮಿ ಪುಣ್ಯಕ್ಷೇತ್ರಸ್ಯ ವೈಭವಮ್ ।**
**ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಯತ್ನತೋ ನರಃ ॥೩೦॥**

**ಶ್ರೀಸೂತ ಉವಾಚ-**

**ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ತ್ವವಂತಿಕಾ ।**
**ಪುರೀ ದ್ವಾರಾವತೀ ಚೈವ ಸಪ್ತೈತಾ ಮೋಕ್ಷದಾಯಕಾಃ ॥೩೧॥**

**ಏತದ್ವಃ ಕಥಿತಂ ಕ್ಷೇತ್ರಂ ಪುಣ್ಯಂ ಪಾಪಹರಂ ಶುಭಮ್ ।**
**ತಸ್ಮಾತ್ಸರ್ವಪ್ರಯತ್ನೇನ ಸೇವೇತ ಕ್ಷೇತ್ರಮುತ್ತಮಮ್ ॥೩೨॥**

**ಇತಿಹಾಸಮಿಮಂ ಶ್ರುತ್ವಾ ವಿಶುದ್ಧಃ ತತ್ಕ್ಷಣಾದ್ಭವೇತ್ ।**
**ಶ್ರುತ್ವಾ ಚ ಪರಮಂ ಹರ್ಷಮವಾಪುಃ ಶೌನಕಾದಯಃ ॥೩೩॥**

---

೨೮ ಗರುಡಪುರಾಣ, ಪದ್ಮಪುರಾಣ ಹಾಗೂ ವರಾಹಪುರಾಣಗಳೆಂಬ ಆರು ಪುರಾಣಗಳು ಸಾತ್ವಿಕ ಪುರಾಣಗಳು. ಸಾತ್ವಿಕ ಪುರಾಣಗಳು ಮೋಕ್ಷದಾಯಕವಾಗಿವೆ. ರಾಜಸಪುರಾಣಗಳು ಸ್ವರ್ಗದಾಯಕವೆನಿಸಿವೆ.

೨೯ ಹಾಗೆಯೇ ತಾಮಸಪುರಾಣಗಳು ನರಕಪ್ರಾಪ್ತಿಗೆ ಸಾಧನವಾಗಿವೆ ಎಂದು ಮಹರ್ಷಿಗಳು ಹೇಳುವರು.

೩೦ ಈಗ ಪುಣ್ಯಕ್ಷೇತ್ರದ ವೈಭವವನ್ನು ತಿಳಿಸುವೆನು. ಪ್ರಯತ್ನಪೂರ್ವಕ ಇದನ್ನು ಕೇಳಿದ ಮನುಜನು ಎಲ್ಲ ಪಾಪಗಳಿಂದಲೂ ಮುಕ್ತನಾಗುವನು.

೩೧ ಅಯೋಧ್ಯೆ, ಮಥುರೆ, ಮಾಯಾ (ಹರಿದ್ವಾರ) ಕಾಶಿ, ಕಂಚಿ, ಅವಂತಿ (ಉಜ್ಜೈನಿ), ಪುರಿ, ದ್ವಾರಕೆ ಈ ಏಳು ಕ್ಷೇತ್ರಗಳು ಮೋಕ್ಷಪ್ರಾಪ್ತಿಯ ಸ್ಥಾನಗಳು.

೩೨ ಇಲ್ಲಿ ಉಕ್ತವಾದ ಕ್ಷೇತ್ರಗಳು ಪಾಪನಾಶಕಗಳೂ, ಪುಣ್ಯದಾಯಕವೂ ಆದವುಗಳು. ಆದುದರಿಂದ ವಿಶೇಷವಾಗಿ ಪ್ರಯತ್ನಿಸಿ ಈ ಉತ್ತಮಕ್ಷೇತ್ರಗಳನ್ನು ಸೇವಿಸಬೇಕು.

೩೩ ಈ ಇತಿಹಾಸವನ್ನು ಕೇಳಿದವನು ಕೂಡಲೇ ಶುದ್ಧನೆನಿಸುವನು. ಈ ಇತಿಹಾಸವನ್ನು ಕೇಳಿ ಶೌನಕಾದಿ ಋಷಿಗಳು ಅತ್ಯಂತ ಹರ್ಷಿತರಾದರು.

**ಸೂತಂ ಚ ಪೂಜಯಾಮಾಸುರ್ಗಂಧಪುಷ್ಪಾಕ್ಷತಾದಿಭಿಃ ।**
**ಏವಮೇವ ಪುರಾಣಾನಿ ಶ್ರುತ್ವಾಪ್ಯನ್ಯೇಽಪಿ ಮಾನವಾಃ ॥೩೪॥**

**ಶ್ರಾವಕಂ ಬ್ರಾಹ್ಮಣಶ್ರೇಷ್ಠಂ ಯಥಾಶಕ್ತಿ ಪ್ರಪೂಜಯೇತ್ ।**
**ಗಂಧಪುಷ್ಪಾಕ್ಷತೈರ್ದಿವ್ಯೈಃ ತುಲಸೀದಾಮಭೂಷಣೈಃ ॥೩೫॥**

**ವಸ್ತ್ರೈಶ್ಚ ಯಾನಮಾರೋಪ್ಯ ಯಥಾ ವಿಭವಸಾರತಃ ।**
**ದಕ್ಷಿಣಾಂ ಚ ತಥಾ ದದ್ಯಾತ್ ವಿತ್ತಶಾಠ್ಯಂ ನ ಕಾರಯೇತ್ ॥೩೬॥**

**ಲಿಖಿತಂ ಪುಸ್ತಕಂ ಯಸ್ತು ಸ್ವಹಸ್ತೇನ ವಿಶೇಷತಃ ।**
**ದದ್ಯಾದ್ವಿಪ್ರಾಯ ವಿದುಷೇ ವಿಷ್ಣುಭಕ್ತಾಯ ಧೀಮತೇ ॥೩೭॥**

**ಕರಸ್ಥಂ ತಸ್ಯ ಕೈವಲ್ಯಂ ಕಿಮುತಾನ್ಯಾ ವಿಭೂತಯಃ ।**
**ಧನುರ್ಮಾಸಸ್ಯ ಮಾಹಾತ್ಮ್ಯಂ ಭುಕ್ತಿಮುಕ್ತ್ಯೈಕಸಾಧನಮ್ ।**
**ಯಃ ಪಠೇಚ್ಛೃಣುಯಾಚ್ಚೈತತ್ ಮೂಢೋಽಪಿ ಜ್ಞಾನವಾನ್ ಭವೇತ್ ॥೩೮॥**

**ಆಯುಷ್ಯಮಾರೋಗ್ಯಮಭೀಷ್ಟಸಿದ್ಧಿಂ**
**ಕುಲಾಭಿವೃದ್ಧಿಂ ಧನಧಾನ್ಯವೃದ್ಧಿಮ್ ।**

---

೩೪ ಹಾಗೂ ಪುರಾಣವಾಚಕರಾದ ಸೂತರನ್ನು ಗಂಧ-ಪುಷ್ಪ-ಅಕ್ಷತೆಗಳಿಂದ ಪೂಜಿಸಿದರು. ಇದೇ ರೀತಿ ಪುರಾಣಗಳನ್ನು ಕೇಳಿದ ಬೇರೆ ಮನುಜರೂ ಸಹ,

೩೫ ಪುರಾಣಗಳನ್ನು ಹೇಳಿದ ಬ್ರಾಹ್ಮಣಶ್ರೇಷ್ಠರನ್ನು ತಮ್ಮ ಶಕ್ತ್ಯನುಸಾರವಾಗಿ ಪೂಜಿಸಬೇಕು. ಶ್ರೇಷ್ಠವಾದ ಗಂಧ, ಹೂವುಗಳು, ಅಕ್ಷತೆ, ತುಲಸಿಯ ಮಾಲೆ,

೩೬ ಹಾಗೂ ವಸ್ತ್ರಗಳಿಂದ ಅಲಂಕರಿಸಿ ವಾಹನದ ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡಬೇಕು. ತನ್ನ ಸಂಪತ್ತಿನ ಅಹಂಕಾರ ತೋರದೇ ಯೋಗ್ಯವಾದ ದಕ್ಷಿಣೆ ನೀಡಬೇಕು.

೩೭ ತನ್ನ ಕೈಗಳಿಂದಲೇ ಬರೆಯಲ್ಪಟ್ಟ ಧನುರ್ಮಾಸ ಮಹಿಮೆಯ ಪುಸ್ತಕವನ್ನು ವಿಷ್ಣುಭಕ್ತನಾದ ಜ್ಞಾನಿಯಾದ ಬ್ರಾಹ್ಮಣನಿಗೆ ನೀಡಲು,

೩೮ ಆತನಿಗೆ ಮುಕ್ತಿಯೇ ಕೈವಶವೆಂದ ಮೇಲೆ ಬೇರೆ ಸಂಪತ್ತುಗಳ ಬಗೆಗೆ ಹೇಳುವುದೇನಿದೆ. ಭುಕ್ತಿ-ಮುಕ್ತಿಗಳಿಗೆ ಅತ್ಯಂತ ಪ್ರಮುಖ ಸಾಧನವಾದ ಧನುರ್ಮಾಸದ ಮಹಿಮೆಯನ್ನು ಯಾರು ಹೇಳುವರೋ ಕೇಳುವರೋ ಅವರು ಮೂರ್ಖರಾದರೂ ಜ್ಞಾನವಂತರಾಗುವರು.

**ಸದ್ದಾನವೃದ್ಧಿಂ ವಿಪುಲಾಂ ಚ ಕೀರ್ತಿಂ**
**ವಿಂದೇನ್ಮಹಾಖ್ಯಾನಮಿದಂ ಪಠೇದ್ಯಃ ॥೩೯॥**

**ಯಃ ಪ್ರಭಾತೇ ನದೀತೀರೇ ಪಠೇದ್ದೇವಾಲಯೇಽಪಿ ವಾ ।**
**ಸರ್ವಬಂಧವಿನಿರ್ಮುಕ್ತೋ ಹರಿಣಾ ಸಹ ಮೋದತೇ ॥೪೦॥**

**ಪಿತೃಭ್ಯಃ ಶ್ರಾವಯೇಚ್ಛ್ರಾದ್ಧೇ ಏತದಾಖ್ಯಾನಮುತ್ತಮಮ್ ।**
**ಗಯಾಶ್ರಾದ್ಧಾಯುತಂ ತೇನ ಕೃತಮೇವ ನ ಸಂಶಯಃ ॥೪೧॥**

**ಬ್ರಹ್ಮಹತ್ಯಾದಿಪಾಪಾನಾಂ ನಿಷ್ಕೃತಿಸ್ತ್ರಿವಿಧಾ ಸ್ಮೃತಾ ।**
**ಏತದಾಖ್ಯಾನಪಾಠಾದ್ವಾ ಸೇತುನಾ ವಾಽಶ್ವಮೇಧತಃ ॥೪೨॥**

**ಗಂಗಾಸ್ನಾನಾದಿಕೋಟೀಭಿಃ ತಥಾ ಕ್ರತುಶತೈರಪಿ ।**
**ಯತ್ಪುಣ್ಯಂ ಲಭತೇ ತತ್ತು ಚಾಪಮಾಸಸ್ಯ ವೈಭವಾತ್ ॥೪೩॥**

**ಇತಿಹಾಸಮಿಮಂ ಪುಣ್ಯಂ ಸರ್ವಪಾಪಪ್ರಣಾಶನಮ್ ।**
**ಏಕಾದಶ್ಯಾಂ ಪಠೇತ್ ಪ್ರಾತಃ ಶ್ರಾವಯೇದಪಿ ಭಕ್ತಿಮಾನ್ ॥೪೪॥**

---

೩೯ ಆಯುಷ್ಯ, ಆರೋಗ್ಯ, ಅಭೀಷ್ಟ, ಕುಲಾಭಿವೃದ್ಧಿ, ಧನಧಾನ್ಯಗಳ ಅಭಿವೃದ್ಧಿಯಾಗುವುದು. ಒಳ್ಳೆಯ ದಾನಿಯಾಗುವನು, ಅಪಾರ ಕೀರ್ತಿ ಪಡೆಯುವನು.

೪೦ ಪ್ರಾತಃಕಾಲದಲ್ಲಿ ನದೀತೀರದಲ್ಲಾಗಲೀ, ದೇವಾಲಯದಲ್ಲಾಗಲೀ ಇದನ್ನು ಪಠಿಸಿದವನು ಎಲ್ಲ ಬಂಧನಗಳಿಂದ ದೂರನಾಗಿ ಹರಿಯ ಜೊತೆಗೆ ಸುಖಿಸುವನು.

೪೧ ಶ್ರಾದ್ಧಕಾಲದಲ್ಲಿ ಇದನ್ನು ಪಿತೃಗಳಿಗೆ ಕೇಳಿಸಿದರೆ ಅವನು ಹತ್ತು ಸಾವಿರ ಗಯಾಶ್ರಾದ್ಧಗಳನ್ನು ಮಾಡಿದಂತೆಯೇ ಸರಿ.

೪೨ ಬ್ರಹ್ಮಹತ್ಯೆಯೇ ಮೊದಲಾದ ಘೋರ ಪಾಪಗಳಿಗೆ ಪರಿಹಾರವು ಮೂರು ವಿಧವಾಗಿದೆ. ಈ ಧನುರ್ಮಾಸ ಮಾಹಾತ್ಮ್ಯದ ಪಠಣ, ರಾಮಸೇತುದರ್ಶನ ಅಥವಾ ಅಶ್ವಮೇಧ ಯಾಗ.

೪೩ ಕೋಟಿ ಸಾರಿ ಗಂಗಾಸ್ನಾನದಿಂದ, ನೂರಾರು ಯಾಗಗಳಿಂದ ಏನು ಪುಣ್ಯ ದೊರಕುವುದೋ ಅದು ಧನುರ್ಮಾಸದ ಮಹಿಮೆಯ ಶ್ರವಣದಿಂದ ದೊರಕುವುದು.

೪೪ ಸಕಲ ಪಾಪವಿನಾಶಕವಾದ ಈ ಇತಿಹಾಸವನ್ನು ಏಕಾದಶಿಯಂದು ಬೆಳಗಿನಲ್ಲಿ ಪಠಿಸಬೇಕು ಅಥವಾ ಕೇಳಬೇಕು.

**ಅಚಂಚಲಂ ಚಾಪ್ಯೈಶ್ವರ್ಯಂ ಮುಕ್ತಿಂ ಚಾಪ್ಯತಿದುರ್ಲಭಾಮ್ ।**
**ಸರ್ವಲೋಕಾಧಿಪತ್ಯಂ ಚ ದದ್ಯಾನ್ಮುದ್ಗಾನ್ನವೈಭವಮ್ । ॥೪೫॥**

**ಏವಂ ಯಃ ಕುರುತೇ ಭಕ್ತ್ಯಾ ವಿಷ್ಣುಭಕ್ತೋ ಜಿತೇಂದ್ರಿಯಃ ।**
**ಷಣ್ಮಾಸಾದ್ಧನಮಾಪ್ನೋತಿ ಪುತ್ರಲಾಭಂ ತಥೈವ ಚ ॥೪೬॥**

**ಕಿಮತ್ರ ಬಹುನೋಕ್ತೇನ ರಹಸ್ಯಂ ಪರಮಂ ಶ್ರುಣು ।**
**ನ ವಕ್ತವ್ಯಂ ನ ವಕ್ತವ್ಯಂ ತ್ವಯಿ ಸ್ನೇಹಾನ್ಮಯೋದಿತಮ್ ।**
**ಅವೈಷ್ಣವಾಯ ಯೋ ವಕ್ತಿ ವಿಷ್ಣುದ್ರೋಹೀ ಭವೇದ್ ಧೃವಮ್ ॥೪೭॥**

**ಇತಿಹಾಸಮಿಮಂ ಶ್ರುತ್ವಾ ರಾಜಾನಃ ಪೂರ್ವ ಏವ ಹಿ ।**
**ಅವಾಪುರ್ಬಹವಶ್ಚೇಷ್ಟಾನಿಹಲೋಕೇ ಪರತ್ರ ಚ ॥೪೮॥**

**ಅಂಬರೀಷೇ ಮಹಾರಾಜೇ ವಿಷ್ಣುಭಕ್ತೇ ದೃಢವ್ರತೇ ।**
**ಧನುರ್ಮಾಸಪ್ರಭಾವೇನ ಚಕ್ರಂ ತಿಷ್ಠತಿ ವೈ ಸದಾ ॥೪೯॥**

**ತಥಾ ದಶರಥಸ್ಯಾಪಿ ಪುತ್ರತಾಂ ಪ್ರಾಪ ವೈ ಪುನಃ ।**
**ರಾಮೋ ದಾಶರಥಿಃ ಶ್ರೀಮಾನ್ ಸಾಕ್ಷಾದ್ವಿಷ್ಣುರ್ನ ಸಂಶಯಃ ॥೫೦॥**

---

೪೫ ಶಾಶ್ವತವಾದ ಸಂಪತ್ತನ್ನು, ಅತಿ ದುರ್ಲಭವಾದ ಮುಕ್ತಿಯನ್ನು, ಸರ್ವಲೋಕಾಧಿಪತ್ಯವನ್ನು ಧನುರ್ಮಾಸದ ಮುದ್ಗಾನ್ನದಾನದ ವೈಭವವು ನೀಡುವುದು.

೪೬ ಯಾವ ವಿಷ್ಣುಭಕ್ತನು ಜಿತೇಂದ್ರಿಯನಾಗಿ ಹೀಗೆ ಮಾಡುವನೋ ಅಂಥವನು ಆರು ತಿಂಗಳಿನಲ್ಲಿ ಧನವನ್ನು ಹೊಂದುವನು. ಹಾಗೆಯೇ ಪುತ್ರನನ್ನು ಪಡೆಯುವನು.

೪೭ ಹೆಚ್ಚಿಗೆ ಹೇಳುವುದರಿಂದೇನು? ಅತ್ಯಂತ ರಹಸ್ಯವನ್ನು ಹೇಳುವೆನು ಕೇಳು. ಇದನ್ನು ಎಲ್ಲರಿಗೂ ಸರ್ವಥಾ ಹೇಳಕೂಡದು. ನಿನ್ನಲ್ಲಿ ಸ್ನೇಹದಿಂದ ನಾನು ಹೇಳಿರುವೆನು. ವಿಷ್ಣುಭಕ್ತಿರಹಿತನಿಗೆ ಇದನ್ನು ಹೇಳಿದವನು ನಿಶ್ಚಿತವಾಗಿ ವಿಷ್ಣುದ್ರೋಹಿಯೆನಿಸುವನು.

೪೮ ಹಿಂದಿನ ಅನೇಕ ರಾಜರುಗಳು ಈ ಇತಿಹಾಸವನ್ನು ಕೇಳಿ ಈ ಲೋಕದಲ್ಲಿ ಹಾಗೂ ಬೇರೆ ಲೋಕಗಳಲ್ಲಿ ಅನೇಕ ಇಷ್ಟಾರ್ಥಗಳನ್ನು ಹೊಂದಿರುವರು.

೪೯ ವಿಷ್ಣುಭಕ್ತನೂ, ದೃಢವ್ರತನೂ ಆದ ಅಂಬರೀಷ ಮಹಾರಾಜನ ಹತ್ತಿರ ಧನುರ್ಮಾಸ ಪ್ರಭಾವದಿಂದ ಸುದರ್ಶನ ಚಕ್ರವು ಯಾವಾಗಲೂ ಇರುತ್ತಿತ್ತು.

೫೦ ಅದೇ ರೀತಿ ಧನುರ್ಮಾಸ ಪ್ರಭಾವದಿಂದ ದಶರಥನಿಗೆ ಶ್ರೀಹರಿಯೇ

**ಧ್ರುವರಾಜೋಽಪಿ ತತ್ಕೃತ್ವಾ ಧ್ರುವಂ ಪದಮವಾಪ ಸಃ ।**
**ಜನಕಸ್ತು ನಿಮೇಃ ಪುತ್ರಃ ಶ್ರುತ್ವೇದಂ ಗೌತಮಾತ್ಮಜಾತ್ ।**
**ಜ್ಞಾತೀನಾಮುತ್ತಮಶ್ಚಾಸೀತ್ ಪೂಜ್ಯೋಽಭೂಚ್ಚ ತಪಸ್ವಿನಾಮ್ ॥೫೧॥**

**ಪುರಾ ಪಾಂಡುಶ್ಚ ಧರ್ಮಾತ್ಮಾ ಹತ್ವಾರಣ್ಯಧಿಯಾ ದ್ವಿಜಮ್ ।**
**ಏತದಾಖ್ಯಾನಪಠನಾತ್ಸದ್ಯಃ ಶುದ್ಧೋಽಭವನ್ನೃಪಃ ॥೫೨॥**

**ಧರ್ಮಾತ್ಮಜಶ್ಚಾಪಿ ಮಹಾನುಭಾವೋ**
**ದುರ್ಯೋಧನಾದ್ಯೈರ್ವಿಪಿನೇ ವಿವಾಸಿತಃ ।**
**ದುಃಖಾರ್ದಿತಃ ಕೃಷ್ಣಮುಖೇರಿತಂ ಗೃಣನ್**
**ಜಿತ್ವಾ ರಿಪೂನ್ ಪ್ರಾಪ ಪುನರ್ಮಹಾಶ್ರಿಯಮ್ ॥೫೩॥**

**ಏವಂ ವೈ ಬಹವಃ ಕೃತ್ವಾ ಧನುರ್ಮಾಸೇಽರ್ಚನಂ ಹರೇಃ ।**
**ತೇನ ಪುಣ್ಯಪ್ರಭಾವೇನ ಪ್ರಾಪ್ನುವನ್ ವೈಷ್ಣವಂ ಪದಮ್ ॥೫೪॥**

**ಸ್ವರ್ಣಸ್ತೇಯೀ ಸುರಾಪಾಯೀ ಬ್ರಹ್ಮಹಾ ಗುರುತಲ್ಪಗಃ ।**
**ಪಿತೃಘ್ನೋ ಮಾತೃಹಂತಾ ಚ ಸ್ವಾಮಿದ್ರೋಹೀ ಚ ಮಾನವಃ ॥೫೫॥**

---

ಮಗನಾದನು. ದಶರಥಪುತ್ರನಾದ ಶ್ರೀರಾಮನು ಸಾಕ್ಷಾತ್ ವಿಷ್ಣುವು. ಇದರಲ್ಲಿ ಯಾವ ಸಂದೇಹವಿಲ್ಲ.

೫೧ ಧ್ರುವಮಹಾರಾಜನೂ ಕೂಡ ಇದನ್ನಾಚರಿಸಿ ಶಾಶ್ವತವಾದ ಸ್ಥಾನವನ್ನು ಪಡೆದನು. ನಿಮಿರಾಜನ ಮಗನಾದ ಜನಕನು ಕೂಡ ಗೌತಮರ ಮಕ್ಕಳಿಂದ ಇದನ್ನು ಕೇಳಿ ಬಂಧುವರ್ಗದಲ್ಲೆಲ್ಲ ಅತಿ ಉತ್ತಮನೆನಿಸಿದನು ಹಾಗೂ ತಪಸ್ವಿಗಳಿಗೂ ಪೂಜ್ಯನೆನಿಸಿದನು.

೫೨ ಹಿಂದೆ ಪಾಂಡುರಾಜನು ಮೃಗವೆಂದು ತಿಳಿದು ಕಿಂದಮ ಋಷಿಯನ್ನು ಸಂಹರಿಸಿದ್ದನು. ಈ ಆಖ್ಯಾನದ ಪಠನೆಯಿಂದ ತಕ್ಷಣದಲ್ಲಿ ಶುದ್ಧನಾದನು.

೫೩ ಧರ್ಮಸುತನಾದ ಯುಧಿಷ್ಠಿರನು ಕೂಡ ದುರ್ಯೋಧನಾದಿಗಳಿಂದ ದ್ಯೂತದಲ್ಲಿ ಸೋಲನ್ನನುಭವಿಸಿ ವನವಾಸಕ್ಕೆ ತೆರಳಿದನು. ವನದಲ್ಲಿ ದುಃಖದಿಂದ ಜರ್ಜರಿತನಾಗಿದ್ದವನು ಶ್ರೀಕೃಷ್ಣನ ಮುಖದಿಂದ ಧನುರ್ಮಾಸ ಮಹಿಮೆಯನ್ನು ಕೇಳಿ ಶತ್ರುಗಳನ್ನೆಲ್ಲ ಸಂಹರಿಸಿ ಮತ್ತೆ ಮಹದೈಶ್ವರ್ಯವನ್ನು ಪಡೆದನು.

೫೪ ಇದೇ ರೀತಿಯಾಗಿ ಅನೇಕರು ಧನುರ್ಮಾಸದಲ್ಲಿ ಹರಿಯನ್ನು ಪೂಜಿಸಿ ಆ ಪುಣ್ಯದ ಪ್ರಭಾವದಿಂದ ವಿಷ್ಣುಪದವನ್ನು ಹೊಂದಿದರು.

೫೫ ಬಂಗಾರದ ಚೌರ್ಯ, ಮದ್ಯಪಾನ, ಬ್ರಹ್ಮಹತ್ಯೆ, ಗುರುತಲ್ಪಗಮನ

**ವಿಶ್ವಾಸಘಾತಕಶ್ಚೈವ ಅವೇದೀ ಲುಬ್ಧನಾಸ್ತಿಕೌ ।
ಸಾಧುದ್ವೇಷೀ ನಿರಗ್ನಿಶ್ಚ ಏತೇ ಸರ್ವೇಽಂತ್ಯಜಾಃ ಸ್ಮೃತಾಃ ।
ಶ್ರುತ್ವೇತಿಹಾಸಂ ವೈ ಭಕ್ತ್ಯಾ ಪೂತಾ ವೈ ನಾತ್ರ ಸಂಶಯಃ ॥೫೬॥**

**ಏತದಾಖ್ಯಾನಪಠನಾತ್ ಬ್ರಾಹ್ಮಣೋ ವೈಷ್ಣವೋ ಭವೇತ್ ।
ಅನೇಕಜನ್ಮಸಂಸಿದ್ಧಃ ಪ್ರತಿಕಲ್ಪಂ ದ್ವಿಜೋತ್ತಮಃ ॥೫೭॥**

**ಕ್ಷತ್ರಿಯೋ ಲಭತೇ ರಾಜ್ಯಂ ವೈಶ್ಯಶ್ಚ ಧನವಾನ್ ಭವೇತ್ ।
ಶೂದ್ರಶ್ಚ ಲಭತೇ ಜ್ಞಾನಂ ಕನ್ಯಾರ್ಥೀ ಚ ಗೃಹೀ ಭವೇತ್ ॥೫೮॥**

**ಗರ್ಭಿಣೀ ಜನಯೇತ್ಪುತ್ರಂ ಶ್ರುತ್ವಾಖ್ಯಾನಮಿದಂ ಮಹತ್ ।
ದುಃಖದಾರಿದ್ರ್ಯಪಾಪಘ್ನಂ ಸರ್ವಯಜ್ಞಫಲಪ್ರದಮ್ ।
ಶ್ರುತ್ವೇದಂ ದಿವ್ಯಮಾಖ್ಯಾನಂ ಸರ್ವತ್ರ ವಿಜಯೀ ಭವೇತ್ ॥೫೯॥**

**॥ ಇತಿ ಶ್ರೀಮದಾಗ್ನೇಯಪುರಾಣೇ ಧನುರ್ಮಾಸಮಾಹಾತ್ಮ್ಯೇ ತ್ರಿಂಶೋಽಧ್ಯಾಯಃ ॥**

**॥ ಸಮಾಪ್ತೋಽಯಂ ಗ್ರಂಥಃ ॥**

---

ಮುಂತಾದ ಮಹಾಪಾತಕಗಳನ್ನೇ ಆಚರಿಸಿದ್ದರೂ ಕೂಡ ಪಿತೃಹಂತಕನಾಗಿರಲಿ, ಮಾತೃಘಾತಕನಾಗಿರಲಿ, ಸ್ವಾಮಿದ್ರೋಹಿಯಾಗಿರಲಿ,

೫೬ ವಿಶ್ವಾಸದ್ರೋಹಿಯಾಗಿರಲಿ, ವೇದಬಾಹ್ಯನಾಗಿರಲಿ, ಲೋಭಿಯಾಗಿರಲಿ, ನಾಸ್ತಿಕನಾಗಿರಲಿ, ಸಜ್ಜನ ದ್ವೇಷಿಯಾಗಿರಲಿ, ಅಗ್ನಿಪೂಜೆಯ ಅಧಿಕಾರ ರಹಿತನಾಗಿರಲಿ, ಅಂತ್ಯಜರೆಂದು ಹೇಳಲ್ಪಟ್ಟ ಇವರೆಲ್ಲ ಈ ಇತಿಹಾಸವನ್ನು ಕೇಳಿ ನಿಸ್ಸಂಶಯವಾಗಿ ಶುದ್ಧರಾಗುವರು.

೫೭ ಈ ಆಖ್ಯಾನದ ಪಠನದಿಂದ ಬ್ರಾಹ್ಮಣನು ವಿಷ್ಣುಭಕ್ತನಾಗುವನು. ಪ್ರತಿಕಲ್ಪದಲ್ಲೂ ಬ್ರಾಹ್ಮಣನಾಗಿ ಜನಿಸಿ ಅನೇಕ ಜನ್ಮಗಳಲ್ಲಿ ಸಿದ್ಧಪುರುಷನೆನಿಸುವನು.

೫೮ ಕ್ಷತ್ರಿಯನು ರಾಜ್ಯ ಪಡೆವನು, ವೈಶ್ಯನು ಧನವಂತನಾಗುವನು, ಶೂದ್ರನು ಜ್ಞಾನವನ್ನು ಪಡೆಯುವನು, ಕನ್ಯಾಪೇಕ್ಷಿಯಾದವನು ಗೃಹಸ್ಥನಾಗುವನು.

೫೯ ಇದನ್ನು ಕೇಳಿದ ಗರ್ಭಿಣಿಯು ಪುತ್ರನಿಗೆ ಜನ್ಮ ನೀಡುವಳು. ದುಃಖ ದಾರಿದ್ರ್ಯಗಳನ್ನು ಪಾಪಗಳನ್ನು ನಾಶಗೊಳಿಸಿ ಸಕಲ ಯಜ್ಞಾಚರಣೆಯ ಫಲವನ್ನು ನೀಡುವುದು. ಶ್ರೇಷ್ಠವಾದ ಈ ಆಖ್ಯಾನವನ್ನು ಕೇಳಿ ಎಲ್ಲೆಡೆ ವಿಜಯಿಯೆನಿಸುವನು.

**॥ ಇಲ್ಲಿಗೆ ಮೂವತ್ತನೇ ಅಧ್ಯಾಯವು ಮುಗಿಯಿತು ॥**



ವನವಾಸದಲ್ಲಿ ಶ್ರೀಕೃಷ್ಣನಿಂದ ಪಾಂಡವರಿಗೆ ಧನುರ್ಮಾಸದ ಉಪದೇಶ

### ಶ್ರೀ ಆಗ್ನೇಯಪುರಾಣಾಂತರ್ಗತ

# ಧನುರ್ಮಾಸಮಾಹಾತ್ಮ್ಯ

## ಮೊದಲನೇ ಅಧ್ಯಾಯ

ಶೌನಕಾದಿ ಋಷಿಗಳೆಲ್ಲರೂ ಸೂತರನ್ನು ಕೇಳಿದರು. ಸರ್ವಶಾಸ್ತ್ರಗಳನ್ನರಿತ ಸೂತರೇ! ನಮಗೆ ಧನುರ್ಮಾಸದ ಮಹಿಮೆಯನ್ನು ವಿಸ್ತಾರವಾಗಿ ತಿಳಿಸಿರಿ. ಸೂತರು ಹೇಳಿದರು. ಧನುರ್ಮಾಸದ ಮಹಿಮೆಯನ್ನು ವರ್ಣಿಸಲು ಯಾರು ಸಮರ್ಥರು? ಆದರೂ ವೇದವ್ಯಾಸರು ನನಗೆ ಹೇಳಿದ ರೀತಿಯಲ್ಲಿ ಹೇಳುವೆನು ಕೇಳಿರಿ.

ಇದು ಯುಧಿಷ್ಠಿರ ಹಾಗೂ ಕೃಷ್ಣನ ಸಂವಾದ ರೂಪವಾದುದು. ಸಕಲ ಪಾಪಗಳನ್ನು ತರಿದು ಪುಣ್ಯವನ್ನು, ಭೋಗ ಭಾಗ್ಯಗಳನ್ನು, ಮುಕ್ತಿಯನ್ನು ನೀಡುವುದು. ಯುಧಿಷ್ಠಿರನು ಕೃಷ್ಣನಿಗೆ ಯಾವ ರೀತಿ ಪ್ರಶ್ನೆ ಮಾಡಿದನೆಂದು ಋಷಿಗಳೆಲ್ಲ ಕೇಳಲು ಸೂತರು ಹೇಳಲಾರಂಭಿಸಿದರು.

ದ್ವೈತವನದಲ್ಲಿ ನೆಲೆಸಿರುವ ಪಾಂಡವರನ್ನು ಸಮಾಧಾನಪಡಿಸಲು ಆಗಮಿಸಿದ ಕೃಷ್ಣನನ್ನು ಗೌರವಿಸಿ ಆಸನದ ಮೇಲೆ ಕುಳ್ಳಿರಿಸಿ ಕುಂತೀಪುತ್ರನಾದ ಯುಧಿಷ್ಠಿರನು ದುರ್ಯೋಧನಾದಿಗಳು ನೀಡಿದ ಕಷ್ಟಗಳನ್ನು ಸ್ಮರಿಸಿ ಕಣ್ಣೀರಿಡುತ್ತ ಕೃಷ್ಣನಿಗೆ ಹೇಳಿದನು. ಹೇ ಕೃಷ್ಣನೇ! ನಮಗಿಂತ ಭಾಗ್ಯಹೀನರು ಭೂಮಿಯಲ್ಲೇ ಬೇರಿಲ್ಲ. ನಾವುಗಳು ಬಾಲ್ಯದಿಂದಲೇ ದುಃಖವನ್ನು ಅನುಭವಿಸುತ್ತಿದ್ದೇವೆ. ಚಿಕ್ಕ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡೆವು. ನಮ್ಮ ದೊಡ್ಡಪ್ಪನೂ ನಮ್ಮನ್ನು ಉಪೇಕ್ಷೆ ಮಾಡಿದನು. ಊರಿನಿಂದ ಹೊರಗೆ ಕಳಿಸಲ್ಪಟ್ಟ ನಮ್ಮನ್ನು ಅರಗಿನ ಮನೆಯಲ್ಲಿ ಸುಟ್ಟುಹಾಕುವ ಪ್ರಯತ್ನವೂ ನಡೆಯಿತು. ಏಕಚಕ್ರನಗರದಲ್ಲಿ ಭಿಕ್ಷೆಯನ್ನೆತ್ತಿ ಹೊಟ್ಟೆ ತುಂಬಿಕೊಂಡೆವು. ದ್ರೌಪದಿಯೊಡನೆ ವಿವಾಹದ ನಂತರ ಮತ್ತೆ ಹಸ್ತಿನಾವತಿಗೆ ಬಂದು ಮೋಸದ ದ್ಯೂತದಲ್ಲಿ ಸೋತು ಕಾಡು ಪಾಲಾದೆವು. ಸೋದರ ಮಾವನಾದ ವಸುದೇವನಾಗಲೀ ನೀನಾಗಲೀ ಒಮ್ಮೆಯೂ ವಿಚಾರಿಸಲಿಲ್ಲ.

ದುಃಖದಿಂದ ಕೃಶಳಾದ ನಮ್ಮ ತಾಯಿಯನ್ನೂ ವಿಚಾರಿಸಲಿಲ್ಲ. ನಾವೀಗ ದರಿದ್ರರಾಗಿರುವೆವು. ದರಿದ್ರನಿಗಾವ ಬಂಧುಗಳು? ಅವನಿಗೆಲ್ಲಿ ಸುಖ? ಅವನಿಗೇನು ಧರ್ಮಸಾಧನೆ? ದರಿದ್ರನು ಮೃತಪ್ರಾಯನೇ ಸರಿ. ಧನವಂತನೇ ಕುಲೀನನು, ಪಂಡಿತನು, ಸುರೂಪಿಯು, ಚತುರ, ಮಾತುಗಾರನು ಎನ್ನಿಸುವನು. ದೇವನ ಕೃಪೆಗೆ ಪಾತ್ರನಾದವನು ಧನವಂತನೆನಿಸುವನು. ಧನವಂತನನ್ನು ಎಲ್ಲ ಬಾಂಧವರೂ ಸುತ್ತುವರೆವರು. ಅವನ ಶತ್ರುಗಳೆಲ್ಲ ನಾಶ ಹೊಂದುವರು. ದೈವವೂ ಅವನಿಗೆ ಸುಖ ನೀಡುವುದು.

ಹೇ ದೇವದೇವನೇ! ನಮ್ಮ ಕಷ್ಟಗಳ ಪರಿಹಾರದ ಬಗೆ ಏನು? ದೇವನ ಒಲುಮೆ ಹೇಗಾಗುವುದು? ನಮ್ಮ ವಂಶವು ಹೇಗೆ ಬೆಳೆಯುವುದು? ಇದನ್ನು ನನಗೆ ಉಪದೇಶಿಸಬೇಕು. ದುಃಖದಿಂದ ನೊಂದಿರುವ ನಿನ್ನ ದಾಸರಾದ ನಮ್ಮ ಮೇಲೆ ನೀನೇ ಕರುಣೆದೋರಬೇಕು ಎಂದು ಪ್ರಾರ್ಥಿಸಿದನು.

ಹೀಗೆಂದ ಯುಧಿಷ್ಠಿರನ ಮಾತುಗಳನ್ನು ಕೇಳಿ ಕೃಷ್ಣನು ಕರುಣೆಯಿಂದ ಹೇಳಿದನು.

ರಾಜನೇ! ಹಿಂದೆ ಅನುಭವಿಸಿದ ದುಃಖವನ್ನು ನೆನೆಸಿಕೊಳ್ಳುವವನು ಮೂರ್ಖನೇ ಸರಿ. ಹೀಗೆಂದು ನುಡಿದು ಧರ್ಮಸುತನ ಹಸ್ತವನ್ನು ತನ್ನ ಕೈಯಲ್ಲಿ ಹಿಡಿದು ಸಮಾಧಾನಗೊಳಿಸಿದನು. ನೀನು ತತ್ವವನ್ನರಿತವನಾಗಿಯೂ ಈ ಅನಿತ್ಯ ಸಂಸಾರದಲ್ಲಿ ಮೂಢನಂತೆ ಆದೇಕೆ ಮೋಹಗೊಳ್ಳುವೆ?

ನನಗೂ ಕೂಡ ಇದಕ್ಕಿಂತಲೂ ಹೆಚ್ಚಿನ ದುಃಖಪರಂಪರೆಯೊದಗಿದ್ದು ನಿನಗೆ ತಿಳಿಯದೇ? ಸೋದರಮಾವ ಕಂಸನು ನನಗೆ ಏನನ್ನು ಮಾಡಲಿಲ್ಲ? ಬಾಲ್ಯದಿಂದಲೇ ದ್ವೇಷದಿಂದ ನನಗೆ ನಿತ್ಯದಲ್ಲಿ ಉಪದ್ರವ ನೀಡಿದನು. ವಿಷವನುಣಿಸಲು ಬಂದ ಪೂತನೆಯ ವಿಷವು ನನಗೆ ಅಮೃತವೇ ಆಯಿತಷ್ಟೇ? ತೃಣಾವರ್ತನೇ ಮೊದಲಾದನೇಕ ದೈತ್ಯರು ನನ್ನಿಂದ ಹತರಾಗಲಿಲ್ಲವೇ? ಅರ್ಜುನ ವೃಕ್ಷಗಳ ಮಧ್ಯೆ ಬಂಧನ, ಪ್ರಾಣವನ್ನೇ ತೆಗೆಯಲು ಬಂದ ಶಕಟಾಸುರ, ಚಾಣೂರ, ಮುಷ್ಟಿಕರೆಂಬ ಮಹಾಮಲ್ಲರ ಆಕ್ರಮಣ, ಕುವಲಯಾಪೀಡನೆಂಬ ಆನೆಯ ದಂತದಿಂದ ಪೀಡೆಯಾಗಲಿಲ್ಲವೇ? ಇವೆಲ್ಲ ನನಗೆ ಸೋದರ ಮಾವನು ನೀಡಿದ ದುಃಖಗಳಾದರೆ, ಇನ್ನು ಜರಾಸಂಧನು ನೀಡಿದ ತೊಂದರೆಗಳೇ ಬೇರೆ. ಜರಾಸಂಧನ ಆಕ್ರಮಣದಿಂದ ನಾವು ಮಥುರೆಯನ್ನು ತೊರೆದು ಸಮುದ್ರ ಮಧ್ಯದಲ್ಲಿ ಅಲೌಕಿಕವಾದ ದ್ವಾರಕೆಯನ್ನು ನಿರ್ಮಿಸಬೇಕಾಯಿತು. ಹೇಳಲಾಗದ ಅನೇಕ ಕಷ್ಟಗಳನ್ನೆಲ್ಲ ನಾವು ಅನುಭವಿಸಲಿಲ್ಲವೇ?

(ಯದ್ಯಪಿ ಭಗವಂತನಿಗೆ ಕರ್ಮದ ಲೇಪ ಇಲ್ಲವೇ ಇಲ್ಲ. ಕರ್ಮದಿಂದ ಸುಖ-ದುಃಖಗಳು ಇಲ್ಲವೇ ಇಲ್ಲ. ಕೇವಲ ಸ್ವರೂಪಸುಖದಿಂದ ಪರಮಾತ್ಮ ಪರಿಪೂರ್ಣನಾಗಿದ್ದಾನೆ. ಸದಾ ದುಃಖಾದಿದೋಷಗಳಿಂದ ದೂರನಾಗಿದ್ದಾನೆ. ಆದರೂ ಸುಖ-ದುಃಖಗಳೆಲ್ಲವೂ ನಾವು ಮಾಡಿದ ಕರ್ಮದ ಫಲವಾಗಿ ಬರುತ್ತವೆಂದು ತಿಳಿಸಲು ಹೀಗೆ ಹೇಳುತ್ತಿದ್ದಾನೆ.)

ಜನ್ಮಾಂತರಗಳಲ್ಲಿ ಮಾಡಿದ ಪಾಪವು ಹೀಗೆ ಬಾಧಿಸುವುದು. ಆದುದರಿಂದ ಶಾಸ್ತ್ರಗಳಿಂದ ವಿಚಾರ ಮಾಡಿ ಕಾರ್ಯಾಕಾರ್ಯಗಳನ್ನರಿತು ವರ್ತಿಸು. ಯಾವನು ಈ ದೇಹವನ್ನು ನಿತ್ಯವೆಂದು ಭಾವಿಸಿ ಉನ್ಮತ್ತನಾಗಿ ಪಾಪ ಮಾಡುವನೋ ಅವನು ಹಣ್ಣಿಗಾಗಿ ಗಿಡದ ಮೇಲ್ತುದಿಗೆ ಏರಿ ಕೆಳಗೆ ಬಿದ್ದ ಮೂರ್ಖನಂತಾಗುವನು. ಕೃಷಿಕನು ಹೇಗೆ ಮಳೆ ಬಂದಾಗ ತನ್ನ ಗದ್ದೆಯಲ್ಲಿ ನೀರು ಸಂಗ್ರಹಿಸುವನೋ ಹಾಗೆ ಬುದ್ಧಿವಂತನುಇಂದ್ರಿಯಗಳುಗಟ್ಟಿಯಾಗಿದ್ದಾಗಪುಣ್ಯವನ್ನುಸಂಪಾದಿಸಿಕೊಳ್ಳಬೇಕು. ರಾಜನೇ! ಚಿಂತಿಸದಿರು. ನಿನಗೆಲ್ಲವೂ ಮಂಗಲವಾಗುವುದು. ನೀನು ಧರ್ಮರತನೂ ಸಾಧುಪೂಜಕನೂ ಆಗಿರುವೆ. ಇನ್ನು ಮುಂದೆ ನಿನಗೆ ಅಸಂಶಯವಾಗಿ ಮಹಾಅಭಿವೃದ್ಧಿಯಾಗುವುದು. ನಿನ್ನ ಶತ್ರುಗಳೆಲ್ಲ ನಾಶವಾಗುವರು. ನೀನು ಸಾಮ್ರಾಜ್ಯವನ್ನು ಹೊಂದುವೆ. ಧನುರ್ಮಾಸದ ಪ್ರಾತಃಕಾಲದ ಪೂಜೆಯಿಂದ ಪ್ರೀತನಾದ ಹರಿಯು ನಿನಗೆ ಅಕ್ಷಯವಾದ ಅಭೀಷ್ಟಗಳನ್ನು ನೀಡುವನು.

**॥ ಇಲ್ಲಿಗೆ ಮೊದಲನೇ ಅಧ್ಯಾಯವು ಮುಗಿಯಿತು ॥**

★★★

# ಎರಡನೇ ಅಧ್ಯಾಯ

ಯುಧಿಷ್ಠಿರನು ಪ್ರಶ್ನೆ ಮಾಡಿದನು. ಧನುರ್ಮಾಸದಲ್ಲಿ ನಾರಾಯಣನನ್ನು ಹೇಗೆ ಪೂಜಿಸಬೇಕು? ಪೂಜೆಯ ದ್ರವ್ಯ ಯಾವುದು? ಏನನ್ನು ದಾನ ಮಾಡಬೇಕೆಂಬುದನ್ನು ವಿಸ್ತಾರವಾಗಿ ಹೇಳೆಂದು ಪ್ರಾರ್ಥಿಸಲು ಕೃಷ್ಣನು ಹೇಳುವನು. ಧನುರ್ಮಾಸದ ಉಷಃಕಾಲದಲ್ಲಿ ಸ್ನಾನ ಮಾಡಿ ದೇವನನ್ನು ಚೆನ್ನಾಗಿ ಪೂಜೆ ಮಾಡಿ ಮುದ್ಗಾನ್ನವನ್ನು (ಹುಗ್ಗಿ) ಮೊಸರಿನ ಜೊತೆಗೆ ಸಮರ್ಪಿಸು. ನಿನಗೆ ಶಕ್ತಿಯಿದ್ದಷ್ಟು ಬ್ರಾಹ್ಮಣರನ್ನು ಆಹ್ವಾನಿಸಿ ಪ್ರಾತಃಕಾಲದಲ್ಲಿ ಭೋಜನ ಮಾಡಿಸು. ಹೀಗೆ ಮಾಡಿದರೆ ಈ ಲೋಕದಲ್ಲಿ ಎಲ್ಲ ಭಾಗ್ಯಗಳನ್ನನುಭವಿಸಿ ವಿಷ್ಣುಪದವನ್ನೇ ಪಡೆಯುವೆ.

ಧನುರ್ಮಾಸದ ಉಷಃಕಾಲದಲ್ಲಿ ಮೊಸರು, ಹಸಿಶುಂಠಿ ತುಪ್ಪ, ಯಾಲಕ್ಕಿ, ನೆಲ್ಲಿಕಾಯಿಗಳಿಂದೊಡಗೂಡಿದ ಮುದ್ಗಾನ್ನವನ್ನು ಅರ್ಪಿಸಿ ಬ್ರಾಹ್ಮಣರನ್ನು ಭೋಜನ

ಮಾಡಿಸಿದವನ ಇಚ್ಛೆಗಳೆಲ್ಲವೂ ಪೂರ್ತಿಯಾಗುವವು. ಅವನು ಯೋಗಿಯೂ, ಜ್ಞಾನಿಯೂ, ಶ್ರೀಮಂತನೂ, ಆಗುವನಲ್ಲದೇ ಪ್ರತಿಜನ್ಮದಲ್ಲೂ ವಿಷ್ಣುಭಕ್ತ-ನೆನಿಸುವನು. ಧನುರ್ಮಾಸದ ಉಷಃಕಾಲದಲ್ಲಿ ಯಾರು ಹರಿಯನ್ನು ಪೂಜಿಸುವುದಿಲ್ಲವೋ ಅವನು ಏಳು ಜನ್ಮಗಳಲ್ಲಿ ಅತಿದರಿದ್ರನೂ, ಕ್ಷಯರೋಗಿಯೂ, ಮೂರ್ಖನೂ ಆಗಿ ಜನಿಸುವನು.

ಸೂರ್ಯನು ಧನುರಾಶಿಯಲ್ಲಿರುವಾಗ ಮುದ್ಗಾನ್ನದಿಂದ ಪೂಜೆ ಮಾಡಿದವನು ಒಂದು ಸಾವಿರ ವರುಷ ಪೂಜೆಯ ಫಲವನ್ನು ಒಂದು ದಿನದ ಪೂಜೆಯಿಂದಲೇ ಪಡೆಯುವನು. ಧನುರ್ಮಾಸದ ಮುದ್ಗಾನ್ನದ ಪೂಜೆಯಿಂದ ಶ್ರೀಹರಿಯು ಪ್ರೀತನಾಗುವಂತೆ ವ್ರತ, ದಾನ, ತಪಸ್ಸುಗಳಿಂದ ಪ್ರೀತನಾಗುವುದಿಲ್ಲ. ಧನುರ್ಮಾಸದಲ್ಲಿ ಮುದ್ಗಾನ್ನವನ್ನು ಸಮರ್ಪಿಸಿದವನು ಸಾಮ್ರಾಟನೆನಿಸುವನು. ಧನುರ್ಮಾಸವನ್ನಾಚರಿಸಿದ ವೈಷ್ಣವನು ದೀರ್ಘಾಯುವೂ, ಧನಿಕನೂ, ವೇದ ಪಾರಂಗತನೂ ಆಗುವನು. ಅವನಿಗೆ ಗಂಗಾಸ್ನಾನ, ಜಪ, ಯಜ್ಞಾದಿಗಳಿಂದ ಆಗಬೇಕಾದುದೇನು? ಹಿಂದೊಮ್ಮೆ ದುಃಖತಪ್ತಳಾದ ಇಂದ್ರಾಣಿ (ಶಚೀದೇವಿ)ಯು ಭಗವಂತನಿಗೆ ಮುದ್ಗಾನ್ನವನ್ನು ಸಮರ್ಪಿಸಿ ನಿತ್ಯ ಐಶ್ವರ್ಯ ಹೊಂದಿದಳು.

ಹೀಗೆನ್ನಲು ಧರ್ಮಸುತನು ಕೇಳಿದನು. ಶಚೀದೇವಿಗೆ ಆದ ದುಃಖವೇನು? ಸೌಮಂಗಲ್ಯ ಪಡೆದ ಬಗೆ ಹೇಗೆ? ಇದೆಲ್ಲವನ್ನು ನನಗೆ ವಿಸ್ತಾರವಾಗಿ ಹೇಳುವ ಕೃಪೆ ಮಾಡಬೇಕು.

ಹೀಗೆ ಪ್ರಾರ್ಥಿತನಾದ ಕೃಷ್ಣನು ಹೇಳಲಾರಂಭಿಸಿದನು.

ರಾಜನೇ! ಎಲ್ಲ ಪೂಜೆಗಳ ಫಲವನ್ನು ನೀಡುವ ಧನುರ್ಮಾಸಪೂಜೆಯ ಮಹಿಮೆಯನ್ನು ಹೇಳುವೆನು ಕೇಳು. ಮೊದಲ ಮನ್ವಂತರದ ಕೃತಯುಗದಲ್ಲಿ ಶ್ರೀಹರಿಯು ಲೀಲೆಗೋಸುಗ ವೃಷಪರ್ವನೇ ಮೊದಲಾದ ದೈತ್ಯರನ್ನು ಸೃಷ್ಟಿಸಿದನು. ತನ್ನ ಬಲವನ್ನು ಜಗತ್ತಿಗೆ ತಿಳಿಸಲೋಸುಗ ಆ ದೈತ್ಯರಿಗೂ ಇಂದ್ರದೇವನಿಗೂ ಕಲಹವನ್ನು ಉಂಟು ಮಾಡಿದನು. ಆ ದೈತ್ಯರಿಂದ ಬಾಧೆಗೊಳಗಾದ ಇಂದ್ರನು ಸ್ಥಾನಭ್ರಷ್ಟನಾಗಿ ಎಲ್ಲ ಮರುದ್ಗಣಗಳೊಂದಿಗೆ ಭೂಮಿಗೆ ಬಂದು ಗುಪ್ತರೂಪದಿಂದ ಸಂಚರಿಸತೊಡಗಿದನು.

ಇತ್ತಕಡೆ ದೈತ್ಯರಿಗೆ ದಾಸಿಯಾದ ಇಂದ್ರಾಣಿಯು ಗುರುಗಳಾದ ಬೃಹಸ್ಪತ್ಯಾ-ಚಾರ್ಯರನ್ನು ಭೇಟಿಯಾಗಿ ನೀರು ತುಂಬಿದ ಕಂಗಳಿಂದ ಪ್ರಾರ್ಥಿಸಿದಳು. ಆಚಾರ್ಯರೇ! ನಿಮ್ಮ ಶಿಷ್ಯನಾದ ದೇವೇಂದ್ರನು ದೇವತೆಗಳೊಡನೆ ಪಲಾಯನ ಮಾಡಿದ್ದಾನೆ. ದಾನವರಿಂದ ಬಾಧಿತಳಾದ ನಾನೂ ಅತ್ಯಂತ ದುಃಖಿತಳಾಗಿದ್ದೇನೆ.

ಇಂದ್ರನು ದೈತ್ಯರನ್ನು ಗೆದ್ದು ತನ್ನ ಸಾಮ್ರಾಜ್ಯವನ್ನು ಹೇಗೆ ಪಡೆವನು? ನಾನು ನಿತ್ಯ ಸಂಭ್ರಮದಲ್ಲಿರುವುದು ಹೇಗೆ? ಇಂಥ ದುಃಖವು ಮತ್ತೆ ಬಾರದಂತಿರಲು ನಾನೇನು ಮಾಡಬೇಕು? ಎಂಬುದನ್ನು ಕೃಪೆ ಮಾಡಿ ಹೇಳಬೇಕೆಂದು ಪ್ರಾರ್ಥಿಸಿದಳು.

ಹೀಗೆ ಪ್ರಾರ್ಥಿತರಾದ ದೇವ ಗುರುಗಳು ಇಂದ್ರಾಣಿಗೆ ಹೇಳಿದರು. ಮಹಾಸೌಭಾಗ್ಯವತಿಯೇ ಶೋಕಿಸದಿರು. ಪೂರ್ವ ಪ್ರಾರಬ್ಧಕ್ಕನುಗುಣವಾಗಿ ಒದಗುವ ಸುಖ-ದುಃಖಗಳಿಗಾಗಿ ಬುದ್ಧಿವಂತನು ಶೋಕಿಸುವುದಿಲ್ಲ. ನಿನಗೆ ನಿಶ್ಚಿತವಾಗಿ ಅತ್ಯಂತ ಮಂಗಲವಾಗುವುದು. ಎಲ್ಲ ಅಭೀಷ್ಟಗಳನ್ನು ಪೂರೈಸುವ ಈ ಲಕ್ಷ್ಮೀಹೃದಯ ಮಂತ್ರವನ್ನು ನಿನಗೆ ಉಪದೇಶ ಮಾಡುವೆ. ಧನುರ್ಮಾಸದಲ್ಲಿ ಇದನ್ನು ಜಪಿಸಿ ಶ್ರೀಹರಿಗೆ ಮುದ್ಗಾನ್ನವನ್ನರ್ಪಿಸು. ನಿನ್ನ ಶತ್ರುಗಳೆಲ್ಲ ನಾಶಹೊಂದಿ ನಿನ್ನ ಇಚ್ಛೆ ಪೂರೈಸುವುದು. ಹೀಗೆಂದು ಶುದ್ಧಳಾದ ಇಂದ್ರಾಣಿಗೆ ಮಂತ್ರವನ್ನು ಉಪದೇಶಿಸಿದರು. ಆ ಮಂತ್ರವನ್ನು ಸ್ವೀಕರಿಸಿದ ಶಚೀದೇವಿಯು ವಸಂತ ಋತುವಿನ ಕಮಲಪುಷ್ಪದಂತೆ ಶೋಭಿಸಿದಳು.

ಹೀಗೆನ್ನಲು ಯುಧಿಷ್ಠಿರನು ಬೇಡಿದನು. ಭಕ್ತವತ್ಸಲನಾದ ಭಗವಂತನೇ! ನನಗೆ ಆ ಲಕ್ಷ್ಮೀ ಮಂತ್ರವನ್ನುಪದೇಶಿಸಿ ಕೃತಾರ್ಥನನ್ನಾಗಿಸು. ಹೀಗೆ ಪ್ರಾರ್ಥಿಸಿದ ಧರ್ಮಸುತನಿಗೆ ಶ್ರೀಕೃಷ್ಣನು ಹೇಳಿದನು. ನನ್ನ ಭಕ್ತರು ದುಃಖಿತರಾದರೆ ಆ ಅಪವಾದವು ನನಗೇ ಸೇರುವುದು. ನಾನು ನನ್ನ ಕೌಸ್ತುಭವೇ ಮುಂತಾದ ಆಭರಣಗಳನ್ನು ಬಿಟ್ಟಿರಬಲ್ಲೆ. ಲಕ್ಷ್ಮಿಯ ವಿರಹವನ್ನು ಸಹಿಸಬಲ್ಲೆ. ಆದರೆ ಭಕ್ತರ ದುಃಖವನ್ನು ಮಾತ್ರ ಸಹಿಸಲಾರೆ. ಯಾವ ಆಗಮಗಳಲ್ಲೂ ಇದಕ್ಕೆ ಸದೃಶವಾದ ಮಂತ್ರವಿಲ್ಲ. ನಿನ್ನ ಮೇಲಿನ ಸ್ನೇಹದಿಂದ ಇದನ್ನು ನಿನಗೆ ಉಪದೇಶಿಸುವೆನು. ಸಕಲ ಸಿದ್ಧಿಗಳನ್ನೀಯುವ ಸರ್ವ ಶತ್ರುಗಳನ್ನು ನಾಶಗೊಳಿಸುವ, ಐಶ್ವರ್ಯ, ಆರೋಗ್ಯಗಳನ್ನು ನೀಡುವ ಭೂತ, ಪ್ರೇತ, ಪಿಶಾಚಗಳನ್ನು ಓಡಿಸುವ ಈ ಮಂತ್ರವನ್ನು ತ್ರಿಕಾಲದಲ್ಲಾಗಲೀ, ಒಂದು ಸಾರಿಯಾಗಲೀ ಹೇಳಿ, ಕೇಳಿದವನು, ಬ್ರಹ್ಮಹತ್ಯೆ ಮಾಡಿದವನಾದರೂ ಶುದ್ಧನಾಗುವನೆಂದ ಮೇಲೆ ಶುದ್ಧ ವಂಶದಲ್ಲಿ ಜನಿಸಿದ ಶ್ರೋತ್ರಿಯ ಬ್ರಾಹ್ಮಣನು ಶುದ್ಧನಾಗುವನೆಂದು ಬೇರೆ ಹೇಳಬೇಕೆ? ಏಕಾದಶಿಯಂದು, ಗುರುವಾರದಂದು, ವಿಶೇಷಪುಣ್ಯಕಾಲದಲ್ಲಿ, ಭಗವಂತನ ಸನ್ನಿಧಿಯಲ್ಲಿ ಇದನ್ನು ಜಪಿಸಿದವನು ಈ ಲೋಕದಲ್ಲಿ ಸಕಲಭೋಗಗಳನ್ನು ಅನುಭವಿಸಿ ಕೊನೆಗೆ ನನ್ನನ್ನೇ ಹೊಂದುವನು. ನಿನ್ನೆಲ್ಲ ಅರ್ಥಸಿದ್ಧಿಗಾಗಿ ಧನುರ್ಮಾಸದಲ್ಲಿ ದೇವನಿಗೆ ಹೆಸರುಬೇಳೆ, ಅಕ್ಕಿಯಿಂದ ಮಾಡಿದ ಅನ್ನವನ್ನು ಬೆಲ್ಲದಿಂದ ಮಾಡಿದ ಗೊಜ್ಜನ್ನು ನಿವೇದಿಸಿ ಹನ್ನೆರಡು ಬಾರಿ ಈ ಮಂತ್ರವನ್ನು ಜಪಿಸು. ಬೇರೆ ಕಾಲದಲ್ಲೂ ಇದನ್ನು ಪಠಿಸಿದವನು, ಲಕ್ಷ್ಮಿಯ ಅನುಗ್ರಹದಿಂದ

ಅಕ್ಷಯ ಸಂಪತ್ತನ್ನು ಹೊಂದುವನು. ಹೀಗೆ ನುಡಿದು ವಿನೀತನೂ, ಶುದ್ಧನೂ ಆದ ಧರ್ಮಸುತನಿಗೆ ಗೋವಿಂದನು ಲಕ್ಷ್ಮೀ ಮಂತ್ರದ ಉಪದೇಶ ಮಾಡಿದನು.

ಶ್ರೀದೇವೀ ಪ್ರಥಮಂ ನಾಮ ದ್ವಿತೀಯಮಮೃತೋದ್ಭವಾ ।
ತೃತೀಯಂ ಕಮಲಾ ಪ್ರೋಕ್ತಾ ಚತುರ್ಥಂ ಲೋಕಸುಂದರೀ ॥

ಪಂಚಮಂ ವಿಷ್ಣುಪತ್ನೀ ಚ ಷಷ್ಠಂ ಶ್ರೀವೈಷ್ಣವೀ ತಥಾ ।
ಸಪ್ತಮಂ ತು ವರಾರೋಹಾ ಅಷ್ಟಮಂ ಹರಿವಲ್ಲಭಾ ॥

ನವಮಂ ಶಾಂರ್ಙ್ಗಿಣೀ ಪ್ರೋಕ್ತಾ ದಶಮಂ ದೇವದೇವಿಕಾ ।
ಏಕಾದಶಂ ಮಹಾಲಕ್ಷ್ಮೀಃ ದ್ವಾದಶಂ ಭುವನೇಶ್ವರೀ ॥

ಶ್ರೀಃ ಪದ್ಮಾ ಕಮಲಾ ಮುಕುಂದ ಮಹಿಷೀ ಲಕ್ಷ್ಮೀಃ ತ್ರಿಕೋಣೇಶ್ವರೀ
ಮಾ ಕ್ಷೀರಾಬ್ಧಿಸುತಾ ವಿರಿಂಚಜನನೀ ವಿದ್ಯಾ ಸರೋಜಾತ್ಮಿಕಾ
ಸರ್ವಾಭೀಷ್ಟಫಲಪ್ರದೇತಿ ಸತತಂ ನಾಮಾನಿ ಯೇ ದ್ವಾದಶ ।
ಪ್ರಾತಃ ಶುದ್ಧತರಾಃ ಪಠಂತಿ ಸತತಂ ಸರ್ವಾನ್ ಲಭಂತೇ ಶುಭಾನ್ ॥

ಈ ಮಂತ್ರವನ್ನು ಬೃಹಸ್ಪತಿಗಳು ಇಂದ್ರಾಣಿಗೆ ಉಪದೇಶ ಮಾಡಿ ಹೇಳಿದರು. ಹೇ ಇಂದ್ರಾಣಿಯೇ! ನೀನು ಈ ಲಕ್ಷ್ಮೀಸ್ತೋತ್ರದ ಪಠಣದಿಂದ ಎಲ್ಲ ಕಾಮನೆಗಳನ್ನು ಪಡೆಯುವೆ. ನಿನ್ನ ಪತಿಯ ಗೆಲುವಿಗಾಗಿ ನೀನು ಸ್ವರ್ಣಪರ್ವತಕ್ಕೆ ಹೋಗಿ ಮಾನಸ ಸರೋವರದಲ್ಲಿ ಸ್ನಾನ ಮಾಡಿ ಈ ಲಕ್ಷ್ಮೀಸ್ತೋತ್ರವನ್ನು ಜಪಿಸು. ಪರಮಾತ್ಮನ ಕೃಪೆಯಿಂದ ಶತ್ರುಗಳೆಲ್ಲ ನಾಶ ಹೊಂದಿ ನಿನ್ನ ಪತಿಯಾದ ಇಂದ್ರನು ಮತ್ತೆ ಸಿಂಹಾಸನವನ್ನು ಪಡೆದ ಮೇಲೆ ನಾನು ಹೇಳಿದ ಈ ಮಂತ್ರದ ಮಹಿಮೆಯ ಅನುಭವವು ನಿನಗಾಗುವುದು.

॥ ಇಲ್ಲಿಗೆ ಎರಡನೆ ಅಧ್ಯಾಯವು ಮುಗಿಯಿತು ॥

★★★

# ಮೂರನೇ ಅಧ್ಯಾಯ

ಗುರುಗಳಾದ ಬೃಹಸ್ಪತ್ಯಾಚಾರ್ಯರು ಹೇಳಿದ ರೀತಿಯಲ್ಲೇ ಇಂದ್ರಾಣಿಯು ಎಲ್ಲವನ್ನು ಆಚರಿಸಿದಳು. ಅನಂತರ ಲಕ್ಷ್ಮೀ ಕಟಾಕ್ಷದಿಂದ ಇಂದ್ರನು ದ್ವಿಗುಣವಾದ ಬಲಕಾಂತಿಗಳಿಂದ ಶೋಭಿಸಿದನು. ಐರಾವತವನ್ನೇರಿ ವಜ್ರಾಯುಧವನ್ನು ಹಿಡಿದು ಬಲಿಷ್ಠರಾದ ದೇವತೆಗಳೊಂದಿಗೆ ದೈತ್ಯರ ನಗರಿಯ ಮೇಲೆ ಆಕ್ರಮಣ ಮಾಡಿದನು. ಮಹಾಕ್ರೋಧಿಗಳೂ, ಅತಿ ಉತ್ಸಾಹಿಗಳೂ, ಉಗ್ರರೂ ಆದ ದೈತ್ಯರು ದೇವತೆಗಳ ಮೇಲೆರಗಿದರು. ಪರಸ್ಪರವಾಗಿ ಗರ್ಜಿಸುತ್ತ ಯುದ್ಧದಲ್ಲಿ ತೊಡಗಿದ ಅವರ ರಣೋತ್ಸಾಹವು ನೋಡುಗರಿಗೆ ರೋಮಾಂಚಕವಾಗಿತ್ತು.

ಆಗ ಮಹಾ ಬಲಶಾಲಿಯಾದ ವಲನೆಂಬ ಅಸುರನು ದಶದಿಕ್ಕುಗಳು ಬಿರಿಯುವಂತೆ ಗರ್ಜಿಸುತ್ತ ಜಿಗಿದು ವಜ್ರಸಮಾನವಾದ ಗದೆಯಿಂದ ಐರಾವತದ ತಲೆಯ ಮೇಲೆ ಹೊಡೆದನು. ವಜ್ರಾಯುಧದಂತಿದ್ದ ಆ ಗದೆಯು ಎಂಟು ನೂರು ಏಣುಗಳಿಂದ ಕೂಡಿ ಬಂಗಾರದ ಪಟ್ಟಿಕೆಗಳಿಂದ ಅಲಂಕೃತವಾಗಿ ಶತ್ರುಗಳ ರಕ್ತದಿಂದ ಕೆಂಪಾಗಿ ತೋರುವ ಆ ಉಕ್ಕಿನ ಗದೆಯು ಪುಡಿಯಾಗಿ ಕೆಳಗೆ ಬಿದ್ದಿತು. ಅದನ್ನು ಕಂಡು ದಾನವರೆಲ್ಲ ದುಃಖಿಸಿದರು. ದೇವತೆಗಳು ಆನಂದದಿಂದ ಗರ್ಜಿಸಿದರು.

ಅನಂತರ ಇಂದ್ರನಿಂದ ಪ್ರೇರಿತವಾದ ಐರಾವತವು ಒಮ್ಮೆ ಜೋರಾಗಿ ಗರ್ಜಿಸಿತು. ಪ್ರಲಯಕಾಲದ ಸಾಗರದ ಗರ್ಜನೆಯಂತಿದ್ದ ಅದನ್ನು ಕೇಳಿ ಕೆಲವು ದೈತ್ಯರು ಅಲ್ಲೇ ಮೃತರಾದರೆ, ಕೆಲವರು ಮೂರ್ಛಿತರಾದರೆ, ಮತ್ತೆ ಕೆಲವರು ಓಡಿಹೋದರು. ಗದೆಯು ಪುಡಿಪುಡಿಯಾಗಲು ಅತಿ ಕ್ರುದ್ಧನಾದ ವಲಾಸುರನು ತ್ರಿಶೂಲದಿಂದ ಮತ್ತೆ ಐರಾವತವನ್ನು ತಿವಿದನು. ತ್ರಿಶೂಲಪೀಡಿತವಾದ ಐರಾವತವು ಅತಿ ವಿಹ್ವಲವಾಗಿ ಹಿಂದೆ ತಿರುಗಿ ಒಂದು ಕ್ರೋಶದಷ್ಟು ಓಡಿ ಹೋಯಿತು. ಕ್ರುದ್ಧನಾದ ದೇವೇಂದ್ರನು ಆನೆಯನ್ನು ನಿಲ್ಲಿಸಿ ಗಂಡಸ್ಥಳದ ಮೇಲೆ ಕೈಯಾಡಿಸಿ ಸಮಾಧಾನಗೊಳಿಸಿ ಮತ್ತೆ ರಣರಂಗಕ್ಕೆ ಕರೆ ತಂದನು. ಮತ್ತೆ ಎದುರಾದ ವಲಾಸುರನ ತಲೆಯನ್ನು ವಜ್ರದಿಂದ ತಾಳೆಹಣ್ಣಿನಂತೆ ಕತ್ತರಿಸಿದನು. ಮಹಾಘೋರನಾದ ಅಸುರನು ಮೃತನಾಗಲು ಬೆದರಿದ ದೈತ್ಯಸೈನ್ಯವು ದಿಕ್ಕುಗಾಣದೇ ಪಲಾಯನ ಮಾಡಿತು.

ಚೆಲ್ಲಾಪಿಲ್ಲಿಯಾದ ತಮ್ಮ ಸೈನ್ಯವನ್ನು ಕಂಡು ವೃಷಪರ್ವ, ಭೀಮ, ಜಂಭ, ಪಾಕ ಮೊದಲಾದವರು ಇಂದ್ರನ ಮೇಲೆ ವಾತ, ಪಿತ್ತ, ಕಫಗಳಂತೆ ಆಕ್ರಮಣ ಮಾಡಿದರು. ನಂತರ ಗರ್ಜಿಸುತ್ತ ದೇವತೆಗಳು ಅವರ ಮೇಲೆರಗಿದರು. ಕೋಪಗೊಂಡ ಮಹಾಪರಾಕ್ರಮಿಗಳಾದ ಅಷ್ಟವಸುಗಳು, ರುದ್ರದೇವ, ಸೂರ್ಯ

ಮೊದಲಾದ ದೇವತೆಗಳು ಮೆಲ್ಲಗೆ ಒಬ್ಬೊಬ್ಬ ದೈತ್ಯರನ್ನು ಸಂಹರಿಸತೊಡಗಿದರು. ಹಿಂದೆಂದೂ ಕಾಣದ ಆ ಮಹಾಯುದ್ಧವು ಅತ್ಯಂತ ರೋಮಾಂಚಕವಾಗಿತ್ತು.

ಭಯಾನಕ ಕತ್ತಲೆ ಆವರಿಸಿ ದಿಕ್ಕುಗಳೆಲ್ಲ ವ್ಯಾಕುಲಗೊಂಡರೆ, ಲೋಕಗಳೆಲ್ಲ ಕ್ಷೋಭೆಗೊಂಡು, ಸಾಗರಗಳೆಲ್ಲ ಉಕ್ಕಿ ಹರಿದವು. ಅದು ಮತ್ತೊಂದು ಪ್ರಲಯಕಾಲದಂತೆಯೇ ಗೋಚರಿಸಿತು. ಹೀಗೆ ಅತಿ ಭಯಂಕರವಾದ ಯುದ್ಧವು ಹನ್ನೆರಡು ವರುಷಗಳ ಕಾಲ ಮುಂದುವರೆಯಿತು. ಆದರೂ ಯಾರೊಬ್ಬರೂ ಸೋಲನ್ನಪ್ಪಲಿಲ್ಲ. ಗೆಲುವನ್ನು ಪಡೆಯಲಿಲ್ಲ.

ಅನಂತರ ಬ್ರಹ್ಮಾದಿ ದೇವತೆಗಳು, ಸನಕಾದಿ ಮಹರ್ಷಿಗಳು ವೇದೋಕ್ತ ಅನೇಕಮಂತ್ರಗಳಿಂದ ಶೇಷಶಾಯಿಯಾದ ವಿಷ್ಣುವನ್ನು ಸ್ತುತಿಸಿದರು.

ದೇವದೇವನಾದ ಶ್ರೀಹರಿಯು ಚಕ್ರವನ್ನು ಪಿಡಿದು ಗರುಡನ ಮೇಲೇರಿ ಅಲ್ಲಿಗೆ ಆಗಮಿಸಿದನು. ಜಯಸ್ವರೂಪನಾದ ಶ್ರೀಹರಿಯನ್ನು ಕಂಡ ದೇವತೆಗಳೆಲ್ಲ ಜಯಜಯವೆಂದು ಜಯಘೋಷ ಮಾಡುತ್ತ ದೇವನನ್ನು ಸ್ತುತಿಸಿದರು.

ಹರಿಯನ್ನು ಕಂಡ ದೈತ್ಯರೆಲ್ಲ ಅಪಹಾಸದಿಂದ ನಗುತ್ತ ಜೋರಾಗಿ ಗರ್ಜಿಸಿ ದಾನವಾರಿಯನ್ನು ಸುತ್ತುವರಿದರು. ವಿಷ್ಣುಶಸ್ತ್ರಗಳಿಂದ ಪೀಡಿತರಾದ ಅವರೆಲ್ಲ ದೀಪವನ್ನು ಸುತ್ತುವರಿದ ಪತಂಗಗಳಂತೆ ನಾಶವಾದರು. ಅಳಿದುಳಿದ ಕೆಲವರು ಮತ್ತೆ ಮಧ್ಯರಾತ್ರಿಯಲ್ಲಿ ಬಂದು ಯುದ್ಧದಲ್ಲಿ ತೊಡಗಿದರು. ಹೇಮಂತ ಋತುವಿನ ಮೊದಲಮಾಸದ ಕೊನೆಯ ಯಾಮದಲ್ಲಿ ಎಂದರೆ ದೇವಮಾನದ ರಾತ್ರಿಯ ಕೊನೆಯಭಾಗದ ಉಷಃಕಾಲದಲ್ಲಿ ಭಗವಂತನು ಸುರರ ಮೇಲಿನ ಕರುಣೆಯಿಂದ ಶಂಖ, ಚಕ್ರ, ಗದೆ, ಬಿಲ್ಲುಗಳನ್ನು ಧರಿಸಿ ದೈತ್ಯರ ಮೇಲೆ ಆಕ್ರಮಣ ಮಾಡಿದನು. ಒಂದೇ ಬಾಣದಿಂದ ಅವರನ್ನೆಲ್ಲ ಕೊಲ್ಲಲು ಸಮರ್ಥನಾದರೂ ಲೀಲೆಯಿಂದ ಉತ್ಸಾಹಪೂರ್ವಕ ಯುದ್ಧದಲ್ಲಿ ತೊಡಗಿದನು.

**॥ ಇಲ್ಲಿಗೆ ಮೂರನೇ ಅಧ್ಯಾಯವು ಮುಗಿಯಿತು ॥**

★★★

# ನಾಲ್ಕನೇ ಅಧ್ಯಾಯ

ಮಹಾಭಾಗ್ಯವಂತಳಾದ ಇಂದ್ರಾಣಿಯು ಶ್ರೀಹರಿಯ ವಿಶ್ರಾಂತಿಗಾಗಿ ಯುದ್ಧಕ್ಕಿಂತ ಮೊದಲು ಅಲ್ಲಿಗೆ ಆಗಮಿಸಿ ಭಕ್ತಿಯಿಂದ ಶುಂಠಿ, ಮೊಸರು, ತುಪ್ಪ, ಯಾಲಕ್ಕಿ, ಬೆಲ್ಲ ಮೊದಲಾದವುಗಳಿಂದ ಸುಖೋಷ್ಣವಾದ ಮುದ್ಗಾನ್ನವನ್ನು ತಯಾರಿಸಿ ವಿಷ್ಣುವಿಗೆ ಅರ್ಪಿಸಿದಳು. ಶುದ್ಧವಾದ ಆ ಮುದ್ಗಾನ್ನವನ್ನು ಶ್ರೀಹರಿಯು ಇಂದ್ರಾಣಿಯ ಅನುಗ್ರಹಕ್ಕಾಗಿ ನಿತ್ಯತೃಪ್ತನಾದರೂ ಹಸಿದವನಂತೆ ನಟಿಸುತ್ತ ಸ್ವೀಕರಿಸಿದನು. ಹೀಗೆ ಇಂದ್ರಪತ್ನಿಯು ಅರುಣೋದಯಕಾಲದಲ್ಲಿ ವ್ಯಂಜನ (ಗೊಜ್ಜು) ಸಹಿತವಾಗಿ ಮುದ್ಗಾನ್ನವನ್ನು ಬಂಗಾರದ ತಟ್ಟೆಯಲ್ಲಿ ಹರಿಗೆ ಅರ್ಪಣೆ ಮಾಡಿ ಲಕ್ಷ್ಮೀಹೃದಯ ಸ್ತೋತ್ರವನ್ನು ದೇವನೆದುರಿಗೆ ಪಠಿಸಿದಳು. ಈ ಮುದ್ಗಾನ್ನ ಪೂಜೆಯಿಂದ ಪ್ರೀತನಾದ ಶ್ರೀಹರಿಯು ನೂರಾರು ಸಾವಿರಾರು ಸಂಖ್ಯೆಯಲ್ಲಿ ದೈತ್ಯರನ್ನೆಲ್ಲ ಸಂಹರಿಸಿದನು. ವೃಷಪರ್ವಾದಿ ದೈತ್ಯರೆಲ್ಲ ನಾಶಹೊಂದಲು ಇಂದ್ರನು ಭಗವಂತನ ಕೃಪೆಯಿಂದ ತನ್ನ ಸ್ಥಾನವನ್ನು ಮತ್ತೆ ಹೊಂದಿ ಐಶ್ವರ್ಯಯುಕ್ತನಾಗಿ ಶೋಭಿಸಿದನು.

ಎಲ್ಲ ಲೋಕಗಳು ಸುಖ ಹೊಂದಿದರೆ ದೇವತೆಗಳು ದೇವದೇವನನ್ನು ಸ್ತುತಿಸಿದರು. ಗಂಧರ್ವ ಪತ್ನಿಯರೆಲ್ಲ ಉಜ್ವಲವಾದ ಭಗವಂತನ ಕೀರ್ತಿಯನ್ನು ಗಾನ ಮಾಡಿದರು. ಅಪ್ಸರ ಸ್ತ್ರೀಯರೆಲ್ಲ ನರ್ತನ ಮಾಡಿದರು. ತಪಸ್ವಿಗಳೆಲ್ಲ ಗೋವಿಂದನ ಮೇಲೆ ಹೂಮಳೆಗರೆದರು. ಶ್ರೀಹರಿಯ ಜಯಜಯಕಾರವು ನಭೋಮಂಡಲವನ್ನೆಲ್ಲ ವ್ಯಾಪಿಸಿತು. ಇಂದ್ರಾಣಿಯು ಮಾಡಿದ ಮುದ್ಗಾನ್ನ-ನೈವೇದ್ಯದಿಂದ ಶ್ರೀಹರಿಯು ಅತಿ ಪ್ರೀತನಾದನು. ನೈವೇದ್ಯ ಮಾಡಿದ ಮುದ್ಗಾನ್ನವನ್ನೇ ಸ್ವೀಕರಿಸಬೇಕು. ನಿವೇದನೆ ಮಾಡದಿರುವ ಮುದ್ಗಾನ್ನವನ್ನೆಂದೂ ಸ್ವೀಕರಿಸಕೂಡದು. ನೈವೇದ್ಯ ಮಾಡಿದ ಹುಗ್ಗಿಯ ಸ್ವೀಕಾರವು ಮಹಾಪುಣ್ಯವೆನಿಸಿದರೆ, ಅನಿವೇದಿತವಾದ ಮುದ್ಗಾನ್ನಭೋಜನವು ಮಹಾಪಾತಕವೆನಿಸುವುದು. ಇದರಿಂದ ಎಲ್ಲ ಪಿತೃಗಳು ದೇವತೆಗಳು ನಿಶ್ಚಿತವಾಗಿ ತೃಪ್ತರಾಗುವರು. ಭೂಮಿಯು ಸಕಲ ಧನಧಾನ್ಯಗಳಿಂದ ಸಮೃದ್ಧವಾಗುವುದು. ಸರಿಯಾದ ಸಮಯದಲ್ಲಿ ಮಳೆ ಸುರಿಯುವುದು. ಎಲ್ಲ ಜನಗಳು ರೋಗಾದಿಗಳಿಂದ ರಹಿತರಾಗಿ ಸುಖವಾಗಿರುವರು. ಎಲ್ಲ ಲೋಕಗಳು ಶ್ವೇತ ದ್ವೀಪದಂತೆ ಶುಭ್ರವಾಗುವವು. ಹೀಗೆ ದೇವತೆಗಳೆಲ್ಲ ಧನುರ್ಮಾಸವನ್ನು ಮನದುಂಬಿ ಪೊಗಳುವರು. ಇಂದ್ರಪತ್ನಿಯು ಧನುರ್ಮಾಸದಲ್ಲಿ ವಿಧಿಪೂರ್ವಕವಾಗಿ ಹೃಷೀಕೇಶನನ್ನು ಪೂಜಿಸಿ ಅನೇಕಸ್ತೋತ್ರಗಳಿಂದ ರಮಾದೇವಿಯನ್ನು ಸ್ತುತಿಸಿದಳು. ಶಚೀದೇವಿಯ ಸ್ತುತಿಯಿಂದ ಪ್ರೀತಳಾದ ರಮಾದೇವಿಯು, ತನ್ನ ಅಮೃತಮಯವಾದ ಅಪಾಂಗವಿಕ್ಷೇಪದಿಂದ ಲೋಕವನ್ನು

ಉದ್ಧರಿಸಿದಳು. ಇಂದ್ರಾಣಿಯ ಪೂಜೆಯಿಂದ ಪ್ರೀತನಾದ ಗರುಡ- ವಾಹನನಾದ ಉಪೇಂದ್ರನು ಶಚಿಗೆ ಹೇಳಿದನು.

ಹೇ ಮಂಗಳೆಯೇ! ಮುದ್ಗಾನ್ನಸಮರ್ಪಣದಿಂದ ನಾನು ನಿನ್ನಲ್ಲಿ ಪ್ರೀತನಾಗಿರುವೆನು. ಮುದ್ಗಾನ್ನದಿಂದ ನನಗೆ ಪ್ರೀತಿಯಾಗುವಂತೆ, ಅಮೃತಪಾನ-ದಿಂದಲೂ ಆಗಲಾರದು.

ಹೀಗೆ ನುಡಿದ ದೇವದೇವನ ಮಾತುಗಳನ್ನು ಇಂದ್ರಾಣಿಯು ಕೈಜೋಡಿಸಿ ಪ್ರಾರ್ಥಿಸಿದಳು. ಹೇ ಭಗವಂತನೇ! ಕರ್ಮಾಸಕ್ತರಾದ ಜನರೆಲ್ಲನಿನ್ನ ಪ್ರೀತಿಗೋಸುಗ ವಿಹಿತ ಕರ್ಮಗಳನ್ನಾಚರಿಸುವರು. ನೀನೇ ನನ್ನಲ್ಲಿ ಸಂತುಷ್ಟನಾದ ಮೇಲೆ ಬೇರೇನು ಬೇಡುವುದು? ಜನಗಳೆಲ್ಲ ಮಾತು, ಮನಸ್ಸು, ಕೃತಿಗಳಿಂದ, ಮುಕ್ತಿಗೋಸುಗ ನಿನ್ನನ್ನು ಅರ್ಚಿಸುವರು. ಮೋಕ್ಷಪ್ರದನಾದ ನೀನೇ ನನ್ನಲ್ಲಿ ಪ್ರಸನ್ನನಾದ ಮೇಲೆ ನನಗೆ ಬೇರಾವ ಆಶೆಗಳೂ ಇಲ್ಲ. ಹೀಗಿದ್ದರೂ ನಿನ್ನ ಆಜ್ಞೆಯನ್ನು ಮೀರುವ ಭಯದಿಂದ ನಾನು ವರಗಳನ್ನು ಸ್ವೀಕರಿಸುವೆನು. ಮಹಾತಪಸ್ವಿಯಾದರೂ ನಿನ್ನ ಆಜ್ಞೆಯನ್ನು ವಿರೋಧಿಸಿದವನು ಪತಿತನಾಗುವನು. ಶ್ರುತಿಗಳು ಹಾಗೂ ಸ್ಮೃತಿಗಳಲ್ಲಿ ಹೇಳಿದ ಕರ್ಮಗಳೇ ನಿನ್ನ ಆಜ್ಞೆಗಳೆಂದು ಜ್ಞಾನಿಗಳು ತಿಳಿಯುವರು. ನಿನ್ನ ಆಜ್ಞಾರೂಪವಾಗಿರುವ ಕರ್ಮಗಳನ್ನು ಆಚರಿಸದವನು ತಪಸ್ವಿಯಾದರೂ ಪತಿತನೆನಿಸುವನು. ಆದುದರಿಂದ ಧನುರ್ಮಾಸದ ಅರುಣೋದಯದಲ್ಲಿ ಸ್ನಾನ ಮಾಡಿ ದೇವನನ್ನು ಪೂಜಿಸಿ ಮುದ್ಗಾನ್ನವನ್ನು ಸಮರ್ಪಿಸಿದವರಿಗೆ ಭಕ್ತಿ ಮುಕ್ತಿಗಳನ್ನು ಅನುಗ್ರಹಿಸು.

ಮುದ್ಗಾನ್ನದ ಪೂಜೆಯಿಂದ ನನಗೆ ಅನುಗ್ರಹಿಸಿದಂತೆ, ಧನುರ್ಮಾಸದಲ್ಲಿ ನಿನ್ನನ್ನು ಪೂಜಿಸುವವರನ್ನು ಅನುಗ್ರಹಿಸು. ಇಂದ್ರಪತ್ನಿಯ ನಿಷ್ಕಾಮಭಕ್ತಿಯನ್ನು ಕಂಡು ಪ್ರೀತನಾದ, ಭಗವಂತನು ಶಚಿಯನ್ನು ಕುರಿತು ನುಡಿದನು. ಇಂದ್ರಾಣಿಯೇ! ನಾನು ಯಾರಿಗೆ ಮೋಕ್ಷವನ್ನು ನೀಡಲು ಇಚ್ಛಿಸುವುದಿಲ್ಲವೋ ಅಂಥವರು ನನ್ನ ಮಾಯೆಯಿಂದ ಮೋಹಿತರಾಗಿ ಕ್ಷುದ್ರವಾದ ಫಲಗಳನ್ನು ಕೋರಿಕೊಳ್ಳುವರು. ಯಾರಿಗೆ ಮೋಕ್ಷವನ್ನು ನೀಡಲಿಚ್ಛಿಸುವೆನೋ ಅಂಥವರು ನಿಷ್ಕಾಮಭಕ್ತಿಯಿಂದ ನನ್ನನ್ನು ಭಜಿಸುವರು. ನೀನು ನನ್ನಲ್ಲಿ ಮಾಡಿದ ನಿಷ್ಕಾಮಭಕ್ತಿಯಿಂದ ನೀನು ನಿತ್ಯ ಸಂಪತ್ತುಳ್ಳವಳೂ, ನಿತ್ಯಸೌಭಾಗ್ಯವತಿಯೂ, ಮನೆಯಲ್ಲಿ ನಿತ್ಯ ಉತ್ಸವಗಳನ್ನು ಮಾಡುವವಳೂ ಆಗುವೆ.

ಧನುರ್ಮಾಸದಲ್ಲಿ ನನ್ನ ಪೂಜೆಗಾಗಿ ಮುದ್ಗಾನ್ನವನ್ನು ತಯಾರಿಸುವವಳು, ಪತಿಪ್ರಿಯಳೂ, ದೀರ್ಘಸುಮಂಗಲಿಯೂ ಆಗುವಳು.

ಈ ರೀತಿ ಇಂದ್ರಪತ್ನಿಗೆ ಅನುಗ್ರಹಿಸಿದ ಭಗವಂತನು ಮತ್ತೆ ಮತ್ತೆ ಶಚೀದೇವಿಯನ್ನು ಶ್ಲಾಘಿಸಿ ಎಲ್ಲ ಜನಗಳೂ ನೋಡುತ್ತಿರಲು ಅದೃಶ್ಯನಾದನು.

ಆದುದರಿಂದ ಧನುರ್ಮಾಸದಲ್ಲಿ ಅರುಣೋದಯದಲ್ಲಿ ದೇವದೇವನನ್ನು ತುಲಸೀದಳಗಳಿಂದ ಪೂಜಿಸಿ ಮುದ್ಗಾನ್ನವನ್ನು ಅರ್ಪಿಸಬೇಕು. ಧನುರ್ಮಾಸದ ಪೂಜೆಯು ಅರುಣೋದಯದಲ್ಲಿ ಮುಖ್ಯವೆನಿಸುವುದು. ನಕ್ಷತ್ರಗಳಿಲ್ಲದಾಗ ಮಾಡಿದ ಪೂಜೆಯು ಮಧ್ಯಮ ಪೂಜೆಯಾಗುವುದು. ಸೂರ್ಯೋದಯದ ನಂತರದ ಪೂಜೆಯು ಅಧಮವೆನಿಸುವುದು. ಮಧ್ಯಾಹ್ನದ ಪೂಜೆಯು ನಿಷ್ಫಲವೆನಿಸುವುದು.

ಹುಗ್ಗಿಯನ್ನು ಮಾಡುವಾಗ ಅಕ್ಕಿಗೆ ಸಮಪ್ರಮಾಣದ ಹೆಸರುಬೇಳೆ ಇದ್ದರೆ ಉತ್ತಮವೆಂದು ಪರಿಗಣಿಸುವರು. ಅಕ್ಕಿಯ ಅರ್ಧದಷ್ಟಾದರೆ ಮಧ್ಯಮವೆಂದೂ, ಅಕ್ಕಿಯ ಕಾಲುಭಾಗದಷ್ಟಾದರೆ ಅಧಮವೆಂದೂ ಹೇಳಲಾಗುವುದು. ಕೆಲವು ಮುನಿಗಳ ಮತದಂತೆ ಅಕ್ಕಿಯ ಎರಡರಷ್ಟು ಬೇಳೆಯು ಉತ್ತಮೋತ್ತಮವೆಂದು ಹೇಳಲ್ಪಡುವುದು. ತನ್ನ ಶಕ್ತಿಗನುಸಾರವಾಗಿ ಹುಗ್ಗಿಯನ್ನು ಮಾಡಿ ಪೂಜಿಸಬೇಕು. ಆದರೆ ಹೆಸರುಬೇಳೆಯು ಅಕ್ಕಿಯ ಅರ್ಧಕ್ಕಿಂತಲೂ ಕಡಿಮೆಯಾಗದಂತೆ ಎಚ್ಚರವಹಿಸಬೇಕು. ತಾನು ಬಡವನೆಂಬ ಕುಬುದ್ಧಿಯಿಂದ ಧನುರ್ಮಾಸದಲ್ಲಿ ವಿಷ್ಣುವಿಗೆ ಮುದ್ಗಾನ್ನವನ್ನು ಅರ್ಪಿಸದವನು ಏಳು ಜನ್ಮಗಳಲ್ಲಿ ದರಿದ್ರನಾಗಿ ಜನಿಸುವನು. ನಿತ್ಯಕರ್ಮಗಳು ಲೋಪವಾಗುತ್ತವೆ ಎಂಬ ಶಂಕೆಯಿಂದ ಧನುರ್ಮಾಸದ ಉಷಃಕಾಲದಲ್ಲಿ ಮುದ್ಗಾನ್ನದಿಂದ ಹರಿಯನ್ನು ಪೂಜೆ ಮಾಡದವನು, ರೋಗಿಯೂ, ದರಿದ್ರನೂ ಆಗಿ ಅಧಃಪತನವನ್ನೇ ಹೊಂದುವನು. ಯಾರಲ್ಲಿಯೂ ಬೇಡದೇ ತನ್ನ ಕೈಯಲ್ಲಿ ಬಂದೊದಗಿದ ನನ್ನ ಮುದ್ಗಾನ್ನದ ಪ್ರಸಾದವನ್ನು ಉಪವಾಸದ ನೆಪದಿಂದ ತಿನ್ನದೇ ಇರುವವನು ಬ್ರಹ್ಮಘಾತಕನೆನಿಸುವನು. ಕರ್ಮಾರಂಭ ಸಮಯದಲ್ಲಾಗಲೀ ಉಪವಾಸದ ಸಮಯದಲ್ಲಾಗಲೀ (ಏಕಾದಶಿಯನ್ನು ಹೊರತುಪಡಿಸಿ ನೈಮಿತ್ತಿಕ ಉಪವಾಸಗಳಲ್ಲಿ) ಕೇಳದೆಯೇ ಬಂದೊದಗಿದ ನನ್ನ ಪವಿತ್ರವಾದ ಹುಗ್ಗಿಯ ಪ್ರಸಾದವನ್ನು ಸ್ವೀಕರಿಸಬೇಕು. ತ್ಯಜಿಸಿದವನು ಪತಿತನೆನಿಸುವನು. ಕರ್ಮಾಚರಣೆಯ ಕಾಲದಲ್ಲಿ ಹಸಿವೆಯಿಂದಾಗಲೀ ಇಚ್ಛೆಯಿಂದ ಕೇಳಿ ಪಡೆದಾಗಲೀ ತಿನ್ನುವವನು ಸಹ ಪತಿತನೆನಿಸುವನು. ಅಲ್ಪದ್ವಾದಶಿಯಂದು ಎಲ್ಲ ಕರ್ಮಗಳನ್ನು ಸಂಕೋಚ ಮಾಡಿ ಭೋಜನ ಮಾಡುವಂತೆ, ಧನುರ್ಮಾಸದ ಪ್ರಾತಃಕಾಲದಲ್ಲಿ ಕರ್ಮಗಳನ್ನು ಸಂಕೋಚ ಮಾಡಿ ನನ್ನನ್ನರ್ಚಿಸಬೇಕು.

ಆದುದರಿಂದ ಧರ್ಮರಾಜನೇ! ನೀನು ಕೂಡ ಧನುರ್ಮಾಸದ ಅರುಣೋದಯದಲ್ಲಿ ಈ ಲಕ್ಷ್ಮೀಸ್ತೋತ್ರವನ್ನು ಪಠಿಸಿ ಮುದ್ಗಾನ್ನದಿಂದ ಹರಿಯನ್ನು

ಪೂಜಿಸು. ಭಗವಂತನ ನೈವೇದ್ಯದಿಂದ ಉತ್ತಮ ಬ್ರಾಹ್ಮಣರಿಗೆ ಭೋಜನ ಮಾಡಿಸು. ಶೀಘ್ರದಲ್ಲಿಯೇ ರಾಜ್ಯಲಕ್ಷ್ಮಿಯನ್ನು ಹೊಂದುವೆ. ಸಂದೇಹವಿಲ್ಲ. ಹಾಗೆಯೇ ನನ್ನಲ್ಲಿ ಭಕ್ತಿಯನ್ನು ಹೊಂದುವೆ. ಬ್ರಾಹ್ಮಣರನ್ನು ಪೂಜಿಸಿದವನು ನನ್ನ ಭಕ್ತನೆನಿಸುವನು. ಯಾವುದೇ ರೀತಿಯಿಂದಲಾದರೂ ಒಬ್ಬನಾದರೂ ವಿಪ್ರನು ಪೂಜಿತನಾದರೆ ನಾನು ಪೂಜಿತನಾದಂತೆಯೇ ಸರಿ. ನಿಂದಿತನಾದರೆ ನಾನು ನಿಂದಿತನಾದಂತೆಯೇ ಸರಿ. ಧರ್ಮರಾಜನಿಗೆ ಹೀಗೆ ಧರ್ಮವನ್ನುಪದೇಶಿಸಿ ದಯಾಯುಕ್ತನಾದ ಕೇಶವನು ಮತ್ತೆ ನುಡಿದನು.

ರಾಜನೇ! ನನ್ನ ಭಕ್ತನಾದ ನೀನು ಯಾವಾಗಲೂ ಬ್ರಾಹ್ಮಣರನ್ನು ಪೂಜಿಸು. ಮಾತಿನಿಂದಾಗಲೀ, ಕೃತಿಯಿಂದಾಗಲೀ, ಮನಸ್ಸಿನಲ್ಲಾಗಲೀ ಬ್ರಾಹ್ಮಣರನ್ನು ದೂಷಿಸದಿರು. ಪೀಡಿತನಾದ ಬ್ರಾಹ್ಮಣನ ಕಣ್ಣೀರಿನ ಹನಿಗಳು ಭೂಮಿಯಲ್ಲಿ ಬೀಳುವಂತೆ ಮಾಡಿದವನಿಗೆ ನಾನೆಂದಿಗೂ ಅನುಗ್ರಹಿಸುವುದಿಲ್ಲ. ಬ್ರಾಹ್ಮಣನು ಕೋಪಿಸಿಕೊಳ್ಳಲಿ, ಶಪಿಸಲಿ, ಹೊಡೆಯಲು ಬರುತ್ತಿರಲಿ, ನಿನ್ನ ವಂಶವೃದ್ಧಿಯನ್ನು ಇಚ್ಛಿಸುವೆಯಾದರೆ ಅಂಥ ಬ್ರಾಹ್ಮಣರನ್ನು ಭಕ್ತಿಯಿಂದ ನಮಸ್ಕರಿಸು. ಯಾವಾಗಲೂ ಬ್ರಾಹ್ಮಣರ ಪಾದಗಳನ್ನು ತೊಳೆದು ಅವರನ್ನು ಭೋಜನ ಮಾಡಿಸು. ವಿಪ್ರರ ಆಶೀರ್ವಾದದಿಂದ ನಿನ್ನ ಸಂಪತ್ತು ಹಾಗೂ ವಂಶಗಳು ವೃದ್ಧಿಯಾಗುವವು. ಈ ಪೃಥ್ವಿಯಲ್ಲಿ ಎಷ್ಟು ತೀರ್ಥಗಳಿವೆಯೋ, ಸಾಗರದಲ್ಲೆಷ್ಟು ತೀರ್ಥಗಳು ಬಂದು ಸೇರುವವೋ, ಆ ಎಲ್ಲ ತೀರ್ಥಗಳು ವಿಪ್ರನ ಬಲಗಡೆಯ ಪಾದದಲ್ಲಿರುವವು. ಅತಿಪಾಪಿಯಾದ ಪುರುಷನನ್ನು ವಿಪ್ರಪಾದೋದಕವು ಪವಿತ್ರಗೊಳಿಸುವಂತೆ, ಯಜ್ಞದ ಅವಭೃಥಸ್ನಾನವಾಗಲೀ, ದೇವನದಿ ಎನಿಸಿದ ಗಂಗೆಯ ಜಲವಾಗಲೀ ಪವಿತ್ರಗೊಳಿಸಲಾರದು. ನೀನು ಕಲ್ಯಾಣವನ್ನು ಇಚ್ಛಿಸುವೆಯಾದರೆ ಸಂಸಾರ-ಸಾಗರವನ್ನು ದಾಟಲು ಬಯಸುವೆಯಾದರೆ ಬ್ರಾಹ್ಮಣರ ಪಾದಧೂಳಿಯನ್ನು ತಲೆಯ ಮೇಲೆ ಧರಿಸು. ಹೀಗೆಂದು ಗೀತಾಚಾರ್ಯನಾದ ಶ್ರೀಕೃಷ್ಣನು ಧರ್ಮರಾಜನಿಗೆ ಧನುರ್ಮಾಸದ ಮಹಿಮೆಯನ್ನು ಬೋಧಿಸಿದನು. ಧನುರ್ಮಾಸದ ಮುದ್ಗಾನ್ನಪೂಜೆಯ ಮಹಿಮೆಯನ್ನು ಶ್ರೀಹರಿಯ ಮುಖಾರವಿಂದದಿಂದಾಲಿಸಿ ವಿಸ್ಮಿತರಾದ ಎಲ್ಲ ಪಾಂಡವರು ತಮ್ಮ ವನವಾಸಾದಿ ಕಷ್ಟಗಳನ್ನು ಪರಿಹರಿಸಿಕೊಳ್ಳಲು ಕಥಾನಿಮಿತ್ತದಿಂದ ಕೃಷ್ಣನೆದುರು ಬಂದು ನಿಂತರು. ಅವರೆಲ್ಲರ ಇಚ್ಛೆಯನ್ನರಿತ ಶ್ರೀಕೃಷ್ಣನು ಗಂಭೀರವಾದ ಧ್ವನಿಯಿಂದ ಮುಗುಳು ನಗುತ್ತ ಮತ್ತೆ ವಿಸ್ತಾರವಾಗಿ ಧನುರ್ಮಾಸದ ಮಹಿಮೆಯನ್ನು ತಿಳಿಸಿದನು.

ಹಿಂದೆ ನನ್ನ ಅನೇಕ ಭಕ್ತರು ಧನುರ್ಮಾಸದಲ್ಲಿ ನನ್ನನ್ನು ಪೂಜಿಸಿ ಶೀಘ್ರವಾಗಿ ನನ್ನ ಸಾಯುಜ್ಯವನ್ನು ಹೊಂದಿದರು. ನನ್ನ ಪರಮಭಕ್ತನಾದ ವಿಭೀಷಣನು ನನ್ನನ್ನು ಧನುರ್ಮಾಸದಲ್ಲಿ ಮುದ್ಗಾನ್ನದಿಂದ ಪೂಜಿಸಿ ಶಾಶ್ವತವಾದ ಸಂಪತ್ತನ್ನು ಪಡೆದು

ಚಿರಂಜೀವಿಯೆನಿಸಿ ಲಂಕೆಯಲ್ಲಿರುವನು. ನಿರಂತರವಾಗಿ ನನ್ನ ಕಥೆಯಲ್ಲಿ ಆಸಕ್ತನಾದ ಆತನು ಕಾವೇರೀತೀರದ ಶ್ರೀರಂಗಕ್ಷೇತ್ರದಲ್ಲಿ ಶೇಷನ ಮೇಲೆ ಪವಡಿಸಿರುವ ಶ್ರೀರಂಗನಾಥನನ್ನು ಪ್ರತಿದಿನವೂ ರಾತ್ರಿಯ ಅಂತಿಮಯಾಮದಲ್ಲಿ (ಉಷಃ ಕಾಲದಲ್ಲಿ) ಪೂಜಿಸುವನು.

ಪ್ರಹ್ಲಾದನು ಹೀಗೆ ಮುದ್ಗಾನ್ನದಿಂದ ನನ್ನನ್ನು ಪೂಜಿಸಿ ನನ್ನ ಪ್ರಿಯಭಕ್ತನೆನಿಸಿದನು. ಇದೇ ರೀತಿ ಭಕ್ತಿಯಿಂದ ಪೂಜಿಸಿದ ಬಲಿರಾಜನ ಭಕ್ತಿಗೆ ಒಲಿದು ನಾನು ಆತನ ಮನೆಯ ಬಾಗಿಲನ್ನು ಕಾಯುತ್ತ ನೆಲೆಸಿದ್ದೇನೆ.

ನಲ ಮಹಾರಾಜ, ಅಂಬರೀಷ ಮಹಾರಾಜ, ಧ್ರುವರಾಜ ಮೊದಲಾದವರೆಲ್ಲ ಧನುರ್ಮಾಸದ ಪೂಜೆಯಿಂದಲೇ ಕೀರ್ತಿವಂತರಾದರು. ಮಾರ್ಕಂಡೇಯ ಮಹರ್ಷಿಗಳು ಈ ಧನುರ್ಮಾಸದ ಪೂಜೆಯ ಪ್ರಭಾವದಿಂದ ಚಿರಂಜೀವಿ-ಗಳೆನಿಸಿದರು. ಇಂತಹ ಇನ್ನೂ ಅನೇಕ ನನ್ನ ಭಕ್ತರಿರುವರು. ಅಂತಹ ನನ್ನ ಭಕ್ತರಿಗೆಲ್ಲ ಈ ಲೋಕದಲ್ಲಿ ಸುಖವನ್ನು ಪರಲೋಕದಲ್ಲಿ ಉತ್ತಮವಾದ ಗತಿಯನ್ನು ನೀಡುವೆನು. ಶಚೀದೇವಿಯು ಧನುರ್ಮಾಸದ ಪ್ರಾತಃಕಾಲದಲ್ಲಿ ಭಗವಂತನನ್ನು ಮುದ್ಗಾನ್ನದಿಂದ ಪೂಜಿಸಿ ಅನುಗ್ರಹೀತಳಾದಳು. ಅಂದಿನಿಂದ ಲೋಕದಲ್ಲಿ ವಿಖ್ಯಾತವಾದ ಈ ಇತಿಹಾಸವನ್ನು ಶ್ರದ್ಧಾ-ಭಕ್ತಿಗಳಿಂದ ಕೇಳಿದವರು ಭುಕ್ತಿ ಹಾಗೂ ಮುಕ್ತಿಯನ್ನು ಹೊಂದುವರು. ಧನುರ್ಮಾಸದ ಉಷಃಕಾಲದ ಪೂಜೆಯು ಕೋಟಿ ಕೋಟಿ ಗುಣಿತವೆನ್ನಿಸಿದರೆ, ಮಧ್ಯಾಹ್ನದ ಪೂಜೆಯು ನಿಷ್ಫಲವೆನಿಸುವುದು. ಆದುದರಿಂದ ಪಾಂಡುಪುತ್ರನೇ! ನೀನು ಕೂಡ ಧನುರ್ಮಾಸದಲ್ಲಿ ವಿಧಿಪೂರ್ವಕವಾಗಿ ಮುದ್ಗಾನ್ನದಿಂದ ಹರಿಯನ್ನು ಪೂಜಿಸು. ಹೀಗೆಂದು ದೇವಕೀಸುತನಾದ ಕೃಷ್ಣನು ಪಾಂಡವರನ್ನು ಕುರಿತು ಸ್ನೇಹದಿಂದ ಉಪದೇಶ ಮಾಡಿದನು. ಸೂತರು ಇದರ ಫಲೋದಯವನ್ನು ವರ್ಣಿಸುವರು.

ಸಕಲ ಸೌಭಾಗ್ಯಗಳನ್ನು ನೀಡುವ, ಮಕ್ಕಳು, ಮೊಮ್ಮಕ್ಕಳು, ಎಲ್ಲೆಡೆ ಜಯ ಮುಂತಾದವನ್ನು ನೀಡುವ ಈ ಆಖ್ಯಾನವನ್ನು ಯಾರು ಓದುವರೋ ಅಥವಾ ಕೇಳುವರೋ ಅವರು ಎಲ್ಲ ಪಾಪಗಳಿಂದ ಮುಕ್ತರಾಗುವರು. ವಿಶೇಷವಾಗಿ ಧನುರ್ಮಾಸದಲ್ಲಿ ಚಿತ್ತವಿಟ್ಟು ಶ್ರವಣ ಮಾಡಿದವನು ಅತುಲವಾದ ಐಶ್ವರ್ಯವನ್ನು ಹೊಂದಿ ವಿಷ್ಣುಭಕ್ತನೆನಿಸುವನು. ಸರ್ವತೀರ್ಥಗಳ ಸ್ನಾನದಿಂದ ಹಾಗೂ ಸಕಲ ಯಜ್ಞಗಳ ಆಚರಣೆಯಿಂದೊದಗುವ ಫಲವು ಈ ಪುಣ್ಯಕಥೆಯ ಶ್ರವಣದಿಂದ ಒದಗುವುದು. ಏಕಾದಶಿಯ ದಿನದಂದು ಹರಿಸನ್ನಿಧಿಯಲ್ಲಿ ಹಗಲಾಗಲೀ ರಾತ್ರಿಯಾಗಲೀ ಈ ಕಥೆಯನ್ನು ಕೇಳಿದವನು ವಿಷ್ಣುಲೋಕವನ್ನು ಹೊಂದುವನು.

**॥ ಇಲ್ಲಿಗೆ ನಾಲ್ಕನೇ ಅಧ್ಯಾಯವು ಮುಗಿಯಿತು ॥**

# ಐದನೇ ಅಧ್ಯಾಯ

ಯುಧಿಷ್ಠಿರನು ಹೇಳುವನು. ದಯಾಸಾಗರನಾದ ಶ್ರೀಕೃಷ್ಣನೇ! ನಿನ್ನ ಮುಖ ಕಮಲದಿಂದ ಅಮೃತದಂತೆ ಸುರಿವ ಧನುರ್ಮಾಸದ ಮಹಿಮೆಯನ್ನು ಕೇಳಿದಷ್ಟೂ ನನಗೆ ತೃಪ್ತಿಯೆನಿಸುತ್ತಿಲ್ಲ. ನೀನೆಲ್ಲವನ್ನು ತಿಳಿದ ಸರ್ವಜ್ಞನು. ಹೇ ಪುರುಷೋತ್ತಮನೇ! ಇನ್ನು ಮುಂದೆ ಧನುರ್ಮಾಸದಲ್ಲಿ ಆಚರಿಸಬೇಕಾದ ವಿಧಿವಿಧಾನಗಳನ್ನು ಹೇಳುವ ಕೃಪೆ ಮಾಡಬೇಕು. ಹೀಗೆಂದ ಯುಧಿಷ್ಠಿರನಿಗೆ ಭಗವಾನ್ ದೇವಕೀಸುತನು ಧನುರ್ಮಾಸದ ವಿಧಾನಗಳನ್ನು ಹೇಳಲಾರಂಭಿಸಿದನು. ಮಹಾಭಾಗ್ಯವಂತನಾದ ಯುಧಿಷ್ಠಿರನೇ! ಲೋಕದ ಹಿತಕ್ಕಾಗಿ ನಿನಗೆ ಇದೆಲ್ಲವನ್ನು ಹೇಳುವೆನು. ಗಮನವಿಟ್ಟು ಆಲಿಸು. ಮಾರ್ಗಶೀರ್ಷ ಹಾಗೂ ಧನುರ್ಮಾಸಗಳಲ್ಲಿ ಸೂರ್ಯನು ಧನುರಾಶಿಯಲ್ಲಿ ಬರಲು ಧನುರ್ಮಾಸವೆನಿಸುವುದು. ಈ ಸಮಯದಲ್ಲಿ ಮಾಡಿದ ದೇವನ ಪೂಜೆಯು ಕೋಟಿ ಕೋಟಿ ಫಲ ನೀಡುವುದು.

ಧನುರ್ಮಾಸದ ಕರ್ತವ್ಯಗಳನ್ನು ನಿನಗೆ ಸಂಕ್ಷೇಪದಲ್ಲಿ ಹೇಳುವೆನು ಕೇಳು. ರಾತ್ರಿಯ ಕೊನೆಯ ಯಾಮದಲ್ಲಿ (ಅರುಣೋದಯಕ್ಕಿಂತ ಮೊದಲು) ಎಚ್ಚರವಾಗಿ ನಿದ್ರೆಯನ್ನು, ಆಲಸ್ಯವನ್ನು ತ್ಯಜಿಸಿ, ಹರಿಯ ನಾಮಸ್ಮರಣೆ ಮಾಡಬೇಕು. ಹಾಗೂ ಗಂಗೆಯೇ ಮೊದಲಾದ ನದಿಗಳನ್ನು ಸ್ಮರಿಸಬೇಕು.

**ಕರಾಗ್ರೇ ವಸತೇ ಲಕ್ಷ್ಮೀಃ ಕರಮೂಲೇ ಸರಸ್ವತೀ ।**
**ಕರಮಧ್ಯೇ ವಿಧಿಃ ಪುಣ್ಯಂ ಪ್ರಭಾತೇ ಕರದರ್ಶನಮ್ ॥**

ಎಂಬ ಮಂತ್ರವನ್ನು ಪಠಿಸುತ್ತ ಬೇರೆಯವರನ್ನು ನೋಡದೇ ತನ್ನ ಅಂಗೈಗಳನ್ನು ನೋಡಿಕೊಳ್ಳಬೇಕು. ನಂತರ

**ಹೃಷೀಕೇಶ ಜಗದ್ರೂಪ ಸರ್ವಸಾಕ್ಷಿನ್ ಜಗತ್ಪತೇ ।**
**ಇಂದ್ರಿಯಾಣ್ಯನುಕೂಲಾನಿ ಸದಾ ಧರ್ಮೇಷು ಮೇ ಕುರು ॥**

ಹೇ ಇಂದ್ರಿಯನಿಯಾಮಕನಾದ ಹೃಷೀಕೇಶನೇ! ನೀನು ಜಗದೊಡೆಯನು. ಎಲ್ಲವನ್ನು ಅರಿತವನು. ನನ್ನೆಲ್ಲ ಇಂದ್ರಿಯಗಳು ಧರ್ಮದಲ್ಲೇ ಪ್ರವರ್ತಿಸುವಂತೆ ಅನುಗ್ರಹಿಸು ಎಂದು ಪ್ರಾರ್ಥಿಸಬೇಕು. ನಂತರ,

**ಸಮುದ್ರವಸನೇ ದೇವೀ ಪರ್ವತಸ್ತನಮಂಡಿತೇ ।**
**ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ॥**

---

೧ ಕರಾಗ್ರೇ ವಸತೇ ಲಕ್ಷ್ಮೀಃ ಕರಮಧ್ಯೇ ಸರಸ್ವತೀ ।
ಕರಮೂಲೇ ತು ಗೋವಿಂದಃ ಪ್ರಭಾತೇ ಕರದರ್ಶನಮ್ ॥ (ಪ್ರಸಿದ್ಧ ಪಾಠ)

ಸಮುದ್ರವೇ ಬಟ್ಟೆಯಾದ, ಪರ್ವತಗಳೆಂಬ ಸ್ತನಗಳಿಂದೊಪ್ಪುವ, ವಿಷ್ಣುಪತ್ನಿಯೆನಿಸಿದ ಭೂದೇವಿಯೇ! ನಾನು ಅನಿವಾರ್ಯವಾಗಿ ನಿನ್ನ ಮೇಲೆ ನಡೆದಾಡುವೆ. ಹೊಲಸು ಮಾಡುವೆ. ಕ್ಷಮಿಸೆಂದು ಪ್ರಾರ್ಥಿಸಬೇಕು. ನಂತರ ತನ್ನ ಸಂಚಾರವನ್ನಾರಂಭಿಸಬೇಕು. ನಂತರ ಹೊರಗೆ ಹೋಗಿ ಗ್ರಾಮದ ನೈರುತ್ಯ ದೇಶದಲ್ಲಿ ಮಲಮೂತ್ರಗಳನ್ನು ವಿಸರ್ಜಿಸಬೇಕು. ನಂತರ ಮೃತ್ತಿಕಾಶೌಚವನ್ನು ಮಾಡಿ, ದಂತಧಾವನ ಮಾಡಿಕೊಳ್ಳಬೇಕು. ನಂತರ ತುಲಸಿಯನ್ನು ಭಕ್ತಿಯಿಂದ ಪ್ರಾರ್ಥಿಸಬೇಕು.

**ತುಲಸಿ ಶ್ರೀಸಖಿ ಶುಭೇ ಪಾಪಹಾರಿಣಿ ಪುಣ್ಯದೇ ।**
**ನಮಸ್ತೇ ನಾರದನುತೇ ನಾರಾಯಣಮನಃಪ್ರಿಯೇ ॥**

ಎಂಬೀ ಮಂತ್ರದಿಂದ ತುಲಸಿಯನ್ನು ಪ್ರದಕ್ಷಿಣೆ ಮಾಡಿ ಸಾಷ್ಟಾಂಗ ನಮಸ್ಕರಿಸಬೇಕು. ನಂತರ ಎಲ್ಲ ತುಲಸಿಯ ಗಿಡಗಳಿಗೆ ಒಂದು ಬಿಂದಿಗೆಯಷ್ಟಾದರೂ ನೀರೆರೆಯಬೇಕು. ಹಾಗೆ ನೀರೆರೆದವನ ಎಲ್ಲ ಪಿತೃಗಳು ಆನಂದದಿಂದ ಸ್ವರ್ಗವನ್ನೈದುವರು. ತುಲಸಿಗೆ ನೀರೆರೆದು ತುಲಸಿಯ ಬುಡದಲ್ಲಿರುವ ಮೃತ್ತಿಕೆಯನ್ನು ಹಣೆಯಲ್ಲಿ ಧರಿಸಿದವನು ದೀರ್ಘಾಯುಷ್ಯವಂತನೂ, ಬಲವಂತನೂ, ಜಿತೇಂದ್ರಿಯನೂ, ಗುಣಸಂಪನ್ನನೂ ಆಗುವನು.

ನಂತರ ಸೇದುವ ಭಾವಿ ಅಥವಾ ಇಳಿಯುವ ಭಾವಿ, ಕೆರೆ, ಸರೋವರ, ನದಿಗಳು, ಮಹಾನದಿಗಳು ಮುಂತಾದವುಗಳಲ್ಲಿ ಆ ದೇಶದಲ್ಲಿ ದೊರಕುವ ನೀರಿನ ಅನುಕೂಲತೆಗೆ ತಕ್ಕಂತೆ ಸ್ನಾನ ಮಾಡಬೇಕು. ಸ್ನಾನಾದಿ ಎಲ್ಲ ಕರ್ಮಗಳನ್ನು ದೇಶಕಾಲಾನುಸಾರವಾಗಿ ಆಚರಿಸಬೇಕು. ಅಶಕ್ತನಾದವನು ಹೊರಗೆ ಸ್ನಾನವನ್ನು ಮಾಡದೇ ಮನೆಯಲ್ಲಿಯೇ ಬಿಸಿನೀರಿನಿಂದ ಸ್ನಾನ ಮಾಡಬೇಕು. ನೀರು ಸ್ವಭಾವತಃ ಶುದ್ಧವಾದುದು. ಅಗ್ನಿಯ ಸಂಯೋಗದಿಂದ ಮತ್ತಷ್ಟು ಪವಿತ್ರವೆನಿಸುವುದು. ಆದುದರಿಂದ ಜ್ಞಾನಿಗಳು ಬಿಸಿನೀರಿನ ಸ್ನಾನವನ್ನು ಪ್ರಶಂಸೆ ಮಾಡುವರು. ಆ ನೀರಿನಲ್ಲಿ ದೇವೇಶನಾದ ದತ್ತಾತ್ರೇಯನನ್ನು ಧ್ಯಾನಿಸಿ ಅಲ್ಲಿಯೇ ಗಂಗೆಯೇ ಮೊದಲಾದ ಎಲ್ಲ ತೀರ್ಥಾಭಿಮಾನಿದೇವತೆಗಳು ಆಗಮಿಸಿರುವರೆಂದು ಚಿಂತಿಸಬೇಕು. ಸ್ನಾನ ಮಾಡುವ ನೀರಿನಲ್ಲಿ ತುಲಸಿಯ ಮೃತ್ತಿಕೆಯನ್ನು ಹಾಕಿ ಸ್ನಾನ ಮಾಡಬೇಕು. ಹೀಗೆ ಮಾಡಿದವನು ಕೋಟಿತೀರ್ಥಗಳಲ್ಲಿ ಸ್ನಾನ ಮಾಡಿದ ಫಲವನ್ನು ಹೊಂದುವನು. ನಂತರ ಕ್ರಮವಾಗಿ ದೇವತರ್ಪಣ, ಋಷಿತರ್ಪಣ, ಪಿತೃತರ್ಪಣಗಳನ್ನು ನೀಡಬೇಕು. ಪಿತೃಗಳ ತೃಪ್ತ್ಯರ್ಥವಾಗಿ ಶಿಖೋದಕವನ್ನು ಬಿಡಬೇಕು. ಜೀವತ್ಪಿತೃಕನಾದವನು (ತಂದೆ ಜೀವಿಸಿರುವವನು) ಶಿಖೋದಕವನ್ನು ಬಿಡಬಾರದು. ಜೀವತ್ಪಿತೃಕನಾದವನು ಶಿಖೋದಕ ನೀಡಿದರೆ ರೌರವ ನರಕವನ್ನು ಹೊಂದುವನು.

ಸ್ನಾನದ ನಂತರ ಮಡಿಯಾದ ಬಟ್ಟೆಗಳನ್ನು ಧರಿಸಿ, ಊರ್ಧ್ವಪುಂಡ್ರ, ದ್ವಾದಶ-ನಾಮಗಳು ಹಾಗೂ ಪಂಚಮುದ್ರೆಗಳನ್ನು ಧರಿಸಬೇಕು. ವೈಷ್ಣವನಾದವನು ತುಲಸಿಯ ಮಾಲೆ, ಕಮಲದ ಬೀಜದ ಮಾಲೆ, ನೆಲ್ಲಿಕಾಯಿಯ ಮಾಲೆಗಳನ್ನು ಧರಿಸಬೇಕು. ನಂತರ ವಿಧಿಪೂರ್ವಕವಾಗಿ ಉಷಃಕಾಲದಲ್ಲಿ ವಿಷ್ಣುವನ್ನು ಪೂಜಿಸಿ ಸಂಧ್ಯಾವಂದನೆ ಜಪಾದಿಗಳನ್ನಾಚರಿಸಬೇಕು.

ಯುಧಿಷ್ಠಿರನೇ! ನಿನಗೆ ಸಂಕ್ಷೇಪದಲ್ಲಿ ದೇವಪೂಜೆಯ ವಿಧಾನವನ್ನು ತಿಳಿಸುವೆನು. ದೇವರ ಮನೆಗೆ ಹೋಗಿ ದ್ವಾರಪಾಲಕರನ್ನು ನಮಸ್ಕರಿಸಿ, ಬಾಗಿಲನ್ನು ತೆರೆಯಬೇಕು. ನಂತರ ಘಂಟೆಯನ್ನು ಬಾರಿಸಿ, ದೀಪವನ್ನು ಬೆಳಗಿಸಿ, ದೇವನನ್ನು ದರ್ಶನ ಮಾಡಬೇಕು. ''ಉತ್ತಿಷ್ಠ ಉತ್ತಿಷ್ಠ'' ಎಂಬ ಮಂತ್ರದಿಂದ ದೇವನನ್ನು ಸಂದರ್ಶಿಸಿ, ದೇವರನ್ನು ಪೀಠದಲ್ಲಿ ಕೂರಿಸಬೇಕು. ಸಾಲಗ್ರಾಮಾದಿಗಳನ್ನು ಪಾತ್ರೆಯಲ್ಲಿಟ್ಟು ವಿಧಿವತ್ತಾಗಿ ಪೂಜಿಸಬೇಕು. ಪೂಜಾಕಾಲದಲ್ಲಿ, ಹಾಡುಗಳು, ವಾದ್ಯಗಳು, ನರ್ತನಗಳಿಂದ, ವೇದಘೋಷಗಳು ಪುರಾಣಪಠನೆಗಳಿಂದ ದೇವನನ್ನು ಸೇವಿಸಬೇಕು. ಅದಾಗದಿದ್ದರೆ ವಿಷ್ಣುಸಹಸ್ರನಾಮ ಹಾಗೂ ಧನುರ್ಮಾಸ ಮಹಿಮೆಯನ್ನು ಕೇಳುತ್ತ ದೇವನನ್ನು ಪೂಜಿಸಬೇಕು. ಅದರಿಂದ ಜಗನ್ನಾಥನು ಪ್ರೀತನಾಗಿ ಅನುಗ್ರಹಿಸುವನು.

ದೇವನನ್ನು ಆವಾಹಿಸಿ ಕ್ರಮವಾಗಿ ಷೋಡಶೋಪಚಾರ ಪೂಜೆಯನ್ನು ಅರ್ಪಿಸಬೇಕು. ಭಕ್ತಿಯಿಂದ ಪಂಚಾಮೃತ ಸ್ನಾನ ಮಾಡಿಸಿ ನಂತರ ಗಂಧೋದಕ ಸ್ನಾನವನ್ನು ಮಾಡಿಸಬೇಕು. ಗಂಧೋಧಕವು ನನಗೆ ಅತ್ಯಂತ ಪ್ರಿಯವಾದುದು. ಪಂಚಾಮೃತಸ್ನಾನವು ಲಕ್ಷಫಲವನ್ನು ನೀಡಿದರೆ ಗಂಧೋಧಕವು ಅನಂತ ಫಲವನ್ನು ನೀಡುವುದು. ನಂತರ ಶುದ್ಧೋದಕದಿಂದ ಸ್ನಾನ ಮಾಡಿಸಿ ಪ್ರತಿಮೆಗಳನ್ನು ವಸ್ತ್ರದಿಂದ ಒರೆಸಬೇಕು. ಗಂಧ, ಪುಷ್ಪ, ಮಾಲೆಗಳು, ಅಕ್ಷತೆ ಮುಂತಾದವುಗಳಿಂದ ದೇವನನ್ನು ಪೂಜಿಸಬೇಕು. ಯಜ್ಞೋಪವೀತವನ್ನು, ಉತ್ತಮ ಕಿರೀಟವನ್ನು ಸಮರ್ಪಿಸಬೇಕು. ಭಗವಂತನಿಗೆ ಬಿಲ್ವಪತ್ರ, ತುಲಸಿ ಹಾಗೂ ಧಾತ್ರಿಯನ್ನು ಅರ್ಪಿಸಬೇಕು. ತುಲಸಿಯಿಲ್ಲದ ಪೂಜೆಯು ನಿಷ್ಫಲ- ವಾದುದು. ಆದುದರಿಂದ ಹೇಗಾದರೂ ಸರಿ ತುಲಸಿಯನ್ನು ಅರ್ಪಿಸಲೇಬೇಕು. ಧೂಪ ದೀಪಾದಿಗಳನ್ನು ಅರ್ಪಿಸಿ ನೈವೇದ್ಯ ಮಾಡಬೇಕು.

ಪಕ್ವವಾದ ಮನೋಹರವಾದ ಪದಾರ್ಥಗಳನ್ನು ಕೂದಲು, ಹುಳುಗಳು ಇಲ್ಲದಂತೆ ಶೋಧಿಸಿ ಇಡಬೇಕು. ಬೇಯದೇ ಇರುವುದು ಹಾಗೂ ಅತಿಯಾಗಿ ಬೆಂದುದನ್ನು ನಿವೇದಿಸಕೂಡದು. ಅತಿ ಖಾರ, ಹುಳಿ, ಉಪ್ಪು, ತೀಕ್ಷ್ಣವಾದ ಪದಾರ್ಥಗಳನ್ನು ನಿವೇದಿಸಬಾರದು. ಪ್ರಯತ್ನಪೂರ್ವಕವಾಗಿ ಶುದ್ಧಪಾಕವನ್ನೇ

ಸಮರ್ಪಿಸಬೇಕು. ಭಕ್ಷ್ಯ-ಭೋಜ್ಯಗಳು, ಲೇಹ್ಯ, ಪೇಯಗಳು, ಕಾಯಿಪಲ್ಲೆಗಳು, ವ್ಯಂಜನ ಮೊದಲಾದವುಗಳನ್ನು ಹಾಗೂ ವಿಶೇಷವಾಗಿ ದಧ್ಯನ್ನವನ್ನು ಹಾಗೂ ಮುದ್ಗಾನ್ನವನ್ನು ಸಮರ್ಪಿಸಬೇಕು. ಆಕಳ ಹಾಲು, ತುಪ್ಪ, ಸಕ್ಕರೆಗಳಿಂದ ಕೂಡಿದ ಗೋಧಿಯ ಪಾಯಸವನ್ನು ನಿವೇದಿಸಬೇಕು. ಪಾಯಸವನ್ನು ಎಂದಿಗೂ ತಾಮ್ರಪಾತ್ರೆಯಲ್ಲಿ ಮಾಡಕೂಡದು. ತಾಮ್ರಪಾತ್ರೆಯಲ್ಲಿ ಮಾಡಿದ ಪಾಯಸವು ಸುರೆ(ಮದ್ಯ)ಗೆ ಸಮನಾದುದು. ಈ ರೀತಿ ಅನೇಕ ಪಕ್ವಾನ್ನಗಳಿಂದ ಕೂಡಿದ ನೈವೇದ್ಯಗಳನ್ನರ್ಪಿಸಿ ದೇವರನ್ನರ್ಚಿಸಬೇಕು.

ಶ್ರೀಕೃಷ್ಣನು ಹೇಳಿದ ಧನುರ್ಮಾಸದ ವಿಧಾನಗಳನ್ನು ಕೇಳಿ ಪ್ರೀತನಾದ ಧಾರ್ಮಿಕಶ್ರೇಷ್ಠನಾದ ಧರ್ಮರಾಜನು ದೇವಕೀಸುತನಾದ ಕೃಷ್ಣನನ್ನು ಮತ್ತೆ ಪ್ರಶ್ನೆ ಮಾಡಿದನು.

**॥ ಇಲ್ಲಿಗೆ ಐದನೇ ಅಧ್ಯಾಯವು ಮುಗಿಯಿತು ॥**

★★★

# ಆರನೇ ಅಧ್ಯಾಯ

ಪುರಾಣಪುರುಷನಾದ ಶ್ರೀಕೃಷ್ಣನನ್ನು ಕೌಂತೇಯನಾದ ಧರ್ಮರಾಜನು ಪ್ರಶ್ನೆ ಮಾಡಿದನು. ಹೇ ಭಗವಂತನೇ! ನೀನು ಎಲ್ಲ ಧರ್ಮಗಳನ್ನು ಅರಿತವನು. ಶುದ್ಧವಾದ ಅಡುಗೆಯನ್ನು ತಯಾರಿಸಿ ಭಗವಂತನಿಗೆ ಸಮರ್ಪಿಸಬೇಕೆಂದು ನಾನೀಗ ನಿನ್ನಿಂದ ಅರಿತಿರುವೆ. ಪೂಜೆಯ ಹಾಗೂ ಪಾಕ ತಯಾರಿಸುವ ವಿಧಾನವನ್ನು ದಯಮಾಡಿ ನನಗೆ ತಿಳಿಸಬೇಕು. ಹೀಗೆ ಪ್ರಾರ್ಥಿತನಾದ ಶ್ರೀಕೃಷ್ಣನು ಧರ್ಮರಾಜನಿಗೆ ಹೇಳಲಾರಂಭಿಸಿದನು.

ರಾಜನೇ! ದೇವದೇವನ ಸಮರ್ಪಣೆಗೆ ತಾನೇ ಪಾಕವನ್ನು ತಯಾರಿಸಬೇಕು. ಅದಾಗದಿದ್ದಲ್ಲಿ, ಪತ್ನಿ, ಮಗ, ಶಿಷ್ಯರು, ಒಳ್ಳೆಯ ಬಂಧುಗಳು, ಮುಂತಾದವರಿಂದ ಮಾಡಿಸಬೇಕು. ತಾನೇ ತಯಾರಿಸಿದ ಪಾಕವಾಗಲೀ ಅಥವಾ ಪತ್ನಿಯು ತಯಾರಿಸಿದ ಪಾಕವನ್ನಾಗಲೀ ಉಣ್ಣಬೇಕು. ಬೇರೆಯವರು ಮಾಡಿದ ಅಡುಗೆಯನ್ನು ಉಣ್ಣುವವನು ಚಾಂದ್ರಾಯಣವನ್ನು ಆಚರಿಸಬೇಕು. ಮಿತ್ರ, ಗುರುಗಳು, ಸೋದರಮಾವ, ಹೆಂಡತಿಯ ತಂದೆ, ಉತ್ತಮ ಶ್ರೋತ್ರಿಯರು, ಇವರ ಮನೆಯ ಅನ್ನವು ಪರಾನ್ನವೆಂದು ಜ್ಞಾನಿಗಳು ಹೇಳುವುದಿಲ್ಲ. ಎಲ್ಲರ ಪಾಕವನ್ನು ತ್ಯಜಿಸಿ ತನ್ನ ಪಾಕವನ್ನು ಮಾತ್ರ ಸ್ವೀಕರಿಸುವವನು ಹಾಗೂ ವಿಚಾರಿಸದೇ ಎಲ್ಲೆಡೆ ಭುಂಜಿಸುವವನು ಇವರಿಬ್ಬರೂ ಪತಿತರೇ ಸರಿ. ಹೆಂಡತಿ, ಮಗಳು, ಸೊಸೆ, ಗುರುಪತ್ನಿ,

ಸೋದರಮಾವನ ಹೆಂಡತಿ ಈ ಐದು ಜನಗಳು ತಯಾರಿಸಿದ ಪಾಕವು ಸ್ವಯಂಪಾಕವೆಂದೇ ಹೇಳಲ್ಪಟ್ಟಿದೆ.

ಇನ್ನು ದೇವರ ನೈವೇದ್ಯಕ್ಕೆ ಪಾಕವನ್ನು ತಯಾರಿಸುವ ಸಂದರ್ಭಗಳಲ್ಲಿ ತಾಯಿ, ತನ್ನ ಸಹೋದರಿಯರು, ತಂದೆಯ ಸಹೋದರರ ಪತ್ನಿಯರು, ತನ್ನ ಸಹೋದರರ ಪತ್ನಿಯರು, ತಂದೆಯ ಸಹೋದರಿಯರು ಹಾಗೂ ತಾಯಿಯ ಸಹೋದರಿಯರು, ಮಗಳ ಮಗಳು, ಸಹೋದರ ಸೊಸೆ, ಮುಂತಾದ ಬಂಧು- ವರ್ಗದವರಿಂದ ಮಾಡಿಸಿ ಸಮರ್ಪಿಸಬೇಕು. ವಿಶೇಷವಾಗಿ ಸುಮಂಗಲಿಯರು ತಯಾರಿಸಿದ ನೈವೇದ್ಯವು ಉತ್ತಮವಾದುದು.

ಒಳ್ಳೆಯ ಸ್ವಭಾವವುಳ್ಳವಳೂ, ಶೌಚಾಚಾರಗಳನ್ನು ಆಚರಿಸುವವಳೂ, ವಿಧಿಪೂರ್ವಕ ಸ್ನಾನ ಮಾಡುವವಳು, ಯಾವಾಗಲೂ ಅರಿಷಿಣ ಕುಂಕುಮಗಳನ್ನು ಧರಿಸಿದವಳು, ಶುಭ್ರವಾದ ಸೀರೆ, ಕಂಚುಕ (ಕುಪ್ಪುಸ) ಗಳನ್ನು ಧರಿಸಿದವಳು, ಮೂಗುತಿ ಮುಂತಾದ ಆಭರಣಗಳನ್ನು ಧರಿಸಿ, ಕೇಶಗಳನ್ನೆಲ್ಲ ಒಂದೆಡೆ ಸೇರಿಸಿ ಕಟ್ಟಿಕೊಂಡವಳು, ಪತಿಭಕ್ತಿಯುತಳು, ಪುತ್ರ ಹಾಗೂ ಸೋದರರನ್ನು ಹೊಂದಿರುವ-ವಳು, ಹಸನ್ಮುಖಿಯಾದವಳು, ಶಾಂತಸ್ವಭಾವದವಳು, ಗುಣಗ್ರಾಹಿಯಾದವಳು, ಮೃದುವಾಗಿ ಮಾತನಾಡುವವಳು, ವಿಷ್ಣುಭಕ್ತಳು, ವಿಷ್ಣುದಾಸ್ಯವನ್ನು ಬಯಸುವವಳು, ಮನೆಯನ್ನು ತೊಳೆದು ರಂಗವಲ್ಲಿಯಿಂದ ಅಲಂಕರಿಸುವವಳು, ತುಳಸಿಯನ್ನು ಪೂಜಿಸುವವಳು, ಲಕ್ಷಬತ್ತಿ, ನಮಸ್ಕಾರ ಮುಂತಾದವುಗಳಿಂದ ದೇವನನ್ನು ಒಲಿಸುವ ಸ್ತ್ರೀಯು ಸುಮಂಗಲಿ ಎನಿಸುವಳು.

ಇಂತಹ ಸುಮಂಗಲಿಯು ತಯಾರಿಸಿದ ಪಾಕವನ್ನು ನಾನು ಅತ್ಯಂತ ಪ್ರೀತಿಯಿಂದ ಸ್ವೀಕರಿಸುವೆನು. ಈ ರೀತಿಯ ಸುಮಂಗಲಿಯರಿಗೆ ವಿಪುಲವಾದ ಭೋಗಗಳನ್ನು ಪುತ್ರ, ಪೌತ್ರರನ್ನು ಕೊನೆಗೆ ಮುಕ್ತಿಯನ್ನು ನೀಡುವೆನು.

ಇನ್ನು ತ್ಯಾಜ್ಯವಾದ ಪಾಕವನ್ನು ಹೇಳುವೆ ಕೇಳು. ಕಂಚುಕವನ್ನು ಧರಿಸದ ಸುಮಂಗಲಿ, ಅರಿಷಿಣ ಕುಂಕುಮವನ್ನು ಧರಿಸದವಳು, ಹಲ್ಲುಜ್ಜದವಳು, ಸ್ನಾನ ಮಾಡದವಳು, ಅಮಂಗಲೆಯು, ಹಠಮಾರಿಯು, ಕೊಳಕು ವಸ್ತ್ರ ಧರಿಸಿದವಳು, ಶೌಚಾಚಾರವಿಲ್ಲದವಳು, ಪತಿಯನ್ನು ದ್ವೇಷಿಸುವವಳು, ಅವಿವಾಹಿತಳು, ಗರ್ಭಿಣಿಯು, ವಂಧ್ಯೆಯು, ರಜಸ್ವಲೆಯು, ವ್ಯಭಿಚಾರಿಣಿಯು ಇವರು ತಯಾರಿಸಿದ ಪಾಕವು ದೂಷಿತವೆನಿಸುವುದು. ಪತಿಯ ಮರಣದ ನಂತರ ತಲೆಗೂದಲನ್ನು ಧರಿಸಿದ ಹಾಗೂ ಬಿಳಿಯ ವಸ್ತ್ರವನ್ನು ಧರಿಸುವ ಸ್ತ್ರೀಯು ನರಕವನ್ನೇ ಹೊಂದುವಳು. ಅಂಥವಳು ಮಾಡಿದ ಅಡುಗೆಯು ಮಾಂಸಕ್ಕೆ ಸಮವೆಂದು ಹಾಗೂ ಅವಳು ಸ್ಪರ್ಶಿಸಿದ ನೀರು ಮದ್ಯಕ್ಕೆ ಸಮವೆಂದು ಹೇಳಲ್ಪಡುವದು. ಕೇಶಧಾರಿಣಿ-

ಯಾದ ವಿಧವೆಯು, ಚಂಡಾಲಿ, ಬ್ರಹ್ಮಘಾತಕಿಯೆಂದು ಹೇಳಲ್ಪಡುವಳು. ಅಂಗಿಯನ್ನು ಹಾಕಿಕೊಂಡ ಯತಿ, ಕಂಚುಕ (ಕುಪ್ಪುಸ) ವನ್ನು ಧರಿಸದ ಸುಮಂಗಲಿ, ಸಕೇಶಿಯಾದ ವಿಧವೆಯನ್ನು ಕಂಡರೆ ಕೂಡಲೇ ಸಚೈಲ (ಮೈಮೇಲಿನ ಬಟ್ಟೆಗಳನ್ನು ತೆಗೆದು ತೋಯಿಸದೇ ಹಾಗೆಯೇ ಮಾಡುವ ಸ್ನಾನ) ಸ್ನಾನ ಮಾಡಬೇಕು.

ವಿಧವೆ, ಮಕ್ಕಳಿಲ್ಲದವಳು, ಋತುಮತಿಯಾಗದವಳು, ಕ್ರುದ್ಧಳು, ಪತಿಯಿಂದ ತಿರಸ್ಕೃತಳು, ನಿಷ್ಠುರವಾದಿನಿಯು, ಯಾವಾಗಲೂ ರೋದಿಸುವವಳು, ಬ್ರಾಹ್ಮಣರನ್ನು ದೂಷಿಸುವವಳು, ವಿಷ್ಣುವನ್ನು ನಿಂದಿಸುವವಳು, ಭಗವಂತನ ಕಥೆಗಳನ್ನು ಕೇಳದವಳು, ಪರರ ವಿಷಯದಲ್ಲಿ ಅತ್ಯಾಸಕ್ತಳು, ದೇವಾಲಯಗಳಿಗೆ ಹೋಗದೇ ಗ್ರಾಮವನ್ನು ಸುತ್ತುವವಳು ಇಂತಹ ಸ್ತ್ರೀಯರು ತಯಾರಿಸಿದ ಪಾಕವನ್ನು ನಾನೆಂದಿಗೂ ಸ್ವೀಕರಿಸುವುದಿಲ್ಲ.

ಬೇಯದಿರುವುದು, ಅತಿಯಾಗಿ ಬೆಂದುದು, ಅತಿಯಾದ ಉಪ್ಪು, ಹುಳಿ, ಖಾರಗಳಿಂದ ಕೂಡಿದುದು, ಕೂದಲು, ಹುಳುಗಳಿಂದ ಅಪವಿತ್ರವಾದುದು ನನಗೆಂದಿಗೂ ಗ್ರಾಹ್ಯವೆನಿಸದು. ಪಾಕ ಮಾಡುವ ಸಮಯದಲ್ಲಿ ಶೂದ್ರರು, ರಜಸ್ವಲೆಯರೊಂದಿಗೆ ಮಾತನಾಡಕೂಡದು. ಹೀಗೆ ಮಾಡಿದವರು ನರಕವನ್ನು ಹೊಂದುವರು. ನೈವೇದ್ಯಕ್ಕಾಗಿ ಉತ್ತಮಪಾಕವನ್ನು ತಯಾರಿಸಿದವರು ಮುಕ್ತಿಯನ್ನು ಹೊಂದುವರು. ತುಲಸಿಯ ಕಾಷ್ಠದಿಂದ ಬೆಂಕಿಯನ್ನು ಹತ್ತಿಸಿ ಅದರಲ್ಲಿ ಪಾಕಮಾಡಿ ನಿವೇದಿಸಿದವರು ಸ್ವರ್ಗವನ್ನು ಹೊಂದುವರು. ನನ್ನಲ್ಲಿ ಭಕ್ತಿಯುಳ್ಳವರು ಮಾಡಿದ ಪಾಕವು ನನಗೆ ಗ್ರಾಹ್ಯವೆನಿಸುವುದು. ನನ್ನ ಭಕ್ತರಿಗೆ ನಾನು ಯಾವಾಗಲೂ ವಶವಾಗಿರುವೆನು. ಈ ಜಗವೆಲ್ಲ ದೈವಾಧೀನವಾಗಿದೆ. ಆ ದೈವವು ಮಂತ್ರಾಧೀನ-ವಾಗಿದೆ. ಆ ಮಂತ್ರವು ಬ್ರಾಹ್ಮಣಾಧೀನವಾಗಿದೆ. ಅಂಥ ಬ್ರಾಹ್ಮಣರು ನನಗೆ ದೈವವೆನಿಸಿರುವರು. ಆದುದರಿಂದ ಬ್ರಾಹ್ಮಣರು ತಯಾರಿಸಿದ ನೈವೇದ್ಯವನ್ನು ನಾನು ಪ್ರೀತಿಯಿಂದ ಸ್ವೀಕಾರ ಮಾಡುವೆನು. ಹಿಂದೆ ನಳರಾಜನು ತಾನೇ ಪಾಕ ಮಾಡಿದನು. ಭೀಮಸೇನನು ವಿರಾಟನಗರದಲ್ಲಿ ಬಲ್ಲವನೆಂಬ ಹೆಸರಿನಿಂದ ಪಾಕ ಮಾಡಿದನು.

ಅಡುಗೆಯು ಸಿದ್ಧವಾದ ನಂತರ ನೈವೇದ್ಯ ಸ್ಥಳದ ಶುದ್ಧಿಯನ್ನು ಮಾಡಬೇಕು. ಗೋಮಯದಿಂದ ನೆಲವನ್ನು ಸಾರಿಸಿ, ರಂಗವಲ್ಲಿಯಿಂದ ಅಲಂಕರಿಸಿ ಅದರ ಮೇಲೆ ನೈವೇದ್ಯ ಪದಾರ್ಥಗಳನ್ನಿರಿಸಬೇಕು. ಪದಾರ್ಥಗಳಲ್ಲಿ ತುಪ್ಪವನ್ನು ಹಾಕಬೇಕು. ತುಲಸಿಯನ್ನು ಹಾಕಿದ ನಂತರ, ಕೈಯಲ್ಲಿ ತುಲಸಿಯ ಸಹಿತ ನೀರನ್ನು ಹಿಡಿದು ಕೊಂಡು, ನಾರಾಯಣನನ್ನು ಸ್ಮರಿಸುತ್ತ ಮೂಲಮಂತ್ರ (ನಾರಾಯಣ ಅಷ್ಟಾಕ್ಷರಮಂತ್ರ)ವನ್ನು ಜಪಿಸಿ ಉದಕವನ್ನು ಪ್ರೋಕ್ಷಿಸಿ ನೈವೇದ್ಯವನ್ನು ಸಮರ್ಪಿಸಬೇಕು.

ಪಾಕವನ್ನು ಭೂದೇವಿಯು ತಯಾರಿಸುವಳೆಂದು, ಶ್ರೀದೇವಿಯು ದೇವನಿಗೆ ಬಡಿಸುವಳೆಂದು, ಬ್ರಹ್ಮದೇವರು ದೇವನನ್ನು ಸೇವಿಸುತ್ತಿರುವರೆಂದು, ವಾಯುದೇವರು ದೇವರನ್ನು ಪ್ರಾರ್ಥಿಸುತ್ತ ಕೈಜೋಡಿಸಿ ನಿಂತಿರುವರೆಂದು ಚಿಂತಿಸುತ್ತ ''ನೈವೇದ್ಯಂ ಗೃಹ್ಯತಾಂ ಸರ್ವಂ ದೇವದೇವ ಜಗತ್ಪತೇ'' ಎಂದು ಜಗದೊಡೆಯನಾದ ಶ್ರೀಹರಿಯನ್ನು ಪ್ರಾರ್ಥಿಸಬೇಕು. ''ಶ್ರೀನಿವಾಸ ಸಮಸ್ತೇಽಸ್ತು ಮಹಾನ್ನೈವೇದ್ಯಮುತ್ತಮ್ । ಸಂಗೃಹಾಣ ಸುರಶ್ರೇಷ್ಠ ಭುಕ್ತಿಮುಕ್ತಿ ಪ್ರದೋ ಭವ'' ಎಂದು ದೇವನನ್ನು ಪ್ರಾರ್ಥಿಸಿ ನೂರೆಂಟು ಬಾರಿ ಮೂಲಮಂತ್ರವನ್ನು ಜಪಿಸಬೇಕು. ಶುದ್ಧಜಲವನ್ನು ಸಮರ್ಪಿಸಿ ಒಂದು ಅಡಿಕೆ ಐದು ಎಲೆಗಳು ಹಾಗೂ ಸುಣ್ಣ, ಏಲಕ್ಕಿ, ಲವಂಗ ಮುಂತಾದವುಗಳಿಂದ ಕೂಡಿದ ತಾಂಬೂಲವನ್ನರ್ಪಿಸಬೇಕು.

ನಂತರ ಮತ್ತೆ ಧೂಪ, ನೀರಾಂಜನ (ಮಂಗಳಾರತಿ) ಮಾಡಿ ಪುಷ್ಪಗಳನ್ನು ಸಮರ್ಪಿಸಬೇಕು. ಷೋಡಶೋಪಚಾರಗಳು ಹಾಗೂ ಅನೂಪಚಾರಗಳನ್ನು ಸಮರ್ಪಿಸಬೇಕು.

**ನ ಜಾನೇ ಕರ್ಮಯತ್ಕಿಂಚಿನ್ನಾಪಿ ಲೌಕಿಕವೈದಿಕೇ ।**
**ನ ನಿಷೇಧವಿಧೀ ವಿಷ್ಣೋ ತವ ದಾಸೋಸ್ಮಿ ಕೇವಲಮ್ ॥**

ಎಂದು ಪ್ರಾರ್ಥಿಸಬೇಕು. ಮನದುಂಬಿ ಭಗವಂತನನ್ನು ಸ್ತುತಿಸುತ್ತ ಸಾಷ್ಟಾಂಗ ನಮಸ್ಕರಿಸಬೇಕು. (ಸ್ತ್ರೀಯರು ಕೇವಲ ಪಂಚಾಂಗ ನಮಸ್ಕಾರವನ್ನು ಮಾತ್ರ ಮಾಡಬೇಕು) ನಂತರ ಓ ದೇವನೇ! ನಾನು ಪ್ರತಿದಿನ ಹಗಲು ರಾತ್ರಿ ನಿರಂತರವಾಗಿ ಸಾವಿರಾರು ಅಪರಾಧಗಳನ್ನು ಮಾಡುತ್ತಿರುವೆನು. ಪುರುಷೋತ್ತಮನಾದ ನೀನು ಆ ಎಲ್ಲ ಅಪರಾಧಗಳನ್ನು ಕ್ಷಮಿಸಿ ನನ್ನನ್ನುದ್ಧರಿಸು ಎಂದು ಪ್ರಾರ್ಥಿಸಬೇಕು. ವಂಚನೆ, ಶಾಠ್ಯಗಳಿಂದಾದರೂ ಸರಿ ಶ್ರೀಹರಿಯನ್ನು ನಮಸ್ಕರಿಸಿದವನ ನೂರಾರು ಜನ್ಮಗಳ ಪಾಪಗಳು ವಿನಾಶ ಹೊಂದುವವು. ಸಾವಿರಾರು ಕೋಟಿ ತೀರ್ಥಕ್ಷೇತ್ರಗಳಾಗಲೀ, ನೂರಾರು ಕೋಟಿ ವ್ರತಾಚರಣೆಗಳಾಗಲೀ ನಾರಾಯಣ ನಮಸ್ಕಾರದ ಹದಿನಾರನೆಯ ಒಂದಂಶಕ್ಕೂ ಸರಿಯೆನಿಸಲಾರವು. ಹಿಂದಿನ ಅನೇಕ ಜನುಮಗಳಲ್ಲಿ ಮಾಡಿದ ಪಾಪಗಳು ಪ್ರದಕ್ಷಿಣೆಯ ಒಂದೊಂದು ಹೆಜ್ಜೆಗೂ ನಾಶ ಹೊಂದುವವು. ಹೆಜ್ಜೆಯ ಮೇಲೆ ಹೆಜ್ಜೆಯಿರಿಸುತ್ತ ಕರಗಳನ್ನು ಜೋಡಿಸಿ, ಬಾಯಲ್ಲಿ ದೇವನನ್ನು ಸ್ತುತಿಸುತ್ತ, ಹೃದಯದಲ್ಲಿ ಧ್ಯಾನಿಸುತ್ತ, ದೇವನಿಗೆ ಸುತ್ತು ಬಂದರೆ ಪ್ರದಕ್ಷಿಣೆಯೆನಿಸುವುದು. ನಾಟ್ಯಲೋಲನೆದುರು ಚಪ್ಪಾಳೆ ಬಾರಿಸುತ್ತ ನರ್ತಿಸಬೇಕು. ಹೀಗೆ ಕುಣಿದವನ ಪಾಪಗಳೆಲ್ಲ ನಾಶವಾಗುವವು. ಈ ರೀತಿ ಪೂಜೆಯನ್ನು ಮಾಡಿ ಕೊನೆಗೆ ಮಂತ್ರಪುಷ್ಪವನ್ನು ಸಮರ್ಪಿಸಬೇಕು. ಕೊನೆಗೆ ''ಯಸ್ಯ ಸ್ಮೃತ್ಯಾ...'' ಎಂಬ ಮಂತ್ರದಿಂದ ಬೊಗಸೆಯಿಂದ ನೀರನ್ನು ಅರ್ಪಿಸಬೇಕು.

**ಕಾಯೇನ ವಾಚಾ ಮನಸೇಂದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾ ಪ್ರಕೃತಿಸ್ವಭಾವಾತ್ ।**
**ಕರೋಮಿಯದ್ಯತ್ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯಾಮಿ ।।★।।**

ಎಂದು ತಾನು ಆಚರಿಸಿದ ಎಲ್ಲ ಸತ್ಕರ್ಮಗಳನ್ನು ದೇವರಿಗೆ ಸಮರ್ಪಿಸಬೇಕು.

ಈ ರೀತಿ ಭಕ್ತಿಯಿಂದ ಹರಿಯನ್ನು ಪೂಜಿಸಿ ಸೇವಿಸಿದರೆ ಅದರಿಂದಲೇ ಎಲ್ಲ ಸಂಪತ್ತುಗಳನ್ನು ಪಡೆದು ಕೃತಕೃತ್ಯನೆನಿಸುವೆ.

ಇದೇ ರೀತಿಯಾಗಿ ಲಕ್ಷ್ಮೀಪತಿಯನ್ನು ಬೇರೆ ಮಾಸಗಳಲ್ಲಿ ಮಧ್ಯಾಹ್ನದಲ್ಲಿ ಪೂಜಿಸಬೇಕು. ಧನುರ್ಮಾಸದಲ್ಲಿ ಮಾತ್ರ ಉಷಃಕಾಲದಲ್ಲಿ ಪೂಜಿಸಿ ಮುದ್ಗಾನ್ನವನ್ನು ಸಮರ್ಪಿಸುವುದು ಕೋಟಿ ಕೋಟಿ ಪಟ್ಟು ಫಲ ನೀಡುವುದು.

ಧನುರ್ಮಾಸವಲ್ಲದೇ ಬೇರಾವ ಮಾಸದಲ್ಲೂ ಮುದ್ಗಾನ್ನ (ಹುಗ್ಗಿ) ಯನ್ನು ತಿನ್ನಕೂಡದು. ನಾಲಿಗೆಯ ಚಪಲದಿಂದ ತಿನ್ನುವ ಮೂರ್ಖನು ಬ್ರಾಹ್ಮಣ್ಯವನ್ನೇ ಕಳೆದುಕೊಂಡು ರೌರವ ನರಕವನ್ನು ಹೊಂದುವನು. ಧನುರ್ಮಾಸದಲ್ಲಿ ಹರಿಗೆ ಅರ್ಪಿಸಿದ ಮುದ್ಗಾನ್ನವನ್ನು ಸೇವಿಸುವವನು ಹರಿಯ ಅನುಗ್ರಹಕ್ಕೆ ಪಾತ್ರನಾಗಿ ಸಕಲ ಸೌಭಾಗ್ಯಗಳನ್ನು ಶ್ರೇಯಸ್ಸನ್ನು ಹೊಂದುವನು.

**।। ಇಲ್ಲಿಗೆ ಆರನೇ ಅಧ್ಯಾಯವು ಮುಗಿಯಿತು ।।**

★★★

# ಏಳನೇ ಅಧ್ಯಾಯ

ಸೂತರು ಹೇಳುವರು. ಮಹರ್ಷಿಗಳೇ ಕೃಷ್ಣ ಹಾಗೂ ದಧಿಪಾಲರ ಅದ್ಭುತ ಸಂವಾದವನ್ನು ಹೇಳುವೆನು ಕೇಳಿರಿ. ದಧಿಪಾಲನು ಕೃಷ್ಣನನ್ನು ಕೇಳಿದನು. ಹೇ ಕೃಷ್ಣನೇ! ನೀನು ನನಗೆ ಗೆಳೆಯನೂ, ಗುರುವೂ, ದೇವರೂ ಆಗಿರುವೆ. ಮಾಸಗಳಲ್ಲೆಲ್ಲ ಮಾರ್ಗಶೀರ್ಷವು ಅದರಲ್ಲೂ ಧನುರ್ಮಾಸವು ವಿಶೇಷವಾಗಿ ಯಾವ ಕಾರಣದಿಂದ ಶ್ರೇಷ್ಠವಾಗಿದೆಯೆಂಬುದನ್ನು ವಿಸ್ತಾರವಾಗಿ ತಿಳಿಸಬೇಕು.

ಶ್ರೀಕೃಷ್ಣನು ಹೇಳಿದನು. ಗೆಳೆಯ ದಧಿಪಾಲನೇ! ಶಾಸ್ತ್ರಾನುರೂಪವಾದ ಮತ್ತೊಂದು ರಹಸ್ಯವನ್ನು ಹೇಳುವೆನು. ನಾನು ನಿನ್ನ ಭಕ್ತಿಪಾಶದಿಂದ ವಶನಾಗಿರುವೆನು. ಆದುದರಿಂದ ನನಗೆ ಪ್ರೀತಿಕರವಾದ ಅತ್ಯಂತ ರಹಸ್ಯವನ್ನು ಹೇಳುವೆ ಕೇಳು.

ಧನುರ್ಮಾಸದ ಉಷಃಕಾಲದಲ್ಲಿ ಎದ್ದು ಸ್ನಾನಮಾಡಿ ನನ್ನನ್ನು ಪೂಜಿಸಿ ಮುದ್ಗಾನ್ನವನ್ನು ಅರ್ಪಿಸಿದವನು ಭಾಗವತೋತ್ತಮನೆನಿಸುವನು. ಧನುರ್ಮಾಸದಲ್ಲಿ ಬ್ರಾಹ್ಮಣರಿಗೆ ಮುದ್ಗಾನ್ನ ಭೋಜನ ಮಾಡಿಸಿದವನಿಗೆ ಮುಕ್ತಿಯೇ ದೊರಕುವುದೆಂದ ಮೇಲೆ ಬೇರೆ ಭೋಗ ಸಂಪದಗಳು ದೊರಕುವುದೇನಾಶ್ಚರ್ಯ? ವೈಶಾಖಮಾಸದಲ್ಲಿ ದಧ್ಯನ್ನ (ಬುತ್ತಿ), ಧನುರ್ಮಾಸದಲ್ಲಿ ಮುದ್ಗಾನ್ನದಾನದಿಂದ, ಕಾರ್ತಿಕಮಾಸದಲ್ಲಿ ದೀಪದಾನದಿಂದ, ಮಾಘಮಾಸದಲ್ಲಿ ಕಂಬಳಿಯ ದಾನದಿಂದ (ಶಾಲು ಮುಂತಾದವು) ವಿಷ್ಣುಭಕ್ತರ ಸತ್ಕಾರದಿಂದ ನಾನು ಪ್ರೀತನಾಗಿ ಅವರ ವಶನಾಗುವೆನು. ನಾನು ಎಲ್ಲ ಯೋಗಿಗಳಿಗೂ ಅದೃಶ್ಯನೆನಿಸಿದವನು. ಆದರೆ ಧನುರ್ಮಾಸದ ಮುದ್ಗಾನ್ನದಾನದಿಂದ ದಾನಿಗಳ ಕೈವಶವಾಗಿರುವೆನು.

ಗೆಳೆಯನೇ! ಧರ್ಮಗಳಲ್ಲೆಲ್ಲ ಉತ್ತಮಧರ್ಮವಾಗಿರುವ ಮತ್ತೊಂದು ರಹಸ್ಯವನ್ನು ಹೇಳುವೆ. ಧನುರ್ಮಾಸದ ವ್ಯತೀಪಾತ ದಿನದಂದು ವಿಪ್ರರ ಮುದ್ಗಾನ್ನ ಭೋಜನದಿಂದ ತೃಪ್ತನಾದಂತೆ ನಾನು ಯಜ್ಞಗಳಿಂದಾಗಲೀ, ಮಂತ್ರ ಜಪದಿಂದಾಗಲೀ, ಅರ್ಚನೆಗಳಿಂದಾಗಲೀ ತೃಪ್ತಿ ಹೊಂದಲಾರೆ. ಸಾವಿರಾರು ಅಗ್ನಿಷ್ಟೋಮ ಯಾಗಗಳಾಗಲೀ, ಹತ್ತಾರು ಸಾವಿರ ವಾಜಪೇಯ ಯಾಗಗಳಾಗಲೀ, ವ್ಯತೀಪಾತದಲ್ಲಿ ಮುದ್ಗಾನ್ನದಾನದ ಒಂದಂಶಕ್ಕೂ ಸಾಟಿಯಾಗಲಾರವು. ವೇದಭ್ರಷ್ಟನಾಗಿರಲಿ, ವ್ರತಭ್ರಷ್ಟನಾಗಿರಲಿ, ಕರ್ಮಭ್ರಷ್ಟನಾಗಿರಲಿ, ಶತ್ರುವಾಗಲಿ, ಮಿತ್ರನಾಗಲಿ, ಧನುರ್ಮಾಸದ ವ್ಯತೀಪಾತದಂದು ವಿಪ್ರನಿಗೆ ಮುದ್ಗಾನ್ನ ನೀಡಿ ಶುದ್ಧನೆನಿಸುವನು. ಅವನ ಎಲ್ಲ ಪಿತೃಗಳು ತೃಪ್ತರಾಗುವರು. ಎಲ್ಲ ಲೋಕೇಶ್ವರರು ವ್ಯತೀಪಾತದ ಮುದ್ಗಾನ್ನ ದಾನವನ್ನು ಪ್ರಶಂಸೆ ಮಾಡುವರು. ಸಕ್ಕರೆ, ತುಪ್ಪ, ಏಲಕ್ಕಿ ಮುಂತಾದವುಗಳಿಂದ ಯುಕ್ತವಾದ ಮುದ್ಗಾನ್ನವನ್ನು ನೀಡಿದವನಿಗೆ ಕಾಯಕ್ಲೇಶ-ಕರವಾದ ತೀರ್ಥಯಾತ್ರೆ, ವ್ರತಗಳಿಂದೇನು?

ಧನುರ್ಮಾಸದಲ್ಲಿ ಜಲಾಶಯಗಳಲ್ಲಿ ಉಷಃಕಾಲದಲ್ಲಿ ಸ್ನಾನಮಾಡಿ ಹರಿಪೂಜೆ ಮಾಡುವವನನ್ನು ಇಂದ್ರಾದಿದೇವತೆಗಳೂ ಗೌರವಿಸುವರು. ಎಲ್ಲ ಭೂತಗಳು ಅವನಿಗೆ ಹೆದರುವವು. ಭೂತ, ಪ್ರೇತ, ಪಿಶಾಚಗಳು, ಕೂಷ್ಮಾಂಡ, ಯಕ್ಷರು, ರಾಕ್ಷಸರು, ಉನ್ಮಾದ, ಅಪಸ್ಮಾರ, ವೇತಾಲ, ಮೊದಲಾದ ಗ್ರಹಗಳೆಲ್ಲ ಅವನನ್ನು ಕಂಡು ದೂರ ಓಡುವವು. ಧನುರ್ಮಾಸದ ಪ್ರಾತಃಕಾಲದಲ್ಲಿ ಮುದ್ಗಾನ್ನವನ್ನು ನೈವೇದ್ಯಮಾಡಿ, ಪಿತೃಗಳ ತೃಪ್ತಿಗೋಸುಗ ವೈಷ್ಣವನಿಗೆ ಭೋಜನ ಮಾಡಿಸಿದವನ ಫಲವನ್ನು ಕೇಳು. ಗಯಾಕ್ಷೇತ್ರದಲ್ಲಿ ಹಾಗೂ ರಾಮಸೇತುವಿನಲ್ಲಿ ಹತ್ತುಸಾವಿರ ಶ್ರಾದ್ಧಗಳನ್ನು ಮಾಡಿದ ಫಲವನ್ನು ಹೊಂದುವನು. ಅವನ ವಂಶದ ಪಿತೃಗಳೆಲ್ಲ ಹರಿಯ ಪಾದವನ್ನು ಹೊಂದುವರು. ಧನುರ್ಮಾಸದ ವ್ಯತೀಪಾತದಲ್ಲಿ ಭಗವಂತನು ಯೋಗಿಗಳಿಗೆ ತತ್ವದರ್ಶಕನಾದ ದತ್ತಾತ್ರೇಯನಾದನು. ದತ್ತಾತ್ರೇಯಮಂತ್ರವನ್ನು

ಧನುರ್ಮಾಸದ ಪ್ರಾತಃ- ಕಾಲದಲ್ಲಿ ಪಠಿಸಿದವನ ಹೃದಯದಲ್ಲೇ ದತ್ತಾತ್ರೇಯನು ನೆಲೆಸುವನು. ಜಲಾಶಯಗಳಲ್ಲಿ ಸ್ನಾನ ಮಾಡುವಾಗ ದತ್ತಾತ್ರೇಯನನ್ನು ಸ್ಮರಿಸಿ ಸ್ನಾನ ಮಾಡಬೇಕು. ಧನುರ್ಮಾಸದ ವ್ಯತೀಪಾತದಂದು ಜಲಾಶಯಗಳಲ್ಲಿ ದತ್ತಾತ್ರೇಯನನ್ನು ಸ್ಮರಿಸಿ ಸ್ನಾನ ಮಾಡಿದ ಫಲಕ್ಕೆ, ಕಾವೇರ್ಯಾದಿ ನದೀಸ್ನಾನಗಳಾಗಲೀ, ಸಾವಿರಾರು ಅರ್ಧೋದಯ ಪರ್ವಕಾಲಗಳಾಗಲೀ, ನೂರಾರು ವಾಜಪೇಯ ಯಾಗಗಳಾಗಲೀ ಸಾಟಿಯಾಗಲಾರವು. ಧನುರ್ಮಾಸದ ವ್ಯತೀಪಾತದಂದು ಪಿತೃಗಳ ಉದ್ದೇಶ್ಯವಾಗಿ ತರ್ಪಣವನ್ನು ನೀಡಿ, ಹರಿಯನ್ನು ಧ್ಯಾನಿಸುತ್ತ ಮೂಲಮಂತ್ರದಿಂದ ಅರ್ಘ್ಯವನ್ನು ನೀಡಬೇಕು.

**ವ್ಯತೀಪಾತ ಮಹಾಸತ್ವ ಸರ್ವಪಾಪಪ್ರಣಾಶನ ।**
**ಸಹಸ್ರಬಾಹೋ ವಿಶ್ವಾತ್ಮನ್ ಗೃಹಾಣಾರ್ಘ್ಯಂ ನಮೋಽಸ್ತು ತೇ ॥**

**ವ್ಯತೀಪಾತ ನಮಸ್ತೇಽಸ್ತು ನಮಸ್ತೇ ವಿಶ್ವಮಂಗಳ ।**
**ವಿಷ್ಣುಚಕ್ರಸ್ವರೂಪಾಯ ನಮಸ್ತೇ ದಿವ್ಯತೇಜಸೇ ॥**

ಎಂಬೀ ಮಂತ್ರದಿಂದ ಒಂದು ಅರ್ಘ್ಯವನ್ನು ನೀಡಬೇಕು. ನಂತರ ದಕ್ಷಿಣ ದಿಕ್ಕಿಗೆ ಮುಖ ಮಾಡಿ ಕುಳಿತುಕೊಂಡು ತನ್ನ ತಂದೆಯ ಮತ್ತು ತಾಯಿಯ ವಂಶಗಳ ಪಿತೃಗಳನ್ನು ಸ್ಮರಿಸುತ್ತ ಆ ಪಿತೃಗಳ ತೃಪ್ತಿಗಾಗಿ ಹೀಗೆ ಪ್ರಾರ್ಥಿಸಬೇಕು.

**ವಿಷ್ಣುಪ್ರಿಯ ವ್ಯತೀಪಾತ ಪಿತೃಣಾಮಮೃತ ಪ್ರದ ।**
**ಪಿತೃಣಾಂ ಮಮ ವೈಕುಂಠಂ ಪ್ರಯಚ್ಛ ಭಗವನ್ ಹರೇ ॥**

**ತ್ವತ್ಪ್ರಸಾದೇನ ಮೇ ವಿಷ್ಣೋ ಭಕ್ತಿರಸ್ತ್ವನಪಾಯಿನೀ ।**
**ಜ್ಞಾನವಿಜ್ಞಾನವೈರಾಗ್ಯಂ ದೇಹಿ ಮೇ ಭಗವನ್ಸದಾ ॥**

ಎಂಬ ಮಂತ್ರದಿಂದ ಪ್ರಾರ್ಥಿಸಬೇಕು. ಹೀಗೆ ಮೂರು ವರ್ಷಗಳವರೆಗೆ ಮಾಡಬೇಕು. ಅದರಿಂದ ಕೋಟಿವರ್ಷಗಳವರೆಗೆ ಹರಿಯನ್ನು ಪೂಜಿಸಿದ ಫಲವನ್ನು ಪಡೆಯುವನು. ಒಂದು ವರುಷವಾದರೂ ಧನುರ್ಮಾಸದ ವ್ಯತೀಪಾತದಂದು ಈ ರೀತಿಯಾಗಿ ಅರ್ಚಿಸಬೇಕು. ಈ ರೀತಿ ಆಚರಿಸುವವನು ಈ ಲೋಕದಲ್ಲಿ ಎಲ್ಲ ಭೋಗಗಳನ್ನು ಅನುಭವಿಸಿ, ನೂರೊಂದು ಕುಲದ ಪಿತೃಗಳನ್ನು ಉದ್ಧರಿಸುವನು. ನಂತರ ಒಂದು ಕಲ್ಪದವರೆಗೆ ಶ್ವೇತದ್ವೀಪದಲ್ಲಿ ವಾಸಿಸಿ ನಂತರ ಭೂಲೋಕದಲ್ಲಿ ವೈಷ್ಣವನಾಗಿ ಜನಿಸುವನು.

ಮಿತ್ರನೇ! ಮತ್ತೊಂದು ರಹಸ್ಯವನ್ನು ಉಪದೇಶಿಸುವೆನು. ಸಾವಧಾನದಿಂದ ಕೇಳು. ನಾನು ಭಕ್ತಪರಾಧೀನನಾದುದರಿಂದ ರಹಸ್ಯವನ್ನು ಅವಶ್ಯವಾಗಿ ಭಕ್ತನಾದ

ನಿನಗೆ ಹೇಳುವೆನು. ಧನುರ್ಮಾಸದಲ್ಲಿ ತುಲಸಿಗೆ ಮುದ್ಗಾನ್ನವನ್ನು ಸಮರ್ಪಿಸಿದವನು ಭುಕ್ತಿಮುಕ್ತಿಗಳನ್ನು ಹೊಂದುವನು. ಧನುರ್ಮಾಸದ ಉಷಃಕಾಲದಲ್ಲಿ ತುಲಸೀ-ದೇವಿಗೆ ಭಕ್ತಿಯಿಂದ ಮುದ್ಗಾನ್ನವನ್ನು ಅರ್ಪಿಸಿದವನು ಸಾರ್ವಭೌಮನಾಗುವನು. ಶತ್ರುಪೀಡಿತನು ಶತ್ರುಬಾಧೆಯಿಂದ ಮುಕ್ತನಾಗುವನು. ರಾಜನು ಚಕ್ರವರ್ತಿ-ಯೆನಿಸಿದರೆ, ವೈಶ್ಯನು ಧನವಂತನೆನಿಸುವನು. ತುಲಸಿಗೆ ಮುದ್ಗಾನ್ನ ಸಮರ್ಪಣೆಯಿಂದ ಕುಟುಂಬವೃದ್ಧಿ, ಭೂಮಿಯ ವಿಸ್ತಾರ, ಸಂತಾನಕ್ಕೆ ಸುಖಪ್ರಾಪ್ತಿ, ಪಶುಸಂಪತ್ತಿನ ಹೆಚ್ಚಳಗಳನ್ನು ಪಡೆಯುವನು. ಧನುರ್ಮಾಸದ ವ್ಯತೀಪಾತದಂದು ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸಿದರೂ ಅದರ ಫಲವನ್ನು ಹೇಳಲು ನಾನು ಶಕ್ತನಲ್ಲ. ಆದರೂ ಕೂಡ ಅದರ ಫಲೋದಯವನ್ನು ಸಾವಿರದ ಒಂದಂಶದಿಂದ ಹೇಳುವೆನು. ಬ್ರಾಹ್ಮಣನಾಗಲೀ, ಬ್ರಾಹ್ಮಣನೆಂದು ಕೇವಲ ಕರೆಸಿಕೊಳ್ಳುವವನಾಗಲೀ (ಬ್ರಾಹ್ಮಣ ಯೋಗ್ಯ ಕರ್ಮವನ್ನು ಆಚರಿಸದೇ ಕೇವಲ ಬ್ರಾಹ್ಮಣನಲ್ಲಿ ಜನಿಸಿದವನು) ಗೋಹತ್ಯೆಯೇ ಮೊದಲಾದ ಪಾಪಗಳನ್ನು ಮಾಡಿದವನಾಗಿದ್ದರೂ ಇದರಿಂದ ಶುದ್ಧನೆನಿಸುವನು. ವ್ಯತೀಪಾತದಂದು ತುಲಸಿಯನ್ನು ಮುದ್ಗಾನ್ನದಿಂದ ಪೂಜಿಸಿದವನು, ನೂರು ಜನ್ಮಗಳಲ್ಲಿ ವೈಷ್ಣವನೂ, ಧನವಂತನೂ ಆಗುವನು. ಅವನ ವಂಶದಲ್ಲಿ ಅಪಮೃತ್ಯುವಾಗಲೀ, ದಾರಿದ್ರ್ಯವಾಗಲೀ ಸಂತಾನಹೀನತೆಯಾಗಲೀ ಬಾಧಿಸುವುದಿಲ್ಲ.

**॥ ಇಲ್ಲಿಗೆ ಏಳನೇ ಅಧ್ಯಾಯವು ಮುಗಿಯಿತು ॥**

★★★

# ಎಂಟನೇ ಅಧ್ಯಾಯ

ಮತ್ತೆ ಕೃಷ್ಣನು ಹೇಳಿದನು. ದಧಿಪಾಲನೇ! ಮೊಸರೊಡೆದು ಬೆಣ್ಣೆ ತೆಗೆದಂತೆ ಶಾಸ್ತ್ರಸಾರವನ್ನು ಹೇಳುವೆನು ಕೇಳು. ಧನುರ್ಮಾಸದ ದ್ವಾದಶಿಯಂದು ಉಷಃ-ಕಾಲದಲ್ಲಿ ಮುದ್ಗಾನ್ನ ಸಮರ್ಪಣೆಯಿಂದ ಸರ್ವಯಜ್ಞಗಳನ್ನು ಆಚರಿಸಿದ ಫಲ, ಸಕಲತೀರ್ಥಗಳ ಸ್ನಾನದ ಫಲ, ಸಕಲ ವೇದಾಧ್ಯಯನದ ಫಲ, ಸರ್ವಮಂತ್ರಗಳನ್ನು ಜಪಿಸಿದ ಪುಣ್ಯವನ್ನು ಪಡೆಯುವನು. ಧನುರ್ಮಾಸದ ದ್ವಾದಶಿಯಂದು ಮುದ್ಗಾನ್ನವನ್ನು ಸಮರ್ಪಿಸಿದವನು ದಾಟಲಾಗದ ಮಾಯೆಯನ್ನು ದಾಟುವನು. ಧನುರ್ಮಾಸದ ದ್ವಾದಶಿಯಂದು ಮುದ್ಗಾನ್ನ ನೈವೇದ್ಯವನ್ನು ಮಾಡಿದವನು ಬ್ರಹ್ಮ ಹತ್ಯೆ ಮಾಡಿರಲಿ, ಕೃತಘ್ನನಾಗಿರಲಿ, ಸಕಲ ಕರ್ಮಭ್ರಷ್ಟನಾಗಿರಲಿ ಶುದ್ಧನೆನಿಸುವನು.

ಹಿಂದೆ ಭೃಗು ಋಷಿಗಳು ದಕ್ಷಯಜ್ಞದಲ್ಲಿ, ಬ್ರಹ್ಮಹತ್ಯಾದಿ ದೋಷಯುಕ್ತರಾಗಿ ಕರ್ಣಿಕಾಪತ್ತನದಲ್ಲಿ ಗೋದ್ವಾದಶಿಯಂದು ಮುದ್ಗಾನ್ನವನ್ನು ವಿಷ್ಣುವಿಗೆ ಸಮರ್ಪಿಸಿ

ಶುದ್ಧರೆನಿಸಿದರು. ಗೋದ್ವಾದಶಿಯಂದು ಮಾಡಿದ ಮುದ್ಗಾನ್ನದಾನವು ಒಂದು ಕಲ್ಪದ ತಪಸ್ಸಿಗೆ ಸಮವೆನಿಸುವುದು. ಗೋದ್ವಾದಶಿಯಂದು ಮುದ್ಗಾನ್ನವನ್ನು ನಿವೇದಿಸಿ ವಿಪ್ರರಿಗೆ ಭೋಜನ ಮಾಡಿಸಿದವನು ದೀರ್ಘಾಯುಷ್ಯವಂತನಾಗಿ ಪುತ್ರ, ಪೌತ್ರರಿಂದೊಡಗೂಡಿ ಸಕಲ ಭೋಗಗಳನ್ನು ಅನುಭವಿಸಿ ಬ್ರಹ್ಮಲೋಕವನ್ನು ಹೊಂದಿ ಅಲ್ಲಿ ಅನೇಕ ಕಲ್ಪಗಳವರೆಗೆ ವಾಸಿಸಿ ನಂತರ ವಿಷ್ಣುಭಕ್ತನಾದ ಚಕ್ರವರ್ತಿಯೆನಿಸುವನು. ಗೋದ್ವಾದಶಿಯಂದು ಅಥವಾ ಧನುರ್ಮಾಸದ ವ್ಯತೀಪಾತದಂದು ಅನ್ನದಾನದಿಂದ ಅಥವಾ ವೈಶಾಖ ಮಾಸದಲ್ಲಿ ಮೊಸರನ್ನದ ದಾನದಿಂದ ಕಲ್ಪಗಳವರೆಗೆ ಧನವಂತನೆನಿಸುವನು. ದರಿದ್ರನಾಗಲೀ, ರೋಗಿಯಾಗಲೀ, ದುಃಖಿತನಾಗಲೀ, ಗೋದ್ವಾದಶಿಯ ಅನ್ನದಾನದಿಂದ ಆರು ತಿಂಗಳಿನಲ್ಲಿ ಧನವಂತನೆನಿಸುವನು.

ಹಿಂದೆ ದಶರಥ ಮಹಾರಾಜನು ಗೋದ್ವಾದಶಿಯಂದು ಅನ್ನದಾನ ಹಾಗೂ ತುಲಸೀಪೂಜೆಯನ್ನು ಮಾಡಿ ಸಾಕ್ಷಾತ್ ಶ್ರೀಹರಿಯನ್ನೇ ಮಗನನ್ನಾಗಿ ಪಡೆದನು. ಗೋದ್ವಾದಶಿಯಂದು ಪೂಜೆಯನ್ನು ಮಾಡಿ ರುದ್ರದೇವರು ಪಾರ್ವತಿಯನ್ನು ವರಿಸಿ ಸ್ಕಂದನನ್ನು ಪುತ್ರನನ್ನಾಗಿ ಪಡೆದರು. ಗಣೇಶನು ಧನುರ್ಮಾಸದಲ್ಲಿ ನನಗೆ ಮತ್ತು ತುಲಸಿಗೆ ಮುದ್ಗಾನ್ನವನ್ನು ನಿವೇದಿಸಿ ವಿಘ್ನೇಶನೆನಿಸಿದನು. ಹಿಂದೆ ಗಜಾನನನು ಬ್ರಹ್ಮರ್ಷಿಗಳನ್ನು ಹಿಂಸಿಸಿ, ಶಂಕರನ ಕೋಪಕ್ಕೊಳಗಾಗಿ ರಾಮಾಯಣದ ಶ್ರವಣದಿಂದ ಶುದ್ಧನಾಗಿ ಶಂಕರಪ್ರಿಯನಾದನು. ಇಂದ್ರದೇವರು ಅಹಲ್ಯಾಜಾರನೆನಿಸಿ ಸನಕಾದಿಗಳ ನಿರ್ದೇಶನದಂತೆ ಧನುರ್ಮಾಸದಲ್ಲಿ ಶ್ರೀಹರಿಗೆ ಮುದ್ಗಾನ್ನವನ್ನು ಸಮರ್ಪಿಸಿ ಗುರುಗಳಿಂದ ರಾಮಾಯಣವನ್ನು ಶ್ರವಣ ಮಾಡಿ, ಶುದ್ಧರಾಗಿ ಲೋಕರಕ್ಷಕರೆನಿಸಿದರು.

ಧನುರ್ಮಾಸದ ಪ್ರಾತಃಕಾಲದಲ್ಲಿ ಮುದ್ಗಾನ್ನವನ್ನು ಸಮರ್ಪಿಸಿ ನನ್ನನ್ನೇ ಸ್ಮರಿಸುತ್ತ ಗೀತೆಯ ವಿಭೂತಿಯೋಗವನ್ನಾಗಲೀ, ವಿಶ್ವರೂಪದರ್ಶನಯೋಗ-ವನ್ನಾಗಲೀ, ಪುರುಷೋತ್ತಮಯೋಗವನ್ನಾಗಲೀ ಪಠಿಸಿದವನು ಮುಕ್ತಿಯನ್ನು ಹೊಂದುವನು. ಅವನಿಗೆ ಧನಾದಿಗಳಿಂದೇನು?

ಧನುರ್ಮಾಸದ ಮುದ್ಗಾನ್ನದ ಅರ್ಪಣೆಯಿಂದ ವಿದ್ಯೆ, ಸಂತಾನ, ಸಂಪತ್ತು ಎಲ್ಲವನ್ನು ಪಡೆಯುವನು. ವಂಧ್ಯೆಯಾಗಲಿ, ಗರ್ಭಿಣಿಯಾಗಿರಲಿ, ಧನುರ್ಮಾಸದ ಪ್ರಾತಃಕಾಲದಲ್ಲಿ ಸ್ನಾನ ಮಾಡಿ, ಸಕ್ಕರೆ, ಏಲಕ್ಕಿ, ಆಕಳಿನ ತುಪ್ಪದಿಂದ ಯುಕ್ತವಾದ ಮುದ್ಗಾನ್ನವನ್ನು ಬ್ರಾಹ್ಮಣನಿಗೆ ಭೋಜನ ಮಾಡಿಸಿದರೆ ಸಮರ್ಥನಾದ ಮಗನನ್ನು ಪಡೆಯುವಳು. ಹಾಗೆಯೇ ಆಯುಷ್ಯ, ಆರೋಗ್ಯ, ಭೋಗ್ಯ ಪದಾರ್ಥಗಳು, ಕೊನೆಗೆ ಮುಕ್ತಿಯನ್ನು ಹೊಂದುವಳು. ಧನುರ್ಮಾಸದಲ್ಲಿ ನನ್ನನ್ನು ಪೂಜಿಸಿದವನು ಸಕಲ ಕಾಮನೆಗಳನ್ನು ಹೊಂದುವನು.

ಧನುರ್ಮಾಸದ ಪ್ರಾತಃಕಾಲದಲ್ಲಿ ನನ್ನನ್ನು ಮುದ್ಗಾನ್ನದಿಂದ ಪೂಜಿಸದ ನರಾಧಮನು ಏಳು ಜನ್ಮಗಳವರೆಗೆ ಸಂತಾನರಹಿತನೂ, ದರಿದ್ರನೂ, ರೋಗಿಯೂ ಆಗುವನು. ಅರಣ್ಯಗಳಲ್ಲಿ ಸಾಕಷ್ಟು ಪುಷ್ಪಗಳಿವೆ. ನದಿಗಳಲ್ಲಿ ಸಿಹಿಯಾದ ನೀರಿದೆ. ಗಟ್ಟಿಮುಟ್ಟಾದ ಕೈಕಾಲುಗಳಿರುವಾಗ ಶ್ರೀಹರಿಯನ್ನು ಏಕೆ ಪೂಜಿಸುವುದಿಲ್ಲ? ಧನುರ್ಮಾಸದಲ್ಲಿ ನನ್ನನ್ನು ಅರ್ಚಿಸದವನು ನನ್ನ ಪೂಜಕನನ್ನು ನಿಂದಿಸುವವನು, ಹಿಂದಿನ ಜನ್ಮದಲ್ಲಿ ಪಾಪಿಷ್ಠನೂ, ಮಾತೃಗಾಮಿಯೂ, ಆತ್ಮಹಂತಕನೆಂದೂ ತಿಳಿಯಬೇಕು.

ಮಹಾತಪಸ್ವಿಯಾಗಿರಲಿ, ಯೋಗಿಯಾಗಿರಲಿ, ಯಜ್ಞಶೀಲನಾಗಿರಲಿ, ಜೀವನ್ಮುಕ್ತನೇ ಆಗಿರಲಿ, ಧನುರ್ಮಾಸದ ಅರುಣೋದಯದಲ್ಲಿ ನನ್ನನ್ನು ಅರ್ಚಿಸಲೇಬೇಕು. ಧನುರ್ಮಾಸದಲ್ಲಿ ನನ್ನನ್ನು ಪೂಜಿಸದವನ ಜ್ಞಾನದಿಂದೇನು ಪ್ರಯೋಜನ? ಬುದ್ಧಿವಂತನು ಜ್ವಲಿಸುತ್ತಿರುವ ಅಗ್ನಿಯನ್ನು ಬಿಟ್ಟು ಬೂದಿಯಲ್ಲಿ ಹೋಮಿಸುವುದಿಲ್ಲ. ನನ್ನ ಚರಿತೆಗಳನ್ನಾಗಲೀ, ತುಲಸಿಯನ್ನಾಗಲೀ, ಧನುರ್ಮಾಸದ ನನ್ನ ಪೂಜೆಯನ್ನಾಗಲೀ, ನನ್ನ ಭಕ್ತನನ್ನಾಗಲೀ ದ್ವೇಷಿಸಿದ ಮನುಜನು, ವರ್ಣಸಂಕರದಿಂದ ಜನಿಸಿದ ನೀಚನಾಗುವನು. ಭಗವದ್ಗೀತೆಯನ್ನು, ನನ್ನ ನೈವೇದ್ಯವನ್ನು, ನನ್ನ ಸ್ತೋತ್ರಗಳನ್ನು, ನಿಂದಿಸುವವನು ಚಂಡಾಲನೆಂದು ತಿಳಿಯಬೇಕು. ತಂದೆಯನ್ನು ದ್ವೇಷಿಸುವ ಮಗನು ಅನ್ಯಜನೆಂದೂ, ನಾರಾಯಣನನ್ನು ದ್ವೇಷಿಸುವವನು ಅಂತ್ಯಜನೆಂದೂ ತಿಳಿಯಬೇಕು.

ಭಾಗವತ, ರಾಮಾಯಣ, ಗೀತಾಗ್ರಂಥಗಳನ್ನು ವೈಷ್ಣವರಿಗೆ ದಾನ ಮಾಡಿದರೆ ಆ ಮನುಜನ ವಂಶದವರು ನೂರು ತಲೆಮಾರಿನವರೆಗೆ ದೀರ್ಘಾಯುಷಿಗಳೂ, ದಯಾವಂತರೂ, ನಿರೋಗಿಗಳೂ ಆಗುವರು. ಇವೆಲ್ಲವನ್ನು ಹನ್ನೆರಡು ಧನುರ್ಮಾಸಗಳವರೆಗೆ ಆಚರಿಸಬೇಕು. ಭಾಗವತಾದಿ ಹರಿಯ ಲೀಲೆಗಳನ್ನು ಕೇಳುವುದರಲ್ಲಿ ಶ್ರದ್ಧೆಯುಳ್ಳವನು ಜೀವನ್ಮುಕ್ತನೇ ಸರಿ. ನನ್ನನ್ನು ಪೂಜಿಸುವವನು ನನ್ನ ಮಿತ್ರನೆನಿಸುವನು. ಅವನು ಮೂರು ಲೋಕಗಳನ್ನು ಪಾವನಗೊಳಿಸುವನು. ನನ್ನ ಕಥೆಯನ್ನೇ ಕೇಳುತ್ತ ಆನಂದಿತನಾಗಿ ಏನನ್ನೂ ಅಪೇಕ್ಷಿಸದೇ ಇರುವ ಭಕ್ತನು ಮೋಕ್ಷವನ್ನು ಬೇಡುವುದಿಲ್ಲವೆಂದ ಮೇಲೆ ಆತನಿಗೆ ಬೇರೆ ಧನಗಳಿಂದ ಆಗಬೇಕಾದುದೇನು?

**॥ ಇಲ್ಲಿಗೆ ಎಂಟನೇ ಅಧ್ಯಾಯವು ಮುಗಿಯಿತು ॥**

★★★

# ಒಂಭತ್ತನೇ ಅಧ್ಯಾಯ

ದಧಿಪಾಲನು ಕೇಳುತ್ತಾನೆ. ದೇವಕೀಸುತನೆನಿಸಿರುವ ಭಗವಂತನೇ, ವ್ಯತೀಪಾತನು ಹೇಗೆ ಜನಿಸಿದನು. ಇವನಾರ ಸುತನು? ಎಂಬೆಲ್ಲವನ್ನು ಸರ್ವಜ್ಞನಾದ ನೀನು ಬಲ್ಲವನು. ನನಗೂ ಕೂಡ ತಿಳಿಯುವ ಅಪೇಕ್ಷೆ ಇದೆ. ಅದನ್ನು ದಯಮಾಡಿ ನನಗೆ ತಿಳಿಸಬೇಕು. ಹೀಗೆ ಪ್ರಾರ್ಥಿಸಲು ಶ್ರೀಕೃಷ್ಣನು ಹೇಳುತ್ತಾನೆ.

ಹಿಂದೊಮ್ಮೆ ಧರ್ಮರಾಜನು ಮಾರ್ಕಂಡೇಯ ಮಹರ್ಷಿಗಳನ್ನು ಇದೇ ವಿಷಯವಾಗಿ ಪ್ರಶ್ನಿಸಲು ಅವರು ಧರ್ಮರಾಜನಿಗೆ ಹೇಳಿದ ಇತಿಹಾಸವನ್ನೇ ನಿನಗೆ ಹೇಳುವೆನು. ಇದನ್ನು ಗಮನವಿರಿಸಿ ಕೇಳು. ಎಲ್ಲ ಪಾಪಗಳಿಂದ ಮುಕ್ತನಾಗುವೆ.

ಯುಧಿಷ್ಠಿರನು ಮಾರ್ಕಂಡೇಯರನ್ನು ಕೇಳುತ್ತಾನೆ. ದೇವರ್ಷಿಗಳೇ ಯಾವ ವ್ರತವನ್ನು ಆಚರಿಸುವುದರಿಂದ ಯಮಶಾಸನವನ್ನು ನೋಡುವುದಿಲ್ಲ. ಹಾಗೂ ಸರ್ವತ್ರ ಜಯಿಸುವನೋ ಅದನ್ನು ಹೇಳಬೇಕು. ಹೀಗೆ ಪ್ರಾರ್ಥಿಸಿದ ಯುಧಿಷ್ಠಿರನಿಗೆ ಮಾರ್ಕಂಡೇಯರು ಹೇಳಿದರು.

ಹಿಂದೆ ಕೃತಯುಗದ ಪ್ರಾರಂಭದಲ್ಲಿ ಮಹಾರಾಜನಾದ ಹರ್ಯಶ್ವನು ಸೇನೆಯಿಂದೊಡಗೂಡಿ ಬೇಟೆಗೆ ಹೋದನು. ನಿರ್ಜಲವಾದ ಅರಣ್ಯಪ್ರದೇಶದಲ್ಲಿ ಹಸಿವೆ ನೀರಡಿಕೆಗಳಿಂದ ಪೀಡಿತವಾದ ಹೊಟ್ಟೆ, ಮುಖ, ಕುತ್ತಿಗೆಗಳಲ್ಲೆಲ್ಲ ಸುಟ್ಟುಹೋದ ಒಂದು ವರಾಹವನ್ನು ಕಂಡು ದಯಾಪರನಾದ ರಾಜನು ಅದರ ಮೇಲೆ ದಯೆಯಿಂದ ಪ್ರಶ್ನೆ ಮಾಡಿದನು. ಯಾವ ಕರ್ಮದ ಫಲದಿಂದ ಈ ಸೂಕರವು ಇಂಥ ಅವಸ್ಥೆಯಲ್ಲಿದೆ. ಅದೆಂಥ ದಾರುಣವಾದ ದುಃಖವನ್ನು ಈ ವರಾಹವು ಭೋಗಿಸುತ್ತಿದೆ. ಯಾರೇ ಆಗಲಿ ತಾನು ಮಾಡಿದ ಪಾಪ, ಪುಣ್ಯಗಳನ್ನು ಅವಶ್ಯವಾಗಿ ಭೋಗಿಸಲೇಬೇಕಾಗುವುದು. ಹೀಗೆಂದು ಚಿಂತಿಸಿ ನೀನಾವ ಕರ್ಮದ ಫಲದಿಂದ ಇಂಥ ದುಃಖವನ್ನು ಹೊಂದಿರುವೆ? ಆ ಪೂರ್ವ ಕರ್ಮವನ್ನು ತಿಳಿದಿದ್ದರೆ ನನಗೆ ತಿಳಿಸು ಎಂದನು. ಹೀಗೆಂದ ಹರ್ಯಶ್ವ ಮಹಾರಾಜನಿಗೆ ಆ ವರಾಹವು ಹೇಳಿತು.

ರಾಜನೇ! ಕೇಳು. ಹಿಂದೆ ನಾನು ವಿಶ್ವಸಖನೆಂಬ ಹೆಸರಿನ ವೈಶ್ಯನಾಗಿದ್ದೆನು. ಲೋಭಿಯಾಗಿದ್ದ ನಾನು ಯಾಚಕರಿಗಾಗಲೀ, ಆಶ್ರಿತರಿಗಾಗಲೀ ಏನನ್ನೂ ನೀಡುತ್ತಿರಲಿಲ್ಲ. ಅನೇಕ ಪುರಾಣಗಳನ್ನು ಕೇಳಿ ತಿಳಿದ ನಾನು ಎಲ್ಲ ರೀತಿಯ ಧರ್ಮಗಳನ್ನು ಅರಿತವನಾಗಿದ್ದೆ. ಆದರೆ ನಾನು ಧನಲೋಭದಿಂದ ಯಾವುದೇ ರೀತಿಯ ಧರ್ಮಸಂಗ್ರಹವನ್ನು ಮಾಡಲಿಲ್ಲ. ಅದೊಂದು ಬಾರಿ ವ್ಯತೀಪಾತದ ದಿವಸದಂದು ದರಿದ್ರನಾದ ಬ್ರಾಹ್ಮಣನೊಬ್ಬನು ದೈನ್ಯದಿಂದ ನನ್ನನ್ನು ಮತ್ತೆ ಮತ್ತೆ

ಧನುರ್ಮಾಸದ ಪ್ರಾತಃಕಾಲದಲ್ಲಿ ನನ್ನನ್ನು ಮುದ್ಗಾನ್ನದಿಂದ ಪೂಜಿಸದ ನರಾಧಮನು ಏಳು ಜನ್ಮಗಳವರೆಗೆ ಸಂತಾನರಹಿತನೂ, ದರಿದ್ರನೂ, ರೋಗಿಯೂ ಆಗುವನು. ಅರಣ್ಯಗಳಲ್ಲಿ ಸಾಕಷ್ಟು ಪುಷ್ಪಗಳಿವೆ. ನದಿಗಳಲ್ಲಿ ಸಿಹಿಯಾದ ನೀರಿದೆ. ಗಟ್ಟಿಮುಟ್ಟಾದ ಕೈಕಾಲುಗಳಿರುವಾಗ ಶ್ರೀಹರಿಯನ್ನು ಏಕೆ ಪೂಜಿಸುವುದಿಲ್ಲ? ಧನುರ್ಮಾಸದಲ್ಲಿ ನನ್ನನ್ನು ಅರ್ಚಿಸದವನು ನನ್ನ ಪೂಜಕನನ್ನು ನಿಂದಿಸುವವನು, ಹಿಂದಿನ ಜನ್ಮದಲ್ಲಿ ಪಾಪಿಷ್ಠನೂ, ಮಾತೃಗಾಮಿಯೂ, ಆತ್ಮಹಂತಕನೆಂದೂ ತಿಳಿಯಬೇಕು.

ಮಹಾತಪಸ್ವಿಯಾಗಿರಲಿ, ಯೋಗಿಯಾಗಿರಲಿ, ಯಜ್ಞಶೀಲನಾಗಿರಲಿ, ಜೀವನ್ಮುಕ್ತನೇ ಆಗಿರಲಿ, ಧನುರ್ಮಾಸದ ಅರುಣೋದಯದಲ್ಲಿ ನನ್ನನ್ನು ಅರ್ಚಿಸಲೇಬೇಕು. ಧನುರ್ಮಾಸದಲ್ಲಿ ನನ್ನನ್ನು ಪೂಜಿಸದವನ ಜ್ಞಾನದಿಂದೇನು ಪ್ರಯೋಜನ? ಬುದ್ಧಿವಂತನು ಜ್ವಲಿಸುತ್ತಿರುವ ಅಗ್ನಿಯನ್ನು ಬಿಟ್ಟು ಬೂದಿಯಲ್ಲಿ ಹೋಮಿಸುವುದಿಲ್ಲ. ನನ್ನ ಚರಿತೆಗಳನ್ನಾಗಲೀ, ತುಲಸಿಯನ್ನಾಗಲೀ, ಧನುರ್ಮಾಸದ ನನ್ನ ಪೂಜೆಯನ್ನಾಗಲೀ, ನನ್ನ ಭಕ್ತನನ್ನಾಗಲೀ ದ್ವೇಷಿಸಿದ ಮನುಜನು, ವರ್ಣಸಂಕರದಿಂದ ಜನಿಸಿದ ನೀಚನಾಗುವನು. ಭಗವದ್ಗೀತೆಯನ್ನು, ನನ್ನ ನೈವೇದ್ಯವನ್ನು, ನನ್ನ ಸ್ತೋತ್ರಗಳನ್ನು, ನಿಂದಿಸುವವನು ಚಂಡಾಲನೆಂದು ತಿಳಿಯಬೇಕು. ತಂದೆಯನ್ನು ದ್ವೇಷಿಸುವ ಮಗನು ಅನ್ಯಜನೆಂದೂ, ನಾರಾಯಣನನ್ನು ದ್ವೇಷಿಸುವವನು ಅಂತ್ಯಜನೆಂದೂ ತಿಳಿಯಬೇಕು.

ಭಾಗವತ, ರಾಮಾಯಣ, ಗೀತಾಗ್ರಂಥಗಳನ್ನು ವೈಷ್ಣವರಿಗೆ ದಾನ ಮಾಡಿದರೆ ಆ ಮನುಜನ ವಂಶದವರು ನೂರು ತಲೆಮಾರಿನವರೆಗೆ ದೀರ್ಘಾಯುಷಿಗಳೂ, ದಯಾವಂತರೂ, ನಿರೋಗಿಗಳೂ ಆಗುವರು. ಇವೆಲ್ಲವನ್ನು ಹನ್ನೆರಡು ಧನುರ್ಮಾಸಗಳವರೆಗೆ ಆಚರಿಸಬೇಕು. ಭಾಗವತಾದಿ ಹರಿಯ ಲೀಲೆಗಳನ್ನು ಕೇಳುವುದರಲ್ಲಿ ಶ್ರದ್ಧೆಯುಳ್ಳವನು ಜೀವನ್ಮುಕ್ತನೇ ಸರಿ. ನನ್ನನ್ನು ಪೂಜಿಸುವವನು ನನ್ನ ಮಿತ್ರನೆನಿಸುವನು. ಅವನು ಮೂರು ಲೋಕಗಳನ್ನು ಪಾವನಗೊಳಿಸುವನು. ನನ್ನ ಕಥೆಯನ್ನೇ ಕೇಳುತ್ತ ಆನಂದಿತನಾಗಿ ಏನನ್ನೂ ಅಪೇಕ್ಷಿಸದೇ ಇರುವ ಭಕ್ತನು ಮೋಕ್ಷವನ್ನು ಬೇಡುವುದಿಲ್ಲವೆಂದ ಮೇಲೆ ಆತನಿಗೆ ಬೇರೆ ಧನಗಳಿಂದ ಆಗಬೇಕಾದುದೇನು?

**॥ ಇಲ್ಲಿಗೆ ಎಂಟನೇ ಅಧ್ಯಾಯವು ಮುಗಿಯಿತು ॥**

★★★

# ಒಂಭತ್ತನೇ ಅಧ್ಯಾಯ

ದಧಿಪಾಲನು ಕೇಳುತ್ತಾನೆ. ದೇವಕೀಸುತನೆನಿಸಿರುವ ಭಗವಂತನೇ, ವ್ಯತೀಪಾತನು ಹೇಗೆ ಜನಿಸಿದನು. ಇವನಾರ ಸುತನು? ಎಂಬೆಲ್ಲವನ್ನು ಸರ್ವಜ್ಞನಾದ ನೀನು ಬಲ್ಲವನು. ನನಗೂ ಕೂಡ ತಿಳಿಯುವ ಅಪೇಕ್ಷೆ ಇದೆ. ಅದನ್ನು ದಯಮಾಡಿ ನನಗೆ ತಿಳಿಸಬೇಕು. ಹೀಗೆ ಪ್ರಾರ್ಥಿಸಲು ಶ್ರೀಕೃಷ್ಣನು ಹೇಳುತ್ತಾನೆ.

ಹಿಂದೊಮ್ಮೆ ಧರ್ಮರಾಜನು ಮಾರ್ಕಂಡೇಯ ಮಹರ್ಷಿಗಳನ್ನು ಇದೇ ವಿಷಯವಾಗಿ ಪ್ರಶ್ನಿಸಲು ಅವರು ಧರ್ಮರಾಜನಿಗೆ ಹೇಳಿದ ಇತಿಹಾಸವನ್ನೇ ನಿನಗೆ ಹೇಳುವೆನು. ಇದನ್ನು ಗಮನವಿರಿಸಿ ಕೇಳು. ಎಲ್ಲ ಪಾಪಗಳಿಂದ ಮುಕ್ತನಾಗುವೆ.

ಯುಧಿಷ್ಠಿರನು ಮಾರ್ಕಂಡೇಯರನ್ನು ಕೇಳುತ್ತಾನೆ. ದೇವರ್ಷಿಗಳೇ ಯಾವ ವ್ರತವನ್ನು ಆಚರಿಸುವುದರಿಂದ ಯಮಶಾಸನವನ್ನು ನೋಡುವುದಿಲ್ಲ. ಹಾಗೂ ಸರ್ವತ್ರ ಜಯಿಸುವನೋ ಅದನ್ನು ಹೇಳಬೇಕು. ಹೀಗೆ ಪ್ರಾರ್ಥಿಸಿದ ಯುಧಿಷ್ಠಿರನಿಗೆ ಮಾರ್ಕಂಡೇಯರು ಹೇಳಿದರು.

ಹಿಂದೆ ಕೃತಯುಗದ ಪ್ರಾರಂಭದಲ್ಲಿ ಮಹಾರಾಜನಾದ ಹರ್ಯಶ್ವನು ಸೇನೆಯಿಂದೊಡಗೂಡಿ ಬೇಟೆಗೆ ಹೋದನು. ನಿರ್ಜಲವಾದ ಅರಣ್ಯಪ್ರದೇಶದಲ್ಲಿ ಹಸಿವೆ ನೀರಡಿಕೆಗಳಿಂದ ಪೀಡಿತವಾದ ಹೊಟ್ಟೆ, ಮುಖ, ಕುತ್ತಿಗೆಗಳಲ್ಲೆಲ್ಲ ಸುಟ್ಟುಹೋದ ಒಂದು ವರಾಹವನ್ನು ಕಂಡು ದಯಾಪರನಾದ ರಾಜನು ಅದರ ಮೇಲೆ ದಯೆಯಿಂದ ಪ್ರಶ್ನೆ ಮಾಡಿದನು. ಯಾವ ಕರ್ಮದ ಫಲದಿಂದ ಈ ಸೂಕರವು ಇಂಥ ಅವಸ್ಥೆಯಲ್ಲಿದೆ. ಅದೆಂಥ ದಾರುಣವಾದ ದುಃಖವನ್ನು ಈ ವರಾಹವು ಭೋಗಿಸುತ್ತಿದೆ. ಯಾರೇ ಆಗಲಿ ತಾನು ಮಾಡಿದ ಪಾಪ, ಪುಣ್ಯಗಳನ್ನು ಅವಶ್ಯವಾಗಿ ಭೋಗಿಸಲೇಬೇಕಾಗುವುದು. ಹೀಗೆಂದು ಚಿಂತಿಸಿ ನೀನಾವ ಕರ್ಮದ ಫಲದಿಂದ ಇಂಥ ದುಃಖವನ್ನು ಹೊಂದಿರುವೆ? ಆ ಪೂರ್ವ ಕರ್ಮವನ್ನು ತಿಳಿದಿದ್ದರೆ ನನಗೆ ತಿಳಿಸು ಎಂದನು. ಹೀಗೆಂದ ಹರ್ಯಶ್ವ ಮಹಾರಾಜನಿಗೆ ಆ ವರಾಹವು ಹೇಳಿತು.

ರಾಜನೇ! ಕೇಳು. ಹಿಂದೆ ನಾನು ವಿಶ್ವಸಖನೆಂಬ ಹೆಸರಿನ ವೈಶ್ಯನಾಗಿದ್ದೆನು. ಲೋಭಿಯಾಗಿದ್ದ ನಾನು ಯಾಚಕರಿಗಾಗಲೀ, ಆಶ್ರಿತರಿಗಾಗಲೀ ಏನನ್ನೂ ನೀಡುತ್ತಿರಲಿಲ್ಲ. ಅನೇಕ ಪುರಾಣಗಳನ್ನು ಕೇಳಿ ತಿಳಿದ ನಾನು ಎಲ್ಲ ರೀತಿಯ ಧರ್ಮಗಳನ್ನು ಅರಿತವನಾಗಿದ್ದೆ. ಆದರೆ ನಾನು ಧನಲೋಭದಿಂದ ಯಾವುದೇ ರೀತಿಯ ಧರ್ಮಸಂಗ್ರಹವನ್ನು ಮಾಡಲಿಲ್ಲ. ಅದೊಂದು ಬಾರಿ ವ್ಯತೀಪಾತದ ದಿವಸದಂದು ದರಿದ್ರನಾದ ಬ್ರಾಹ್ಮಣನೊಬ್ಬನು ದೈನ್ಯದಿಂದ ನನ್ನನ್ನು ಮತ್ತೆ ಮತ್ತೆ

ಬೇಡುತ್ತಿದ್ದನು. ಬಹಳ ಧನಲೋಭಿಯಾದ ನಾನು ಅವನಿಗೆ ಏನನ್ನೂ ನೀಡಲಿಲ್ಲ. ಅದರಿಂದ ಬಹಳ ಕೋಪಗೊಂಡ ಆ ಬ್ರಾಹ್ಮಣನು ನನ್ನನ್ನು ಹೀಗೆ ಶಪಿಸಿದನು. ಆಶೆಯೆಂಬ ಬೆಂಕಿಯು ನನ್ನ ಶರೀರವನ್ನು ಸುಡುತ್ತಿರುವಂತೆ ನಿನ್ನ ಶರೀರವು ಕಾಡ್ಗಿಚ್ಚಿನಲ್ಲಿ ಸುಟ್ಟುಹೋಗಲಿ. ಜನಸಂಚಾರವಿಲ್ಲದ ನೀರಿಲ್ಲದ ಅರಣ್ಯದಲ್ಲಿ ನೀನು ಸೂಕರನಾಗಿ ಜನಿಸಿ ಅಲ್ಲಿ ಕಾಡ್ಗಿಚ್ಚಿನಿಂದ ಸುಟ್ಟು ಹೋಗುವೆ ಎಂದು ಶಪಿಸಿದ. ನಾನು ಮತ್ತೆ ಮತ್ತೆ ಆ ಬ್ರಾಹ್ಮಣನನ್ನು ಕ್ಷಮಿಸೆಂದು ಪ್ರಾರ್ಥಿಸಲು, ನಿನಗೆ ಜನ್ಮಾಂತರಗಳ ಸ್ಮರಣೆ ಇರುವುದೆಂದು ಹೇಳಿದನು. ಆ ಶಾಪದಿಂದಲೇ ಪಾಪಿಯಾದ ನಾನು ಈ ನಿರ್ಜನವಾದ ನೀರಿಲ್ಲದ ಅರಣ್ಯ ಪ್ರದೇಶದಲ್ಲಿ ಹಂದಿಯಾಗಿ ಜನಿಸಿರುವೆನು. ಅದೊಂದು ಬಾರಿ ಕಾಡ್ಗಿಚ್ಚಿನಲ್ಲಿ ಶರೀರವೆಲ್ಲ ಸುಟ್ಟು ದಾರುಣ ದುಃಖವನ್ನು ಅನುಭವಿಸುತ್ತಿರುವೆನು.

ಹೀಗೆ ನುಡಿದ ವರಾಹದ ಮಾತನ್ನು ಕೇಳಿದ ರಾಜನು ಅತ್ಯಂತ ಕರುಣೆಯಿಂದ ನಿನ್ನ ಪಾಪದ ನಿವೃತ್ತಿಯ ಬಗೆಯೇನೆಂದು ಕೇಳಲು ವರಾಹವು ಹೇಳಿತು.

ರಾಜನೇ! ಸಕಲ ಭಾಗ್ಯಗಳನ್ನೀಯುವ ವ್ಯತೀಪಾತವೆಂಬ ವ್ರತವೊಂದಿದೆ. ಆ ವ್ರತವನ್ನು ನೀನು ಹಿಂದಿನ ಜನ್ಮದಲ್ಲಿ ಮಾಡಿರುವೆ. ತಾಯಿಯು ತನ್ನ ಮಗನಿಗೆ ಎಲ್ಲೆಡೆ ಹಿತಕಾರಿಯೇ ಆಗಿರುವಂತೆ ಈ ವ್ರತವು ಈ ಲೋಕದಲ್ಲಿ ಹಾಗೂ ಪರಲೋಕದಲ್ಲಿ ಹಿತಕಾರಿಯಾದುದು. ಸೂರ್ಯೋದಯವು ಎಲ್ಲ ಕತ್ತಲೆಯನ್ನು ಕಳೆಯುವಂತೆ ಈ ವ್ರತವು ಎಲ್ಲ ಪಾಪಗಳನ್ನು ಕಳೆಯುವುದು. ಚಂದ್ರನು ಕ್ಷಯ ಹೊಂದಿದಾಗ ನೀಡಿದ ದಾನವು ನೂರು ಮಡಿ ಫಲ ನೀಡಿದರೆ, ದಿನಕ್ಷಯದಲ್ಲಿ ಸಾವಿರ ಮಡಿಯೆನಿಸುವುದು. ವಿಷುವತ್ತಾ ಕಾಲದಲ್ಲಿ ಸಹಸ್ರಮಡಿಯೆನಿಸಿದರೆ, ವ್ಯತೀಪಾತದಲ್ಲಿ ನೀಡಿದ ದಾನವು ಅನಂತ ಮಡಿಯೆನಿಸುವುದು.

ಈ ವ್ಯತೀಪಾತ ವ್ರತದ ವಿಧಾನವನ್ನು ಹೇಳುವೆನು ಆಲಿಸು. ಮಾಘ ಅಥವಾ ಫಾಲ್ಗುಣ ಮಾಸಗಳಲ್ಲಿ ಅದರಲ್ಲೂ ವಿಶೇಷವಾಗಿ ಧನುರ್ಮಾಸದಲ್ಲಿ ವ್ಯತೀಪಾತದ ದಿನದಂದು ಈ ವ್ರತವನ್ನು ಆರಂಭಿಸಬೇಕು. ಆ ದಿನ ಪ್ರಾತಃಕಾಲದಲ್ಲೆದ್ದು ಮೌನದಿಂದ ಸರೋವರ, ನದಿ, ಮುಂತಾದ ಜಲಾಶಯಗಳಿಗೆ ಹೋಗಿ ತನ್ನ ವೇದ ಶಾಖೆಗನುಸಾರವಾಗಿ ಸ್ನಾನ ಮಾಡಬೇಕು. ನಂತರ ಎಳ್ಳು ತುಂಬಿದ ಕಂಚಿನ ಪಾತ್ರೆಯನ್ನು ದಾನಮಾಡಿ ಪೂಜೆಯನ್ನಾರಂಭಿಸಬೇಕು. ಒಂದು ಪಲ ತೂಕದ ಲೋಹದಿಂದಾಗಲೀ (ಎಂಟು ಗುಂಜಿ ತೂಕಕ್ಕೆ ಒಂದು ಮಾಷ, ನಾಲ್ವತ್ತು ಮಾಷಗಳಿಗೆ ಒಂದು ಕರ್ಷ, ನಾಲ್ಕು ಕರ್ಷಗಳಿಗೆ ಒಂದು ಪಲ) ಅದರ ಅರ್ಧದಿಂದಾಗಲಿ ಅಥವಾ ಕಾಲು ಭಾಗದಿಂದಾಗಲೀ, ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದ, ಲಕ್ಷ್ಮೀಸಮೇತನಾಗಿ ಗರುಡನ ಮೇಲೆ ಕುಳಿತ ಪ್ರತಿಮೆಯನ್ನು

ಮಾಡಿಸಬೇಕು. ಕಪಿಲ ಗೋವಿನ ಕ್ಷೀರದಿಂದ ತುಂಬಿದ ಕಂಚಿನ ಪಾತ್ರೆಯನ್ನು ಸ್ಥಾಪಿಸಿ ಅದರಲ್ಲಿ ಸ್ನಾನ ಮಾಡಿಸಬೇಕು. ದೇವನ ಸನ್ನಿಧಿಯಲ್ಲಿ ಶಯ್ಯೆಯನ್ನು ಸ್ಥಾಪಿಸಿ ಅನಂತ ಫಲದಾಯಕನಾದ ಅನಂತಶಯನನನ್ನು ಪೂಜಿಸಬೇಕು. ನಾನಾ ಪುಷ್ಪಗಳಿಂದ ವಿಧಿಪೂರ್ವಕವಾಗಿ ಶ್ರುತಿ, ಸ್ಮೃತ್ಯುಕ್ತವಾದ ಮಂತ್ರಗಳಿಂದ ಪೂಜಿಸಬೇಕು. ಮುದ್ಗಾನ್ನ, ಪಾಯಸ, ಭಕ್ಷ್ಯಭೋಜ್ಯಗಳು, ಅನೇಕ ವ್ಯಂಜನಗಳನ್ನು ಸಮರ್ಪಿಸಿ ವ್ರತಕರ್ತೃವು ಹೀಗೆ ಪ್ರಾರ್ಥಿಸಬೇಕು.

**ದೇವ ದೇವ ಹೃಷಿಕೇಶ ಪುರಾಣ ಪುರುಷೋತ್ತಮ ।**
**ವ್ಯತೀಪಾತ ದಿನೇ ದೇವ ಮಯಾತೇ ಪೂಜನಂ ಕೃತಮ್ ।**
**ಭವತ್ವನಂತಫಲದಂ ಪ್ರಾರ್ಥಿತಂ ದೇಹಿ ಮೇ ವಿಭೋ ॥**

ಎಂದು ಪ್ರಾರ್ಥಿಸಿ ಅರ್ಘ್ಯವನ್ನು ನೀಡಬೇಕು.

**ಗೃಹಾಣಾರ್ಘ್ಯಂ ವ್ಯತೀಪಾತ ಸೋಮಸೂರ್ಯಸುತ ಪ್ರಭೋ ।**
**ಸಪ್ತಜನ್ಮಕೃತಂ ಪಾಪಂ ತ್ವತ್ಪ್ರಸಾದತ್ಪ್ರಣಶ್ಯತು ॥**

ಎಂಬೀ ಮಂತ್ರದಿಂದ ಅರ್ಘ್ಯವನ್ನೀಯಬೇಕು. ವ್ಯಾಹೃತಿಮಂತ್ರಗಳಿಂದ ನೂರೆಂಟು ಬಾರಿ ತಿಲಹೋಮವನ್ನು ಮಾಡಬೇಕು. ಎಂಟು ಜನ ಬ್ರಾಹ್ಮಣರನ್ನು ಭೋಜನ ಮಾಡಿಸಿ, ವ್ರತವನ್ನು ಉಪದೇಶಿಸಿದ ಗುರುವಿಗೆ ಶಯ್ಯಾದಾನ ಮಾಡಬೇಕು. ಹಾಗೆಯೇ ಪ್ರತಿಮೆಯನ್ನು ಗುರುಗಳಿಗೆ ದಾನ ಮಾಡಬೇಕು. ಈ ವ್ರತದ ದಕ್ಷಿಣೆಯೆಂದು ಭೂಮಿ ಅಥವಾ ಸುವರ್ಣವು ಹೇಳಲ್ಪಟ್ಟಿದೆ. ವ್ಯತೀಪಾತದ ದಿನದಂದು ಸುವರ್ಣ ದಾನ ಮಾಡಿದರೆ ಒಂದು ವರುಷದಲ್ಲಿ ಮಾಡಿದ ಪಾಪವು ತಕ್ಷಣ ನಾಶವಾಗುವುದು.

**ನಮಸ್ತೇಸ್ತು ವ್ಯತೀಪಾತ ಸೋಮಸೂರ್ಯಸುತ ಪ್ರಭೋ ।**
**ಯತ್ಕಿಂಚಿದ್ದೀಯತೇ ದ್ರವ್ಯಂ ತದಕ್ಷಯ್ಯಮಿಹಾಸ್ತು ಮೇ ॥**

**ಗುಂಜಾಮಾತ್ರಮಿದಂ ಸ್ವರ್ಣಂ ದೇಯಂ ವಿಪ್ರಕರಾರ್ಪಿತಮ್ ।**
**ಹೇಮಾದ್ರಿಸದೃಶಂ ಭೂಯಾತ್ ಪ್ರೀಯತಾಂ ಮೇ ಜನಾರ್ದನಃ ॥**

**ಶಂಕುಕರ್ಣ ಪ್ರಲಂಬೋಷ್ಠ ಪಿಂಗದೃಕ್ ತುಂಗನಾಸಿಕ ।**
**ಅಷ್ಟಬಾಹೋ ಚತುರ್ವಕ್ತ್ರ ಶತಯೋಜನಮಾಯತ ।**
**ವ್ಯತೀಪಾತಪ್ರಸಾದೇನ ಮಮ ಸಂತು ಮನೋರಥಾಃ ॥**

ಎಂಬೀ ಮಂತ್ರದಿಂದ ತನ್ನ ಶಕ್ತಿಗನುಸಾರವಾಗಿ ಸುವರ್ಣದ ದಾನ ಮಾಡಬೇಕು.

ಒಂದು ಸಂವತ್ಸರವು ಪೂರ್ಣವಾಗಲು ವ್ರತದ ಉದ್ಯಾಪನೆಯನ್ನು ಮಾಡಬೇಕು. ವ್ರತದ ಪ್ರಾರಂಭದಲ್ಲಾಗಲೀ, ಮಧ್ಯದಲ್ಲಾಗಲೀ, ಕೊನೆಯಲ್ಲಾಗಲೀ ಉದ್ಯಾಪನೆಯನ್ನು ಮಾಡಬಹುದು.

ಎಂಟು ಕೈಗಳಿಂದ ಕೂಡಿದ, ಕೆಂಪಾದ ಕೂದಲು ಮೀಸೆಗಳುಳ್ಳ, ಉದ್ದನೆಯ ಗಡ್ಡ, ಕೃಶವಾದ ಹೊಟ್ಟೆ ಉದ್ದವಾದ ನಾಲಿಗೆ, ಕರಾಳವಾದ ಮುಖ ಸೂರ್ಯಾಗ್ನಿಗಳಂತೆ ತೇಜಸ್ವಿಯಾದ ಮೂರು ಲೋಕಗಳನ್ನು ನುಂಗಲು ಹವಣಿಸಿ ಸೂರ್ಯಚಂದ್ರರಿಂದ ನಿವಾರಿಸಲ್ಪಟ್ಟ ವ್ಯತೀಪಾತದ ಪ್ರತಿಮೆಯನ್ನು ಮನೆಯ ಮಧ್ಯದಲ್ಲಾಗಲೀ, ಕೊಟ್ಟಿಗೆಯಲ್ಲಾಗಲೀ ಸ್ಥಾಪಿಸಿ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ ಮುಂತಾದ ಷೋಡಶೋಪಚಾರಗಳಿಂದ ಪೂಜಿಸಬೇಕು. ಉದ್ಯಾಪನೆಯ ಫಲಪ್ರಾಪ್ತಿಗಾಗಿ ಗೋದಾನವನ್ನು ಮಾಡಬೇಕು.

ಚೆನ್ನಾಗಿ ಹಾಲು ನೀಡುವ, ಎಳೆಯ ವಯಸ್ಸಿನ, ಮನೋಹರವಾದ, ಕರುಸಹಿತವಾದ ಹಸುವಿನ ಕೋಡುಗಳನ್ನು ಬಂಗಾರದಿಂದ, ಗೊರಸುಗಳನ್ನು ಬೆಳ್ಳಿಯಿಂದ ಅಲಂಕರಿಸಿ ಕೊರಳಲ್ಲಿ ಮುತ್ತಿನ ಮಾಲೆಯನ್ನು ಹಾಕಿ, ಬಂಗಾರದ ತಿಲಕವನ್ನಿಟ್ಟು, ಹಾಲು ಕರೆಯಲು ಕಂಚಿನ ಪಾತ್ರೆಯೊಂದಿಗೆ ದಾನ ಮಾಡಬೇಕು. ಈ ರೀತಿ ಶ್ರದ್ಧಾಭಕ್ತಿಗಳಿಂದ ವ್ಯತೀಪಾತ ವ್ರತವನ್ನಾಚರಿಸಿದವನು ಕೋಟಿ ಜನ್ಮಗಳ ಪಾಪಗಳಿಂದ ಮುಕ್ತನಾಗುವನು. ಇದರಲ್ಲಿ ಸಂದೇಹವಿಲ್ಲ. ಹೇ ರಾಜನೇ! ಈ ವ್ರತವನ್ನು ನೀನು ಹಿಂದಿನ ಜನ್ಮದಲ್ಲಿ ಆಚರಿಸಿರುವೆ. ಅದರ ಪುಣ್ಯವನ್ನು ನನಗೆ ನೀಡಿದರೆ ನಾನು ಈ ಸೂಕರ ಜನ್ಮದಿಂದ ಮುಕ್ತನಾಗುವೆ. ಸೂಕರವು ಹೀಗೆ ಹೇಳಲು ರಾಜನು ಆ ವ್ರತದ ಫಲವನ್ನು ಅದಕ್ಕೆ ಸಂತೋಷದಿಂದ ನೀಡಿದನು.

**॥ ಇಲ್ಲಿಗೆ ಒಂಭತ್ತನೇ ಅಧ್ಯಾಯವು ಮುಗಿಯಿತು ॥**

★★★

# ಹತ್ತನೇ ಅಧ್ಯಾಯ

ಹರ್ಯಶ್ವನು ಕೇಳುತ್ತಾನೆ. ಹೇ ಜ್ಞಾನಿಯಾದ ಸೂಕರನೇ! ನೀನು ಹೇಳಿದ ಈ ವ್ಯತೀಪಾತನು ಯಾರ ಮಗನು. ಯಾವಾಗ ಜನಿಸಿದನು. ಎಂಬುದನ್ನು ನನಗೆ ವಿಸ್ತಾರವಾಗಿ ತಿಳಿಸು ಎಂದು ಪ್ರಾರ್ಥಿಸಲು ಆ ವರಾಹವು ಹೇಳಿತು.

ಅದೊಂದು ಬಾರಿ ಬೃಹಸ್ಪತಿಯ ಪತ್ನಿಯನ್ನು ಚಂದ್ರನು ಪರಿಗ್ರಹಿಸಿದನು. ಚಂದ್ರನ ಮಿತ್ರನಾದ ಸೂರ್ಯನು ಬೃಹಸ್ಪತಿಯ ಪತ್ನಿಯನ್ನು ತ್ಯಜಿಸುವಂತೆ ಹೇಳಲು ಕ್ರುದ್ಧನಾದ ಚಂದ್ರನು ಕೆಂಗಣ್ಣಿನಿಂದ ಅವನೆಡೆಗೆ ನೋಡಿದನು. ಪರಪತ್ನೀಗ್ರಾಹಕನಾದ ಚಂದ್ರನನ್ನು ಸೂರ್ಯನು ಅದೇ ರೀತಿ ಕ್ರೋಧದಿಂದ ನೋಡಿದನು. ಅವರಿಬ್ಬರ ಕ್ರುದ್ಧವಾದ ದೃಷ್ಟಿಯ ಸಂಯೋಗವಾದಾಗ ಈ ಅಭೀಷ್ಟದಾಯಕವಾದ ವ್ಯತೀಪಾತನು ಜನಿಸಿದನು. ಸೂಕರನು ಹೀಗೆ ಹೇಳಲು ಸಂತುಷ್ಟನಾದ ರಾಜನು ತನ್ನ ಪೂರ್ವಜನ್ಮದ ವ್ರತಾಚರಣೆಯ ಫಲವನ್ನು ಆ ವರಾಹನಿಗೆ ಧಾರೆಯೆರೆದನು. ಆ ಪುಣ್ಯದ ಪ್ರಭಾವದಿಂದ ಪಾಪಮುಕ್ತವಾದ ವರಾಹವು ಸದ್ಯದಲ್ಲೇ ದಿವ್ಯವಾದ ವಿಮಾನವನ್ನೇರಿ ಹೊರಡುತ್ತ ಹೀಗೆ ಹೇಳಿತು.

ಹೇ ಜನಗಳೇ! ಈ ವ್ಯತೀಪಾತ ವ್ರತದ ಅರಿವು ನಿಮಗಿಲ್ಲವೇ? ವ್ರತದ ಪ್ರಭಾವದಿಂದ ಪಾಪನಿರ್ಮುಕ್ತನಾದ ನನ್ನನ್ನು ನೋಡಿ. ಶುಭತಮವಾದ ವ್ಯತೀಪಾತವ್ರತದಲ್ಲಿ ವಿಶ್ವಾಸವನ್ನಿಡಿರಿ. ಹೀಗೆಂದು ಹೇಳುತ್ತ ಆ ವೈಶ್ಯನು ವೈಕುಂಠಕ್ಕೆ ತೆರಳಿದನು. ಅದನ್ನು ಕಂಡು ದೇವರಾಜನಾದ ಇಂದ್ರನು ಈ ವ್ರತವನ್ನು ಆಚರಿಸಿದನು. ತನ್ನ ನಗರಕ್ಕೆ ನಡೆದ ಹರ್ಯಶ್ವ ಮಹಾರಾಜನು ಕೂಡ ವ್ಯತೀಪಾತವ್ರತವನ್ನಾಚರಿಸಿ ತನ್ನ ಸರ್ವಸ್ವವನ್ನು ದಾನ ಮಾಡಿದನು. ಆ ವ್ರತದ ಪ್ರಭಾವದಿಂದ ಕೊನೆಗೆ ವಿಷ್ಣುಲೋಕವನ್ನೇ ಹೊಂದಿದನು.

ಮಾರ್ಕಂಡೇಯರು ಹೇಳಿದರು. ಧರ್ಮರಾಜನೇ! ನೀನು ಕೂಡ ಈ ವ್ಯತೀಪಾತವ್ರತವನ್ನಾಚರಿಸು. ಧನುರ್ಮಾಸದ ವ್ಯತೀಪಾತದಂದು ಮುದ್ಗಾನ್ನದಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಿ ಒಂದು ಗುಂಜಿಯನ್ನಾದರೂ ಸುವರ್ಣವನ್ನು ದಾನ ಮಾಡು. ಶ್ರದ್ಧಾಭಕ್ತಿಯಿಂದ ಇದನ್ನಾಚರಿಸಿದ ಮನುಷ್ಯನು ಪಾಪರಹಿತನಾಗಿ ವಿಷ್ಣುಸಾಯುಜ್ಯವನ್ನು ಪಡೆಯುವನು. ಸಕಲಕಾಮನೆಗಳನ್ನು ಹೊಂದುವನು. ವ್ಯತೀಪಾತ ವ್ರತದ ಕಥೆಯನ್ನು ವ್ಯತೀಪಾತದ ದಿನದಂದು ಪಠಿಸಿದವನು ಜ್ಞಾನವಂತನೂ, ಧನವಂತನೂ, ಇಹ-ಪರಗಳಲ್ಲಿ ಸುಖಿಯೂ ಆಗುವನು.

**॥ ಇಲ್ಲಿಗೆ ಹತ್ತನೇ ಅಧ್ಯಾಯವು ಮುಗಿಯಿತು ॥**

★★★

# ಹನ್ನೊಂದನೇ ಅಧ್ಯಾಯ

ದಧಿಪಾಲನು ಕೇಳಿದನು. ಹೇ ಯದುಕುಲನಂದನ, ದಯಾಸಿಂಧೋ, ಧನುರ್ಮಾಸದ ಮಹಿಮೆಯನ್ನು ಕೇಳಿ ನನಗೆ ತೃಪ್ತಿಯೆನಿಸುತ್ತಿಲ್ಲ. ವಿಸ್ಮಯಕರವಾದ ಈ ಮಹಿಮೆಯನ್ನು ನೀನು ತಿಳಿಸಿರುವೆ. ಸರ್ವಜ್ಞನಾದ ನೀನು ನನಗೆ ವಿಸ್ತಾರವಾಗಿ ಹೇಳುವ ಕೃಪೆ ಮಾಡಬೇಕು. ಶ್ರೀಕೃಷ್ಣನು ಹೇಳಿದನು.

ಧನುರ್ಮಾಸದಲ್ಲಿ ಮುದ್ಗಾನ್ನದಿಂದ ಹರಿಯನ್ನು ಪೂಜಿಸಿದವನು ಒಂದೇ ದಿನದ ಪೂಜೆಯಿಂದ ಸಾವಿರ ವರುಷಗಳ ಪೂಜೆಯ ಫಲವನ್ನು ಪಡೆಯುವನು. ಹಿಂದೆ ಸಾವಿರಾರು ಜನ್ಮಗಳಲ್ಲಿ ಮಹತ್ತಾದ ತಪವನ್ನು ಆಚರಿಸಿದವರಿಗೆ ಮಾತ್ರ ಧನುರ್ಮಾಸದ ಅರುಣೋದಯದಲ್ಲಿ ಹರಿಯನ್ನು ಪೂಜಿಸುವ ಭಾಗ್ಯವು ದೊರೆಯುವುದು. ಧನುರ್ಮಾಸದ ಮುದ್ಗಾನ್ನದ ಪೂಜೆಯಿಂದ ಭಗವಂತನು ಪ್ರೀತನಾಗುವಂತೆ ದಾನ, ಯಜ್ಞ, ತಪಸ್ಸು, ವ್ರತಗಳಿಂದ ಪ್ರೀತನಾಗುವುದಿಲ್ಲ. ಕೋಟಿ ಕೋಟಿ ಯಜ್ಞಗಳಿಂದ, ಕೋಟಿತೀರ್ಥಗಳ ಸ್ನಾನದಿಂದ, ಕೋಟಿ ಗೋವುಗಳ ದಾನದಿಂದ, ಅನೇಕ ಕನ್ಯಾದಾನದಿಂದ ಬರುವ ಪುಣ್ಯಕ್ಕೆ ಸಮನಾದ ಪುಣ್ಯವು ಧನುರ್ಮಾಸದ ಹರಿಪೂಜೆಯಿಂದ ದೊರೆಯುವುದು. ಧನುರ್ಮಾಸದಲ್ಲಿ ಭಗವಂತನಿಗೆ ಪ್ರಿಯವಾದ ಪ್ರಾತಃಕಾಲದ ಪೂಜೆಯನ್ನು ಮಾಡದೇ ತೀರ್ಥಯಾತ್ರೆಯನ್ನು ಮಾಡುವವನು ಯಾತ್ರೆಯ ಅರ್ಧಫಲವನ್ನು ಮಾತ್ರ ಹೊಂದುವನು. ಧನುರ್ಮಾಸದಲ್ಲಿ ವಿಷ್ಣುವಿಗೆ ಮುದ್ಗಾನ್ನವನ್ನು ನಿವೇದಿಸಿದ ಮನುಜನ ವಂಶದಲ್ಲಿ ಎಂದಿಗೂ ದಾರಿದ್ರ್ಯ, ಅಪಮೃತ್ಯು, ರೋಗಗಳು ಸಂಭವಿಸುವುದಿಲ್ಲ. ಧನುರ್ಮಾಸದಲ್ಲಿ ಪ್ರಾತಃಕಾಲದಲ್ಲಿ ಹರಿಯನ್ನು ಪೂಜಿಸದ ಮನುಜನು ಏಳು ಜನ್ಮಗಳಲ್ಲಿ ದರಿದ್ರನಾಗುವನು. ವಿಷ್ಣುಪೂಜೆ ಹಾಗೂ ಸಂಧ್ಯಾವಂದನೆ ಎರಡೂ ನಿತ್ಯಕರ್ಮಗಳಾದುದರಿಂದ ಸಂಧ್ಯಾಕಾಲವು ಮೀರಿದರೂ ದೋಷವಿಲ್ಲವೆಂದು ಮನುಗಳು ತಮ್ಮ ಸ್ಮೃತಿಯಲ್ಲಿ ಹೇಳಿದ್ದಾರೆ. ಬ್ರಾಹ್ಮಮುಹೂರ್ತದಲ್ಲಿ ಎದ್ದು, ಸೂರ್ಯೋದಯಕ್ಕಿಂತ ಮೊದಲು ಸ್ನಾನ ಮಾಡಿ, ಹರಿಯನ್ನು ಪೂಜಿಸಿ ನಂತರ ಸಂಧ್ಯಾವಂದನೆಯನ್ನಾಚರಿಸಬೇಕು. ಕಮಲಾಕ್ಷ ಹಾಗೂ ತುಲಸಿಯ ಮಾಲೆಗಳನ್ನು ಧರಿಸದೇ ವಿಷ್ಣುವನ್ನು ಪೂಜಿಸಿದವನು ವಿಷ್ಣುದ್ರೋಹಿಯೆನಿಸುವನು. ಶ್ರೀಕೃಷ್ಣನು ಮತ್ತೆ ಹೇಳಿದನು. ದಧಿಪಾಲನೇ! ಈ ಧರ್ಮಸಾರವನ್ನು ಕೇಳು. ನನ್ನನ್ನು ಭಕ್ತಿಯಿಂದ ಪೂಜಿಸಿದವನು, ನನ್ನ ಮಂತ್ರಗಳನ್ನು ಜಪಿಸುವವನು, ನನ್ನ ನಾಮಗಳನ್ನು ನಿರಂತರ ಸ್ಮರಿಸುವವನು, ಮೂರ್ಲೋಕಗಳನ್ನು ಪಾವನಗೊಳಿಸುವನು.

ಬ್ರಾಹ್ಮಣನಿಗೆ ಭಕ್ಷ್ಯ-ಭೋಜ್ಯಗಳಿಂದ ಭೋಜನ ಮಾಡಿಸಿದರೆ ಒಂದೊಂದು ತುತ್ತಿಗೂ ನನ್ನನ್ನು ಹತ್ತು ಸಾವಿರ ವರುಷಗಳ ಕಾಲ ಪೂಜಿಸಿದ ಫಲವನ್ನು ಪಡೆಯುವನು. ಬ್ರಾಹ್ಮಣನು ತಪ್ತನಾದರೆ ನಾನು ತೃಪ್ತನು. ಬ್ರಾಹ್ಮಣನು ಪೂಜಿತನಾದರೆ ನಾನು ಪೂಜಿತನಾದಂತೆಯೇ ಸರಿ. ಅತಿ ದುರ್ಲಭವಾದ ಮನುಷ್ಯದೇಹವನ್ನು, ದುರ್ಲಭತರವಾದ ಬ್ರಾಹ್ಮಣ್ಯವನ್ನು ಪಡೆದು ಕೂಡ ನನ್ನನ್ನು ಪೂಜಿಸದ ಮನುಜನು ಬದುಕಿದ್ದೂ ಕೂಡ ಮೃತನೇ ಸರಿ. ಮಾನವ ದೇಹ, ಬ್ರಾಹ್ಮಣ್ಯ, ಕಾವೇರಿಯ ತೀರ್ಥ, ರಾಮಸೇತುವಿನ ದರ್ಶನ, ಕುರುಕ್ಷೇತ್ರ ಹಾಗೂ ಬ್ರಾಹ್ಮಣಪೂಜೆ ಇವು ಅತಿದುರ್ಲಭವಾದವುಗಳು. ಧನುರ್ಮಾಸದಲ್ಲಿ ಬ್ರಾಹ್ಮಣರನ್ನು ಪೂಜಿಸಿದರೆ ನನ್ನನ್ನು ಪೂಜಿಸಿದಂತೆಯೇ ಸರಿ. ಯಾರ ಪಾದತೀರ್ಥದ ಸ್ಪರ್ಶದಿಂದ ಪಾಪಗಳೆಲ್ಲ ಓಡುವವೋ ಅಂಥ ಬ್ರಾಹ್ಮಣನನ್ನು ಪೂಜಿಸುವವನನ್ನು ಪಿತೃಗಳು, ದೇವತೆಗಳು, ಋಷಿಗಳು ಕೂಡ ಅಭಿನಂದಿಸುವರು. ಹತ್ತಿರದಲ್ಲಿರುವ ಉತ್ತಮಬ್ರಾಹ್ಮಣರನ್ನು ಪೂಜಿಸದೇ ದೂರದ ತೀರ್ಥಗಳನ್ನು ಸೇವಿಸುವವನು ಕತ್ತೆಯಂತೆಯೇ ಸರಿ. ಅಂಥ ಮನುಜನು ಹಾಸ್ಯಾಸ್ಪದನು, ಮೂಢಾತ್ಮನು, ಪಾಪಭಾಜನನೆನಿಸುವನು. ಆದುದರಿಂದ ಸರ್ವಪ್ರಯತ್ನಗಳಿಂದ ಯಾವಾಗಲೂ ಬ್ರಾಹ್ಮಣರನ್ನು ಪೂಜಿಸಬೇಕು. ಅದರಲ್ಲೂ ವಿಶೇಷವಾಗಿ ಧನುರ್ಮಾಸದಲ್ಲಿ ಓರ್ವ ಬ್ರಾಹ್ಮಣನಿಗಾದರೂ ಭೋಜನ ಮಾಡಿಸಿದವನು ನಿಶ್ಚಯವಾಗಿ ಮುಕ್ತನೆನಿಸುವನು. ಊಟ ಮಾಡಿದವನು ನಷ್ಟ ಹೊಂದಿದರೆ ಭೋಜನ ಮಾಡಿಸಿದವನು ಸ್ವರ್ಗವನ್ನು ಹೊಂದುವನು. ಅನ್ನದಾನ ಮಾಡಿದವನು ಅದರ ಪುಣ್ಯದಿಂದ ಸ್ವರ್ಗ ಪಡೆದರೆ ಭೋಜನ ಮಾಡಿದವನು ಪರಾನ್ನದಿಂದ ಸ್ವರ್ಗವನ್ನು ಕಳೆದುಕೊಳ್ಳುವನು. ಧನುರ್ಮಾಸದಲ್ಲಿ ಅಕ್ಕಿ ಬೇಳೆಗಳನ್ನು ನೀಡಿದರೆ, ನೀಡಿದವನು, ಪಡೆದವನು ಇಬ್ಬರೂ ವೈಶ್ವದೇವವನ್ನು ಆಚರಿಸಿದ್ದಕ್ಕೆ ಸಮನಾದ ಪುಣ್ಯವನ್ನು ಪಡೆಯುವರು. ಧನುರ್ಮಾಸದಲ್ಲಿ ಹರಿಪೂಜಕನಿಗೆ ಅಕ್ಕಿ ಬೇಳೆಗಳನ್ನು ನೀಡಿದವನು ಮುದ್ಗಾನ್ನದಾನಕ್ಕಿಂತ ದ್ವಿಗುಣಫಲವನ್ನು ಪಡೆಯುವನು. ಧನುರ್ಮಾಸದಲ್ಲಿ ಹರಿಯನ್ನು ಪೂಜಿಸದ ಮನುಜನು ಬ್ರಾಹ್ಮಣಹಂತಕನೂ, ಚಂಡಾಲನೂ ಎನಿಸುವನು. ಇದು ನಿಸ್ಸಂದೇಹವಾದುದು.

**॥ ಇಲ್ಲಿಗೆ ಹನ್ನೊಂದನೇ ಅಧ್ಯಾಯವು ಮುಗಿಯಿತು ॥**

★★★

# ಹನ್ನೆರಡನೇ ಅಧ್ಯಾಯ

ಸೂತರು ಹೇಳುತ್ತಾರೆ. ಶ್ರೀಕೃಷ್ಣನಿಂದ ಈ ರೀತಿ ಬೋಧಿಸಲ್ಪಟ್ಟ ದಧಿಪಾಲನು ಮತ್ತೆ ಕೇಳಿದನು. ಹೇ ಕೃಷ್ಣನೇ! ಧನುರ್ಮಾಸದ ಮಹಿಮೆ ಎಂಥದು? ಯಾವುದರಿಂದ ಮುಕ್ತಿ ಹೊಂದುವನು? ಎಂಬುದನ್ನು ತಿಳಿಸು ಎನ್ನಲು ಕೃಷ್ಣನು ಹೇಳುತ್ತಾನೆ.

ಮಿತ್ರನೇ! ಎಲ್ಲ ಕಡೆಗೂ ನಾನಿರುವೆನು ಎಂದು ತಿಳಿದು ನನ್ನನ್ನು ಉಪಾಸಿಸುವವನೇ ನಿಜವಾದ ಭಕ್ತನು. ಅದೇ ನಿಜವಾದ ತತ್ವಜ್ಞಾನವು. ಭಗವಂತನು ಎಲ್ಲೆಡೆ ವ್ಯಾಪಕನು. ಈ ಜಗವೆಲ್ಲ ಅವನಿಗೆ ಪ್ರತಿಮೆಯಂತಿದೆ. ಹೀಗೆ ತಿಳಿದು ಯೋಗಿಯಾದವನು ಚಂಡಾಲ, ಕತ್ತೆ, ನಾಯಿ ಮುಂತಾದವುಗಳನ್ನೆಲ್ಲ ನಮಸ್ಕರಿಸಬೇಕು. ಎಲ್ಲೆಡೆಗೆ ಸಮನಾದ ಭಗವಂತನನ್ನು ಕಾಣುವ ನನ್ನ ಭಕ್ತನು ವಿಶೇಷವಾಗಿ ನನ್ನ ಭಕ್ತನನ್ನು ಪೂಜಿಸಬೇಕು. ವಿಶೇಷವಾಗಿ ಧನುರ್ಮಾಸದಲ್ಲಿ ನನ್ನ ಭಕ್ತನನ್ನು ಪೂಜಿಸದವನು ಅರವತ್ನಾಲ್ಕು ವಿದ್ಯೆಗಳನ್ನು ಬಲ್ಲ ಮಹಾಜ್ಞಾನಿಯಾಗಿದ್ದರೂ ನನ್ನ ದ್ವೇಷಿಯೇ ಸರಿ. ನನ್ನ ಭಕ್ತರು ಸರ್ವ ವಂದ್ಯರಾಗಿದ್ದಾರೆ. ನಾನು ಭಕ್ತ-ಪರಾಧೀನನಾಗಿರುವೆ. ನನ್ನ ಭಕ್ತರು ವಾಸ ಮಾಡುವಲ್ಲಿ ನಾನು ನೆಲೆಸಿರುವೆನು. ನನ್ನ ಭಕ್ತರನ್ನು ದ್ವೇಷ ಮಾಡಿದವನು ನನ್ನನ್ನೇ ದ್ವೇಷ ಮಾಡಿದಂತೆ. ಅಂಥವನು ಹುಟ್ಟು ಕುರುಡನಂತೆ ಕೆಳಗೆ ಬೀಳುವುದು ನಿಶ್ಚಿತ. ನನ್ನ ನಾಮಸ್ಮರಣೆಯಿಂದಲೇ ಎಲ್ಲ ಪಾಪಗಳು ನಾಶ ಹೊಂದುವವು.

ಗೆಳೆಯನೇ! ಕೃಷ್ಣನು ಗೋಕುಲದಲ್ಲಿ ಇಲ್ಲವೆಂದು ಹೇಳು. ಪರರನ್ನು ರಕ್ಷಣೆ ಮಾಡಿದ ಪುಣ್ಯವು ನಿನಗೆ ಅನಂತವಾಗಿ ಲಭಿಸುವುದು. ನನಗೂ ನಿನ್ನ ಸ್ನೇಹವು ಯಾವಜ್ಜೀವ ಪರ್ಯಂತವಾಗಿ ಬೆಳೆಯಲಿ. ಹೀಗೆಂದ ಕೃಷ್ಣನಿಗೆ ದಧಿಪಾಲನು ಹೇಳಿದನು. ಗೆಳೆಯನೇ! ನೀನು ಯಾವ ಜಾಗದಲ್ಲಿ ಇಲ್ಲವೆಂದು ನಾನು ಸುಳ್ಳು ನುಡಿಯಲಿ. ನೀನು ಈ ಚರಾಚರಾತ್ಮಕ ಪ್ರಪಂಚವನ್ನು ವ್ಯಾಪಿಸಿ ನಿಂತವನು. ನೀನು ಎಲ್ಲ ಜೀವರಾಶಿಗಳ ಒಳ ಹೊರಗೆ ವ್ಯಾಪಿಸಿ ನಿಂತವನು. ನಾನು ನಿನ್ನ ಅನುಗ್ರಹದಿಂದಲೇ ಮಾಯೆಯನ್ನು ಮೀರಿ ನಿನ್ನನ್ನು ಅರಿತಿರುವೆನು. ಹೀಗೆಂದ ದಧಿಪಾಲನಿಗೆ ಕೃಷ್ಣನು ನುಡಿದನು.

ಗೆಳೆಯನೇ! ನಾನು ನಂದಗೋಪನ ಸುತನಾದ ನವನೀತಚೋರನಾದ ಕೃಷ್ಣನು. ಇಂದು ಒಬ್ಬ ಗೋಪಿಕೆಯ ಗೃಹದಲ್ಲಿ ಬೆಣ್ಣೆಯನ್ನು ಕದಿಯುತ್ತಿರಲು ಸಿಕ್ಕಿ ಬಿದ್ದಿರುವೆನು. ಆ ಗೋಪಿಕೆಯು ನನ್ನನ್ನು ಹುಡುಕುತ್ತಿರುವಳು. ಆದುದರಿಂದ ನಾನು ಇಲ್ಲಿ ಇಲ್ಲವೆಂದು ನೀನು ಹೇಳಬೇಕು. ನಿನಗೆ ಬಹಳ ಪುಣ್ಯವು ಒದಗುವುದು. ದರಿದ್ರನನ್ನು, ಸ್ತ್ರೀಯನ್ನು, ದುಃಖಿತನನ್ನು, ರೋಗಿಯನ್ನು ಶರಣುಬಂದವನನ್ನು,

ಶ್ರೋತ್ರಿಯನನ್ನು ರಕ್ಷಿಸಿದವನು ನನ್ನ ಶ್ರೇಷ್ಠ ಭಕ್ತನೆನಿಸುವನು. ಎಂದು ನುಡಿಯಲು ದಧಿಪಾಲನು ಹೇಳಿದನು. ಗೆಳೆಯನೇ! ನಂದಸುತನಾದ ನೀನು ಸ್ವತಃ ಪ್ರಕೃತಿಯನ್ನು ಮೀರಿದ ಪುರುಷೋತ್ತಮನಾದ ವಿಷ್ಣುವೇ ಆಗಿರುವೆ. ನನ್ನಂತಹ ಭಕ್ತರಿಗೆ ನೀನು ಸತ್ಯಸಂಕಲ್ಪನಾದ ಈಶ್ವರನೇ ಆಗಿರುವೆ. ಭಕ್ತರ ಅನುಗ್ರಹಕ್ಕಾಗಿ ಎಲ್ಲೆಡೆ ಕೃಷ್ಣನೆಂಬ ಹೆಸರಿನಿಂದ ಸಂಚರಿಸುತ್ತಿರುವೆ. ಹೀಗೆಂದ ದಧಿಪಾಲನ ಮಾತನ್ನು ಕೇಳಿ ತನ್ನ ಹಸ್ತದಿಂದ ಬಾಯನ್ನು ಮುಚ್ಚಿಕೊಂಡು ಮೆಲ್ಲನೆ ನುಡಿದನು. ಹಾಗಾದರೆ ನನ್ನ ಸ್ವರೂಪವನ್ನು ಚೆನ್ನಾಗಿ ಅರಿತ ನಿನಗೆ ಮುಕ್ತಿಯನ್ನು ಕರುಣಿಸುವೆನು. ನನ್ನ ಆಜ್ಞಾಪಾಲಕನಾದ ನೀನು ಯಾರಿಗೂ ನನ್ನ ಸ್ವರೂಪವನ್ನು ಹೇಳಕೂಡದು ಎಂದ ಕೃಷ್ಣನಿಗೆ ದಧಿಪಾಲನು ಹೇಳಿದನು. ಕೃಷ್ಣನೇ! ನೀನು ಬೆಣ್ಣೆಯ ಚೋರನೂ, ಗೋಪಿಕೆಯರಿಗೆ ಜಾರನೂ, ಯೋಗಿಗಳಿಗೆ ಧ್ಯೇಯನೂ ಆಗಿರುವೆ. ಆದುದರಿಂದಲೇ ನಿನ್ನನ್ನು ಜಾರ, ಚೋರಶಿಖಾಮಣಿ ಎನ್ನುವರು. ಜಗವನ್ನೇ ಮೋಹಿಸುವ ನಿನ್ನ ಮಾಯೆಯು ಯೋಗಿಗಳಿಗೂ ಮೋಹಕವಾದುದು. ಹೀಗೆಂದ ದಧಿಪಾಲನನ್ನು ಕೃಷ್ಣನು ಆಲಂಗಿಸಿಕೊಂಡು ಪ್ರೀತಿಯಿಂದ ನುಡಿದನು. ಗೆಳೆಯನೇ! ನಿನ್ನ ಮನದ ಅಭೀಷ್ಟಗಳನ್ನೆಲ್ಲ ಪೂರೈಸುವೆನು. ಗೋಪಿಕೆಯರು ನನ್ನನ್ನು ಅರಸುತ್ತಿದ್ದಾರೆ. ಅವರಿಗೆ ನಾನಿಲ್ಲವೆಂದು ಹೇಳಿ ಕಳುಹಿಸು ಎನ್ನಲು ದಧಿಪಾಲನು ಹೇಳಿದನು. ಭಕ್ತರ ದುಃಖಗಳನ್ನು ಪರಿಹರಿಸುವ ಭಕ್ತವತ್ಸಲ ಕೃಷ್ಣನೇ ನಿನ್ನ ಭಕ್ತರ ಲಕ್ಷಣಗಳನ್ನು ತಿಳಿಸು ಎಂದು ಪ್ರಾರ್ಥಿಸಲು ಶ್ರೀಕೃಷ್ಣನು ತನ್ನ ಭಕ್ತರ ಲಕ್ಷಣಗಳನ್ನು ಹೇಳಲಾರಂಭಿಸಿದನು.

ಯಾವಾಗಲೂ ನನ್ನನ್ನು ಪೂಜಿಸುವವನು, ನನ್ನ ಕಥೆಗಳನ್ನೇ ಕೇಳುವವನು ಭಾಗವತೋತ್ತಮನೆನಿಸುವನು. ನನ್ನ ನಾಮದ ರಸವನ್ನು ಸವಿಯುವವನು, ನನ್ನ ಪ್ರಸಾದವನ್ನೇ ಭಕ್ಷಿಸುವವನು, ನನ್ನ ದರುಶನದಿಂದ ರೋಮಾಂಚನಗೊಳ್ಳುವವನು, ಭಾಗವತೋತ್ತಮನೆನಿಸುವನು. ಯಾರ ಹೊಟ್ಟೆಯಲ್ಲಿ ನನ್ನ ನೈವೇದ್ಯವಿರುವುದೋ, ಯಾರ ಶಿಖೆಯಲ್ಲಿ ನನ್ನ ನಿರ್ಮಾಲ್ಯವಾದ ತುಲಸಿಯಿರುವುದೋ, ಯಾರು ಕುತ್ತಿಗೆ, ಕಿವಿಗಳು, ಕೈಗಳಲ್ಲಿ ತುಳಸೀಮಣಿಯನ್ನು ಧರಿಸುವರೋ, ಮನೆಯಲ್ಲಾಗಲಿ, ದೇವಾಲಯದಲ್ಲಾಗಲೀ ನನ್ನ ಉತ್ಸವಗಳನ್ನು ನಿಷ್ಠೆಯಿಂದ ಮಾಡುವರೋ, ನನ್ನ ಕಥೆಯನ್ನು ಶ್ರದ್ಧೆಯಿಂದ ಕೇಳುವರೋ ತಮ್ಮ ವರ್ಣಾಶ್ರಮೋಚಿತವಾದ ಧರ್ಮಗಳನ್ನಾಚರಿಸುವರೋ, ಅವರು ಭಾಗವತೋತ್ತಮರೆನಿಸುವರು. ಪೂಜೆ ನಡೆಯುವ ಸ್ಥಳವನ್ನು ಕೈಗಳಿಂದ ಶುದ್ಧಗೊಳಿಸುವವನು, ರಂಗವಲ್ಲಿಯಿಂದ ಅಲಂಕರಿಸುವವನು ಭಾಗವತೋತ್ತಮನು. ನನ್ನ ಪ್ರೀತಿಗಾಗಿಯೇ ಸತ್ಕರ್ಮಗಳನ್ನು ಆಚರಿಸುವವನು, ಜಿತೇಂದ್ರಿಯನು, ಹರಿದಿನದಂದು ಸಂತೋಷದಿಂದ ಉಪವಾಸ ಮಾಡಿ ನನ್ನನ್ನು ಪೂಜಿಸುವವನು, ದ್ವಾದಶಿಯಂದು ನನ್ನ ಭಕ್ತರಿಗೆ ಭೋಜನ ಮಾಡಿಸುವವನು, ಎಲ್ಲ ವಿಷಯಗಳಲ್ಲೂ ನಿಸ್ಪೃಹನಾದವನು ಭಾಗವತೋತ್ತಮನು

ಎಂದು ತನ್ನ ಭಕ್ತರ ಲಕ್ಷಣಗಳನ್ನು ಹೇಳಿ ಮತ್ತೆ ಸ್ವಲ್ಪ ವಿಮರ್ಶೆ ಮಾಡಿ ಹೇಳುತ್ತಾನೆ. ನನ್ನ ಭಕ್ತರನ್ನು ಸತ್ಕರಿಸುವವರಿಗೆ ಆ ಸತ್ಕಾರದ ಋಣದಿಂದ ನಾನು ದಾಸನೆನಿಸುವೆನು. ನಾನು ಯೋಗಿಗಳಿಗೂ ತೋರದ ಮಾಯಾವಿಯು. ಆದರೆ ಧನುರ್ಮಾಸದಲ್ಲಿ ಮುದ್ಗಾನ್ನವನ್ನು ನಿವೇದಿಸಿದ ಭಕ್ತರ ಎದುರಿಗೆ ಬಂದು ಪ್ರತ್ಯಕ್ಷನಾಗುವೆನು.

**॥ ಇಲ್ಲಿಗೆ ಹನ್ನೆರಡನೇ ಅಧ್ಯಾಯವು ಮುಗಿಯಿತು ॥**

★★★

# ಹದಿಮೂರನೇ ಅಧ್ಯಾಯ

ಶ್ರೀಕೃಷ್ಣನು ಹೇಳಿದನು. ಈ ವಿಷಯದಲ್ಲಿ ಹಿಂದೆ ನಡೆದ ಇತಿಹಾಸವನ್ನು ಹೇಳುವೆನು ಕೇಳು. ನನ್ನ ಭಕ್ತನನ್ನು ನಿಂದಿಸಿದರೆ ಆಗುವ ಪರಿಣಾಮಕ್ಕೆ ನೀನೇ ಉದಾಹರಣೆಯಾಗಿರುವೆ. ಹಿಂದೆ ವೇತ್ರವತೀ ನದೀತೀರದಲ್ಲಿ ಶ್ರುತಿ-ಸ್ಮೃತಿ ವಿಶಾರದನಾದ ಶ್ರುತಕೀರ್ತಿ ಎಂಬ ಬ್ರಾಹ್ಮಣನಿದ್ದನು. ಜಿತೇಂದ್ರಿಯನೂ, ಕ್ರೋಧರಹಿತನೂ ಆದ ಅವನು ವಾಜಪೇಯಾದಿ ಯಜ್ಞಗಳನ್ನು ಆಚರಿಸಿದ್ದನು. ಸಕಲಶಾಸ್ತ್ರಗಳ ಸಾರವನ್ನು ಅರಿತ ಆತನು ನಿತ್ಯದಲ್ಲೂ ಪಂಚಯಜ್ಞಗಳನ್ನು ಆಚರಿಸುತ್ತಿದ್ದನು. ನಿತ್ಯದಲ್ಲಿ ನನ್ನನ್ನು ಪೂಜಿಸುತ್ತ ಅತಿಥಿಸತ್ಕಾರ ಮಾಡುತ್ತಿದ್ದನು. ಸರ್ವ ಪ್ರಾಣಿಗಳಿಗೂ ಲೇಸನ್ನು ಬಯಸುತ್ತಿದ್ದ ಆತನು, ನಿತ್ಯದಲ್ಲೂ ಗಾಯತ್ರಿಯನ್ನು ಜಪಿಸುತ್ತ ಪಂಚಾಗ್ನಿಗಳನ್ನು ಪೂಜಿಸುತ್ತಿದ್ದನು. ದೇವತೆಗಳು, ಋಷಿಗಳು, ಪಿತೃಗಳನ್ನು ತರ್ಪಣದಿಂದ ತೃಪ್ತಿಪಡಿಸಿ ಋಣತ್ರಯಗಳಿಂದ ಮುಕ್ತನಾಗಿದ್ದನು. ಸಕಲವೇದ-ಗಳನ್ನರಿತ ಆತನು ವಾಕ್ಯಾರ್ಥಕೋವಿದನೂ ಆಗಿದ್ದನು. ಹೀಗೆ ಇರುತ್ತ ಆತನು ನಿತ್ಯದಲ್ಲೂ ಬ್ರಹ್ಮಚರ್ಯವನ್ನಾಚರಿಸುತ್ತಿದ್ದನು.

ಅದೇ ಅಗ್ರಹಾರದಲ್ಲಿ ಭಾಗವತೋತ್ತಮನೂ, ಮಿತಾಹಾರಿಯೂ, ಅಲ್ಪನಿದ್ರಾಸಕ್ತನೂ, ಸರ್ವಬಂಧಗಳನ್ನು ತ್ಯಾಗ ಮಾಡಿದ ವಿರಕ್ತನೂ ಆದ ಸುಬಂಧುವೆಂಬ ಬ್ರಾಹ್ಮಣಶ್ರೇಷ್ಠನೊಬ್ಬನಿದ್ದನು. ವಿಷ್ಣುಪೂಜಾಸಕ್ತನೂ, ಪಂಚಾಗ್ನಿ ಉಪಾಸಕನೂ, ಯದೃಚ್ಛಾಲಾಭಸಂತುಷ್ಟನೂ, ಸಂಚಾರರಹಿತನೂ, ಆದ ಸುಬಂಧುವು ನಿತ್ಯದಲ್ಲೂ ರಾಮಾಯಣವನ್ನು ಪಾರಾಯಣ ಮಾಡುತ್ತಿದ್ದನು. ಮಹಾಭಾರತ, ಗೀತಾ, ಧರ್ಮಶಾಸ್ತ್ರಗಳಲ್ಲಿ ಕೋವಿದನಾದ ಆತನು ಪತ್ನಿ ಪುತ್ರಾದಿಗಳಲ್ಲಿ ನಿರಾಸಕ್ತನೂ, ದೇಹಾಭಿಮಾನ ರಹಿತನೂ ಎನಿಸಿದ್ದನು. ಎಲ್ಲೆಡೆ ಭಗವಂತನನ್ನು ಕಾಣುತ್ತ, ಭಗವಂತನ ಕಥೆಗಳನ್ನು ಕೇಳುತ್ತ, ಭಗವನ್ನಾಮಗಳನ್ನೇ ಸ್ಮರಿಸುತ್ತ, ಗೃಹಸ್ಥಾಶ್ರಮ ನಿರತನಾಗಿದ್ದರೂ ನಿತ್ಯನೈಮಿತ್ತಿಕ ಕರ್ಮಗಳನ್ನೆಂದೂ

ತಪ್ಪಿಸುತ್ತಿರಲಿಲ್ಲ. ಪ್ರತಿವರುಷ ಧನುರ್ಮಾಸದಲ್ಲಿ ಪ್ರಾತಃಕಾಲದಲ್ಲಿ ಸ್ನಾನ ಮಾಡಿ ಶ್ರೀಹರಿಯನ್ನು ಪೂಜಿಸಿ ಮುದ್ಗಾನ್ನವನ್ನು ಸಮರ್ಪಿಸಿ, ವೈಶ್ವದೇವಾದಿಗಳನ್ನು ಮಾಡಿ ಬ್ರಾಹ್ಮಣಭೋಜನವನ್ನು ಮಾಡಿಸುತ್ತಿದ್ದನು. ನಂತರ ನೆಲ್ಲಿಕಾಯಿ ಗಾತ್ರದಷ್ಟು ಮುದ್ಗಾನ್ನಪ್ರಸಾದವನ್ನು ಸ್ವೀಕರಿಸಿ ನಂತರ ಶ್ರದ್ಧೆಯಿಂದ ಅಗ್ನಿಹೋತ್ರವನ್ನು ಆಚರಿಸುತ್ತಿದ್ದನು. ಹೀಗೆ ಮನೆಯಲ್ಲೇ ಇರುತ್ತ ಸ್ವಕರ್ಮಾಚರಣೆಯನ್ನು ಮಾಡುತ್ತಿದ್ದ.

ವಿನೀತನೂ, ನಿರಹಂಕಾರಿಯೂ, ವೃದ್ಧನೂ ಆದ ಸುಬಂಧುವನ್ನು ಶ್ರುತಕೀರ್ತಿಯು ನೋಡಿ ವೇದೋಕ್ತವಾದ ಕರ್ಮಗಳನ್ನು ತ್ಯಾಗ ಮಾಡಿ ಮೊದಲು ಹರಿಪೂಜೆ ಮಾಡುತ್ತಿದ್ದ ಸುಬಂಧುವನ್ನು ಅಪಹಾಸ ಮಾಡಿದನು.

ಹೇ ಸುಬಂಧುವೇ! ಪ್ರಾತಃಕಾಲದಲ್ಲಿ ಮಾಡಬೇಕಾದ ನಿತ್ಯಕರ್ಮವೆನಿಸಿದ ಅಗ್ರಿಹೋತ್ರವನ್ನು ತ್ಯಜಿಸಿ ಹರಿಪೂಜೆಯನ್ನು ವಿದ್ವಾಂಸನಾದ ನೀನು ಹೇಗೆ ಆಚರಿಸುವೆ. ಅನ್ನವನ್ನು ಸ್ವೀಕರಿಸಿದ ನಂತರ ಅಗ್ನಿಹೋತ್ರವನ್ನು ಹೇಗೆ ಆಚರಿಸುವೆ? ಸರ್ವಶಾಸ್ತ್ರಗಳನ್ನು ಅರಿತ ನೀನು ವೇದಗಳನ್ನು ಅವಮಾನಿಸುತ್ತಿರುವೆ. ಬ್ರಾಹ್ಮಣರಿಗೆ ವೇದವೇ ಪ್ರಧಾನವಾದ ಪ್ರಮಾಣವು. ಸ್ಮೃತಿಗಳೆಲ್ಲ ವೇದಾನುಸಾರಿಯಾದವುಗಳು. ಶ್ರುತಿ ಹಾಗೂ ಸ್ಮೃತಿಗಳಲ್ಲಿ ವಿರೋಧ ತೋರಿದರೆ ಆಗ ಶ್ರುತಿಯನ್ನೇ ಆಶ್ರಯಿಸಬೇಕು. ವೇದೋಕ್ತವಾದ ಕರ್ಮಗಳನ್ನು ಬಿಟ್ಟು ಸ್ಮಾರ್ತಕರ್ಮಗಳನ್ನು ಆಚರಿಸುವವನು ವೇದರಂಡನೆನಿಸುವನು. ಅವನು ಎಲ್ಲ ಕರ್ಮಗಳಿಂದಲೂ ಬಹಿಷ್ಕೃತನಾಗುವನು. ವಿದ್ವಾಂಸನಾದ ನೀನು ಹೇಗೆ ಈ ರೀತಿ ಆಚರಿಸುವೆ. ಕಲಿಯುಗದಲ್ಲಿ ಬಂದೊದಗುವ ಧರ್ಮಸಾಂಕರ್ಯವು ಈಗಲೇ ಆಗುವುದು. ಪ್ರಾಕೃತ ವಿದ್ವಾಂಸರು ಅದು ಹೇಗೆ ಧರ್ಮಸಂಗ್ರಹದಲ್ಲಿ ತೊಡಗುವರು? ಲೋಕದಲ್ಲಿ ಸಾಂಕರ್ಯ ಉಂಟು ಮಾಡಿದವನು, ವೇದೋಕ್ತ ಧರ್ಮಗಳನ್ನು ನಿಂದಿಸುವವನು, ಡಾಂಭಿಕನು, ಚಾಡಿಕೋರನು, ಲೋಭಿಯು ಇವರೆಲ್ಲ ಆತತಾಯಿಗಳೆನಿಸುವರು. ಆತತಾಯಿಯ ಮುಖವನ್ನು ನೋಡಿದವನು ಸೂರ್ಯದರ್ಶನವನ್ನು ಮಾಡಬೇಕು. ಹೀಗೆಂದು ನನ್ನ ಭಕ್ತನಾದ ಬ್ರಾಹ್ಮಣನನ್ನು ನಿಂದಿಸಿದನು. ಸುಬಂಧುವು ಅಂದಿನಿಂದ ಸುಕೀರ್ತಿಯೊಡನೆ ಸಂಭಾಷಣೆಯನ್ನು ನಿಲ್ಲಿಸಿದನು. ಅವನು ಮಾಡಿದ ನಿಂದನೆಯನ್ನು ಮರೆತು ತನ್ನ ಕರ್ತವ್ಯದಲ್ಲಿ ನಿರತನಾದನು. ಶುದ್ಧಾತ್ಮನಾದ ಆತನು ಮೃತನಾದ ನಂತರ ನನ್ನ ಲೋಕವನ್ನೇ ಹೊಂದಿದನು. ವಿಷ್ಣುಭಕ್ತನನ್ನು ನಿಂದಿಸಿ ಪುಣ್ಯವನ್ನೆಲ್ಲ ಕಳೆದುಕೊಂಡ ಸುಕೀರ್ತಿಯು, ಕಂಠರೋಗದಿಂದ ಪೀಡಿತನಾಗಿ, ಶ್ಲೇಷ್ಮಪೀಡಿತನಾಗಿ ಉಸಿರಾಡಲೂ ಕಷ್ಟಪಡುತ್ತ, ಯಾತನೆಯಿಂದ ಪೀಡಿತನಾಗಿ ಆರು ವರ್ಷಗಳ ಕಾಲ ದುಃಖವನ್ನನುಭವಿಸಿ ಮರಣ ಹೊಂದಿದನು. ನನ್ನನ್ನು ಪೂಜಿಸಿದ ಪುಣ್ಯದಿಂದ ನರಕಗಳನ್ನು ದಾಟಿ ಬ್ರಹ್ಮಣ್ಯನೂ, ಸತ್ಯಸಂಧನೂ ಆತ ಕೀರ್ತಿಮಾನ್ ಎಂಬ ರಾಜನಾಗಿ ಜನಿಸಿದನು.

ಯಜ್ಞಶೀಲನೂ ದುಷ್ಟಶಿಕ್ಷಕನೂ ಆದ ಆ ರಾಜನು ಸ್ವರ್ಗಪ್ರಾಪ್ತಿಯ ಉದ್ದೇಶ್ಯದಿಂದ ಧರ್ಮವನ್ನು ಆಚರಿಸಿದನು. ಹಿಂದಿನ ಜನ್ಮದಲ್ಲಿ ಮಾಡಿದ ವೈಷ್ಣವನಿಂದೆಯಿಂದ ವಿಷ್ಣುಭಕ್ತಿರಹಿತನಾದನು. ಪೂರ್ವಸಂಸ್ಕಾರದಿಂದ ಯುಕ್ತನಾದ ಅವನು ಪುಣ್ಯವನ್ನು ಅಪೇಕ್ಷಿಸಿ ಹತ್ತು ಸಾವಿರ ವರುಷಗಳವರೆಗೆ ಧರ್ಮದಿಂದ ರಾಜ್ಯಭಾರ ಮಾಡಿದನು. ವೈಶಾಖಮಾಸದಲ್ಲಿ ಅನ್ನದಾನ ಹಾಗೂ ಜಲದಾನ ಮಾಡಿದನು. ಆ ಪುಣ್ಯದಿಂದ ಸ್ವರ್ಗಕ್ಕೆ ಹೋಗಿ ಮೂರು ಮನ್ವಂತರಗಳ ಕಾಲ ಸ್ವರ್ಗದಲ್ಲಿದ್ದು ದಿವ್ಯಭೋಗಗಳನ್ನನುಭವಿಸಿದನು. ಪುಣ್ಯವು ತೀರಿದ ನಂತರ ಗಂಗಾತೀರದಲ್ಲಿ ಗುಹನೆಂಬ ಬೇಡನಾಗಿ ಜನಿಸಿದನು. ಶೃಂಗಿಬೇರಪುರದಲ್ಲಿ ನೆಲೆಸಿದ ಆತನು ಬ್ರಹ್ಮವೇತ್ತನೂ, ಬ್ರಾಹ್ಮಣಭಕ್ತನೂ, ವಿಷ್ಣು ಪೂಜಾನಿರತನೂ, ಅಷ್ಟಾಕ್ಷರನಿರತನೂ ಆಗಿದ್ದನು.

**॥ ಇಲ್ಲಿಗೆ ಹದಿಮೂರನೇ ಅಧ್ಯಾಯವು ಮುಗಿಯಿತು ॥**

★★★

# ಹದಿನಾಲ್ಕನೇ ಅಧ್ಯಾಯ

ದಧಿಪಾಲನು ಕೇಳಿದನು. ಹೇ ಕೃಷ್ಣನೇ! ಮಹಾಯೋಗಿಯೂ, ದ್ವಿಜಶ್ರೇಷ್ಠನೂ ಆದ ಶ್ರುತಕೀರ್ತಿಯು ಹೇಗೆ ನಿಂದ್ಯವಾದ ವ್ಯಾಧಯೋನಿಯಲ್ಲಿ ಜನಿಸಿದನು. ನಿನ್ನನ್ನು ಪೂಜಿಸಿದ ಪುಣ್ಯವು ಎಲ್ಲಿ ಹೋಯಿತು? ಆತನು ಮಾಡಿದ ಯಜ್ಞಫಲವೆಲ್ಲಿ ಹೋಯಿತು? ಇದೆಲ್ಲವನ್ನು ನನಗೆ ನಿಸ್ಸಂದೇಹವಾಗಿ ಹೇಳಬೇಕು. ಹೀಗೆ ಪ್ರಾರ್ಥಿಸಿದ ದಧಿಪಾಲನಿಗೆ ಶ್ರೀಕೃಷ್ಣನು ಮೆಲುನಗುತ್ತ ಹೇಳತೊಡಗಿದ.

ಪರನಿಂದೆ, ಪರದ್ರೋಹ, ಪರಸ್ತ್ರೀಚಿಂತನ, ಪರದ್ರವ್ಯಾಪೇಕ್ಷೆ, ಪ್ರತಿಗ್ರಹ, ಪರಾನ್ನ ಇವು ಆರು ಬಹಳ ಪಾಪಕರವಾಗಿವೆ. ಈ ಆರು ಪಾಪಗಳಿಗೆ ಮಹಾಕೃಚ್ಛ್ರವನ್ನು ಪ್ರಾಯಶ್ಚಿತ್ತವಾಗಿ ಹೇಳಲಾಗಿದೆ.

ವಿಷ್ಣುಭಕ್ತರನ್ನು ನಿಂದಿಸಿದ ಪಾಪಕ್ಕೆ ಪ್ರಾಯಶ್ಚಿತ್ತವೇ ಇಲ್ಲ. ನನ್ನ ಭಕ್ತನನ್ನು ನಿಂದಿಸಿದ ಪಾಪಿಯು ಸೂರ್ಯ-ಚಂದ್ರರಿರುವವರೆಗೆ ನರಕಗಳನ್ನನುಭವಿಸಿ ಮಲದಲ್ಲಿ ಕ್ರಿಮಿಯಾಗಿ ಜನಿಸುತ್ತಾನೆ. ಶ್ರುತಕೀರ್ತಿಯು ನನ್ನನ್ನು ಭಕ್ತಿಯಿಂದ ಪೂಜಿಸಿದ್ದ. ಅದರ ಪ್ರಭಾವದಿಂದಲೇ ಆತನಿಗೆ ನರಕವಾಗಲಿಲ್ಲ. ಮುಂದೆ ಕೀರ್ತಿಮಾನ್ ಎಂಬ ಹೆಸರಿನಿಂದ ರಾಜನಾದನು. ನಂತರ ವೈಷ್ಣವನಿಂದೆಯಿಂದ ಕೇವಲ ಬೇಡರ ಜಾತಿಯಲ್ಲಿ ಜನಿಸಿದರೂ ಕೂಡ ಆತನು ಬೇಡನಂತೆ ಜೀವಿಸದೇ ಸತ್ಕರ್ಮಗಳನ್ನು ಆಚರಿಸುತ್ತಿದ್ದನು. ಶ್ರುತಕೀರ್ತಿಯು ಯಾವಾಗಲೂ ಅಷ್ಟಾಕ್ಷರ

ಮಂತ್ರವನ್ನು ಜಪಿಸುತ್ತಿದ್ದನು. ಹಾಗೂ ವಿಷ್ಣುಸಹಸ್ರನಾಮವನ್ನು ಪಠಿಸುತ್ತಾ ಕೋಮಲವಾದ ತುಲಸೀದಲಗಳಿಂದ ನನ್ನನ್ನು ಅರ್ಚಿಸುತ್ತಿದ್ದನು. ಆ ಪುಣ್ಯದ ಪ್ರಭಾವದಿಂದ ಅವನು ಬೇಡನಾದಾಗಲೂ ಕೂಡ ನನ್ನನ್ನೇ ಸ್ತುತಿಸುತ್ತ ಗುಹನೆಂಬ ಹೆಸರಿನ ನನ್ನ ದಾಸನಾದನು. ರಾವಣನ ಸಂಹಾರಕ್ಕಾಗಿ ಅವತರಿಸಿದ ಶ್ರೀರಾಮನ ಸೇವೆಯನ್ನು ಮಾಡಿದನು. ಶ್ರೀರಾಮನ ಪಾದವನ್ನೇ ಆಶ್ರಯಿಸಿದನು.

ಭಗವಂತನನ್ನು ಆಶ್ರಯಿಸಿದವನು ದುರಾಚಾರಿಯಾಗಲಿ, ಮೂರ್ಖನಾಗಿರಲಿ, ಮುಕ್ತನಾಗುವನು. ಹೇ ದಧಿಪಾಲನೇ! ಪುಣ್ಯವನ್ನು ಮಾಡಿದವನೆಂದೂ ದುರ್ಗತಿಯನ್ನು ಹೊಂದುವುದಿಲ್ಲ. ಆ ಗುಹನೇ ಈಗ ದಧಿಪಾಲ ಎಂಬ ಹೆಸರಿನಿಂದ ಗೋಕುಲದಲ್ಲಿ ಜನಿಸಿರುವಿ. ಬ್ರಹ್ಮಜ್ಞಾನಿಯಾಗಿ ನನ್ನ ಸಖನಾಗಿರುವಿ. ನೀನು ನನಗೆ ಅತ್ಯಂತಪ್ರಿಯನಾದ ಭಕ್ತನಾಗಿರುವೆ.

ಬ್ರಾಹ್ಮಣಶ್ರೇಷ್ಠನಾದ ಆ ಸುಬಂಧುವು, ಜಿತೇಂದ್ರಿಯನಾಗಿ ನನ್ನ ನಾಮಸ್ಮರಣ ರತನಾಗಿ, ನನ್ನನ್ನು ಪೂಜಿಸುತ್ತಿದ್ದನು. ಧನುರ್ಮಾಸದ ಉಷಃಕಾಲದಲ್ಲಿ ನನ್ನನ್ನು ಪೂಜಿಸಿ ಮುದ್ಗಾನ್ನವನ್ನು ನಿವೇದಿಸುತ್ತಿದ್ದನು. ನಂತರ ಬ್ರಾಹ್ಮಣರನ್ನು ಪೂಜಿಸಿ ಅನ್ನದಾನ ಮಾಡುತ್ತಿದ್ದನು. ಹೆಂಡತಿ, ಮಕ್ಕಳು, ತನ್ನ ಪ್ರಾಣವನ್ನೂ ಸಹ ನನಗಾಗಿ ಸಮರ್ಪಿಸಿದನು. ಅಭ್ಯಾಗತರೊಂದಿಗೆ ಅತಿಥಿಗಳನ್ನು ಪೂಜಿಸುತ್ತಿದ್ದನು.

ಪ್ರತಿ ದಿವಸದಲ್ಲೂ ಹಾಗೂ ವಿಶೇಷವಾಗಿ ಧನುರ್ಮಾಸದಲ್ಲಿ ಹರಿಯನ್ನು ಪೂಜಿಸಿ ಅನ್ನ-ನೀರುಗಳನ್ನು ದಾನ ಮಾಡುತ್ತಿದ್ದನು. ವೈಶಾಖಮಾಸದಲ್ಲಿ ಕೊಡೆಗಳು ಹಾಗೂ ಸಾಯಂಕಾಲದಲ್ಲಿ ಬೆಲ್ಲ ಮತ್ತು ನೀರನ್ನು ದಾನ ಮಾಡಿದನು. ವಿಶೇಷವಾಗಿ ಮೊಸರನ್ನವನ್ನು ದಾನ ಮಾಡಿದನು. ಮಧ್ಯಾಹ್ನದ ಬಿಸಿಲಿನಿಂದ ಪೀಡಿತರಿಗೆ ನೀರನ್ನು ದಾನ ಮಾಡಿದನು. ಕಾರ್ತಿಕ ಮಾಸದಲ್ಲಿ ದೀಪದಾನವನ್ನು ಮಾಡಿ ಮಾಘಮಾಸದಲ್ಲಿ ಪ್ರಾತಃಸ್ನಾನವನ್ನಾಚರಿಸಿದನು. ಪಾತ್ರರಾದ ಉತ್ತಮ ಬ್ರಾಹ್ಮಣರಿಗೆ ಸಾಲಿಗ್ರಾಮ ಗಳನ್ನು ದಾನವಾಗಿ ನೀಡಿದನು. ಹೀಗೆ ಧರ್ಮತತ್ಪರನಾದ ಸುಬಂಧುವು ಕೊನೆಗೆ ಸಾಮಾನ್ಯ ಪುರುಷರಿಗೆ ಹೊಂದಲಾಗದ ನನ್ನ ಸಾಯುಜ್ಯವನ್ನು ಹೊಂದಿದನು. ಹೀಗೆ ಸುಬಂಧುವೆಂಬ ನನ್ನ ಭಕ್ತಶ್ರೇಷ್ಠನು, ನನ್ನ ಭಕ್ತರಾದ ಗಜೇಂದ್ರ, ನಾರದ, ರುಕ್ಮಾಂಗದ, ಅರ್ಜುನರಂತೆ ಪ್ರಸಿದ್ಧಿಯನ್ನು ಹೊಂದಿದನು.

ಶ್ರುತಕೀರ್ತಿ ಹಾಗೂ ಸುಬಂಧುಗಳ ಉತ್ತಮವಾದ ಈ ಆಖ್ಯಾನವನ್ನು, ಹೇಳಿ ಕೇಳಿದವರು, ಭೋಗಭಾಗ್ಯಗಳು ಹಾಗೂ ಮುಕ್ತಿಯನ್ನು ಹೊಂದುವರು. ನೀನು ಪ್ರಶ್ನೆ ಮಾಡಿದ್ದರಿಂದ ಇದೆಲ್ಲವನ್ನು ನಿನಗೆ ಹೇಳಿರುವೆ. ನಿಸ್ಪೃಹನೂ ಶಾಂತನೂ ಆದ ನನ್ನ ಭಕ್ತನಲ್ಲಿ ನನಗೆ ರಹಸ್ಯವೇನೂ ಇರುವುದಿಲ್ಲ. ಗೋಪಿಕೆಯರೆಲ್ಲ ನನ್ನನ್ನು ಹುಡುಕುತ್ತ ಇಲ್ಲಿಗೆ ಬರುವರು. ಅತಿ ಗುಹ್ಯವಾದ ನನ್ನ ಲೀಲೆಯನ್ನು ಇನ್ನು ಮುಂದೆ

ಹೇಳಲಾಗದು. ಹೀಗೆಂದು ನುಡಿದ ಕೃಷ್ಣನ ಮುಖದಿಂದ ಸರ್ವತತ್ವರಹಸ್ಯಗಳನ್ನು ಕೇಳಿ ತಿಳಿದ ದಧಿಪಾಲನು ಕೃಷ್ಣನ ವಿಯೋಗದಿಂದ ಮನದಲ್ಲಿ ದುಃಖಿತನಾದರೂ, ಮೇಲೆ ಮಾತ್ರ ಮೆಲ್ಲನೆ ನಗುತ್ತ ಹೇಳಲಾರಂಭಿಸಿದನು.

**|| ಇಲ್ಲಿಗೆ ಹದಿನಾಲ್ಕನೇ ಅಧ್ಯಾಯವು ಮುಗಿಯಿತು ||**

★★★

# ಹದಿನೈದನೇ ಅಧ್ಯಾಯ

ದಧಿಪಾಲನು ಹೇಳಿದನು. ಹೇ ಕೃಷ್ಣನೇ! ನೀನು ಉಪನಿಷತ್ತುಗಳಿಂದ ಪ್ರತಿಪಾದ್ಯನಾಗಿರುವಿ. ಇಂಥ ನೀನು ನನಗೆ ಮಿತ್ರನಾಗಿರುವುದರಿಂದ ನಾನು ಧನ್ಯನಾಗಿದ್ದೇನೆ. ಕೃತಕೃತ್ಯನಾಗಿದ್ದೇನೆ. ಪರಿಪೂರ್ಣನಾದ ನಿನ್ನ ಮಹಿಮೆಯನ್ನು ಅಲ್ಪಮತಿಯಾದ ನಾನು ಹೇಳಲು ಹೇಗೆ ಸಾಧ್ಯ? ಯೋಗಿಗಳಿಂದಲೂ ದಾಟಲಾಗದ ನಿನ್ನ ಮಹಿಮೆಯನ್ನು ಪಾಮರರೆಂತು ದಾಟುವರು?

ಹೀಗೆಂದ ದಧಿಪಾಲನಿಗೆ ಕೃಷ್ಣನು ಹೇಳುತ್ತಾನೆ. ಎಲ್ಲ ಪ್ರಾಣಿಗಳಲ್ಲಿ ದಯೆ ಮಾಡುವುದರಿಂದ ಎಲ್ಲೆಡೆ ಭಗವಂತನನ್ನು ಕಾಣುವುದರಿಂದ, ಎಲ್ಲ ಪ್ರಾಣಿಗಳನ್ನು ಹಿಂಸಿಸದೇ ಇರುವುದರಿಂದ ಭಗವಂತನು ತೃಪ್ತನಾದಂತೆ ಪೂಜೆ, ತಪಸ್ಸು, ವ್ರತಗಳಿಂದ ಪ್ರೀತನಾಗುವುದಿಲ್ಲ. ಅಹಿಂಸೆಯೇ ಶ್ರೇಷ್ಠವಾದ ಪುಣ್ಯವಾಗಿದೆ. ಅಹಿಂಸೆಯೇ ಶ್ರೇಷ್ಠವಾದ ದಾನವಾಗಿದೆ. ಅಹಿಂಸೆಯೇ ಯಜ್ಞವಾಗಿದೆ.

ಪ್ರಾಣಿಹಿಂಸಕನು ಮಾಡಿದ ಯಜ್ಞ, ದಾನ, ತಪಸ್ಸು, ತೀರ್ಥಯಾತ್ರೆ, ಪೂಜೆ, ಚಾಂದ್ರಾಯಣಾದಿ ವ್ರತಗಳೆಲ್ಲವೂ ನಿಷ್ಫಲವಾಗುತ್ತವೆ. ಈ ವಿಷಯದಲ್ಲೊಂದು ಇತಿಹಾಸವನ್ನು ಹೇಳುವೆನು. ಈ ಇತಿಹಾಸವು ಕೇಳಿದವರಿಗೆ ಸಕಲಭಾಗ್ಯಗಳನ್ನು ಹಾಗೂ ಮುಕ್ತಿಯನ್ನೇ ನೀಡುವುದು.

ಕಾವೇರೀ ತೀರದಲ್ಲೊಬ್ಬ ವಿದ್ವಾಂಸನಿದ್ದ. ಆತ ವಿರಕ್ತ. ಶಾಂತ. ದಾಂತ. ದ್ವಂದ್ವಾತೀತ. ಹೀಗಾಗಿ ಬ್ರಾಹ್ಮಣರಲ್ಲಿ ಶ್ರೇಷ್ಠನಾಗಿದ್ದ.

ನಿತ್ಯದಲ್ಲೂ ಕಾವೇರಿಯಲ್ಲಿ ಸ್ನಾನ ಮಾಡಿ ಶಿವಪೂಜೆಯನ್ನಾಚರಿಸುತ್ತಿದ್ದ. ಕಾರ್ತಿಕಮಾಸದಲ್ಲಿ ದೀಪದಾನ ಮಾಡಲಿಲ್ಲ. ಚಾತುರ್ಮಾಸ್ಯವ್ರತವನ್ನೂ ಮಾಡಲಿಲ್ಲ. ಮಾಘಮಾಸದಲ್ಲಿ ಪ್ರಾತಃಸ್ನಾನವನ್ನೂ ಮಾಡಲಿಲ್ಲ. ವೈಶಾಖದಲ್ಲಿ ಜಲದಾನ ಮಾಡಲಿಲ್ಲ. ಆ ಬ್ರಾಹ್ಮಣ ಮೌನಿಯಾಗಿ ಶಿವಪೂಜೆಯನ್ನು ಮಾತ್ರ ಮಾಡುತ್ತಿದ್ದ. ವಿಷ್ಣು ಎಂಬ ಶಬ್ದವೇ ಕಿವಿಗೆ ಬೀಳಬಾರದೆಂದು ಯೋಚಿಸಿದ. ಆ ಕಾರಣಕ್ಕಾಗಿ ಯಾರೊಂದಿಗೂ ಮಾತನಾಡುತ್ತಿರಲಿಲ್ಲ.

ಹೀಗಿರುತ್ತಿದ್ದ ಆ ಬ್ರಾಹ್ಮಣನ ಆಯುಷ್ಯವು ತೀರಿತು. ಮರಣಕಾಲವು ಸನ್ನಿಹಿತವಾಯಿತು. ಆದರೆ ಅವನ ವಿಷಯದಲ್ಲಿ ಶಂಕರನು ಉದಾಸೀನನಾದನು. ವಿಷ್ಣುನಿಂದಕನೂ ಶಿವಪೂಜಕನೂ ಆದ ಆ ಬ್ರಾಹ್ಮಣನನ್ನು ರುದ್ರನು ಉಪೇಕ್ಷೆ ಮಾಡಿದುದನ್ನು ಕಂಡು ನಂದೀಶ್ವರನು ಶಂಕರನಿಗೆ ಕೈಮುಗಿದು ಪ್ರಾರ್ಥಿಸಿದನು. ಹೇ ಗಿರೀಶನೇ! ನೀನು ಭಕ್ತಪ್ರಿಯನಾಗಿರುವಿ. ಎಲ್ಲ ಭಕ್ತರ ದುಃಖಗಳನ್ನು ನಾಶಮಾಡುವಿ. ನಿನ್ನ ದಾಸನಾದ ಈ ಬ್ರಾಹ್ಮಣನನ್ನು ಏಕೆ ಉಪೇಕ್ಷಿಸುತ್ತಿರುವಿ?

ನಿನ್ನಿಂದ ಉಪೇಕ್ಷಿತನಾದ ಈ ಬ್ರಾಹ್ಮಣನು ವ್ಯರ್ಥವಾಗಿ ನರಕವನ್ನು ಹೊಂದುತ್ತಾನಲ್ಲವೇ? ಹೀಗೆಂದ ನಂದೀಶ್ವರನ ನುಡಿಯನ್ನು ಕೇಳಿ ರುದ್ರದೇವರು ಸ್ವಲ್ಪವಾಗಿ ಕೋಪಗೊಂಡರು. ಆದರೂ ಮಂದಹಾಸ ಮಾಡುತ್ತ ಹೇಳಿದರು. ಈ ಬ್ರಾಹ್ಮಣನು ನನ್ನ ಪೂಜಕನಾಗಿದ್ದಾನೆ ನಿಜ. ಆದರೇ ಈತ ಮಹಾಪಾಪಿಯಾಗಿದ್ದಾನೆ. ನಿತ್ಯದಲ್ಲೂ ಹರಿಯನ್ನು ದ್ವೇಷಿಸುವ ಈತ ಸದ್ಗತಿಯನ್ನು ಹೊಂದಲು ಅನರ್ಹ-ನಾಗಿದ್ದಾನೆ. ಅಹಿಂಸಾವ್ರತಪರರಾದ ವಿಷ್ಣುಭಕ್ತರಿಗೆ ನಾನೇ ದಾಸನಂತೆ ಇರುತ್ತೇನೆ.

ಈ ಬ್ರಾಹ್ಮಣ ಅತ್ಯಂತ ಲುಬ್ಧನಾಗಿದ್ದಾನೆ. ಧನುರ್ಮಾಸದಲ್ಲಿ ಹರಿಪೂಜೆಯನ್ನು ಮಾಡಲಿಲ್ಲ. ಮುದ್ಗಾನ್ನವನ್ನು ನಿವೇದಿಸಲಿಲ್ಲ. ಹರಿಭಕ್ತಿಯೂ ಇಲ್ಲ. ಇಂಥವನು ಸದ್ಗತಿಯನ್ನು ಹೇಗೆ ಹೊಂದುತ್ತಾನೆ? ಸಾಮಾನ್ಯರನ್ನು ನಿಂದಿಸುವವನು ಕೂಡ ನನ್ನ ಭಕ್ತನಾದರೂ ನನಗೆ ಪ್ರಿಯನಾಗಲಾರ. ಇವನು ನನ್ನನ್ನು ಪೂಜಿಸಿದ್ದಾನೆ. ನಿಜ. ಆದರೇ ವಿಷ್ಣುನಿಂದೆಯನ್ನು ಮಾಡಿದ್ದಾನೆ. ಇವನನ್ನು ಜಗನ್ನಾಥನೂ, ಜಗನ್ಮಯನೂ ಆದ ವಿಷ್ಣುವೇ ರಕ್ಷಿಸಬೇಕು. ಇವನ ರಕ್ಷಣೆಗೆ ನಾನು ಶಕ್ತನಲ್ಲ. ಬ್ರಾಹ್ಮಣರನ್ನು ತೃಪ್ತಿಪಡಿಸದ ಲೋಭಿಯ ಪೂಜೆಯನ್ನು ನಾನೆಂದಿಗೂ ಸ್ವೀಕರಿಸುವುದಿಲ್ಲ. ಹೀಗೆ ನುಡಿದು ರುದ್ರದೇವರು ಅವನ ರಕ್ಷಣೆಗೆ ಮನಸ್ಸು ಮಾಡಲಿಲ್ಲ.

ಆ ಬ್ರಾಹ್ಮಣ ಮೃತನಾದ. ವಿಷ್ಣುದ್ವೇಷದ ಫಲವಾಗಿ ಘೋರವಾದ ನರಕಗಳನ್ನು ಅನುಭವಿಸಿದ. ಮತ್ತೆ ಭೂಲೋಕದಲ್ಲಿ ಜನಿಸಿದ. ದಂಡಕಾರಣ್ಯದಲ್ಲಿ ಕ್ರೂರಿಯೂ, ಬ್ರಾಹ್ಮಣಪೀಡಕನೂ ಆದ ಘಂಟಾಕರ್ಣನೆಂಬ ಬ್ರಹ್ಮರಾಕ್ಷಸನಾಗಿ ಜನಿಸಿದನು.

ಅದೇ ಸಂದರ್ಭದಲ್ಲಿ ಲೀಲಾಮಾನುಷವಿಗ್ರಹನಾದ ಭಗವಂತನು ವಸುದೇವನ ಪತ್ನಿಯಾದ ದೇವಕಿಯಲ್ಲಿ ಕೃಷ್ಣನೆಂಬ ಹೆಸರಿನಿಂದ ಅವತರಿಸಿದ. ನಂದ-ಯಶೋದೆಯರ ಮುದ್ದಿನ ಮಗನಾಗಿ ಬೆಳೆದ. ಬಾಲಲೀಲೆಯನ್ನು ತೋರಿಸಿದ. ಎಲ್ಲರನ್ನೂ ಮಂತ್ರಮುಗ್ಧರನ್ನಾಗಿಸಿದ. ಗೋಪಾಲಕರನ್ನು ಅನುಗ್ರಹಿಸಿದ. ವೃಂದಾವನ ವನದಲ್ಲಿ ಸಂಚರಿಸಿದನು. ಅಸುರರನ್ನು ಮೋಹಿಸಿದ. ಸಜ್ಜನರನ್ನು ಉದ್ಧರಿಸಿದ. ಗೋಪಾಲಬಾಲಕರೊಂದಿಗೆ ಯಮುನಾತೀರದಲ್ಲಿ ಗೋವುಗಳನ್ನು

ಸಂರಕ್ಷಿಸಿದ. ಅಲ್ಲಿ ಗೆಳೆಯರು ತಂದ ದಧ್ಯೋದನವನ್ನು ಊಟ ಮಾಡಿದ. ಗೋಪಬಾಲಕರಿಗೂ ತಿನಿಸಿದ. ಹೀಗೆ ಸ್ವಯಂ ಸಂತೃಪ್ತನಾದ ಪರಮಾತ್ಮ ಕ್ರೀಡಿಸಿದ.

**ಸೂಚನೆ- ಬ್ರಹ್ಮದೇವರು ದೇವರ ವಿರುದ್ಧವಾಗಿ ನಡೆದುಕೊಂಡಂತೆ ನಿರೂಪಿಸುವ ಈ ಕಥೆಯು ಮೋಹಕವಾಗಿದೆ.**

ಆ ಸಂದರ್ಭದಲ್ಲಿ ಎಲ್ಲ ಕರುಗಳು ಹಾಗೂ ಗೋಪಾಲಕರನ್ನು ಬ್ರಹ್ಮದೇವನು ಬೇರೊಂದು ವನದಲ್ಲಿ ಕಾಣದಂತೆ ಇರಿಸಿದ. ಗೋಪಾಲಕರು ಹಾಗೂ ಕರುಗಳು ಕಾಣದಂತಾಗಲು ಇದು ಬ್ರಹ್ಮನ ವಂಚನೆಯೆಂದು ಶ್ರೀಕೃಷ್ಣ ಅರಿತ. ಒಂದು ವರುಷದ ವರೆಗೆ ನಿರ್ಜನವಾದ ಅರಣ್ಯದಲ್ಲಿ ಸಂಚಾರ ಮಾಡಿದ. ಒಂದು ಸಾರಿ ಇಂದ್ರನೀಲಮಣಿಯಂತೆ ಹೊಳೆಯುವ ಯಮುನೆಯ ನೀರನ್ನು ಕುಡಿದ. ಬ್ರಹ್ಮನನ್ನು ಸೃಷ್ಟಿಸಿದ ಆ ಕೃಷ್ಣನು ಹಾಲಿನ ನೊರೆಯಂತೆ ಬೆಳ್ಳಗಿರುವ ಮನೋಹರವಾದ ಯಮುನೆಯ ಮರಳಿನಲ್ಲಿ ಕ್ರೀಡಿಸಿದ. ವೇದಗಳಿಂದಲೂ ಸಾಕಲ್ಯೇನ ತಿಳಿಸಲಾಗದ, ಯೋಗಿಗಳಿಗೂ ಅಚಿಂತ್ಯನಾದ, ಪ್ರಕೃತಿಗಿಂತಲೂ ಉತ್ತಮನೆನಿಸಿದ, ಸನಕಾದಿ ವಂದ್ಯನಾದ ಪರಬ್ರಹ್ಮನು ಗೋಪಾಲಕರೂಪದಿಂದ ಮಾಡುವ ಕ್ರೀಡೆಯನ್ನು ಕಾಣಲು ವಿರಕ್ತರೂ, ಲೋಕನಮಸ್ಕೃತರೂ ಆದ ಮಹರ್ಷಿಗಳು, ರಾಜರ್ಷಿಗಳೆಲ್ಲ ಶಿಷ್ಯಸಹಿತರಾಗಿ ಅಲ್ಲಿಗೆ ಬಂದರು.

ಆಗಮಿಸಿದ ಋಷಿಗಳಿಗೆಲ್ಲ ಭಕ್ತಿಯಿಂದ ಶಿರಬಾಗಿ ನಮಸ್ಕರಿಸಿದ ಶ್ರೀಕೃಷ್ಣ. ಕುಳಿತುಕೊಳ್ಳಲು ಅವರಿಗೆಲ್ಲ ದರ್ಭೆಯ ಆಸನಗಳನ್ನು ನೀಡಿದ. ಬಂದಿರುವ ಆ ಎಲ್ಲ ಬ್ರಾಹ್ಮಣರ ಪಾದಗಳನ್ನು ಭಕ್ತಿಯಿಂದ ತೊಳೆದ. ಅವರ ಪಾದಜಲವನ್ನು ತಲೆಯ ಮೇಲೆ ಧರಿಸಿದ. ಬ್ರಾಹ್ಮಣರ ಪೂಜೆಯನ್ನು ಹೀಗೆ ಮಾಡಬೇಕೆಂದು ಲೋಕಕ್ಕೆ ಕಲಿಸಿದ. ನಂತರ ಕೈಮುಗಿದು ಮಂದಸ್ಮಿತನಾಗಿ ಅವರನ್ನು ಮಾತನಾಡಿಸಿದ.

ಋಷಿವರ್ಯರೇ! ನಿಮ್ಮ ವರ್ಣಾಶ್ರಮೋಚಿತ ಧರ್ಮವು ನಿರ್ವಿಘ್ನವಾಗಿ ನಡೆಯುತ್ತಿದೆಯೇ? ಮನವು ಚಂಚಲವಾಗದೇ ಬ್ರಹ್ಮನನ್ನು ಧ್ಯಾನಿಸುತ್ತಿದೆಯೇ? ರಾಕ್ಷಸರು ನಿಮ್ಮ ತಪಸ್ಸಿಗೆ ಬಾಧೆ ನೀಡುತ್ತಿಲ್ಲವಷ್ಟೇ? ನಿಮ್ಮ ಮನವು ಕಾಮಕ್ರೋಧಗಳಿಂದ ಚಂಚಲವಾಗಿ ಪರಮಾತ್ಮನಿಂದ ದೂರ ಓಡುತ್ತಿಲ್ಲವಷ್ಟೇ? ನಿಮ್ಮ ಆಶ್ರಮದ ಮೃಗಗಳು ಕ್ಷೇಮದಿಂದಿವೆಯೇ? ತಪಸ್ಸಿನಿಂದ ಶುದ್ಧರಾದ ನಿಮ್ಮ ಹೃದಯಕಮಲದಲ್ಲಿ ಭಗವಂತನು ತೋರಿದ್ದಾನೆಯೇ? ಇಲ್ಲಿಗೆ ಬರಲು ಕಾರಣವೇನು? ನನ್ನನ್ನು ಅನುಗ್ರಹಿಸಲು ಬಂದಿರುವಿರಾ? ಶಿಷ್ಯನಾದ ನನ್ನ ಮೇಲೆ ಕೃಪೆ ಇರಲಿ. ನಿಮ್ಮ ಸೇವೆಯನ್ನೇನು ಮಾಡಲಿ. ತನ್ನ ಇಚ್ಛೆಯಿಂದಲೇ ಮನುಜನಂತೆ ರೂಪ ಧರಿಸಿರುವ ಶ್ರೀಹರಿಯ ಮಾತುಗಳಿಂದ ಆಶ್ಚರ್ಯಚಕಿತರಾದ ಆ ಋಷಿಗಳು ಕೃಷ್ಣನನ್ನು ಕುರಿತು ಮಾತನಾಡಿದನು.

**॥ ಇಲ್ಲಿಗೆ ಹದಿನೈದನೇ ಅಧ್ಯಾಯವು ಮುಗಿಯಿತು ॥**

# ಹದಿನಾರನೇ ಅಧ್ಯಾಯ

ಮುನಿಗಳು ಹೇಳಿದರು. ಹೇ ಕೃಷ್ಣನೇ! ನಿನ್ನ ಪ್ರಶ್ನೆಗೆ ಅರ್ಥವತ್ತಾದ ಉತ್ತರವನ್ನು ನೀಡಬಲ್ಲವರಾರು? ನೀನೇ ನಮಗೆ ಪರಬ್ರಹ್ಮನೂ ಗತಿಪ್ರದನೂ ಆಗಿರುವಿ. ಜಗವ ಸೃಜಿಸುವ ನೀನೇ ನಮ್ಮ ಹೃದಯಕಮಲಗಳಲ್ಲಿ ತೋರುವವನು. ನಾವು ಮಾಡಿದ ತಪಸ್ಸು ನಿನ್ನ ದರ್ಶನದಿಂದ ಸಾರ್ಥಕವಾಗಿದೆ. ನಾವು ಈಗ ಕೃತಾರ್ಥರಾಗಿದ್ದೇವೆ. ಯದುಕುಲದಲ್ಲಿ ಅವತರಿಸಿದ ಮಾಯೇಶನಾದ ಶ್ರೀಕೃಷ್ಣನಾಮಕನಾದ ನಿನ್ನ ದರ್ಶನ ಪಡೆಯಲು ಬಂದಿದ್ದೇವೆ. ಶ್ರೀಕೃಷ್ಣನ ದರ್ಶನದಿಂದ ಆನಂದತುಂದಿಲರಾದ ಮುನಿಗಳು ಹೇಳಿದರು.

ಹೀಗೆ ಮುನಿವೃಂದವು ಗೋವಿಂದನನ್ನು ಸ್ತುತಿಸುತ್ತಿರಲು ಬ್ರಹ್ಮದೇವರು ಬಂದರು. ಅಲ್ಲಿ ತಲೆಬಾಗಿ ನಿಂತರು. ಲಕ್ಷ್ಮೀಪತಿಯನ್ನು ಸ್ತುತಿಸಿದರು. ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಬ್ರಹ್ಮದೇವರು ಮತ್ತೆ ಮತ್ತೆ ಪ್ರಾರ್ಥಿಸಿದರು.

ಅದೇ ಸಮಯದಲ್ಲಿ ಅಲ್ಲಿಯ ವಾತಾವರಣವೆಲ್ಲ ಅಲ್ಲೋಲಕಲ್ಲೋಲ ವಾಯಿತು. ಗಾಳಿ ಜೋರಾಯಿತು. ವೃಕ್ಷಗಳೆಲ್ಲ ಬೀಳುವಂತೆ ಅಲುಗಾಡಿದವು. ಭಯಂಕರವಾದ ಧ್ವನಿಯು ಕೇಳಿಬಂದಿತು. ಅಲ್ಲಿಗೆ ಘಂಟಾಕರ್ಣನು ಬಂದ. ವೇಗವಾಗಿ ಫೂತ್ಕರಿಸುತ್ತಿದ್ದ. ಬೆಂಕೆಯನ್ನು ಉಗುಳುವ ಕಂಗಳು ಜಗವನ್ನೇ ಸುಡುವಂತೆ ಇದ್ದವು. ಭೀಕರವಾಗಿ ಗರ್ಜಿಸುತ್ತಿದ್ದ. ಆತನ ಸಂಗಡಿಗರೂ ಅಷ್ಟೇ ಕ್ರೂರರಾಗಿ ಇದ್ದರು. ಹೀಗೆ ಪಿಶಾಚಪರಿವಾರದೊಂದಿಗೆ ಘಂಟಾಕರ್ಣ ಅಲ್ಲಿಗೆ ಬಂದ.

ಆ ಘಂಟಾಕರ್ಣ ಪ್ರಳಯಕಾಲದ ಅಗ್ನಿಯಂತೆ ಭೀಕರನಾಗಿದ್ದ. ಆತನನ್ನು ಕಂಡ ಮುನಿಗಳೆಲ್ಲರೂ ಭೀತರಾದರು. ಅಲ್ಲಿಂದ ಓಡಲು ಅಣಿಯಾದರು. ನಂತರ ಸಕಲ ಭಯನಿವಾರಕನಾದ ಸರ್ವೇಶನು ಇಲ್ಲಿರಲು ಇನ್ನೇತರ ಭಯವೆಂದು ವಿಚಾರಿಸಿದರು. ಕೃಷ್ಣನ ಬೆನ್ನಿನ ಹಿಂದೆ ನಿಂತುಕೊಂಡರು.

ಘಂಟಾಕರ್ಣ ಅತಿ ಭಯಂಕರವಾದ ದೊಡ್ಡಗಾತ್ರದ ಶವವೊಂದನ್ನು ಕೃಷ್ಣನ ಪಾದಗಳಲ್ಲಿ ಹಾಕಿದ. ಇದು ನನ್ನ ಕಾಣಿಕೆಯೆಂದು ಹೇಳಿದ. ಪಾಪಿಯೂ, ಅಜ್ಞಾನಿಯೂ ಆದ ನನ್ನನ್ನು ಕ್ಷಮಿಸಿ ಉದ್ಧರಿಸಬೇಕೆಂದು ಬೇಡಿದ. ಭಕ್ತಿ ತುಂಬಿದ ಕಂಗಳಿಂದ ಕೃಷ್ಣನ ಪಾದಗಳಲ್ಲಿ ಬಿದ್ದು ಹೊರಳಾಡಿದ. ದಯಾಳುವಾದ ಶ್ರೀಕೃಷ್ಣನು ದಯಾಪೂರ್ಣ ದೃಷ್ಟಿಯಿಂದ ಘಂಟಾಕರ್ಣನನ್ನು ನೋಡಿ ಹೇಳಿದ.

ಶರಣಾಗತರನ್ನು ರಕ್ಷಿಸುವ ಹೊಣೆ ನನ್ನದು. ನಾನು ಭಕ್ತರ ಅಪರಾಧವನ್ನು ಕ್ಷಮಿಸುತ್ತೇನೆ. ಈ ಕಾರಣಕ್ಕಾಗಿಯೇ ಎಲ್ಲರೂ ನನ್ನನ್ನು ಭಕ್ತಾಧೀನನೆಂದು

ಕರೆಯುತ್ತಾರೆ. ಮೇಲಕ್ಕೆ ಏಳು. ನನ್ನ ಲೋಕಕ್ಕೆ ಹೊರಡು. ಎಂದು ಗಂಭೀರವಾಗಿ ನುಡಿದ.

ಘಂಟಾಕರ್ಣನು ವೇಗದಿಂದ ಎದ್ದು ಕೈಜೋಡಿಸಿ ನಿಂತ. ಎಲ್ಲ ಋಷಿಗಳ ಎದುರಿಗೆ ಕೃಷ್ಣನನ್ನು ಸ್ತುತಿಸಿದ. ಶ್ರೀಪತಿಯೇ! ನೀನು ಪ್ರೀತನಾಗಿದ್ದರೆ ನನ್ನನ್ನು ರಕ್ಷಿಸು. ಎಂದು ಪ್ರಾರ್ಥಿಸಿದ.

ಶ್ರೀಕೃಷ್ಣ ಹೇಳಿದ. ಸಕಲಲೋಕಗಳೂ ನನ್ನ ವಶದಲ್ಲಿವೆ. ನೀನು ಏಕೆ ವಿಲಂಬ ಮಾಡುತ್ತಿರುವಿ? ಯಾವ ವಿಚಾರವನ್ನೂ ಮಾಡಬೇಡ. ಪೂರ್ವಜನ್ಮದಲ್ಲಿ ನೀನು ಕಾವೇರೀಸ್ನಾನ ಮಾಡಿರುವಿ. ಭಕ್ತಿಯಿಂದ ನನ್ನ ಭಕ್ತನಾದ ಶಿವನನ್ನು ಪೂಜಿಸಿರುವಿ. ನನ್ನಲ್ಲಿಯೂ ಭಕ್ತಿಯನ್ನು ಮಾಡಿರುವಿ. ನೀನು ಮಾಡಿದ ಆ ಸತ್ಕರ್ಮಗಳಿಂದ ನಾನು ಪ್ರೀತನಾಗಿದ್ದೇನೆ. ನಿನ್ನ ಶಿವಭಕ್ತಿಯಿಂದ ನಾನು ಪ್ರೀತನಾಗಿರುವೆ. ಶಂಕರನಿಗೆ ಪ್ರಿಯನಾದವನು ನನ್ನ ಭಕ್ತನೇ ಸರಿ. ನನ್ನ ಭಕ್ತಿಯಿಂದ ಮಾತ್ರ ವೈಕುಂಠವು ದೊರಕುತ್ತದೆ. ಬೇಗನೆ ವೈಕುಂಠಕ್ಕೆ ಹೊರಡು ಎಂದು ಆಜ್ಞಾಪಿಸಿದ.

ಶ್ರೀಕೃಷ್ಣನ ಮಾತುಗಳನ್ನು ಕೇಳಿ ಘಂಟಾಕರ್ಣ ಪಾಪದ ಭಯದಿಂದ ರಹಿತನಾದ. ಮತ್ತೆ ಹೀಗೆ ನುಡಿದ. ಹೇ ಕರುಣಾನಿಧಿಯೇ! ಈ ನನ್ನ ಪರಿವಾರದವರೆಲ್ಲ ಯಾವಾಗಲೂ ನನ್ನ ಯೋಗಕ್ಷೇಮವನ್ನು ನೋಡಿಕೊಂಡಿರುವರು. ಇವರನ್ನೆಲ್ಲ ಬಿಟ್ಟು ನಾನೊಬ್ಬನೇ ಹೇಗೆ ವೈಕುಂಠಕ್ಕೆ ಹೋಗಲಿ. ದುಃಖಿತರು, ಗೆಳೆಯರು, ದಾರಿಯಲ್ಲಿ ಜೊತೆಯಾದವರು, ಮಿತ್ರರು, ಉಪಕಾರವೆಸಗಿದವರು ಹಾಗೂ ತಂದೆ, ತಾಯಿಗಳನ್ನು ಶಕ್ತನಾಗಿಯೂ ರಕ್ಷಿಸದವನು ಸೂಕರನೇ ಸರಿ. ಅಂಥವನ ಘೋರವಾದ ಜೀವನಕ್ಕೆ ಧಿಕ್ಕಾರವಿರಲಿ. ಆತನ ವಿದ್ಯೆಯೆಲ್ಲ ವ್ಯರ್ಥವೇ ಸರಿ. ಕೇವಲ ತನ್ನ ಹೊಟ್ಟೆ ತುಂಬಿಕೊಳ್ಳಲು ಬದುಕಿದವನು ಮೃತನಾದ ಮೇಲೆ ಪರಲೋಕದಲ್ಲಿ ತನ್ನ ಮಾಂಸವನ್ನೇ ತಿನ್ನಬೇಕಾಗುವುದು. ಹೀಗಾಗಿ ಇವರೊಂದಿಗೆಯೇ ನಾನು ಮುಕ್ತಿಗೆ ಹೋಗಬೇಕು. ಎಂದು ಹೇಳಿದ.

ಘಂಟಾಕರ್ಣನ ಮಾತುಗಳಿಂದ ಶ್ರೀಕೃಷ್ಣ ಪ್ರೀತನಾದ. ಎಲ್ಲರನ್ನೂ ಅನುಗ್ರಸುತ್ತಾ ಹೇಳಿದ. ಘಂಟಾಕರ್ಣನೇ! ನಾನು ಪ್ರೀತನಾಗಿದ್ದೇನೆ. ನೀನು ಈ ಎಲ್ಲ ಪರಿವಾರ ಸಹಿತವಾಗಿ ನನ್ನ ಲೋಕಕ್ಕೆ ತೆರಳು ಎಂದ. ಭಕ್ತಪ್ರಿಯನಾದ ಭಗವಂತನು ಹೀಗೆ ಹೇಳಲು ಘಂಟಾಕರ್ಣನು ಪಿಶಾಚದೇಹವನ್ನು ತ್ಯಜಿಸಿದ. ತನ್ನೆಲ್ಲ ಪರಿವಾರದಿಂದ ಸಹಿತನಾಗಿ, ದಿವ್ಯವಾದ ದೇಹವನ್ನು ಪಡೆದು ಮುಕ್ತಿಯತ್ತ ಪ್ರಯಾಣ ಮಾಡಿದ.

ಘಂಟಾಕರ್ಣನ ಪರಿವಾರಕ್ಕಾಗಿ ದಿವ್ಯವಾದ ವಿಮಾನವೇ ಅಲ್ಲಿಗೆ ಬಂದು ಇಳಿದಿತ್ತು. ಅದರಲ್ಲಿ ಕುಳಿತ. ನೋಡುತ್ತಿರುವ ಋಷಿಗಳನ್ನು ದೇವತೆಗಳನ್ನು

ನಮಸ್ಕರಿಸಿ ಶ್ವೇತದ್ವೀಪಕ್ಕೆ ತೆರಳಿದ. ನಿಂತಲ್ಲಿ, ಹೊರಟಾಗ, ಮಲಗಿದಾಗ, ಉಣ್ಣುವಾಗ, ಪೂಜಿಸುವಾಗ ಹೀಗೆ ನಿರಂತರ ದ್ವೇಷಮಾಡಿದ್ದ. ಆದರೂ ಕೊನೆಗೆ ವಿಷ್ಣುವಿನಲ್ಲಿ ಭಕ್ತಿಯನ್ನು ಮಾಡಿದ. ಮುಕ್ತಿಯನ್ನು ಪಡೆದ.

ಭಗವಂತನ ಈ ಮಾಯಾವೈಭವವನ್ನು ಬ್ರಹ್ಮದೇವರು ನೋಡಿದರು. ಲಜ್ಜಿತರಾದರು. ಶ್ರೀಕೃಷ್ಣನಿಗೆ ಪ್ರದಕ್ಷಿಣೆ-ನಮಸ್ಕಾರಗಳನ್ನು ಮಾಡಿದರು. ಪುನಃ ಪುನಃ ಶ್ರೀಕೃಷ್ಣನನ್ನು ಸ್ತುತಿಸಿದರು.

**॥ ಇಲ್ಲಿಗೆ ಹದಿನಾರನೇ ಅಧ್ಯಾಯವು ಮುಗಿಯಿತು ॥**

★★★

# ಹದಿನೇಳನೇ ಅಧ್ಯಾಯ

ದೇವದೇವನಾದ ಶ್ರೀಕೃಷ್ಣನನ್ನು ಸ್ತುತಿಸಿದ ಬ್ರಹ್ಮದೇವರು ಹಂಸವನ್ನೇರಿ ತಮ್ಮ ಲೋಕಕ್ಕೆ ತೆರಳಿದರು. ಅಲ್ಲಿ ನೆರೆದ ಮುನಿಗಳೆಲ್ಲ ಕೃಷ್ಣನ ಅತಿಮಾನುಷವಾದ ಲೀಲೆಯನ್ನು ಕಂಡು ವಿಸ್ಮಿತರಾದರು. ದಧಿಪಾಲನು ಕೇಳಿದನು.

ಹೇ ಕೃಷ್ಣನೇ! ನಿನ್ನ ದ್ವೇಷವನ್ನು ಮಾಡಿಯೂ ಘಂಟಾಕರ್ಣನು ಮುಕ್ತಿಯನ್ನು ಹೊಂದಿದ ಈ ವಿಷಯ ಮೋಹಕವಾಗಿದೆ. ಯುಕ್ತಿವಿರುದ್ಧ ಎನಿಸುತ್ತದೆ. ಈ ವಿಷಯವನ್ನು ಸರಿಯಾಗಿ ಸ್ಪಷ್ಟವಾಗಿ ತಿಳಿಸಿ ಹೇಳಬೇಕು.

ಶ್ರೀಕೃಷ್ಣ ಹೇಳಿದ. ಮಿತ್ರನೇ! ನೀನು ಶ್ರದ್ಧಾವಂತನಾಗಿರುವಿ. ನಿನ್ನ ಪ್ರಶ್ನೆಗೆ ವಿಶದವಾಗಿ ಉತ್ತರ ನೀಡುತ್ತೇನೆ. ಶ್ರದ್ಧೆಯಿಂದ ಕೇಳು.

ತಮ್ಮ ಅಧಿಕಾರಕ್ಕೆ ಯೋಗ್ಯವಾದ ಉಪಾಸನೆಯಿಂದ ಎಲ್ಲ ಜೀವರೂ ಮುಕ್ತರಾಗುತ್ತಾರೆ. ನನ್ನ ಭಕ್ತರು ಕಾಮನೆಗಳನ್ನು ತೊರೆದವರಾಗಿ ಎಲ್ಲೆಡೆ ನನ್ನನ್ನು ಕಾಣುತ್ತ ಮುಕ್ತರಾಗುವರು. ಯೋಗಿಶ್ರೇಷ್ಠರು ಭಕ್ತಿಜ್ವಲಿತವಾದ ತತ್ವಜ್ಞಾನವನ್ನು ಪಡೆದು ಮುಕ್ತರಾಗುವರು. ಶುದ್ಧವಾದ ವೈರಾಗ್ಯದಿಂದ ಯುಕ್ತನಾಗಿ ಭಕ್ತಿಯಿಂದ ನನ್ನನ್ನು ಆಶ್ರಯಿಸಿದವನು ನನ್ನನ್ನೇ ಹೊಂದುತ್ತಾನೆ. ಇದಕ್ಕೊಂದು ಇತಿಹಾಸವನ್ನು ಹೇಳುತ್ತೇನೆ. ಕೇಳುಗರ ಸಕಲ ಪಾಪಗಳನ್ನಳಿದು ಅವರ ಎಲ್ಲ ಕಾಮನೆಗಳನ್ನು ಪೂರೈಸುವ ಇತಿಹಾಸವಿದು. ಶ್ರದ್ಧೆಯಿಟ್ಟು ಕೇಳು.

ಹಿಂದೆ ನೃಮೇಧ ಹಾಗೂ ಪರುಚ್ಛೇಪ ಎಂಬ ಇಬ್ಬರು ಶ್ರೇಷ್ಠರಾದ ಬ್ರಾಹ್ಮಣರಿದ್ದರು. ಇಬ್ಬರೂ ಒಂದೆಡೆ ವಾಸವಾಗಿದ್ದರು. ಅವರಿಬ್ಬರೂ ದೇವತೆಗಳಂತೆ ತೇಜಸ್ವಿಗಳು. ತತ್ವಜ್ಞಾನದಲ್ಲಿ ಅಭಿರುಚಿಯುಳ್ಳವರು. ಅವರಲ್ಲಿ ಶ್ರುತಿ-ಸ್ಮೃತಿಗಳನ್ನು ಚೆನ್ನಾಗಿ ಬಲ್ಲ ನೃಮೇಧ ಕರ್ಮನಿಷ್ಠನಾಗಿದ್ದ.

ಪರುಚ್ಛೇಪ ಬ್ರಹ್ಮನಿಷ್ಠನಾಗಿದ್ದ. ನಿತ್ಯದಲ್ಲೂ ವಿಷ್ಣು-ವೈಷ್ಣವರನ್ನು ಪೂಜಿಸುತ್ತ ಧನುರ್ಮಾಸದ ಉಷಃಕಾಲದಲ್ಲಿ ಮುದ್ಗಾನ್ನವನ್ನು ನಿವೇದಿಸುತ್ತಿದ್ದ. ನಿತ್ಯದಲ್ಲೂ ತುಲಸಿಯನ್ನು, ದೇವ-ಬ್ರಾಹ್ಮಣರನ್ನು ಪೂಜಿಸುತ್ತಿದ್ದ. ಅವನು ಭೃಗುಋಷಿಗಳ ಶಿಷ್ಯನೆನಿಸಿದ್ದ.

ಅವರಿಬ್ಬರೂ ಸಕಲಶಾಸ್ತ್ರಗಳನ್ನು ಬಲ್ಲವರಾಗಿದ್ದರು. ಅವರಿಗೆ ತತ್ವಜ್ಞಾನವನ್ನು ಬೋಧಿಸುವ ಮನುಜನು ಪ್ರಪಂಚದಲ್ಲೇ ಇರಲಿಲ್ಲ. ಒಂದೊಮ್ಮೆ ಬ್ರಹ್ಮಜ್ಞಾನದ ವಿಷಯದಲ್ಲಿ ಅವರಿಬ್ಬರಿಗೆ ದೊಡ್ಡ ವಿವಾದವಾಯಿತು. ಮುಕ್ತಿಸಾಧನವಾದುದು ತತ್ವಜ್ಞಾನವೋ ಅಥವಾ ವಿಷ್ಣುಭಕ್ತಿಯೋ ಎಂಬುದೇ ಆ ವಿವಾದಕ್ಕೆ ವಿಷಯ ವಾಯಿತು.

ವಿಷ್ಣುಭಕ್ತನಾದವನೇ ವಿಷ್ಣುಮಾಯೆಯನ್ನು ದಾಟುತ್ತಾನೆ. ಭಕ್ತಿಯಿಂದ ತತ್ವಜ್ಞಾನವು ಸಿದ್ಧಿಸುತ್ತದೆ. ಆ ತತ್ವಜ್ಞಾನದಿಂದಲೇ ಮುಕ್ತಿಯಾಗುತ್ತದೆಂದು ಕರ್ಮ-ನಿಷ್ಠನಾದ ನೃಮೇಧ ಹೇಳಿದ.

ಪರುಚ್ಛೇಪ ಹೇಳಿದ. ಭಗವಂತ ಸರ್ವಸಾಕ್ಷಿಯಾಗಿದ್ದಾನೆ. ಸರ್ವಸಂಗರಹಿತ-ನಾಗಿದ್ದಾನೆ. ಅಂಥ ವಿಷ್ಣುವಿನ ಜ್ಞಾನವನ್ನು ಶಾಸ್ತ್ರಗಳಿಂದ ಮಾಡಿಕೊಳ್ಳಬೇಕು. ಶುದ್ಧವಾದ ವೈರಾಗ್ಯ, ನಿರಂತರವಾದ ಶಾಸ್ತ್ರಶ್ರವಣಗಳಿಂದ ಈ ತತ್ವಜ್ಞಾನದ ಅಭಿವೃದ್ಧಿಯಾಗುತ್ತದೆ. ತತ್ತ್ವಜ್ಞಾನದಿಂದ ಪರಿಶುದ್ಧವಾದ ಭಕ್ತಿಯು ಸಂಪನ್ನವಾಗುತ್ತದೆ. ಪರಿಪಕ್ವವಾದ ಭಕ್ತಿಯಿಂದಲೇ ಮುಕ್ತಿಯು ಸಂಪನ್ನವಾಗುತ್ತದೆ.

ಪರುಚ್ಛೇಪನ ಈ ಮಾತುಗಳನ್ನು ಕೇಳಿದ ನೃಮೇಧನು ಅಪಹಾಸ ಮಾಡುತ್ತಾ ಹೇಳಿದ. ಸತ್ಕರ್ಮಗಳು, ಭಕ್ತಿ ಇವೆಲ್ಲವೂ ಜ್ಞಾನಕ್ಕೆ ಕಾರಣವಾಗಿವೆ. ಜ್ಞಾನದಿಂದಲೇ ಮುಕ್ತಿಯು ದೊರೆಯುತ್ತದೆಂದು ಹೇಳಿದ.

ಶಾಸ್ತ್ರದಲ್ಲಿ ಆಪಾತತಃ ತೋರುವ ವಿಷಯವನ್ನೇ ವಾಸ್ತವ ಎಂದು ನೃಮೇಧ ತಿಳಿದಿದ್ದ. ಅಲ್ಲದೇ ನೃಮೇಧನು ಅಪಹಾಸ ಮಾಡುತ್ತಾ ಪರುಚ್ಛೇಪನನ್ನು ಅವಮಾನಿಸಿದ. ಆದರೇ ಆ ಅವಮಾನವನ್ನು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ ಪರುಚ್ಛೇಪ. ದೇವರನ್ನು ಸರಿಯಾಗಿ ತಿಳಿದವರು ಮಾನಾವಮಾನಗಳನ್ನು ಲೆಕ್ಕಿಸುವುದಿಲ್ಲ. ಮತ್ತು ನೃಮೇಧನನ್ನು ಕುರಿತು ಹೇಳಿದ.

ಶಾಸ್ತ್ರಗಳಲ್ಲಿ ಮೇಲೆ ಮೇಲೆ ತೋರುವ ಅರ್ಥದಲ್ಲೇ ನಿನ್ನ ಮನಸ್ಸಿದೆ. ಅದರಿಂದ ಸಂದೇಹಯುಕ್ತನಾಗಿ ನನ್ನನ್ನು ಧಿಕ್ಕರಿಸುತ್ತಿರುವೆ. ನಿನ್ನ ಜ್ಞಾನವೆಲ್ಲ ವ್ಯರ್ಥವೇ ಸರಿ. ನೀನು ಜೀವಾಭೇದವನ್ನು ಹೇಳುತ್ತಿರುವಿ. ಆದ್ದರಿಂದ ನಿನ್ನ ದೃಷ್ಟಿಯಲ್ಲಿ ನಾನು ನೀನು ಒಂದೇ. ಹೀಗಾಗಿ ನನ್ನನ್ನು ಅವಮಾನಿಸಿದ ದೋಷವು ನಿನಗೂ ಸೇರುತ್ತದೆ.

ನೀನು ಕೂಡಾ ಭಗವನ್ನಿಷ್ಠನಾಗಿರುವಿ. ಆದರೇ ಪ್ರಕೃತ ವಿಷ್ಣುವಿನ ಮಾಯೆಯಿಂದ ಆವೃತನಾಗಿರುವಿ. ಹೀಗಾಗಿ ನಿನ್ನ ಬುದ್ಧಿಯು ಚಂಚಲವಾಗಿದೆ. ತತ್ವವನ್ನು ನಿರ್ಧರಿಸಲು ಸಮರ್ಥವಾಗಿಲ್ಲ. ಭಗವಂತನೇ ಹೇಳಿದ ತತ್ವದಲ್ಲಿ ನಿನಗೆ ನಿಶ್ಚಯವಿಲ್ಲ.

ಮೃದುವೂ ಗಂಭೀರವೂ ಆದ ಆ ಮಾತುಗಳನ್ನು ಕೇಳಿ ತನ್ನ ಕಠೋರ ವಚನದಿಂದ ಲಜ್ಜಿತನಾಗಿ ನೃಮೇಧನು ನಸುನಗುತ್ತ ಮಾತನಾಡಿ ಭಗವಂತನು ಹೇಳಿದ ತತ್ವವನ್ನು ಯಥಾವತ್ತಾಗಿ ಹೇಳುವಂತೆ ಪ್ರಾರ್ಥಿಸಿದನು. ತತ್ವಶಾಸ್ತ್ರಗಳಲ್ಲಿ ಹೇಳಿದುದನ್ನು ಯೋಗೀಂದ್ರರಿಗೂ ಸಮ್ಮತವಾಗುವಂತೆ ಹೇಳಬೇಕು. ವೇದಾಂತದ ಜ್ಞಾನದಿಂದ ಶುದ್ಧಮನಸ್ಸನ್ನು ಹೊಂದಿದ ನಾರದರೇ ಮೊದಲಾದ ಯೋಗಿಗಳು ಸಾತ್ವಿಕವಾದ ಭಕ್ತಿಯನ್ನು ಹೊಂದಿ ಜೀವನ್ಮುಕ್ತರೆನಿಸಿದರು. ಭಕ್ತಿಸಾಧನವಾದ ಉಪನಿಷದ್ವಾಕ್ಯಗಳೇ ಈ ವಿಷಯದಲ್ಲಿ ಪ್ರಮಾಣವೆನಿಸಿವೆ. ಈ ಉಪನಿಷತ್ತುಗಳು ಹಾಗೂ ಶ್ರುತಿಗಳ ಅರ್ಥವನ್ನು ಚೆನ್ನಾಗಿ ನಿರ್ಣಯಿಸಿ ಹೇಳಿರಿ. ಎಂದೆನ್ನಲು, ಗೆಳೆಯನೇ! ನಿನ್ನ ಈ ವಾದವು ಕಂಠ ಶೋಷಣೆಯೇ ಸರಿ. ಇದು ನೂರಾರು ವರ್ಷಗಳಾದರೂ ಮುಗಿಯುವುದಿಲ್ಲ. ''ಯತೋ ವಾಚೋ ನಿವರ್ತಂತೇ'' ಎಂಬ ಶ್ರುತಿಯ ಅರ್ಥವನ್ನು ಸ್ಮರಿಸು. ''ವಿಷ್ಣೋರ್ನು ಕಮ್'' ಎಂಬ ಶ್ರುತಿಯ ಅರ್ಥ ಹಾಗೂ ''ವಿಷ್ಣೋಃ ಕರ್ಮಾಣಿ'' ಇತ್ಯಾದಿ ವಾಕ್ಯಗಳು ಹಾಗೂ ವಿಧಿವಾಕ್ಯಗಳನ್ನು ಸ್ಮರಿಸು. ''ವೇದಾಹಮೇತಂ ಪುರುಷಂ ಮಹಾಂತಮ್'' ಎಂಬ ಶ್ರುತಿಯ ಅರ್ಥವು ಸುಳ್ಳಾಗಬೇಕಾದೀತು. ಹೀಗೆ ಹೇಳಿದ ಪರುಚ್ಛೇಪನ ಮಾತನ್ನು ಕೇಳಿ ವಾಕ್ಯಾರ್ಥ ಕೋವಿದನಾದ ಮಹಾಜ್ಞಾನಿಯಾದ ನೃಮೇಧನು ನಗುತ್ತ ಹೇಳಿದನು. ಈ ವಿವಾದದ ನಿರ್ಣಯಕ್ಕಾಗಿ ನಾವಿಬ್ಬರೂ ಎಲ್ಲಿಗೆ ಹೋಗೋಣ? ವೇದಗಳ ತತ್ವವನ್ನು ತಿಳಿದೂ ಕೂಡ ಕಲಹ ಮಾಡಿದರೆ ಏನು ಉತ್ತರ? ನಾವೇ ವೇದಗಳನ್ನು ಚೆನ್ನಾಗಿ ಅರಿತವರು. ನಮಗೆ ಮಧ್ಯಸ್ಥನಾಗುವ ಮಹಾಜ್ಞಾನಿ ಯಾರು? ಹಿರಣ್ಯಗರ್ಭರೆಂದು ಪ್ರಸಿದ್ಧರಾದ ಚತುರ್ಮುಖ ಬ್ರಹ್ಮದೇವರು ಜಗತ್ತಿಗೆ ಜನಕರು. ಅವರು ಇಂದ್ರಿಯಗಳನ್ನು ಗೆದ್ದವರೆಂದು ಖ್ಯಾತರು. ಅವರ ಪತ್ನಿಯಾದ ಸರಸ್ವತೀದೇವಿಯು ಜಗತ್ತಿಗೇ ತಾಯಿಯೆನಿಸಿದ್ದಾರೆ. ನಾವಿಬ್ಬರೂ ಈ ವಿವಾದದ ನಿರ್ಣಯಕ್ಕಾಗಿ ಶೀಘ್ರದಲ್ಲೇ ಅವರಲ್ಲಿಗೆ ಹೋಗೋಣ. ಅಲ್ಲಿ ನಿಶ್ಚಿತವಾಗಿ ಎಲ್ಲವೂ ಸ್ಪಷ್ಟವಾಗುವುದು ಎನ್ನಲು ಪರುಚ್ಛೇಪನು ನಮ್ಮೀವಿವಾದ ನಿರ್ಣಯಕ್ಕಾಗಿ ಬ್ರಹ್ಮದೇವರನ್ನು ಅಂಗೀಕಾರ ಮಾಡಿರುವೆ. ಈಗ ಶಾಶ್ವತ ಧರ್ಮವು ತಿಳಿಯಲ್ಪಡುವುದು ಹಾಗೂ ಇದರಿಂದ ಲೋಕಕ್ಕೆ ಯಾವಾಗಲೂ ಮಂಗಲವಾಗುವುದು. ಎಲ್ಲ ಯೋಗಿಗಳು, ಎಲ್ಲ ಮುನಿಗಳು ಜಗತ್ತಿಗೆ ನಿಯಾಮಕರೂ, ಗುರುಗಳೂ ಆದ (ವಿಷ್ಣು, ಲಕ್ಷ್ಮಿಯರ ನಂತರದ ಅಮುಖ್ಯ ನಿಯಾಮಕರು, ಗುರುಗಳು) ಬ್ರಹ್ಮದೇವರನ್ನು ಚೆನ್ನಾಗಿ

ಉಪಾಸನೆ ಮಾಡುವರು. ಗಹನವಾದ ನಮ್ಮೀ ವಿವಾದವು ಅಲ್ಲಿಯೇ ನಿರ್ಣಯವಾಗಲಿ. ಹೀಗೆಂದು ನುಡಿದು ಪರುಚ್ಛೇಪನು ನೃಮೇಧನ ಕೈಯನ್ನು ಹಿಡಿದುಕೊಂಡನು. ಹೀಗೆ ನಿಶ್ಚಯಿಸಿ ಆ ಇಬ್ಬರು ಗೃಹಸ್ಥಾಶ್ರಮಿಗಳಾದ ಬ್ರಾಹ್ಮಣರು ಎಲ್ಲರಿಂದಲೂ ನಮಸ್ಕೃತವಾದ ಬ್ರಹ್ಮಲೋಕಕ್ಕೆ ಪಯಣಿಸಿದರು. ಅಲ್ಲಿ ಅಷ್ಟ ದಿಕ್ಪಾಲಕರು ಹಾಗೂ ಮನುವೇ ಮುಂತಾದ ಸ್ಮೃತಿಕಾರರಿಂದ ಸಹಿತರಾಗಿ ಸಭಾಮಧ್ಯದಲ್ಲಿ ಮಾರ್ಕಂಡೇಯರು ಹೇಳುತ್ತಿರುವ ಶತಕೋಟಿ ವಿಸ್ತಾರವಾದ ರಾಮಕಥೆಯನ್ನು ಸತತವಾಗಿ ಕೇಳುತ್ತಿರುವ ಮುಂಜಾವಿನ ನೇಸರನಂತೆ ಕಂಗೊಳಿಸುತ್ತಿರುವ ಬ್ರಹ್ಮದೇವರಿಗೆ ನಮಸ್ಕರಿಸಿ ತಮ್ಮಿಬ್ಬರ ಅನಿಂದಿತವಾದ ವಿಚಾರಗಳನ್ನು ತಿಳಿಸಿದರು. ಮಹಾತ್ಮರಾದ ಅವರಿಬ್ಬರ ವಾದವನ್ನು ತಿಳಿದ ಬ್ರಹ್ಮದೇವರು ಅವರ ವಾದ ಸಂಭ್ರಮವನ್ನು ಕಂಡು ಆಶ್ಚರ್ಯದಿಂದ ನಸುನಕ್ಕರು. ಸಭೆಯಲ್ಲಿದ್ದ ದೇವತೆಗಳು, ಮುನಿಗಳು, ಈ ವಿವಾದದ ಶಾಂತಿಗೋಸುಗ ವೇದಾಂತದ ಅರ್ಥವನ್ನು ಚಿಂತಿಸತೊಡಗಿದರು. ಆಗ ಅಗಸ್ತ್ಯರೇ ಮೊದಲಾದ ಮಹರ್ಷಿಗಳನ್ನು ಕುರಿತು ಬ್ರಹ್ಮದೇವರು ಹೇಳಿದರು. ನೀವು ಕೈಲಾಸಪರ್ವತಕ್ಕೆ ನಡೆಯಿರಿ. ಅಲ್ಲಿ ರುದ್ರದೇವರಿದ್ದಾರೆ. ಅವರೊಂದಿಗೆ ಸಮಾಲೋಚನೆ ಮಾಡಿ ಶ್ರುತಿ-ಸ್ಮೃತಿ-ಪುರಾಣಗಳಿಂದ ನಿರ್ಣಯಿಸಲ್ಪಟ್ಟ ಉತ್ತಮ ತತ್ವಗಳನ್ನು ನಿಶ್ಚಯಿಸಿಕೊಳ್ಳಿ. ಹಿಂದೆ ಆ ಎಲ್ಲ ತತ್ವವನ್ನು ಜಗನ್ಮಯನಾದ ಮಹಾದೇವನು ಅರಿತಿದ್ದಾನೆ ಎಂದರು. ಎಲ್ಲ ತತ್ವಗಳನ್ನು ಅರಿತ ಮಹಾದೇವನು ನಮಗೆ ತತ್ವವನ್ನು ನಿಶ್ಚಯಿಸಿ ಹೇಳುವರು ಎಂದು ನಿರ್ಣಯಿಸಿಕೊಂಡ ಋಷಿಗಳು ಸೂತರನ್ನು ಪ್ರಾರ್ಥಿಸಿದರು. ಹೇ ಸೂತರೇ! ನೀವು ವ್ಯಾಸ ಶಿಷ್ಯರಲ್ಲಿ ಅಗ್ರಗಣ್ಯರೆನಿಸಿದವರು. ಎಲ್ಲವನ್ನು ಅರಿತವರು. ಭಗವಂತನಾದ ವಿಷ್ಣುವು ಯಾವ ಕಾಲದಲ್ಲಿ ರುದ್ರದೇವರಿಗೆ ಗೀತಾರ್ಥವನ್ನು ಉಪದೇಶ ಮಾಡಿದನು. ರುದ್ರದೇವರು ಗೀತೋಪದೇಶವನ್ನು ಏಕೆ ಪಡೆಯಬೇಕಾಯಿತು? ಎಂದು ಕೇಳಿದರು. ಹೀಗೆ ಕೇಳಲು ಸೂತರು ಹೇಳಿದರು. ಹೇ ಮುನಿಗಳೇ! ರುದ್ರದೇವರು ಏನು ಮಾಡಿದರೆಂಬುದನ್ನು ನೀವೆಲ್ಲ ಕೇಳಿರಿ. ಭಗವಂತನ ಮಾಯೆಯು ಯೋಗಿಗಳಿಗೂ ಮೋಹಕವಾದುದು. ಸಜ್ಜನರ ಸಹವಾಸವು ಮುಕ್ತಿಗೆ ಕಾರಣವೆನಿಸಿದರೆ, ಅಯೋಗ್ಯರ ಸಹವಾಸವು ಬಂಧಕ್ಕೆ ಕಾರಣವಾಗುವುದು. ಯೋಗಿಗಳೂ ಕೂಡ ಮುಕ್ತಿಗಾಗಿ ಸತ್ಸಂಗವನ್ನೇ ಮಾಡುವರು. ಶಂಕರನು ಸಹವಾಸದಿಂದ ಮನೋವಿಕಾರವನ್ನು ಹೊಂದಿದನು. ಮಹಾವಿಷ್ಣುವಿನ ಸದುಪದೇಶದಿಂದ ಶುದ್ಧವಾದ ಮನಸ್ಸುಳ್ಳವನಾದನು.

**॥ ಇಲ್ಲಿಗೆ ಹದಿನೇಳನೇ ಅಧ್ಯಾಯವು ಮುಗಿಯಿತು ॥**

***

# ಹದಿನೆಂಟನೇ ಅಧ್ಯಾಯ

ಶೌನಕಾದಿ ಋಷಿಗಳೆಲ್ಲ ಪ್ರಾರ್ಥಿಸಿದರು. ಹೇ ಸೂತರೇ! ಲೋಕಕ್ಕೆ ಮಂಗಳಪ್ರದನೆನಿಸಿದ ಶಂಕರನು ವಿಷ್ಣುವಿನ ಉಪದೇಶದಿಂದ ಹೇಗೆ ಶುದ್ಧಸತ್ವನೆನಿಸಿದನು? ಎಂದು ಕೇಳಲು ಸೂತರು ಹೇಳಿದರು. ಹಿಂದೆ ತ್ರಿಪುರ-ಸಂಹಾರ ಸಮಯದಲ್ಲಿ ಎಲ್ಲ ದೇವತೆಗಳ ಸಾಮರ್ಥ್ಯದಿಂದ ಕೂಡಿದ ಧನುಸ್ಸನ್ನು ದೇವತೆಗಳ ರಕ್ಷಣೆಗಾಗಿ ವಿಷ್ಣುವು ನಿರ್ಮಿಸಿ ಕೊಟ್ಟನು. ಹಾಗೆಯೇ ಎಲ್ಲ ದೇವತೆಗಳ ಹಾಗೂ ತನ್ನ ಸಾಮರ್ಥ್ಯದಿಂದ ಕೂಡಿದ ಕೋಟಿಸೂರ್ಯ ಪ್ರಕಾಶದಿಂದ ಯುಕ್ತವಾದ, ದೇವತೆಗಳಿಂದಲೂ ನಿವಾರಿಸಲಾಗದ ಬಾಣವನ್ನು ನಿರ್ಮಿಸಿದನು. ಆ ಬಾಣದಿಂದ ತ್ರಿಪುರದ ವಾಸಿಗಳನ್ನೆಲ್ಲ ಸಂಹಾರ ಮಾಡಿದ ರುದ್ರದೇವರು ತ್ರಿಪುರಗಳನ್ನು ಬೂದಿಯ ರಾಶಿಯನ್ನಾಗಿಸಿದರು. ಲೋಕಗಳನ್ನು ರಕ್ಷಿಸಿ, ವೇದ ಮಂತ್ರಗಳಿಂದ ಹಾಗೂ ದೇವತೆಗಳಿಂದ ಸ್ತುತ್ಯರಾದ ರುದ್ರದೇವರು ತಮ್ಮ ಸಾಮರ್ಥ್ಯವನ್ನು ಕಂಡು ತಾವೇ ಅಚ್ಚರಿ ಹೊಂದಿದರು. ಮೂರು ಲೋಕಗಳಲ್ಲಿ ತಮ್ಮ ತೇಜಸ್ಸಿನಿಂದ ಪ್ರಕಾಶಮಾನರಾಗಿ ಶೋಭಿಸಿದರು.

ಇದೇ ಸಮಯದಲ್ಲಿ ದಕ್ಷಪ್ರಜಾಪತಿಯು ತನ್ನ ಯಜ್ಞದಲ್ಲಿ ರುದ್ರದೇವರಿಗೆ ಯಜ್ಞಭಾಗವನ್ನು ನೀಡದೇ ಅವಮಾನಿಸಿದನು. ತನಗೆ ಹವಿಸ್ಸನ್ನು ನೀಡದ ಯಜ್ಞವನ್ನು ಕಂಡು ರುದ್ರದೇವರು ಉಗ್ರಕೋಪದಿಂದ ಆ ಧನುಸ್ಸನ್ನು ಹೆದೆಯೇರಿಸಿದರು. ಯಜ್ಞದಲ್ಲಿ ನನಗೆ ಭಾಗವನ್ನು ಕಲ್ಪಿಸದ ಕಾರಣದಿಂದ ನೀವೆಲ್ಲ ದೇವತೆಗಳು ನಾಶಹೊಂದುವಿರಿ. ಇದರಲ್ಲಿ ಸಂದೇಹವಿಲ್ಲ. ನನ್ನ ಪರಾಕ್ರಮವನ್ನು ನೋಡಿರಿ. ಹೀಗೆ ಬಿರುನುಡಿಗಳನ್ನಾಡುತ್ತ ರುದ್ರದೇವರು ವೈದಿಕವಾದ ಧನುಸ್ಸನ್ನೆತ್ತಿ ಲೋಕಗಳನ್ನೆಲ್ಲ ನಾಶಮಾಡುವಂತೆ ಬಿಲ್ಲಿನ ಹಗ್ಗವನ್ನೆಳೆದು ಶಬ್ದ ಮಾಡಿದರು. ಆ ಶಬ್ದದಿಂದ ಸಂತ್ರಸ್ತರಾದ, ಪಿತೃಗಳು, ಚಾರಣರು, ಹಾಹಾಕಾರ ಮಾಡಿದರು. ಚರಾಚರಾತ್ಮಕ ಪ್ರಪಂಚವೆಲ್ಲ ಕ್ಷೋಭೆಗೊಂಡಿತು. ದೇವತೆಗಳು, ಸಿದ್ಧರು, ಚಾರಣರು, ಗುಹ್ಯಕರು, ವಿದ್ಯಾಧರರು, ನಾಗರು, ಗಂಧರ್ವರು, ಅಪ್ಸರೆಯರು ಮೊದಲಾದವರೆಲ್ಲ ರಕ್ಷಿಸು ಎಂದೊರಲುತ್ತ ಕೇಶವನಿಗೆ ಶರಣು ಹೋದರು. ಆಗ ಅಂತರಿಕ್ಷದಲ್ಲೊಂದು ಅಶರೀರವಾಣಿ ನುಡಿಯಿತು. ಹೇ ದೇವೋತ್ತಮನೇ! ನೀನು ಮಹಾಸಾಮರ್ಥ್ಯವುಳ್ಳ ಜಗತ್ಪತಿಯು. ಅಜ್ಞಾನಿಯಂತೆ ಹೇಗೆ ಕೋಪಿಸಿಕೊಳ್ಳುತ್ತಿ-ರುವೆ? ನಿನ್ನ ಕೋಪವನ್ನು ಉಪಸಂಹಾರ ಮಾಡು. ಶತ್ರುಗಳಲ್ಲೂ ಕರುಣೆದೋರುವ ನೀನೇ ಕುಪಿತನಾದರೆ ಅಜ್ಞಾನಿಗಳಾದ ಈ ಪ್ರಾಣಿಗಳೆಲ್ಲ ಯಾರನ್ನು ಶರಣು ಹೊಂದುವವು? ಹೀಗೆ ನುಡಿದ ಆಕಾಶವಾಣಿಯನ್ನು ಕೇಳಿ ಶಂಕರನು ಸ್ವಲ್ಪ ಶಾಂತನಾದರೂ ಘೋರವಾದ ಧನುರ್ಬಾಣಗಳನ್ನು ಹಿಂತೆಗೆಯಲಿಲ್ಲ.

ಅದೇ ಸಮಯಕ್ಕೆ ಸರಿಯಾಗಿ ಉರಿವ ಅಗ್ನಿಯಂತೆ ಕಂಗೊಳಿಸುವ ಕೆಂಪು ಜಟೆಯಿಂದ ಕೂಡಿದ, ಯೋಗಶಾಸ್ತ್ರಪ್ರವರ್ತಕನು, ಯೋಗಿಗಳಿಗೆ ಗುರುವೆನಿಸಿದ-ವನೂ, ಭಕ್ತ ವಶ್ಯನೂ ಆದ, ದೇವತೆಗಳಿಗೂ ಜ್ಞಾನ-ಮುಕ್ತಿಗಳನ್ನು ದಯಪಾಲಿಸುವ ದತ್ತಾತ್ರೇಯನು ಅಲ್ಲಿಗೆ ಆಗಮಿಸಿದನು. ದತ್ತಾತ್ರೇಯನನ್ನು ಕಂಡು ರುದ್ರದೇವರು ಬಿಲ್ಲನ್ನು ಕೈಬಿಟ್ಟು ವಿನಯದಿಂದ ಕೈಜೋಡಿಸಿ ಮಾತನಾಡಿದರು. ಹೇ ಜಗದ್ಗುರುವೇ! ನಾರಾಯಣನೇ! ನಿನ್ನ ದರುಶನದಿಂದ ನಾನು ಶುದ್ಧನೂ ಕೃತಾರ್ಥನೂ ಆಗಿರುವೆ. ನಿನ್ನ ದರುಶನವಾದ ಈ ದಿನವೇ ಶುಭದಿನವು. ಇದು ನನ್ನ ಪುಣ್ಯದ ಫಲವೇ ಸರಿ. ನನ್ನ ಕಣ್ಣುಗಳು ಸಾರ್ಥಕವಾದವು. ಎನ್ನುತ್ತ ಅರ್ಘ್ಯ-ಪಾದ್ಯಗಳಿಂದ ದತ್ತಾತ್ರೇಯನನ್ನು ಪೂಜಿಸಿದರು. ಜ್ಞಾನಮುದ್ರೆಯಿಂದ ಆಸನದಲ್ಲಿ ಕುಳಿತ ದತ್ತನ ಎದುರು ಕೈಮುಗಿದು ನಿಂತರು. ಹೇ ವಿಷ್ಣುವೇ! ನಿನ್ನ ಸೇವೆಯನ್ನೇನು ಮಾಡಲಿ? ಎಂದು ಕೈಮುಗಿದು ಪ್ರಾರ್ಥಿಸಿದರು.

ಸಾಕ್ಷಾತ್ ಶ್ರೀಹರಿಯ ಅವತಾರನಾದ ದತ್ತಾತ್ರೇಯನು ಮಂದಸ್ಮಿತವನ್ನು ಸೂಸುತ್ತ ಮೇಘಗಂಭೀರವಾದ ದನಿಯಲ್ಲಿ ಹೇಳಿದನು. ನಿನ್ನವರಾದ ದೇವತೆಗಳಲ್ಲಿ ಈ ಕೋಪವೇನು? ಮಹೇಶ್ವರ. ನಾಸ್ತಿಕರಾದವರಲ್ಲಿ ಹಾಗೂ ದೈತ್ಯರಲ್ಲಿ ನಿನ್ನ ಕೋಪವನ್ನು ತೋರಿಸು. ನಿತ್ಯದಲ್ಲಿ ಧರ್ಮವಿಮುಖರು, ಸಜ್ಜನ ನಿಂದಕರು, ನನ್ನಲ್ಲಿ ಅಸೂಯೆಯನ್ನು ಮಾಡುವವರಲ್ಲಿ ಈ ನಿನ್ನ ಪರಾಕ್ರಮವನ್ನು ತೋರಿಸು. ಧನುರ್ಮಾಸದ ಉಷಃಕಾಲದ ಪೂಜೆಯು ಎಲ್ಲಿ ನಡೆಯುವುದಿಲ್ಲವೋ, ಎಲ್ಲಿ ಶ್ರೋತ್ರಿಯ ಬ್ರಾಹ್ಮಣರಿಗೆ ಸತ್ಕಾರವಿಲ್ಲವೋ, ಎಲ್ಲಿ ಯಾಚಕರಿಗೆ ಇಲ್ಲ ಎಂದು ನುಡಿವರೋ, ಎಲ್ಲಿ ಕೇವಲ ತನ್ನ ಹೊಟ್ಟೆ ತುಂಬಿಸಿಕೊಳ್ಳುವ ಉದಂಭರಿಗಳಿರುವರೋ, ಕುಲಗೌರವವನ್ನು ನಾಶ ಮಾಡುವ ಸಕೇಶಿಯಾದ ವಿಧವೆಯು ಎಲ್ಲಿರುವಳೋ, ಗಂಡನಿಗೆ ಪ್ರತಿಕೂಲಳಾದ ಹೆಂಡತಿಯು ಇರುವಲ್ಲಿ ಈ ನಿನ್ನ ಬಾಣವು ಬೀಳಲಿ. ಪತಿಯ ಮೇಲೆ ಕೋಪಿಸಿಕೊಂಡು ಅವನನ್ನು ನಿಂದಿಸುವ ಚಂಡಿಯಾದ ಹೆಣ್ಣು ನಿನ್ನ ಬಾಣಗಳಿಂದ ದಹಿಸಲ್ಪಡಲಿ. ಏಕಾದಶಿಯಂದು ಯಾರು ಉಣ್ಣುವರೋ ಹಾಗೂ ದ್ವಾದಶೀವ್ರತವನ್ನು ಆಚರಿಸುವುದಿಲ್ಲವೋ ಹಾಗೂ ದ್ವಾದಶಿಯಂದು ಯಾರು ಪರಾನ್ನವನ್ನು ಉಣ್ಣುವರೋ, ಯಾರು ಸಾಕ್ಷಿಭೋಜನವನ್ನು ಮಾಡದೇ ಒಬ್ಬನೇ ಉಣ್ಣುವನೋ, ಸರ್ವೋತ್ತಮವಾದ ಗೀತೆಯನ್ನು ಅನ್ಯಶಾಸ್ತ್ರಗಳಿಗೆ ಸಮವೆಂದು ಯಾರು ಹೇಳುವರೋ, ತತ್ತ್ವಹಾಗೂ ಶಾಸ್ತ್ರಸಂಗ್ರಹರೂಪವಾದ ಭಾಗವತಶಾಸ್ತ್ರವನ್ನು ಯಾರು ದೋಷದೃಷ್ಟಿಯಿಂದ ನಿಂದಿಸುವರೋ, ಅಂತಹ ಚಂಡಾಲಸದೃಶನು ನಿನ್ನ ಬಾಣಗಳಿಂದ ಹಿಂಸಿಸಲ್ಪಡಲಿ. ಶುದ್ಧಧರ್ಮವು ವೇದಗಳಿಂದಲೇ ಸಿದ್ಧವಾಗುವುದು. ಶ್ರೀಹರಿಯೇ ಧರ್ಮಮೂರ್ತಿಯೆನಿಸಿದ್ದಾನೆ. ಶ್ರೀಹರಿಯೇ ಜೀವಿಗಳಿಗೆ ಗತಿಯಾಗಿರುವನು. ಆದುದರಿಂದ ಹರಿದ್ರೋಹಿಯು ನಾಶ ಹೊಂದುವನು.

ಆದುದರಿಂದ ಶ್ರೇಯಸ್ಸನ್ನು ಬಯಸುವವನು ವಿಷ್ಣುಪ್ರೀತಿಗಾಗಿ ಧರ್ಮವನ್ನು ಆಚರಿಸಬೇಕು. ಅದರಿಂದಲೇ ಭುಕ್ತಿಮುಕ್ತಿಗಳನ್ನು ಹೊಂದುವನು.

**॥ ಇಲ್ಲಿಗೆ ಹದಿನೆಂಟನೇ ಅಧ್ಯಾಯವು ಮುಗಿಯಿತು ॥**

★★★

# ಹತ್ತೊಂಭತ್ತನೇ ಅಧ್ಯಾಯ

ರುದ್ರದೇವರು ದತ್ತಾತ್ರೇಯನನ್ನು ಪ್ರಾರ್ಥಿಸಿದರು. ಭಗವಂತನೇ! ನಾವೆಲ್ಲ ನಿನ್ನ ಮಾಯೆಯಿಂದ ಮೋಹಿತರು. ನಿನ್ನ ಕೃಪಾಕಟಾಕ್ಷವಿಲ್ಲದೇ ನಿನ್ನ ಮಾಯೆಯನ್ನಾರೂ ದಾಟಲಾರರು. ಹೇ ದಯಾನಿಧಿಯೇ! ನಾನು ನಿನ್ನ ಚರಣ ಕಮಲಗಳನ್ನು ಶರಣುಹೊಂದಿದ್ದೇನೆ. ಶರಣಾಗತವತ್ಸಲನಾದ ನೀನು ನನ್ನನ್ನು ರಕ್ಷಿಸು. ಮಹಾವಿಷ್ಣುವೇ ನನ್ನ ತಮೋಗುಣವು ಉಲ್ಬಣವಾಗಿ ಜಗದ ವಿನಾಶಕ್ಕೆ ಪ್ರೇರಿಸಿತ್ತು. ನಾನು ಹೇಗೆ ತಾಮಸಗುಣದ ಭಯದಿಂದ ಮುಕ್ತನಾಗಿ ಸಾತ್ವಿಕನೂ, ಸಜ್ಜನಪ್ರಿಯನೂ ಆಗುವೆನು? ಹೀಗೆಂದು ಪ್ರಾರ್ಥಿಸುತ್ತ ತನ್ನ ಪಾದಗಳಿಗೆರಗಿದ ರುದ್ರದೇವರನ್ನು ದತ್ತಾತ್ರೇಯನು ಮೇಲೆತ್ತಿ ನಸುನಗುತ್ತ ಹೇಳಿದನು. ನಿರಂತರವಾಗಿ ನನ್ನ ಮಂತ್ರವನ್ನು ಜಪಿಸುವವನು ನನ್ನ ಮಾಯೆಯನ್ನು ಶೀಘ್ರದಲ್ಲೇ ದಾಟುವನು. ಸ್ವಧರ್ಮವನ್ನು ತ್ಯಜಿಸಿದವನೂ, ಕಾರುಣ್ಯರಹಿತನೂ, ಧನಲೋಭಿಯೂ, ಆದವನು ನನ್ನ ಭಕ್ತನಾಗಿದ್ದರೂ ತಾಮಸ ಭಕ್ತನೆನಿಸುವನು. ಅವನು ಹತ್ತು ಜನ್ಮಗಳಿಂದ ನನ್ನನ್ನು ಹೊಂದುವನು.

ತನಗೆ ವಿಹಿತವಾದ ಧರ್ಮವನ್ನೇ ಫಲಾಪೇಕ್ಷೆಯಿಂದ ಆಚರಿಸುತ್ತ ಬೇರೆಲ್ಲ ವಿಷಯಗಳಲ್ಲಿ ಇಚ್ಛಾರಹಿತನಾಗಿದ್ದು ಪ್ರಾಣಹಿಂಸೆಯನ್ನು ಮಾಡದವನು ರಾಜಸ ಭಕ್ತನೆನಿಸುವನು. ಅವನು ಮೂರುಜನ್ಮಗಳಿಂದ ನನ್ನನ್ನು ಹೊಂದುವನು.

ಯಾರು ತನ್ನ ವರ್ಣಾಶ್ರಮಗಳನ್ನು ಫಲಾಪೇಕ್ಷೆಯಿಲ್ಲದೇ ಆಚರಿಸುವನು, ಆಶಾರಹಿತನು, ಜ್ಞಾನಿಯು, ತನ್ನ ಶರೀರ, ಪತ್ನಿ, ಪುತ್ರರು, ಮೊದಲಾದವರಲ್ಲಿ ವಿರಕ್ತನಾಗಿ ನನ್ನಲ್ಲೇ ಆತ್ಮಸಮರ್ಪಣೆಯನ್ನು ಮಾಡುವವನು, ನನ್ನ ಲೀಲೆಗಳನ್ನು ಕೇಳಿ ಸಂತೋಷ ಹೊಂದುವವನು, ನಿತ್ಯದಲ್ಲೂ ನನಗೆ ಉತ್ಸವಗಳನ್ನು ಮಾಡಿಸುವವನು, ನನ್ನ ಕಥೆಯಲ್ಲಿ ಆಸಕ್ತನು, ನನ್ನಲ್ಲೇ ಆಸಕ್ತನೂ, ಶಾಂತನೂ ಆದವನು ನನ್ನ ಸಾತ್ವಿಕಭಕ್ತನೆನಿಸುವನು. ಹೀಗೆಂದ ಹರಿಯ ಮಾತಿನಿಂದ ತುಷ್ಟನಾದ ಚಂದ್ರಶೇಖರನು ಕೈಮುಗಿದು ಮಾತನಾಡಿದನು.

ಹೇ ಮಹಾವಿಷ್ಣುವೇ! ಪೂರ್ವಸಂಸ್ಕಾರಗಳಿಂದ ಪ್ರೇರಿತರೂ, ನಿನ್ನ ಮಾಯೆಯಿಂದ ಮೋಹಿತರೂ ಆದ ಈ ಅಜ್ಞಜನಗಳು ಅದು ಹೇಗೆ ತಮ್ಮ ಸ್ವಧರ್ಮಗಳಲ್ಲಿ ನಿರತರಾಗುವರು. ತನಗೆ ವಿಹಿತವಾದ ಧರ್ಮದಲ್ಲಿ ಆಸಕ್ತನಾದವನು ನಿನ್ನ ಮಾಯೆಯನ್ನು ದಾಟುವನೆಂದು ಹೇಳುವ ನೀನು ನನ್ನನ್ನು ಮೋಹಗೊಳಿಸುತ್ತಿರುವೆ. ಮಹಾಯೋಗಿಯೇ! ನಾನು ನಿನ್ನ ದಾಸನಾಗಿರುವೆನು. ಯಾವುದರಿಂದ ನಾನು ನಿನಗೆ ಪ್ರಿಯನೆನಿಸುವೆನೋ ಅಂತಹ ಧರ್ಮತತ್ವವನ್ನರುಹು. ಈ ರೀತಿಯಾಗಿ ರುದ್ರದೇವರು ಪ್ರಾರ್ಥನೆ ಮಾಡಲು ಮುನೀಶ್ವರನಾದ ದತ್ತಾತ್ರೇಯನು ಶಂಕರನಿಗೆ ಭಗವದ್ಗೀತೆಯನ್ನು ಉಪದೇಶ ಮಾಡಿದನು. ತತ್ವಜ್ಞಾನವನ್ನು ತಿಳಿಯಲು ಅತಿ ಉತ್ಸುಕನಾದ ಭವನು ಚೆನ್ನಾಗಿ ಶುದ್ಧನೆಂದು ತಿಳಿದು ಭಗವಂತನು ಶುದ್ಧ ಭಕ್ತಿಯೋಗವನ್ನು ಉಪದೇಶ ಮಾಡಿದನು. ಆ ಉಪದೇಶದಿಂದ ಜ್ಞಾನ ವಿಜ್ಞಾನಗಳನ್ನು ಹೊಂದಿ ಉಪಶಾಂತರಾದ ರುದ್ರದೇವರು ಸಾವಿರ ವರುಷಗಳಲ್ಲಿ ವಿಶೇಷವಾಗಿ ಭಗವಂತನಲ್ಲಿ ಭಕ್ತಿಯನ್ನು ಹೊಂದಿದರು. ಆದುದರಿಂದ ಸರ್ವೋತ್ತಮನಾದ ಆ ಹರಿಯನ್ನೇ ಭಕ್ತಿಯುಕ್ತರಾಗಿ ಭಜಿಸಿರಿ ಎಂದು ಹೇಳಿದರು.

ಈ ಮಾತನ್ನು ಕೇಳಿ ಮುನಿಶ್ರೇಷ್ಠರಾದ ಪರುಚ್ಛೇಪ ಹಾಗೂ ನೃಮೇಧರು ಕೈಲಾಸ ಪರ್ವತಕ್ಕೆ ಹೋಗಿ ಶಂಕರನಿಗೆ ನಮಸ್ಕರಿಸಿ ತಮ್ಮ ವಿವಾದವನ್ನು ನಿರ್ಣಯಿಸಲು ಪ್ರಾರ್ಥಿಸಿದರು. ಅವರಿಬ್ಬರ ವಿವಾದ ನಿರ್ಣಯಕ್ಕಾಗಿ ಈಶ್ವರನು ಹಿಂದೆ ಯೋಗೀಶ್ವರನಾದ ದತ್ತಾತ್ರೇಯನಿಂದ ಉಪದೇಶ ಮಾಡಲ್ಪಟ್ಟ ಗೀತೆಯ ಅರ್ಥವಾದ ಭಕ್ತಿತತ್ವವನ್ನು ಚಿಂತಿಸಿ ಹರಿಧ್ಯಾನ ಪರನಾದನು. ಭಕ್ತಿಯೇ ಮೋಕ್ಷಕ್ಕೆ ಸಾಧನವೆಂದು ಚೆನ್ನಾಗಿ ಅರಿತ ಶಂಕರನು, ಮಹಾವಿಷ್ಣುವಿನ ಮಾಯೆಯನ್ನು ಮತ್ತೆ ಮತ್ತೆ ಪ್ರಶಂಸೆ ಮಾಡಿದನು. ಕೆಲವೆಡೆ ಜ್ಞಾನವನ್ನು, ಕೆಲವೆಡೆ ಭಕ್ತಿಯೋಗವನ್ನು ಇನ್ನು ಕೆಲವೆಡೆ ಎರಡನ್ನೂ ಮೋಕ್ಷಹೇತುಗಳೆಂದು ಹೇಳುವುದನ್ನು ಶಂಕರನು ಚೆನ್ನಾಗಿ ಅರಿತವನು. ಸಕಲ ಉಪನಿಷತ್ತುಗಳ ಫಲವೂ ಎಲ್ಲ ಶಾಸ್ತ್ರಗಳ ಸಾರವೂ ಆದ ಕೃಷ್ಣೋಪದಿಷ್ಟವಾದ ಗೀತೆಯನ್ನು ಸ್ಮರಿಸಿಕೊಂಡನು. ಭಕ್ತಿಯೇ ಮೋಕ್ಷಕ್ಕೆ ಸಾಕ್ಷಾತ್ತಾದ ಸಾಧನವೆಂದರಿತ ಶಂಭುವು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶ ನೀಡಿದುದನ್ನು ಧ್ಯಾನಿಸಿಕೊಂಡು ಹೀಗೆ ವಿಚಾರಿಸಿದರು. ಮೋಕ್ಷವನ್ನು ಸುಲಭವಾಗಿ ತೋರಿಸುವ ಕನ್ನಡಿಯಂತೆ ಇರುವ ಈ ಭಕ್ತಿ- ಮಾರ್ಗವು ಎಲ್ಲ ಶಾಸ್ತ್ರಗಳಿಂದ ಸಿರ್ಣತವಾಗಿದೆ. ಇದು ಭಗವಂತನಿಂದಲೇ ಹೇಳಲ್ಪಟ್ಟಿದ್ದರೂ ಕಾಣದಂತಾಗಿತ್ತು. ಲೋಕಗಳ ಸೃಷ್ಟಿಗಾಗಿ ಬ್ರಹ್ಮದೇವರಿಂದ ಪ್ರಾರ್ಥಿತನಾದ ಮಹಾವಿಷ್ಣುವು ಗೀತೆಯನ್ನು ಕಾಣದಂತಾಗಿಸಿದನು. ಪಾಪಭೂಯಿಷ್ಠವಾದ ಕಲಿಯುಗವು ಹತ್ತಿರವಾಗಿ ಧರ್ಮವು ನಷ್ಟವಾಗಲು ಸ್ವಯಂ ಭಗವಂತನೇ ದಯೆಯಿಂದ ಅರ್ಜುನನನ್ನು ನಿಮಿತ್ತ ಮಾಡಿ ಭಕ್ತಿತತ್ವವನ್ನು ಅರುಹಿದನು. ಕಲಿಯುಗದಲ್ಲಿ ದುರಾಚಾರಿಗಳಾದ ಮೂರ್ಖರು ಭಕ್ತಿಯೋಗವನ್ನು ತಿಳಿಯುವುದಿಲ್ಲ.

**॥ ಇಲ್ಲಿಗೆ ಹತ್ತೊಂಭತ್ತನೇ ಅಧ್ಯಾಯವು ಮುಗಿಯಿತು ॥**

# ಇಪ್ಪತ್ತನೇ ಅಧ್ಯಾಯ

ಶಂಕರನು ಹೇಳಿದನು. ಹೇ ಮುನಿಗಳೇ! ಕೇಳಿರಿ. ಯಾವ ತತ್ವ ನಿರ್ಣಯಕ್ಕಾಗಿ ನೀವೆಲ್ಲ ಇಲ್ಲಿಗೆ ಬಂದಿರುವಿರೋ ಆ ತತ್ವವು ಎಲ್ಲ ಶಾಸ್ತ್ರಗಳಿಂದಲೂ ನಿರ್ಣಯಿಸಲು ಕಷ್ಟಕರವಾದುದು. ಆದುದರಿಂದ ಕಷ್ಟಸಾಧ್ಯವಾದ ತತ್ವ ನಿರ್ಣಯಕ್ಕೆ ದೃಷ್ಟಾದೃಷ್ಟ ಪ್ರಪಂಚ ನಿಯಾಮಕನಾದ ಈಶ್ವರನೇ ಕಾರಣನಾಗಿರುವನು. ಸರ್ವಶಾಸ್ತ್ರಸಾರ-ರೂಪವಾದ ಶಂಭುವಿನ ಈ ಮಾತನ್ನು ಕೇಳಿ ನೃಮೇಧ ಹಾಗೂ ಪರುಚ್ಛೇಪರು ಆ ಶಿವಸನ್ನಿಧಿಯಲ್ಲಿಯೇ ಸರ್ವಮುನಿಗಳ ಸಮ್ಮುಖದಲ್ಲಿ ಸತ್ಯನಿರ್ಣಾಯಕವಾದ ಮಾತನಾಡಿದರು. ಇಲ್ಲಿಯೇ ಎದುರಿಗಿರುವ ಅನೇಕ ಟಿಸಿಲುಗಳು ಹಾಗೂ ಸಮೃದ್ಧ ಎಲೆಗಳಿಂದ ಕೂಡಿದ ಈ ಶಮೀವೃಕ್ಷದಲ್ಲಿ, ಅಗ್ನಿಯನ್ನು ಸೃಷ್ಟಿಸಿದವನು ಬ್ರಹ್ಮಜ್ಞಾನಿಯೆನಿಸುವನು. ಅವನೇ ತತ್ವಜ್ಞನೆನಿಸುವನು. ನಮ್ಮಿಬ್ಬರಲ್ಲಿ ಅವನೇ ಬ್ರಹ್ಮರ್ಷಿಯೆನಿಸುವನು. ಅಗ್ನಿಯನ್ನು ಹುಟ್ಟಿಸಲು ಅಶಕ್ತನಾದವನು ಕೇವಲ ಬ್ರಾಹ್ಮಣನೆನಿಸುವನು. ವಾದಕುಶಲರಾದ ಅವರಿಬ್ಬರೂ ಹೀಗೆ ನಿರ್ಣಯವನ್ನು ಮಾಡಿದರು. ಅನಂತರ ನೃಮೇಧನು ಹಸ್ತದಲ್ಲಿ ನೀರನ್ನು ತೆಗೆದುಕೊಂಡು ಗಾಯತ್ರಿಯಿಂದ ಅಭಿಮಂತ್ರಿಸಿ ಅಗ್ನಿಯೇ ಈ ವೃಕ್ಷದಲ್ಲಿ ತೋರು. ನನ್ನ ಮಾತು ಸತ್ಯವಾಗಲಿ ಧರ್ಮವೇ ಮೋಕ್ಷದ ಏಕೈಕ ಸಾಧನವಾಗಿದೆ ಎಂದು ತನ್ನ ಕೈಯಲ್ಲಿನ ಜಲವನ್ನು ಶಮೀವೃಕ್ಷದ ಮೇಲೆ ಪ್ರೋಕ್ಷಣೆ ಮಾಡಿದನು. ಆಗ ಆ ವೃಕ್ಷದಿಂದ ಲೋಕ ಭಯಂಕರವಾದ ದಟ್ಟವಾದ ಧೂಮವು ಉತ್ಪನ್ನವಾಯಿತು. ಅನಂತರ ಪರುಚ್ಛೇಪನು ಪೂರ್ವಾಭಿಮುಖವಾಗಿ ನಿಂತು ಎಲ್ಲರೂ ಕೇಳುತ್ತಿರಲು ವಿಷ್ಣುವನ್ನು ಸ್ಮರಿಸಿ ಹೇಳಿದನು.

**ಶಮೀ ಶಮಯತೇ ಪಾಪಂ ಶಮೀ ಶತ್ರುವಿನಾಶಿನೀ ।**
**ಅರ್ಜುನಸ್ಯ ಧನುರ್ಧಾತ್ರೀ ರಾಮಸ್ಯಪ್ರಿಯದರ್ಶಿನೀ ॥**

**ಹರಿರೇವ ಪರಂ ಬ್ರಹ್ಮ ಪುರುಷಃ ಪ್ರಕೃತೇಃ ಪರಃ ।**
**ನಾರಾಯಣೋ ಜಗದ್ವ್ಯಾಪೀ ಭಗವಾನ್ ಭಕ್ತವತ್ಸಲಃ ॥**

**ಈಶ್ವರೋ ಯದಿ ಸರ್ವೇಷಾಂ ಶರಣಾಗತವತ್ಸಲಃ ।**
**ತದ್ಭಕ್ತಿರೇವ ಸರ್ವೇಷಾಂ ತತ್ವಾನಾಮಪಿ ದೀಪಿಕಾ ।**
**ಮೋಕ್ಷದಾ ಯದಿ ಸತ್ಯೇನ ವೃಕ್ಷೇಽಸ್ಮಿನ್ನಗ್ನಿರಸ್ತ್ವಿಹ ॥**

ಈ ಶಮಿಯು ಪಾಪವನ್ನು ಶಮನ ಮಾಡುವಳು, ಶತ್ರುಗಳನ್ನು ನಾಶಗೊಳಿಸುವಳು. ಅರ್ಜುನನ ಗಾಂಡೀವವನ್ನು ಧರಿಸಿದವಳು. ರಾಮನ ಪ್ರಿಯೆಯಾದ ಸೀತೆಯನ್ನು ಮತ್ತೆ ರಾಮನಿಗೆ ತೋರಿದವಳು. ಶ್ರೀಹರಿಯೇ

ಮಹಾಲಕ್ಷ್ಮಿಗಿಂತಲೂ ಉತ್ತಮವಾಧ ಪರಬ್ರಹ್ಮನಾಗಿರುವನು. ಅವನು ಜಗವನ್ನೆಲ್ಲ ವ್ಯಾಪಿಸಿ ನಿಂತವನು. ಭಗವಂತನಾದ ಶ್ರೀಹರಿಯೇ ಎಲ್ಲ ಶರಣಾಗತರನ್ನು ರಕ್ಷಿಸುವವನು. ಈಶ್ವರಭಕ್ತಿಯೇ ಎಲ್ಲರಿಗೂ ತತ್ವವನ್ನು ತೋರುವುದು. ಆ ಭಕ್ತಿಯೇ ಮೋಕ್ಷಸಾಧನವೆನ್ನುವುದು ಸತ್ಯವಾದರೆ ಈ ಶಮೀವೃಕ್ಷದಲ್ಲಿ ಅಗ್ನಿಯು ತೋರಲಿ. ಹೀಗೆನ್ನುತ್ತಿದ್ದಂತೆ ಆ ವೃಕ್ಷದಿಂದ ದೊಡ್ಡದಾದ ಅಗ್ನಿಯು ಪ್ರಜ್ವಲಿಸಿತು. ತುಪ್ಪದಲ್ಲಿ ನೆನೆದ ಕಟ್ಟಿಗೆಯಂತೆ ಜ್ವಾಲೆಯ ಮಾಲೆಗಳಿಂದ ಕೂಡಿದ ಆ ಶಮೀವೃಕ್ಷವು ಪ್ರಲಯಕಾಲದ ಸೂರ್ಯನಂತೆ ಕಂಗೊಳಿಸಿತು. ಆ ದೃಶ್ಯವನ್ನು ನೋಡಿ ಶಂಕರ ಹಾಗೂ ಮುನಿಗಳೆಲ್ಲ ಅತ್ಯಂತ ವಿಸ್ಮಿತರಾದರು. ದೇವತೆಗಳು ಸಾಧು ಸಾಧು ಎಂದು ಪರುಚ್ಛೇಪನನ್ನು ಪ್ರಶಂಸೆ ಮಾಡಿದರು. ದೇವದುಂದುಭಿಗಳು ಮೊಳಗಿದವು. ಭಾರೀ ಪುಷ್ಪವೃಷ್ಟಿಯಾಯಿತು. ಗಂಧರ್ವರು ಸಂತೋಷದಿಂದ ಹಾಡಿದರೆ ಅಪ್ಸರೆಯರು ನರ್ತನ ಮಾಡಿದರು. ಶ್ರೀಹರಿಯ ಮಹಾವೈಭವವನ್ನು ಕಂಡು ಎಲ್ಲರೂ ಸಂತುಷ್ಟರಾದರು.

ಅನಂತರ ನೃಮೇಧನು ಮುಖವನ್ನು ಕೆಳಗೆ ಬಾಗಿಸಿ ಪರುಚ್ಛೇಪನಿಗೆ ಕೈಜೋಡಿಸಿ ಹೇಳಿದನು. ಹೇ ಮಹಾಯೋಗಿಯೇ! ನೀನು ನಿಜವಾಗಿ ಬ್ರಹ್ಮರ್ಷಿಯು. ನಾನು ಬ್ರಹ್ಮಜ್ಞಾನಿಯೆಂಬುದು ಕೇವಲ ಕಥೆಯೇ ಸರಿ. ಈ ತುಂಬಿದ ಸಭೆಯಲ್ಲಿ ನಾನು ಶಮೀವೃಕ್ಷದಲ್ಲಿ ಅಗ್ನಿಯನ್ನು ಹುಟ್ಟಿಸಲು ಸಮರ್ಥನಾಗಲಿಲ್ಲ. ನಿನ್ನದು ಅದೆಂತಹ ಸಾಮರ್ಥ್ಯ. ನಿನ್ನ ಜ್ಞಾನವೇ ಅತಿ ಶ್ರೇಷ್ಠವಾದುದು. ನಿನ್ನ ವಿದ್ಯೆಯೇ ವೇದಸಮ್ಮತವಾದುದು. ಹೀಗೆನ್ನುತ್ತ ಯೋಗಿಯಾದ ನೃಮೇಧನು, ಹರಿಪ್ರಿಯನಾದ ಪರುಚ್ಛೇಪನನ್ನು ಅಪರಾಧವನ್ನು ಕ್ಷಮಿಸು ಎಂದು ಪ್ರಾರ್ಥಿಸಿ ಶಿರಬಾಗಿ ನಮಸ್ಕರಿಸಿದನು. ಗೆಳೆಯನೇ! ನನಗೆ ನಮಸ್ಕರಿಸುವುದು ಬೇಡ. ನಮ್ಮಿಬ್ಬರ ಈ ವಿವಾದವು ವೇದಾಂತದ ಅರ್ಥವನ್ನು ಎತ್ತಿ ತೋರಿಸುವುದು. ಜ್ಞಾನಿಗಳು ವೇದಶಾಸ್ತ್ರಗಳ ವಿಚಾರದಲ್ಲಿಯೇ ಕಾಲ ಕಳೆಯುವರು. ಇಂತಹ ಪ್ರಸಂಗವು ಪ್ರತಿಜನ್ಮದಲ್ಲೂ ದೊರೆಯಲಿ. ಭಗವನ್ಮಹಿಮೆಯ ಸ್ಮರಣೆಯು ಯಾವಾಗಲೂ ಸಂಸಾರವನ್ನು ದಾಟಿಸುವುದು. ಈ ರೀತಿ ತತ್ವವಿಚಾರಣೆಯ ಅವಕಾಶ ಒದಗಿದುದು ಭಗವಂತನ ಅನುಗ್ರಹವೇ ಸರಿ. ವಿಷ್ಣುವಿನ ಮಾಯೆಯಿಂದ ಬದ್ಧರಾದವರು ನಾನು ನನ್ನದೆಂಬ ಮಮತೆಯ ಬುದ್ಧಿಯಿಂದ ತೊಳಲಿದರೆ, ಜ್ಞಾನಿಗಳು ವೇದಾಂತಾರ್ಥ ವಿಚಾರಣೆಯಲ್ಲಿ ಸಮಯ ಕಳೆದರೆ ಮೂರ್ಖಜನಗಳು ನಿದ್ರೆಯಲ್ಲಿ, ಗೃಹಕಾರ್ಯಗಳಲ್ಲಿ ಕಾಲ ಕಳೆಯುವರು ಎಂದನು.

ಅನಂತರ ಪರುಚ್ಛೇಪನ ಮಹಾ ಸಾಧನೆಯನ್ನು ಕಂಡು ದೇವತೆಗಳು, ಮುನಿಗಳು, ಸಿದ್ಧರು, ಮುಂತಾದವರೆಲ್ಲ ಆಶ್ಚರ್ಯದಿಂದ ಹೇ ಬ್ರಾಹ್ಮಣ ಶ್ರೇಷ್ಠನೇ!

ಭಗವಂತನ ದೃಷ್ಟಿಯಲ್ಲಿ ನೀನೇ ಶ್ರೇಷ್ಠನು ಎಂದು ಶ್ಲಾಘಿಸಿದರು. ಬ್ರಾಹ್ಮಣರಿಬ್ಬರ ಮಹಾವಿವಾದವು ಶಮನವಾದುದರಿಂದ ಶಮೀ ಎಂದು ಹಾಗೂ ಅದರಲ್ಲಿ ಅಗ್ನಿಯ ಜ್ವಲನವಾದುದರಿಂದ ಅಗ್ನಿಗರ್ಭ ಎಂದೂ ಆ ವೃಕ್ಷವು ಹೆಸರನ್ನು ಪಡೆಯಿತು.

ಸೂತರು ಹೇಳುವರು. ಹೇ ಋಷಿಗಳೇ! ನೀವು ಕೇಳಿದ ಎಲ್ಲವನ್ನು ನಿಮಗೆ ಹೇಳಿದ್ದೇನೆ. ಒಮ್ಮೆಯಾದರೂ ಇದನ್ನು ಕೇಳಿದವನು ಎಲ್ಲ ಪಾಪಗಳಿಂದ ಮುಕ್ತನೆನಿಸುವನು. ಈ ಬ್ರಹ್ಮೋಪಾಖ್ಯಾನವನ್ನು ಹೇಳಿ ಕೇಳಿದವರು ಆಯುಷ್ಯ, ಆರೋಗ್ಯ, ಮಕ್ಕಳು, ಮೊಮ್ಮಕ್ಕಳು, ಮುಂತಾದ ಎಲ್ಲ ಸೌಭಾಗ್ಯವನ್ನು ಪಡೆಯುವನು. ಈ ಚರಿತೆಯನ್ನು ಹೇಳಿ ಕೇಳಿದವನು ಮೂಢನಾದರೂ ಜ್ಞಾನಿಯೆನಿಸುವನು. ಈ ಅಧ್ಯಾಯವನ್ನು ಭಕ್ತಿಯಿಂದ ಪಠಿಸುವ ಬ್ರಾಹ್ಮಣನು ವಿಷ್ಣುಭಕ್ತನೆನಿಸುವನು. ಧನುರ್ಮಾಸದಲ್ಲಿ ಉಷಃಕಾಲದಲ್ಲಿ ಸ್ನಾನ ಮಾಡಿ ಹರಿಸನ್ನಿಧಿಯಲ್ಲಿ ಒಮ್ಮೆಯಾದರೂ ಹೇಳಿ ಕೇಳಿದವನು ಎಲ್ಲ ಪಾಪಗಳಿಂದಲೂ ಮುಕ್ತನಾಗುವನು.

**॥ ಇಲ್ಲಿಗೆ ಇಪ್ಪತ್ತನೇ ಅಧ್ಯಾಯವು ಮುಗಿಯಿತು ॥**

★★★

# ಇಪ್ಪತ್ತೊಂದನೇ ಅಧ್ಯಾಯ

ಕೃಷ್ಣನು ಹೇಳಿದ ಸರ್ವಶಾಸ್ತ್ರಗಳಲ್ಲಿ ಅಡಕವಾದ ಗೂಢತತ್ವಗಳನ್ನು ಕೇಳಿದ ದಧಿಪಾಲನು ಕೃಷ್ಣನು ಭಕ್ತಾಧೀನನೆಂದರಿತು ನಸುನಗುತ್ತ ಮಾತನಾಡಿದನು. ಹೇ ಭಗವಂತನೇ! ನನಗೆ ಕಲಿಯ ಸ್ವರೂಪವನ್ನು ಹಾಗೂ ಕಲಿಚಿಹ್ನೆಗಳನ್ನು ಮತ್ತು ಯಾರು ಕಲಿಯನ್ನು ಜಯಿಸುವರೆಂಬುದನ್ನು ತಿಳಿಸು. ಭಕ್ತನಾದ ದಧಿಪಾಲನು ಹೀಗೆ ಕೇಳಲು ಭಕ್ತಿಪಾಶವಶನಾದ ಕೃಷ್ಣನು ನಗುತ್ತ ಹೇಳತೊಡಗಿದನು. ಹೇ ಪ್ರಿಯನೇ! ವೇದಾಂತನಿಶ್ಚಿತತತ್ವವನ್ನು ಹೇಳುವೆನು ಕೇಳು. ಇದನ್ನು ತಿಳಿದ ನಂತರ ಮತ್ತೇನನ್ನೂ ತಿಳಿಯಬೇಕಾಗಿಲ್ಲ.

ಹಿಂದೊಮ್ಮೆ ಬ್ರಹ್ಮದೇವರು ಆಲಸ್ಯದಿಂದ ಆಕಳಿಸಲು ಧರ್ಮಧೈರ್ಯಗಳನ್ನು ನಾಶಗೊಳಿಸುವ ಸ್ತ್ರೀಯರು ಉತ್ಪನ್ನರಾದರು. ಧರ್ಮ, ಜ್ಞಾನಗಳನ್ನು ನಾಶಪಡಿಸುವ ಕಲಿಯು ಸ್ತ್ರೀಸ್ವರೂಪನಾಗಿದ್ದಾನೆ. ಸ್ತ್ರೀ ಆಕರ್ಷಣೆಯನ್ನು ಗೆದ್ದ ಮನುಜನು ಕಲಿಯನ್ನು ಗೆಲ್ಲುವನು. ಸ್ತ್ರೀಯರೇ ಕಲಿಸ್ವರೂಪರಾಗಿದ್ದಾರೆ. ಆದ್ದರಿಂದ ಮೋಕ್ಷದ ಇಚ್ಛೆಯುಳ್ಳ ವಿದ್ವಾಂಸನು ಸ್ತ್ರೀಯರನ್ನು ದೂರದಿಂದಲೇ ತ್ಯಜಿಸಬೇಕು. (ಇಲ್ಲಿ ನಿಂದಿಸುತ್ತಿರುವುದು ದುಷ್ಟಸ್ತ್ರೀಯರನ್ನೇ ಹೊರತು ಸಾತ್ವಿಕ ಸ್ತ್ರೀಯರನ್ನಲ್ಲ ಹಾಗೂ

ತ್ಯಜಿಸಲು ಹೇಳುತ್ತಿರುವುದು ಸ್ತ್ರೀಯರಲ್ಲಿ ಅತಿಯಾದ ಸಂಗವನ್ನೇ ಹೊರತು ಸ್ತ್ರೀಯರನ್ನಲ್ಲ)

ಜೂಜಾಟ, ಅತಿಕಾಮನೆ, ಲೋಭ, ಮದ್ಯ, ಸುವರ್ಣ, ಸ್ತ್ರೀಯರು, ಲೋಕದ ವಾರ್ತೆ ಇವುಗಳಿದ್ದಲ್ಲಿ ಕಲಿಯು ಸನ್ನಿಹಿತನಾಗಿರುವನು. ಸಾಮಾನ್ಯ ದೇವತೆಗಳನ್ನು ಸರ್ವೋತ್ತಮನೆಂದು ಸಾರುವ, ಶೈವ, ಪಾಶುಪತಮತಗಳು ಹೆಚ್ಚಾಗಿ ಪ್ರಸಾರ ಹೊಂದಲು ಭುಕ್ತಿ-ಮುಕ್ತಿಗಳನ್ನು ನಾಶ ಮಾಡುವ ಕಲಿಯುಗ ಬಂತೆಂದು ತಿಳಿ. ಲಕ್ಷ್ಮೀಗಿಂತಲೂ ಉತ್ತಮನಾದ ಬ್ರಹ್ಮಶಬ್ದವಾಚ್ಯನಾದ ನನ್ನನ್ನು ಯಾವಾಗ ತಿರಸ್ಕರಿಸುವರೋ ಹಾಗೂ ನನ್ನ ನೈವೇದ್ಯವನ್ನು ತಿರಸ್ಕಾರ ಮಾಡುವರೋ ಆಗ ಕಲಿಯು ಬಂದಂತೆಯೇ ಸರಿ. ನನ್ನ ಭಕ್ತರ ಮಹಿಮೆಯನ್ನು ನನ್ನ ನೈವೇದ್ಯದ ಗರಿಮೆಯನ್ನು ದೂಷಣೆ ಮಾಡಲು ಕಲಿಯುಗವು ಬಂತೆಂದು ತಿಳಿ. ದುಃಶಾಸ್ತ್ರಗಳಲ್ಲಿ ಶ್ರದ್ಧೆ, ನನ್ನನ್ನು ತ್ಯಜಿಸಿ ಅನ್ಯದೇವತೆಗಳಲ್ಲಿ ಭಕ್ತಿ, ಸ್ತ್ರೀದ್ರವ್ಯದಿಂದ ಜೀವನ ನಡೆಸಲು ಕಲಿಯುಗ ಬಂದಿತೆಂದು ತಿಳಿ. ಕ್ಷುದ್ರ ಫಲಗಳನ್ನು ನೀಡುವ ಕಾಮ್ಯಕರ್ಮಗಳಲ್ಲಿ ಅತಿಶ್ರದ್ಧೆ, ಮೋಕ್ಷ ನೀಡುವ ನಿಷ್ಕಾಮ ಕರ್ಮಗಳಲ್ಲಿ ಅವಿಶ್ವಾಸ, ಏಕಾದಶಿಯ ಸಿಂದನೆ ಇವುಗಳನ್ನು ಕಲಿಯ ಲಕ್ಷಣಗಳೆಂದು ಹೇಳುವರು. ಕಲಿಯು ತನ್ನ ಕಾಲನ್ನಿರಿಸಲು ಶಿಷ್ಯರು ಗುರುಗಳನ್ನು, ಪುತ್ರರು ತಂದೆಯನ್ನು ದೂಷಿಸುವರು. ಕಲಿಯುಗವು ಬಂದು ಹತ್ತುಸಾವಿರ ವರ್ಷಗಳಾಗಲು ವಿಷ್ಣುವಿನ ವಾರ್ತೆಯು ಭೂಮಿಯಲ್ಲಿ ಕೇಳದಂತಾಗುವುದು. ಐದುಸಾವಿರವರುಷಳಿಗೆ ಗಂಗಾದೇವಿ, ಎರಡೂವರೆ ಸಾವಿರ ವರ್ಷಗಳಿಗೆ ಬೇರೆಲ್ಲ ದೇವತೆಗಳು ಭೂಮಿಯಿಂದ ತೆರಳುವರು. ಇಂಥ ಘೋರವಾದ ಕಲಿಯುಗವು ಸಮೀಪಿಸುತ್ತಿರಲು ನಾನು ಪರಾಶರಮಹರ್ಷಿಗಳಿಂದ ಸತ್ಯವತೀ ದೇವಿಯಲ್ಲಿ ವೇದವ್ಯಾಸರೆಂಬ ಹೆಸರಿನಿಂದ ಅವತರಿಸಿ ಮೋಹಕವಾದ ಪುರಾಣಗಳನ್ನು ರಚಿಸುವೆನು. ಆ ಪುರಾಣಗಳಲ್ಲಿ ನಾನು ಗುಣಪೂರ್ಣನಲ್ಲವೆಂಬುದನ್ನು ನೋಡಿ ಜನಗಳು ಅದರಲ್ಲಿ ವಿಶ್ವಾಸ ಮಾಡಲು ಅಯೋಧ್ಯಾ, ಮಥುರಾ ಮುಂತಾದ ಪ್ರಾಂತಗಳಲ್ಲಿ ಕಲಿಯು ಪ್ರವೇಶಿಸುವನು. ಅಯೋಧ್ಯಾ, ಮಥುರೆ, ಗಂಗಾತೀರ, ಕಾಶೀ ಮುಂತಾದೆಡೆ ಕಲಿಯ ಒಂದು ಪಾದ, ಗೌತಮೀ ನದೀ ತೀರದಲ್ಲಿ ಎರಡು ಪಾದಗಳು, ಕೃಷ್ಣವೇಣೀತೀರದಲ್ಲಿ ಮೂರು ಪಾದಗಳು. ಕೃಷ್ಣವೇಣೀನದಿಯಿಂದ ವೆಂಕಟಾಚಲದವರೆಗೆ ಮೂರುವರೆ ಪಾದಗಳು. ಅಲ್ಲಿಂದ ಆರಂಭಿಸಿ ಬೇರೆಲ್ಲ ಕಡೆಗೆ ಕಲಿಯ ನಾಲ್ಕು ಪಾದಗಳು. ತಾಮ್ರಪರ್ಣೀ ನದಿ ಇರುವೆಡೆ, ಪದ್ಮನಾಭನು ಇರುವೆಡೆ ಕಲಿಯ ಒಂದು ಪಾದವಿರುವುದು. ಕಲಿಯು ವ್ಯಾಪಿಸಿದ ಹಾಗೆಲ್ಲ ನನ್ನಲ್ಲಿ ಭಕ್ತಿಯು ಸವೆಯುತ್ತ ಬರುವುದು. ಕೆಲವೆಡೆ ಕಲಿಯ ಪ್ರಭಾವದಿಂದ ನನ್ನ ಭಕ್ತಿಯ ನೆಪದಲ್ಲಿ ಶಿವದ್ವೇಷ ಮಾಡುವರು. ದ್ರಾವಿಡದೇಶದಲ್ಲಿ ತಾಮ್ರಪರ್ಣೀ ನದಿಯು ಇರುವೆಡೆ ಕಲಿಯ

ಪ್ರಭಾವವು ಕಡಿಮೆಯಿರುವುದು. ಮತ್ತು ಅಲ್ಲಿ ವಿಷ್ಣುಭಕ್ತಿಯು ವೃದ್ಧಿಸುವುದು. ಕಲಿಯುಗದಲ್ಲಿ ಎಲ್ಲೆಡೆ ವರ್ಣಸಾಂಕರ್ಯ ನಡೆಯುವುದು. ವೇದಗಳೆಲ್ಲ ಅರ್ಥಹೀನವಾದ ಕತೆಗಳೆಂದೆನಿಸುವವು. ಅನಧಿಕಾರಿಗಳು ಕೂಡ ಸ್ವೇಚ್ಛೆಯಂತೆ ಅಧ್ಯಯನ ಮಾಡುವರು. ವಿದ್ಯೆಯನ್ನು ಹೊಟ್ಟೆ ತುಂಬಿಸಿಕೊಳ್ಳಲು ಉಪಯೋಗಿ-ಸುವರು. ತಮಗೆ ತೋರಿದ ರೀತಿಯಲ್ಲಿ ಧರ್ಮವನ್ನಾಚರಿಸುವರು. ವಿಧವೆಯರು ಬಹು ಸಂಖ್ಯೆಯಲ್ಲಿರುವರು. ಯಾವಾಗಲೂ ಪರಾನ್ನವನ್ನು ಹಾಗೂ ಶೂದ್ರಾನ್ನವನ್ನು ಉಣ್ಣುವರು. ಕೇವಲ ವಿಷಯಗಳಲ್ಲೇ ಮಗ್ನರಾಗಿ ಶೂದ್ರಸದೃಶರಾಗುವರು. ತಮ್ಮ ಹೆಂಡತಿ, ಮಕ್ಕಳ ಪೋಷಣೆಯೇ ಪುಣ್ಯಕಾರ್ಯವೆಂದು ಭಾವಿಸುವರು. ಗೃಹಸ್ಥೋಚಿತ ಪಂಚಮಹಾಯಜ್ಞಗಳನ್ನಾಚರಿಸದೇ ಕೇವಲ ಮದುವೆಯಾಗುವುದೇ ಗೃಹಸ್ಥಾಶ್ರಮ ಪರಿಪಾಲನೆಯೆಂದು ತಿಳಿಯುವರು. ಅಶ್ರೋತ್ರಿಯರೂ, ಶಾಸ್ತ್ರ ಲಂಪಟರಾದ ಮಾತಿನ ಚತುರರೂ ಪೂಜೆಗೊಳ್ಳುವರು. ವಿಶೇಷವಾಗಿ ಕಲಿಯುಗದಲ್ಲಿ ಡಾಂಭಿಕ ಬ್ರಾಹ್ಮಣರೇ ಹೆಚ್ಚು ಧನವನ್ನು ಗಳಿಸುವರು.

ಪ್ರಾಯಃ ಎಲ್ಲರೂ ಸ್ತ್ರೀಸಂಗದಲ್ಲಿ ಮಗ್ನರು, ಸ್ವಾರ್ಥದಲ್ಲೇ ತತ್ಪರರು, ಶೌಚರಹಿತರು, ಹೊಟ್ಟೆ ತುಂಬಿಸಿಕೊಳ್ಳುವುದೇ ಕಲಿಯುಗದ ಧರ್ಮವೆನಿಸುವದು. ಪುತ್ರಾಪೇಕ್ಷಿಯಾದವನು ಪತಿವ್ರತೆಯಾದ, ತರುಣಿಯಾದ, ಋತುಸ್ನಾತಳಾದ ಪತ್ನಿಯನ್ನು ತ್ಯಜಿಸಿದರೆ ಪಿತೃಘಾತಕನೆನಿಸುವನು. ಪ್ರಾಯಃ ಜನಗಳೆಲ್ಲ ಅತೃಪ್ತರೂ, ಭಾಗ್ಯಹೀನರೂ, ಹೊಟ್ಟೆ ತುಂಬಿಸುವಲ್ಲಿ ನಿರತರೂ, ಸದಾಚಾರ ಹೀನರೂ ವಿಷ್ಣುನೈವೇದ್ಯ ನಿಂದಕರೂ ಆಗುವರು. ಏಕಾದಶೀ ವ್ರತರಹಿತರೂ, ಕೇಶವ ನಿಂದಕರೂ, ವೈರಾಗ್ಯರಹಿತರೂ ಆಗುವರು. ದಂಡಮಾತ್ರದಿಂದ ಸನ್ಯಾಸಿಗಳು, ಜನಿವಾರದಿಂದ ಬ್ರಾಹ್ಮಣರೆನಿಸುವರು. ಕಲಿಯುಗದ ಬ್ರಾಹ್ಮಣರು ಶೂದ್ರರಂತೆ ಆಗುವರು. ಸ್ತ್ರೀಯರು ಸ್ವತಂತ್ರರೆನಿಸುವರು. ವಿಪ್ರರು ತ್ರೈವರ್ಣಿಕರಂತೆ ಜೀವಿಸುವರು. ಆಕಳುಗಳು ಮೇಕೆಗಳಂತಾಗುವವು. ಗಿಡಗಳು ಒಣಗಿದಂತಾಗಿ ಅಲ್ಪಫಲ ನೀಡುವವು. ಭೂಮಿಯು ಅಲ್ಪಧಾನ್ಯಗಳನ್ನು ನೀಡುವುದು. ಔಷಧಿಗಳು ಸಾಮರ್ಥ್ಯಹೀನವಾಗುವವು. ಜನಗಳೆಲ್ಲ ಪಾಪಿಗಳೂ, ರೋಗಿಗಳೂ ಆಗುವರು. ಭೋಜನಪ್ರಿಯರೂ, ಕೋಪಿಗಳೂ, ಸಜ್ಜನರಲ್ಲಿ ಮತ್ಸರಿಗಳೂ, ಪ್ರಾಯೇಣ ದರಿದ್ರರೂ, ಸ್ತ್ರೀಸಂಗನಿರತರೂ ಆಗುವರು. ಕಲಿಯುಗದಲ್ಲಿ ತಮ್ಮ ವರ್ಣಾಶ್ರಮಗಳಿಗೆ ವಿರುದ್ಧವಾದ ಕರ್ಮಾಚರಣೆ ಮಾಡುತ್ತ ಶೂದ್ರಾನ್ನವನ್ನು ಸೇವಿಸುವರು. ವೇಶ್ಯೆಯರು, ವಿಟರು, ನಟರಿಗೆ ಆದರದಿಂದ ಧನವನ್ನು ನೀಡುವರು. ಕೃಷಿ, ವಾಣಿಜ್ಯ, ಸೇವೆ ಮುಂತಾದ ಉದ್ಯೋಗವೇ ಶ್ರೇಷ್ಠಧರ್ಮ ಅದೇ ಉತ್ತಮವಾದ ತಪವೆಂದು ತಿಳಿಯುವನು. ದಯಾರಹಿತರಾದ ಬ್ರಾಹ್ಮಣರು ಕಲಿಯುಗದಲ್ಲಿ ಗೋವಿನಿಂದ ದೊರಕುವ ಪದಾರ್ಥಗಳನ್ನು ಮಾರಿಕೊಳ್ಳುವರು.

ಹಾಲು ಮೊದಲಾದ ಗೋವಿನ ರಸಗಳನ್ನು ಮಾರುವವನು ಮೂರು ದಿನಗಳಲ್ಲಿ ಶೂದ್ರನಾಗುವನು. ಉಪ್ಪನ್ನು ಮಾರುವವನು ದರಿದ್ರನೂ, ಎಳ್ಳನ್ನು ಮಾರುವವನು ಅಲ್ಪಾಯುಷಿಯೂ ಆಗುವನು. ಅರಗನ್ನು ಮಾರುವವನು ಕುಷ್ಠರೋಗಿಯಾಗುವನು. ಗೋವಿನ ಪದಾರ್ಥಗಳನ್ನು ಮಾರುವುದರಿಂದ ಅಪುತ್ರನೂ ಆಗುವನು. ಜನಗಳು ಜಪ, ಸ್ನಾನ ಮೊದಲಾದ ಪುಣ್ಯಕಾರ್ಯಗಳನ್ನು ತೀರ್ಥಕ್ಷೇತ್ರಗಳಲ್ಲಿ ದುಡ್ಡಿನ ಆಸೆಯಿಂದ ಜನರೆದುರು ಪ್ರದರ್ಶನಕ್ಕಾಗಿ ಮಾಡುವರು. ಪುರಾಣ, ಪ್ರವಚನಗಳು ನಡೆಯುತ್ತಿದ್ದರೂ ದುರಾಗ್ರಹದಿಂದ ಕೇಳುವುದಿಲ್ಲ. ಪುರಾಣ ಹೇಳುವ ಆಚಾರ್ಯನನ್ನು ಅವಮಾನಿಸಿದವನು ನೀರಿಲ್ಲದ ಅರಣ್ಯದಲ್ಲಿ ಬ್ರಹ್ಮರಾಕ್ಷಸ ನಾಗುವನು. ವಿದ್ಯೆಯನ್ನು ಬೇರೆಯವರನ್ನು ವಾದದಲ್ಲಿ ಸೋಲಿಸಲು ಉಪಯೋಗಿಸುವರು. ಗಾಯತ್ರಿಯನ್ನು (ವೇದ) ಮಾರಿಕೊಳ್ಳುವರು. ಗಾಯತ್ರಿಯ ಮಾರಾಟದಿಂದ ಏಳು ಜನ್ಮಗಳವರೆಗೆ ಚಂಡಾಲನಾಗುವನು. ಅನ್ನ ಹಾಗೂ ಕನ್ಯೆಯ ಮಾರಾಟದಿಂದ ತಕ್ಷಣ ಚಂಡಾಲನಾಗುವನು. ಅನ್ನದ ದೋಷದಿಂದ ಕಲಿಯುಗದಲ್ಲಿ ಎಲ್ಲೆಡೆ ಯಮನು (ಅಪಮೃತ್ಯು) ಸನ್ನಿಹಿತನಾಗಿದ್ದಾನೆ. ಕಲಿಯುಗದ ಎಲ್ಲ ದುಃಖಗಳಿಗೂ ಅನ್ನದಾನ ಮಾಡದಿರುವುದೇ ಕಾರಣವಾಗಿದೆ. ದಾನ ಮಾಡದಿರುವುದರಿಂದಲೇ ಕಲಿಯುಗದಲ್ಲಿ ಜನಗಳು ವಿನಾಶ ಹೊಂದುವರು. ಪುಸ್ತಕ, ವಿದ್ಯೆ, ಆಕಳು ಹಾಗೂ ಭೂಮಿಯನ್ನು ಮಾರಾಟ ಮಾಡಿದರೆ ಅಲ್ಲಿ ಯಾವಾಗಲೂ, ಬರಗಾಲ, ಶತ್ರುಗಳು ಹಾಗೂ ರೋಗಗಳ ಭಯವಿರುವುದು ಎಂದು ಕೃಷ್ಣನು ದಧಿಪಾಲನಿಗೆ ಹೇಳಿ ಕಲಿಯ ಲಕ್ಷಣಗಳನ್ನೆಲ್ಲ ನಿನಗೆ ತಿಳಿಯುವಂತೆ ಹೇಳಿದ್ದೇನೆ. ತಿಳಿದುಕೊಂಡಾಯತೇ? ಎಂದು ಕೇಳಲು ಸಂತುಷ್ಟನಾದ ದಧಿಪಾಲನು ಬಿಗಿದ ಕಂಠದಿಂದ ಜಗತ್ಪತಿಯಾದ ಶ್ರೀಕೃಷ್ಣನನ್ನು ಕೇಳಿದನು. ಗೆಳೆಯ ಕೃಷ್ಣನೇ! ಯಾವ ಉಪಾಯದಿಂದ ಕಲಿಯನ್ನು ಗೆಲ್ಲುವನು? ಹಾಗೂ ಸಂಸಾರವನ್ನು ದಾಟುವನು? ಎಂಬ ತತ್ವವನ್ನು ನನಗೆ ಹೇಳಬೇಕೆಂದು ಪ್ರಾರ್ಥಿಸಿದನು.

**॥ ಇಲ್ಲಿಗೆ ಇಪ್ಪತ್ತೊಂದನೇ ಅಧ್ಯಾಯವು ಮುಗಿಯಿತು ॥**

★★★

# ಇಪ್ಪತ್ತೆರಡನೇ ಅಧ್ಯಾಯ

ಹೀಗೆ ಪ್ರಶ್ನೆ ಮಾಡಿದ ದಧಿಪಾಲನ ಮಾತುಗಳನ್ನು ಕೇಳಿ ಭಕ್ತವಶನಾದ ಶ್ರೀಕೃಷ್ಣನು ಮೆಲುನಗುತ್ತ ಸುತ್ತಲೂ ನೋಡಿ ಹೇಳಿದನು. ಬಹಳ ಒಳ್ಳೆಯದು. ಭಾಗ್ಯವಂತನೇ! ನೀನು ನನ್ನ ಮಿತ್ರನೂ, ಪರಮಭಕ್ತನೂ ಆಗಿರುವೆ. ಕಲಿನಾಶದ ಉಪಾಯವನ್ನು ಚಿತ್ತವಿಟ್ಟು ಕೇಳು. ಯಾರು ಸ್ವಧರ್ಮ ನಿರತರೋ ಇಂದ್ರಿಯ ಚಾಪಲ್ಯರಹಿತರೋ, ಭಗವದ್ಭಕ್ತರೋ, ಪ್ರಸನ್ನಮನಸ್ಕರೋ, ಎಲ್ಲ ಪ್ರಾಣಿಗಳಲ್ಲಿ ದಯಾವಂತರೋ ಅಂತಹವರನ್ನು ಕಲಿಯು ಬಾಧಿಸಲಾರ. ಯಾವಾಗಲೂ ನನ್ನ ದೀಕ್ಷೆಗಳಿಂದ (ಬಾಹ್ಯ ಮತ್ತು ಅಂತರ್ದೀಕ್ಷೆಗಳಿಂದ) ಕೂಡಿದ್ದು, ನನ್ನ ಪೂಜೆಯಲ್ಲಿ ನಿರತನಾದವನು ಹಾಗೂ ನನ್ನ ಕಥಾಶ್ರವಣವೇ ಸಂಪತ್ತೆಂದು ತಿಳಿದವನು ಕಲಿಯ ಬಾಧೆಗೆ ಒಳಗಾಗುವುದಿಲ್ಲ. ನನ್ನ ನಾಮಸ್ಮರಣೆ ಮಾಡುತ್ತಲೇ ತೃಪ್ತಿ ಹೊಂದುವವನು, ನನ್ನ ಪ್ರಸಾದವನ್ನು ಮಾತ್ರ ತಿನ್ನುವವನು, ನನ್ನ ಭಕ್ತರ ದರ್ಶನದಿಂದ ಸಂತೋಷಪಡುವವರನ್ನು ಕಲಿಯು ಬಾಧಿಸಲಾರನು. ಮನೆಯಲ್ಲಿ ಅಥವಾ ದೇವಾಲಯಗಳಲ್ಲಿ ನನ್ನ ಉತ್ಸವಗಳನ್ನು ನಡೆಸುವವನು ಮತ್ತು ನನ್ನ ಪ್ರೀತಿಗಾಗಿ ಸತ್ಕರ್ಮಗಳನ್ನು ನಡೆಸುವವನನ್ನು ಕಲಿಯು ಬಾಧಿಸುವುದಿಲ್ಲ.

ಧನುರ್ಮಾಸದ ಉಷಃಕಾಲದಲ್ಲಿ ಮುದ್ಗಾನ್ನದಿಂದ ನನ್ನನ್ನು ಪೂಜಿಸಿ ತುಲಸಿಯಿಂದ ಅರ್ಚನೆ ಮಾಡಿದವನನ್ನು ಕಲಿಯು ಬಾಧಿಸಲಾರ. ಏಕಾದಶಿಯಂದು ಸಂತೋಷದಿಂದ ಉಪವಾಸ ಮಾಡಿ ನನ್ನನ್ನು ಪೂಜಿಸಿ ದ್ವಾದಶಿಯಂದು ವೈಷ್ಣವರಿಗೆ ಭೋಜನ ಮಾಡಿಸಿದವನನ್ನು ಕಲಿಯು ಬಾಧಿಸುವುದಿಲ್ಲ. ಶ್ರೋತ್ರಿಯ, ಬ್ರಾಹ್ಮಣರ ಪೂಜೆ ನಡೆಯುವ ಸ್ಥಳದಲ್ಲಿ, ಪುಣ್ಯವಂತರಾದ ವಿಷ್ಣುಭಕ್ತರು ವಾಸ ಮಾಡುವಲ್ಲಿ ವಿಷ್ಣುಕಥೆಗಳು ನಡೆಯುವ ಸ್ಥಳದಲ್ಲಿ ಹರಿಯು ಸನ್ನಿಹಿತನಾಗಿರುವನು. ಹರಿಯಿದ್ದಲ್ಲಿ ಲಕ್ಷ್ಮಿಯ ಆವಾಸ, ವಿದ್ಯಾಭಿಮಾನಿನಿಯಾದ ಲಕ್ಷ್ಮಿಯಿದ್ದೆಡೆ ವೇದಗಳಿರುವವು. ವೇದಗಳಿದ್ದೆಡೆ ದೇವತೆಗಳು, ದೇವತೆಗಳಿದ್ದಲ್ಲಿ ಜಯವಾಗುವುದು. ಜಯವಿರುವೆಡೆ ಶುದ್ಧಿ, ಶುದ್ಧಿಯಿಂದ ಧನ, ಧನವಿರುವಲ್ಲಿ ಅನ್ನಾದಿಗಳು, ಅನ್ನವಿದ್ದರೆ ದಾನ, ಅನ್ನದಾನವೇ ಕಲಿಯುಗದಲ್ಲಿ ದೊಡ್ಡ ತಪವೆನ್ನಿಸುವುದು. ಅನ್ನವೇ ಪರಬ್ರಹ್ಮ-ವೆನಿಸುವುದು. ಜೀವಸಂಕುಲವೆಲ್ಲ ಅನ್ನವನ್ನು ಆಶ್ರಯಿಸಿದೆ. ಬರಗಾಲದಲ್ಲಿ ಅನ್ನದಾನ ಹಾಗೂ ಸುಭಿಕ್ಷಕಾಲದಲ್ಲಿ ಸುವರ್ಣದಾನ ಮಾಡುವವನನ್ನು, ರಣರಂಗದಲ್ಲಿ ಬೆನ್ನು ತೋರಿಸದವನನ್ನು, ಪಡೆದ ಸಾಲವನ್ನು ತೀರಿಸಿ ಶುಚಿಯೆನಿಸಿದವನನ್ನು ಸ್ವಯಂ ನಾನು ನಮಸ್ಕರಿಸುವೆನು. ಮಾಘಮಾಸ ಹಾಗೂ ಕಾರ್ತಿಕ ಮಾಸಗಳಲ್ಲಿ ಮಹಾನದಿಗಳಲ್ಲಿ ಸ್ನಾನ ಮಾಡಿದವನನ್ನು ಕಲಿಯು ಬಾಧಿಸಲಾರ. ವೈಶಾಖಮಾಸದಲ್ಲಿ ಮೊಸರುಬುತ್ತಿ, ಕಾರ್ತಿಕಮಾಸದಲ್ಲಿ ದೀಪವನ್ನು

ಹಾಗೂ ಮಾಘಮಾಸದಲ್ಲಿ ಕಂಬಳಿಯನ್ನು ದಾನ ಮಾಡಿದವನನ್ನು ಕಲಿಯು ಬಾಧಿಸಲಾರ. ನಿತ್ಯದಲ್ಲಿ ಪಂಚ ಮಹಾಯಜ್ಞಗಳನ್ನು ಆಚರಿಸಿದವನನ್ನು ಕಲಿಯು ಬಾಧಿಸುವುದಿಲ್ಲ. ನಿತ್ಯದಲ್ಲಿ ಭಾಗವತವನ್ನು ಕೇಳುವವನನ್ನು ಹಾಗೂ ಗೀತೆಯನ್ನು ಪಠಿಸುವವನನ್ನು ಕಲಿಯು ಬಾಧಿಸಲಾರ. ದ್ವಾದಶಾಕ್ಷರಮಂತ್ರವನ್ನು ಜಪಿಸುವವನು ಹಾಗೂ ಪ್ರಾತಃಕಾಲದಲ್ಲಿ ಮಹಾಭಾರತವನ್ನು ಪಠಿಸಿದವನು ಅಥವಾ ಕೇಳುವವನು, ವಿಷ್ಣುಸಹಸ್ರನಾಮಗಳನ್ನು ಪಠಿಸುವವನನ್ನು ಕಲಿಯು ಬಾಧಿಸಲಾರ. ವಿಷ್ಣುಚರಿತೆ-ಯನ್ನು ಹಾಗೂ ವೈಷ್ಣವಚರಿತೆಗಳನ್ನು ಬ್ರಾಹ್ಮಣರಿಗೆ ಹೇಳುವವನನ್ನು ಕಲಿಯು ಬಾಧಿಸಲಾರ. ಮಧ್ಯಾಹ್ನಕಾಲದಲ್ಲಿ ರಾಮಾಯಣ ಹಾಗೂ ಸಚ್ಛಾಸ್ತ್ರಗಳನ್ನು ಪಠಿಸುವವನು, ವಿಷ್ಣುವಿನ ದೇವಾಲಯಗಳನ್ನು ನಿರ್ಮಿಸುವವನು, ವಿಷ್ಣುಧರ್ಮ-ಗಳನ್ನು ಆಚರಿಸುವವನು, ಹರಿಪೂಜೆಯ ಸಾಧನಗಳನ್ನು ದಾನ ಮಾಡುವವನು, ವಿಷ್ಣುಪ್ರೀತಿಗಾಗಿ ಅರವಟ್ಟಿಗೆ ಉದ್ಯಾನವನಗಳನ್ನು ನಿರ್ಮಿಸುವವನು, ದೇವರ ಪೂಜೆಗಾಗಿ ಬಿಲ್ವಪತ್ರೆ, ತುಲಸಿ ಮುಂತಾದ ಪತ್ರಗಳನ್ನು, ಕಮಲ, ಸಂಪಿಗೆ, ಮೊದಲಾದ ಪುಷ್ಪಗಳನ್ನು ಪೂಜಕರಿಗೆ ನೀಡುವವರನ್ನು ಕಲಿಯು ಬಾಧಿಸಲಾರ. ಎಲ್ಲ ಪ್ರಾಣಿಗಳಲ್ಲಿ ದಯಾವಂತನೂ, ಎಲ್ಲರಿಗೂ ಉಪಕಾರ ಮಾಡುವವನು ಹಾಗೂ ಸರ್ವಪಿತೃಗಳ ಪ್ರೀತಿಗಾಗಿ ಮಹಾಲಯ (ಪಿತೃಪಕ್ಷ) ವನ್ನು ಆಚರಿಸುವವನನ್ನು ಕಲಿಯು ಬಾಧಿಸಲಾರ. ನಿತ್ಯವೂ ತಂದೆ-ತಾಯಿಗಳನ್ನು ಸೇವಿಸುವವನು, ಗುರುಗಳಲ್ಲಿ ಭಕ್ತಿಯುಳ್ಳವನು, ಬ್ರಾಹ್ಮಣರನ್ನು ನಮಸ್ಕರಿಸುವವನನ್ನು ಕಲಿಯು ಬಾಧಿಸಲಾರ. ಪತಿಯ ಆಜ್ಞೆಯನ್ನು ಪಾಲಿಸುವವಳು, ನಿರಂತರ ಪತಿಯನ್ನು ಸೇವಿಸುವಳನ್ನು ಕಲಿಯು ಬಾಧಿಸಲಾರ. ಪತಿಯ ಸೇವೆಯು ಸ್ತ್ರೀಯರಿಗೆ ಸ್ವರ್ಗದ ಸೋಪಾನವೇ ಸರಿ. ಮಿತ್ರನೇ ಹೆಚ್ಚು ಹೇಳುವುದರಿಂದೇನು? ಎಲ್ಲ ಪ್ರಾಣಿಗಳಲ್ಲಿ ದಯೆ ತೋರುವವನನ್ನು ಕಲಿಯು ಬಾಧಿಸುವುದಿಲ್ಲ. ನಿರಂತರವಾಗಿ ನನ್ನನ್ನು ಭಜಿಸಿದವನು ಎಲ್ಲ ಪಾಪಗಳಿಂದ ಮುಕ್ತನಾಗುವನು. ಆದುದರಿಂದ ಗೆಳೆಯನೇ ಯಾವಾಗಲೂ ಮಹಾಪ್ರಯತ್ನಪೂರ್ವಕ ನನ್ನನ್ನು ಭಜಿಸು.

**॥ ಇಲ್ಲಿಗೆ ಇಪ್ಪತ್ತೆರಡನೇ ಅಧ್ಯಾಯವು ಮುಗಿಯಿತು ॥**

★★★

# ಇಪ್ಪತ್ತೂರನೇ ಅಧ್ಯಾಯ

ಸೂತರು ಹೇಳುವರು. ಇನ್ನು ಮುಂದೆ ಶಬರಿಯ ಚರಿತೆಯನ್ನು ಹೇಳುತ್ತೇವೆ. ಶಬರಿಯು ನಿತ್ಯದಲ್ಲಿ ರಾಮನಲ್ಲಿ ಭಕ್ತಿಯಿರಿಸಿ ರುಚಿಕರವಾದ ಗಡ್ಡೆ ಗೆಣಸುಗಳನ್ನು ಹಾಗೂ ಹಣ್ಣುಗಳನ್ನು ಸ್ವಲ್ಪ ತಿಂದು ರುಚಿಯನ್ನು ಪರೀಕ್ಷೆ ಮಾಡಿ ನಂತರ ರಾಮನಿಗೆ ಸಮರ್ಪಿಸುತ್ತಿದ್ದಳು ಎಂದು ಹೇಳಲು ಋಷಿಗಳೆಲ್ಲ ಸೂತರನ್ನು ಪ್ರಾರ್ಥಿಸಿದರು. ಮಹಾಜ್ಞಾನಿಗಳೂ, ಪುರಾಣಗಳ ರಹಸ್ಯಗಳನ್ನೆಲ್ಲ ಅರಿತವರೂ ಆದ ತಾವು ನಮಗೆ ಶಬರಿಯ ಆಖ್ಯಾನವನ್ನು ಹೇಳುವ ಕೃಪೆ ಮಾಡಬೇಕು ಎನ್ನಲು ಸೂತರು ಹೇಳಿದರು. ಹಿಂದೆ ದೇವೋತ್ತಮನಾದ ಕೃಷ್ಣನು ದಧಿಪಾಲನಿಗೆ ಹೇಳಿದ ಇತಿಹಾಸ ಹಾಗೂ ವಿಶೇಷವಾಗಿ ಭಕ್ತಿಮಾರ್ಗವನ್ನು ಹೇಳುವೆನು ಎಂದರು. ಶ್ರೀಕೃಷ್ಣನು ದಧಿಪಾಲನಿಗೆ ಹೇಳಲು ಉಪಕ್ರಮಿಸಿದನು. ಹಿಂದೆ ನನ್ನ ಭಕ್ತಿರಸದಲ್ಲೇ ತೃಪ್ತಳಾದ ಶಬರಿ ಎಂಬುವವಳಿದ್ದಳು. ಯಾವಾಗಲೂ ನನ್ನಲ್ಲೇ ಮನವಿರಿಸಿದ ಅವಳು ತನ್ನ ಶರೀರರಕ್ಷಣೆಗೂ ಗಮನ ನೀಡುತ್ತಿರಲಿಲ್ಲ. ಫಲಮೂಲಗಳನ್ನು ತಾನು ತಿಂದು ಸ್ವಾದವನ್ನು ಅರಿತ ನಂತರ ಗುಣದೋಷಗಳನ್ನು ಅರಿಯದ ಅವಳು ಒಳ್ಳೆಯ ಸ್ವಾದುರಸದಿಂದ ಯುಕ್ತವಾದುದನ್ನು ನನಗಿತ್ತು ರಸಹೀನವಾದವುಗಳನ್ನು ತಾನು ಸೇವಿಸುತ್ತಿದ್ದಳು.

ಪರಬ್ರಹ್ಮನೆನಿಸಿದ ವಿಷ್ಣುವು ರಾಮನೆಂಬ ಹೆಸರಿನಿಂದ ರಘುವಂಶದಲ್ಲಿ ಅವತರಿಸಿ ರಾವಣನ ವಧೆಗಾಗಿ ವನಕ್ಕೆ ತೆರಳಿದ. ವನದಲ್ಲಿ ತಮ್ಮನ ಜತೆಗೂಡಿ ಶಬರಿಯ ಆಶ್ರಮಕ್ಕೆ ತೆರಳಿದ. ತನ್ನಲ್ಲಿಗೆ ಬಂದ ರಾಮನನ್ನು ಕಂಡು ಸಾಧು-ಸ್ವಭಾವದ ಶಬರಿಯು ನೀರು ತುಂಬಿದ ಕಣ್ಣುಗಳಿಂದ, ಮಾತು ಬಾರದೇ ಗದ್ಗದ-ಕಂಠದಿಂದ, ಅತ್ಯಂತ ಕೃಶಳಾದ ಆ ತಪಸ್ವಿನಿಯು ನಡುಗುತ್ತ ಕೈಮುಗಿದು ನಿಂತಳು. ರಾಮನು ಕೂಡ ಅವಳು ನೀಡಿದ ಎಂಜಲನ್ನು ಪ್ರೀತಿಯಿಂದ ಸ್ವೀಕರಿಸಿ ತಾನು ಭಕ್ತಪ್ರಿಯನು. ದಯಾನಿಧಿಯು ಎಂದು ತೋರಿದ. ಶಬರಿಯ ನಿಷ್ಠೆ ಭಕ್ತಿಗಳನ್ನು ಕಂಡು ವಿಸ್ಮಿತನಾದ ರಾಮನು ಅವಳ ವೈರಾಗ್ಯದಿಂದ ಪ್ರೀತನಾಗಿ ನಗುತ್ತ ನುಡಿದ. ಹೇ ಶಬರಿಯೇ! ನಿನ್ನ ಭಕ್ತಿ ಹಾಗೂ ಸತ್ಕಾರಗಳಿಂದ ನಾನು ಪ್ರೀತನಾಗಿದ್ದೇನೆ. ಬೇಕಾದ ವರವನ್ನು ಕೇಳು. ಇಚ್ಛಾಮಾತ್ರದಿಂದ ಸಮಸ್ತ ಕಾರ್ಯಗಳನ್ನು ನಿರ್ವಹಿಸಬಲ್ಲ ರಾಮನು ಹೀಗೆ ಹೇಳಲು, ಸಂತಸದಿಂದ ನಡುಗುತ್ತಿರುವ ಶಬರಿಯು ಕೈಮುಗಿದು ಬೇಡಿದಳು. ಭಗವಂತನೇ! ನೀನು ಪ್ರೀತನಾಗಿ ನನಗೆ ಅನುಗ್ರಹಿಸುವುದಾದರೆ ನಾನು ನಿನ್ನ ಸೇವೆಯನ್ನೇ ಬೇಡುವೆನು. ಇದೇ ನನಗೆ ಬೇಕಾದ ಉತ್ತಮ ವರವೆಂದು ತಿಳಿ. ಹೇ ವಿಷ್ಣುವೇ! ನಿನ್ನ ಸೇವೆಯನ್ನು ಬಿಟ್ಟು ಅಷ್ಟೈಶ್ವರ್ಯಗಳನ್ನು ನೀಡಿದರೂ ನಾನೊಲ್ಲೆ. ಯೋಗಸಿದ್ಧಿಗಳನ್ನಾಗಲೀ, ಕೊನೆಗೆ

ನಿನ್ನ ಸಾಯುಜ್ಯವನ್ನು ಕೂಡ ನಾನು ಅಪೇಕ್ಷಿಸುವುದಿಲ್ಲ. ಅವಳ ನಿಷ್ಕಾಮ ಭಕ್ತಿಯಿಂದ ಪ್ರೀತನಾದ ಜಗದೊಡೆಯನಾದ ರಾಮನು ಅವಳಿಗೆ ಹೇಳಿದ. ನನ್ನನ್ನೇ ನೆನೆಯುತ್ತ, ನನ್ನ ಕಥೆಯನ್ನಾಲಿಸುತ್ತ, ನನ್ನನ್ನು ಪೂಜಿಸುತ್ತ, ಇಲ್ಲಿಯ ಮುನಿಗಳನ್ನು ಸೇವಿಸುತ್ತ ನೀನು ಈ ವನದಲ್ಲಿ ನೆಲೆಸು. ಭಕ್ತಿಯಿಂದ ನನ್ನನ್ನು ಸೇವಿಸಿದ ನೀನು ಮುಂದಿನ ಜನ್ಮದಲ್ಲಿ ನನ್ನಿಂದ ಆದರಣೀಯಳಾದ ಸ್ತ್ರೀಯಾಗಿ ಜನಿಸುವೆ. ನನ್ನ ಅನುಗ್ರಹಸಂಪಾದನೆಗೆ ಸಾಧನವಾದ ಈ ಶರೀರವನ್ನು ವ್ಯರ್ಥವಾಗಿ ದಂಡಿಸಬೇಡ. ನಿತ್ಯದಲ್ಲೂ ಪುಣ್ಯಕಾರ್ಯಗಳನ್ನಾಚರಿಸು. ದೇಹವು ಅನಿತ್ಯವೆಂದರಿತು ನಿತ್ಯನಾದ ನನ್ನನ್ನು ಚಿಂತಿಸು. ರಾಮನು ಹೀಗೆ ಆಜ್ಞೆಮಾಡಿ ತೆರಳಲು ಶಬರಿಯು ಧನುರ್ಮಾಸದ ಉಷಃಕಾಲದಲ್ಲಿ ಭಗವಂತನನ್ನು ಪೂಜಿಸಿದಳು. ದೇವೋತ್ತಮನಾದ ಶ್ರೀಹರಿಗೆ ಶ್ರದ್ಧೆಯಿಂದ ಮುದ್ಗಾನ್ನವನ್ನು ಸಮರ್ಪಿಸಿ ಆ ಪುಣ್ಯಪ್ರಭಾವದಿಂದ ಯದುಕುಲದಲ್ಲಿ ಜನಿಸಿದಳು. ಅವಳೇ ನನ್ನ ತಂಗಿಯಾಗಿರುವ ಸುಭದ್ರೆಯು. ನಮಗೆಲ್ಲ ಮಂಗಳವನ್ನುಂಟು ಮಾಡುತ್ತ ಅರ್ಜುನನ ಪತ್ನಿಯಾಗಿ ಕೊನೆಗೆ ನನ್ನ ಲೋಕವನ್ನು ಹೊಂದುವಳು.

ಹೀಗೆ ಹೇಳಲು ದಧಿಪಾಲನು ಕೇಳಿದನು. ದಯಾಸಿಂಧುವಾದ ಕೃಷ್ಣನೇ! ಯಾವ ಪುಣ್ಯದ ಕಾರಣದಿಂದ ಸುಭದ್ರೆಯು ಅರ್ಜುನನ ಪತ್ನಿಯಾದಳು? ಇದನ್ನು ವಿಸ್ತಾರವಾಗಿ ತಿಳಿಸಬೇಕು ಎನ್ನಲು ಕೃಷ್ಣನು ಹೇಳಲಾರಂಭಿಸಿದನು.

ಗೆಳೆಯನೇ! ಸುಭದ್ರೆಯ ಸ್ವಾರಸ್ಯಕರ ವೃತ್ತಾಂತವನ್ನು ಕೇಳು. ಸುಭದ್ರೆಯು ವಿವಾಹಯೋಗ್ಯ ವಯಸ್ಕಳಾಗಲು ತಂದೆಯಾದ ವಸುದೇವ ಹಾಗೂ ತಾಯಿಯಾದ ರೋಹಿಣಿಯು ಸುಭದ್ರೆಯನ್ನು ಯಾರಿಗೆ ನೀಡಿ ವಿವಾಹ ಮಾಡಬೇಕೆಂದು ಚಿಂತೆಗೊಳಗಾದರು. ನನ್ನೊಡನೆ ಹಾಗೂ ಅನೇಕ ಬಾಂಧವರೊಡನೆ ವಿಚಾರಿಸಿ ಸುಭದ್ರೆಯ ವಿವಾಹವನ್ನು ಅರ್ಜುನನೊಡನೆ ಮಾಡಬೇಕೆಂದು ನಿರ್ಧರಿಸಿದರು. ಆದರೆ ಬಲರಾಮನೇ ಮೊದಲಾದ ಯಾದವರು ದುರ್ಯೋಧನನಿಗೆ ನೀಡಬೇಕೆಂದು ನಿಶ್ಚಯಿಸಿದರು. ಸುಭದ್ರೆಯು ಅರ್ಜುನನೇ ತನ್ನ ಪತಿಯಾಗಲೆಂದು ನಿತ್ಯದಲ್ಲೂ ನನ್ನನ್ನು ಪ್ರಾರ್ಥಿಸುತ್ತಿದ್ದಳು. ದೇವೇಶನೇ! ಯಾವ ಉಪಾಯದಿಂದ ನಾನು ಅರ್ಜುನನ ಪತ್ನಿಯಾಗುವೆನು? ಎಂದು ಕೇಳಿದ ಸುಭದ್ರೆಗೆ ಕೃಷ್ಣನು ಅವಳ ಮನದ ಇಚ್ಛೆಯನ್ನು ಪೂರೈಸುವುದಾಗಿ ಆಶ್ವಾಸನೆ ನೀಡಿದನು. ಚಿಂತಿತಳಾದ ಸುಭದ್ರೆಯು ಕೃಷ್ಣನಿಗೆ ಹೇಳಿದಳು. ಬಲರಾಮ ಮೊದಲಾದವರೆಲ್ಲ ದುರ್ಯೋಧನನಿಗೆ ನೀಡುವುದಾಗಿ ಹೇಳುತ್ತಿದ್ದಾರೆ. ಮಹಾಪಾಪಿಯಾದ ದುರ್ಯೋಧನನನ್ನು ನಾನೆಂದೂ ಪತಿಯಾಗಿ ಸ್ವೀಕರಿಸಲಾರೆ. ಅವನಿಗೇ ನನ್ನನ್ನು ನೀಡಿದರೆ ನಿಶ್ಚಿತವಾಗಿ ಪ್ರಾಣವನ್ನೇ ತ್ಯಜಿಸುವೆನು. ಹೀಗೆ ನುಡಿದ ತಂಗಿಯ ಮಾತನ್ನು ಕೇಳಿದ ಕೃಷ್ಣನು ಗಂಭೀರವಾಗಿ ನುಡಿದನು.

ಮಂಗಳೆಯೇ! ನನ್ನ ಮಾತನ್ನು ಕೇಳು. ನಿನಗೊಂದು ಉಪಾಯವನ್ನು ಹೇಳುವೆನು. ಧನುರ್ಮಾಸದಲ್ಲಿ ಶ್ರೀಹರಿಗೆ ಪ್ರಿಯವಾದ ಮುದ್ಗಾನ್ನವನ್ನು ತಯಾರಿಸು. ಉಷಃಕಾಲದಲ್ಲಿ ದೇವೇಶನನ್ನು ಪೂಜಿಸಿ ಮುದ್ಗಾನ್ನವನ್ನು ಸಮರ್ಪಿಸು. ಈ ರೀತಿ ಮಾಡಿದರೆ ನೀನು ಖಂಡಿತವಾಗಿ ಅರ್ಜುನನ ಪತ್ನಿಯಾಗುವೆ ಎಂದು ಹೇಳಿದಳು. ಸುಭದ್ರೆಯು ಹಾಗೆಯೇ ಮಾಡಿ ಅರ್ಜುನನ ಪತ್ನಿಯೆನಿಸಿದಳು.

ಮತ್ತೆ ಕೃಷ್ಣನು ದಧಿಪಾಲನಿಗೆ ಹೇಳಿದನು. ನನ್ನ ಪ್ರಿಯಭಕ್ತರು ಮೋಕ್ಷವನ್ನು ಕೂಡ ಬೇಡುವುದಿಲ್ಲ. ಕೇವಲ ನನ್ನ ದಾಸ್ಯವನ್ನು ಮಾತ್ರ ಅಪೇಕ್ಷಿಸುವರು. ಅದು ಅವರಿಗೆ ಮೋಕ್ಷಕ್ಕಿಂತಲೂ ಹೆಚ್ಚು ಬೆಲೆಯುಳ್ಳದ್ದು. ನನ್ನನ್ನೇ ಶ್ರದ್ಧೆಯಿಂದ ಸೇವಿಸಿದ ಜಾಂಬವಂತನು ಕೊನೆಗೆ ನನ್ನನ್ನೇ ಹೊಂದಿದನು ಎಂದು ಹೇಳಲು ದಧಿಪಾಲನು ಮಿತ್ರನೇ! ಈ ಜಾಂಬವಂತನಾರು, ಈತನಿದ್ದುದು ಯಾವಾಗ, ಅವನು ನಿನ್ನಲ್ಲಿ ಹೇಗೆ ಭಕ್ತಿ ಮಾಡಿದನು. ಇದನ್ನೆಲ್ಲ ವಿಸ್ತಾರವಾಗಿ ಹೇಳು ಎಂದು ಬೇಡಲು ಕೃಷ್ಣನು ಹೇಳಲುಪಕ್ರಮಿಸಿದನು.

ಹಿಂದೆ ತ್ರೇತಾಯುಗದಲ್ಲಿ ಲಕ್ಷ್ಮೀಪತಿಯಾದ ಶ್ರೀಹರಿಯು ದಶರಥನ ಮಗನಾಗಿ ರಾಮನೆಂಬ ಹೆಸರಿನಿಂದ ಜನಿಸಿದಾಗ ಜಾಂಬವಂತನು ರಾಮನ ಸೇವೆ ಸಲ್ಲಿಸಿದನು. ಹೀಗೆ ಹೇಳಿದ ಕೃಷ್ಣನ ಮಾತನ್ನು ಕೇಳಿ ದಧಿಪಾಲನು ಕೇಳಿದನು. ಮಹಾ ಬಲಶಾಲಿಯಾದ ಜಾಂಬವಂತನು ಯಾರ ಮಗನು? ಅವನು ಹೇಗೆ ಜನಿಸಿದನು? ಅವನು ರಾಮನಿಗೆ ಯುದ್ಧದಲ್ಲಿ ಸಹಾಯ ಮಾಡಿದ ಬಗೆ ಹೇಗೆ? ಎಂದು ಪ್ರಶ್ನಿಸಲು ಶ್ರೀಕೃಷ್ಣನು ಹೇಳುತ್ತಾನೆ. ಬ್ರಹ್ಮದೇವರ ಮಗನಾದ ಇವನು ಕರಡಿಗಳ ರಾಜನು. ಮಹಾಜ್ಞಾನಿಯು, ಬಲದಲ್ಲಿ ಕುಲಪರ್ವತದಂಥವನು. ಬೃಹಸ್ಪತಿಯಂತೆ ಶಾಸ್ತ್ರಜ್ಞನು. ಸಮುದ್ರದಂತೆ ಗಂಭೀರನು. ವೇಗದಲ್ಲಿ ಮನೋವೇಗ, ವಾಯುವೇಗಕ್ಕೆ ಸಮನಾದವನು. ಸೂರ್ಯನಂತೆ ತೇಜಸ್ವಿಯು. ಬುದ್ಧಿವಂತನು. ನೀತಿಶಾಸ್ತ್ರಗಳನ್ನರಿತವನು. ಜ್ಞಾನವೃದ್ಧನು, ವಯೋವೃದ್ಧನು, ಅತಿ ಬಲಶಾಲಿಯಾದ ಮಹಾಯೋಗಿಯು, ದೈತ್ಯರು, ದಾನವರು, ಗಂಧರ್ವರು, ಪಿಶಾಚರು, ನಾಗಗಳು, ರಾಕ್ಷಸರು, ಇಂದ್ರಾದಿದೇವತೆಗಳು, ಸಿದ್ಧರು, ಚಾರಣರು, ಕಿನ್ನರರು, ಗುಹ್ಯಕರು, ಯಕ್ಷರು ಮುಂತಾದವರೆಲ್ಲ ಪ್ರಲಯಾಗ್ನಿಯಂತೆ ತೋರುತ್ತಿದ್ದ ಅವನನ್ನು ಯುದ್ಧದಲ್ಲಿ ಎದುರಿಸಲು ಸಮರ್ಥರಾಗಿರಲಿಲ್ಲ. ಹಿಂದೆ ಕ್ಷೀರಸಾಗರವನ್ನು ಮಥಿಸುವ ಸಂದರ್ಭದಲ್ಲಿ ಒಂದು ಪಕ್ಕದಲ್ಲಿ ಒಬ್ಬನೇ ನಿಂತಿದ್ದನು. ವಿಷ್ಣುವು ತ್ರಿವಿಕ್ರಮಾವತಾರವನ್ನು ಮಾಡಿದಾಗ ಭೇರಿ ಮೊದಲಾದವುಗಳನ್ನು ಬಾರಿಸುತ್ತ ಇಪ್ಪತ್ತೊಂದು ಬಾರಿ ಪ್ರದಕ್ಷಿಣೆ ಮಾಡಿದನು. ಬೇರಾರೂ ಚಿಂತಿಸಲಾಗದ ಅದ್ಭುತ ಸಹಾಯವನ್ನು ಶ್ರೀರಾಮನಿಗೆ ಮಾಡಿದನು. ರಾಕ್ಷಸರೊಂದಿಗಿನ ರಾಮನ ಯುದ್ಧದಲ್ಲಿ ಜಾಂಬವಂತನ ಪರಾಕ್ರಮವನ್ನು ಕಂಡು ರಾವಣನು ಕೂಡ ಆಶ್ಚರ್ಯ

ಹೊಂದಿದನು. ರಾಮಭಕ್ತನಾದ ಜಾಂಬವಂತನು ಮಹಾಪರಾಕ್ರಮಿಯು. ಇಂದ್ರಿಯ ಚಾಪಲ್ಯರಹಿತನು. ಅವನಿಗೆ ಜಾಂಬವತೀ ಎಂಬ ಹೆಸರಿನ ಮಗಳಿದ್ದಳು. ಆ ಕನ್ಯೆಯನ್ನು ನನಗೆ ಭಕ್ತಿಯಿಂದ ಸಮರ್ಪಿಸಿದನು. ಎನ್ನಲು ದಧಿಪಾಲನು ಯಾವ ಪುಣ್ಯಪ್ರಭಾವದಿಂದ ಜಾಂಬವತಿಯು ನಿನಗೆ ಪ್ರಿಯಳೆನಿಸಿದಳು ಎಂದು ಹೇಳಬೇಕೆಂದು ಪ್ರಾರ್ಥಿಸಲು ಕೃಷ್ಣನು ಹೇಳತೊಡಗಿದನು.

ಜಾಂಬವತಿಯು ಹಿಂದೆ ಚಂದ್ರನ ಪುತ್ರಿಯು. ವಿಷ್ಣುಭಕ್ತಳು. ನಿತ್ಯದಲ್ಲೂ ವಿಷ್ಣುಚರಿತೆಯನ್ನು ಕೇಳಲು ಅಪಾರ ಆಸಕ್ತಿಯುಳ್ಳವಳು. ಪ್ರಾಜ್ಞಳಾದ ಆ ಚಂದ್ರಪುತ್ರಿಯು ತೀರ್ಥಯಾತ್ರೆಯನ್ನು ಮಾಡಲು ಇಚ್ಛಿಸಿ ದಯಾನಿಧಿಯಾದ ಶ್ರೀನಿವಾಸನನ್ನು ಯಾವಾಗ ಕಾಣುವೆನೆಂದು ಚಿಂತಿಸುತ್ತ, ಪುರೋಹಿತರೊಂದಿಗೆ ವೇಂಕಟಾಚಲಕ್ಕೆ ಬಂದಳು. ಸ್ವಾಮಿಪುಷ್ಕರಣಿಯಲ್ಲಿ ಸ್ನಾನ ಮಾಡಿ ಶ್ರೀನಿವಾಸನ ದರುಶನ ಪಡೆದಳು. ದೇವದೇವನಾದ ಶ್ರೀನಿವಾಸನನ್ನು ಭಕ್ತಿಯಿಂದ ನಮಸ್ಕರಿಸಿ ಪ್ರಾರ್ಥಿಸಿದಳು. ಮಾರ್ಗಶೀರ್ಷದ ಧನುರ್ಮಾಸದಲ್ಲಿ ನಿರಂತರ ಒಂದು ತಿಂಗಳಿನವರೆಗೆ ಮುದ್ಗಾನ್ನವನ್ನು ನಿವೇದಿಸಿ ಶ್ರದ್ಧೆಯಿಂದ ಪೂಜೆ ಮಾಡಿದಳು. ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ದ್ವಾದಶಿಯ ಅರುಣೋದಯದ ಸಮಯದಲ್ಲಿ ಎಲ್ಲ ತೀರ್ಥಗಳು ಸ್ವಾಮಿಪುಷ್ಕರಣಿಯಲ್ಲಿ ಸನ್ನಿಹಿತವಾಗಿರುತ್ತವೆ. ಆ ದಿನ ಅಲ್ಲಿ ಸ್ನಾನ ಮಾಡಿ ಆ ಚಂದ್ರಪುತ್ರಿಯು ಸರ್ವಪಾಪಗಳಿಂದ ಮುಕ್ತಳಾದಳು. ಭಕ್ತಳಾದ ಅವಳನ್ನು ನೋಡಿ ದಯಾನಿಧಿಯಾದ ಶ್ರೀನಿವಾಸನು ಬೇಕಾದ ವರವನ್ನು ಬೇಡು ಎಂದನು. ಶ್ರೀನಿವಾಸನ ಕರುಣೆಯಿಂದ ಗದ್ಗದಿತಳಾದ ಅವಳು ತುಂಬಿದ ಕಂಠದಿಂದ ಪ್ರಾರ್ಥಿಸಿದಳು. ಹೇ ದೇವತೆಗಳ ಒಡೆಯನೇ! ಕಾರುಣ್ಯಸಿಂಧುವೇ! ನಿನ್ನ ಅಂಗಸಂಗದ ಸೌಭಾಗ್ಯವನ್ನು ನೀಡು. ಹೀಗೆ ಪ್ರಾರ್ಥಿಸಿದ ಅವಳ ಕೋರಿಕೆಯನ್ನಾಲಿಸಿ ಅವಳಿಗೆ ಆನಂದ ನೀಡುತ್ತ ಶ್ರೀನಿವಾಸನು ಹೀಗೆ ನುಡಿದನು. ದ್ವಾಪರಯುಗದ ಕೊನೆಯಲ್ಲಿ ನಾನು ಯದುಕುಲದಲ್ಲಿ ಕೃಷ್ಣನೆಂಬ ಹೆಸರಿನಿಂದ ಅವತರಿಸುವೆನು. ಆಗ ನಿನ್ನನ್ನು ಪತ್ನಿಯನ್ನಾಗಿ ಸ್ವೀಕರಿಸಿ ನನ್ನ ಅಂಗಸಂಗದ ಭಾಗ್ಯವನ್ನು ನೀಡುವೆನು. ದೇವದೇವನಾದ ಶ್ರೀನಿವಾಸನಿಂದ ಹೀಗೆ ಹೇಳಲ್ಪಟ್ಟ ಚಂದ್ರಪುತ್ರಿಯೇ ಈಗ ಜಾಂಬವಂತನ ಮಗಳಾಗಿ ಜನಿಸಿ ನನ್ನ ಪತ್ನಿಯೆನಿಸಿರುವಳು. ಧನುರ್ಮಾಸದ ಆಚರಣೆಯ ಪ್ರಭಾವದಿಂದ ಶಾಶ್ವತ ಭಕ್ತಿಯು ಒದಗುವುದು. ಹಿಂದೆ ಭರತನು ಧನುರ್ಮಾಸದಲ್ಲಿ ಹರಿಯನ್ನು ಪೂಜಿಸಿ ತನ್ನ ಇಷ್ಟಾರ್ಥಗಳನ್ನು ಪಡೆದುಕೊಂಡನು. ಸುಭದ್ರೆ ಹಾಗೂ ಜಾಂಬವತಿಯರ ಈ ಮಂಗಲಚರಿತೆಯನ್ನು ನೀನು ಕೇಳಿದೆಯಷ್ಟೇ? ಶ್ರೇಷ್ಠವಾದ ಈ ವ್ಯಾಖ್ಯಾನವನ್ನು ಭಕ್ತಿಯಿಂದ ಕೇಳುವ ಜನಗಳ ಎಲ್ಲ ಕಾಮನೆಗಳು ಪೂರೈಸುವವು. ಇದು ಸತ್ಯವಾದುದು. ಇದರಲ್ಲಿ ಯಾವುದೇ ಸಂದೇಹವಿಲ್ಲ.

**॥ ಇಲ್ಲಿಗೆ ಇಪ್ಪತ್ತೂರನೇ ಅಧ್ಯಾಯವು ಮುಗಿಯಿತು ॥**

# ಇಪ್ಪತ್ನಾಲ್ಕನೇ ಅಧ್ಯಾಯ

ದಧಿಪಾಲನು ಕೇಳುತ್ತಾನೆ. ನಿನ್ನ ಮುಖಾರವಿಂದದಿಂದ ಹೊರಸೂಸುವ ಧನುರ್ಮಾಸದ ಮಹಿಮೆಯನ್ನು ಅದೆಷ್ಟು ಕೇಳಿದರೂ ಸಾಕೆನಿಸುತ್ತಿಲ್ಲ. ಅದಕ್ಕಾಗಿ ಇನ್ನೂ ವಿಸ್ತಾರವಾಗಿ ಹೇಳಬೇಕು. ಮಹಾತೇಜಸ್ವಿಯಾದ ಭರತನು ಧನುರ್ಮಾಸದಲ್ಲಿ ಹೇಗೆ ಪೂಜೆ ಮಾಡಿದ? ಅವನು ಇಷ್ಟಾರ್ಥಗಳನ್ನು ಪಡೆದ ಬಗೆ ಹೇಗೆ? ಎಂಬುದನ್ನು ದೇವದೇವನಾದ ನೀನು ನನಗೆ ದಯಮಾಡಿ ತಿಳಿಸಬೇಕು ಎನ್ನಲು ಶ್ರೀಕೃಷ್ಣನು ಹೇಳುತ್ತಾನೆ.

ಮಿತ್ರನೇ! ನೀನು ಜ್ಞಾನಿಯೂ, ಭಕ್ತಿಪೂರ್ಣನೂ, ವ್ರತಶೀಲನೂ ಆಗಿರುವೆ. ಈ ಕಥೆಯನ್ನು ನಿನಗೆ ಸಂಕ್ಷೇಪದಿಂದ ಹೇಳುವೆ ಕೇಳು. ಹಿಂದೆ ತ್ರೇತಾಯುಗದಲ್ಲಿ ದುಷ್ಟರಾದ ರಾಕ್ಷಸರು ದೇವತೆಗಳನ್ನು ಹಾಗೂ ಋಷಿಗಳನ್ನು ಬಹುವಾಗಿ ಬಾಧಿಸುತ್ತಿದ್ದರು. ಆಗ ಬ್ರಹ್ಮಾದಿದೇವತೆಗಳಿಂದ ಪ್ರಾರ್ಥಿತನಾದ ಶ್ರೀಹರಿಯು ರಾವಣನನ್ನು ಸಂಹರಿಸಿ ಜಗವ ಪೊರೆಯಲು ದಶರಥನ ಮಗನಾಗಿ ರಾಮನೆಂಬ ಹೆಸರಿನಿಂದ ಅವತರಿಸಿದನು. ವಿಶ್ವಾಮಿತ್ರರ ಪ್ರಾರ್ಥನೆಯಿಂದ ತಂದೆಯ ಪ್ರೇರಣೆಯಂತೆ ಯಜ್ಞರಕ್ಷಣೆಗಾಗಿ ಲಕ್ಷ್ಮಣನೊಡಗೂಡಿ ವಿಶ್ವಾಮಿತ್ರರ ಆಶ್ರಮಕ್ಕೆ ನಡೆದನು. ಲೋಕಭಯಂಕರಳಾದ ತಾಟಕೆಯನ್ನು ಸಂಹರಿಸಿ, ಗೌತಮರ ಶಾಪದಿಂದ ಶಿಲೆಯಾದ ಅಹಲ್ಯೆಯನ್ನು ತನ್ನ ಪಾದದ ಧೂಳಿನಿಂದ ಉದ್ಧರಿಸಿದನು.

ಜನಕನ ಯಜ್ಞದಲ್ಲಿ ಭಾಗವಹಿಸಿ ಅವನಲ್ಲಿದ್ದ ಶಿವಧನುಸ್ಸನ್ನು ಮುರಿದು ಹಾಕಿದ. ಸಾಕ್ಷಾಲ್ಲಕ್ಷ್ಮೀ ಅವತಾರಳಾದ ಸೀತೆಯನ್ನು ಪಾಣಿಗ್ರಹಣ ಮಾಡಿದನು. ತನ್ನ ಜತೆಯಲ್ಲೇ ಸೋದರರ ವಿವಾಹ ಮಾಡಿಸಿ ಜನಕನಿಂದ ಪೂಜಿತನಾಗಿ ಅಯೋಧ್ಯೆಗೆ ನಡೆದನು.

ಮಾರ್ಗದಲ್ಲಿ ಭೇಟಿಯಾದ ಕ್ಷತ್ರಿಯಕುಲಾಂತಕನಾದ ಪರಶುರಾಮದೇವರನ್ನು ಸ್ಪರ್ಧೆಯಲ್ಲಿ ಹಿಮ್ಮೆಟ್ಟಿಸಿ ಅಯೋಧ್ಯೆಯನ್ನು ಸೇರಿ ಪೂರ್ಣಿಮೆಯ ಚಂದ್ರನಂತೆ ಕಂಗೊಳಿಸಿದನು.

ಸರ್ವಜ್ಞನೂ, ಸರ್ವಶಕ್ತನೂ ಆದ ಶ್ರೀರಾಮನು ತಂದೆಯ ಮಾತನ್ನು ನಿಮಿತ್ತ ಮಾಡಿಕೊಂಡು ದಂಡಕಾರಣ್ಯವನ್ನು ಪ್ರವೇಶಿಸಿದನು. ಗುಹನಿಂದ ಆತಿಥ್ಯ ಸ್ವೀಕರಿಸಿ ಪರಮಪ್ರೀತನಾಗಿ ಭಾರದ್ವಾಜರ ಆಶ್ರಮಕ್ಕೆ ಬಂದನು (ರಾಮನಿಗೆ ಆತಿಥ್ಯ ನೀಡಿದ ಗುಹನೇ ಈಗ ಶ್ರೀಕೃಷ್ಣನಿಂದ ಉಪದೇಶ ಪಡೆಯುತ್ತಿರುವ ದಧಿಪಾಲನು) ನಂತರ ಚಿತ್ರಕೂಟಕ್ಕೆ ಬಂದು ಅಲ್ಲಿ ಎರಡು ವರ್ಷಗಳ ಕಾಲ ವಾಸ ಮಾಡಿದನು.

ಇತ್ತ ದಶರಥನು ಪುತ್ರ ವಿರಹದ ಶೋಕದಿಂದ ಮೃತನಾಗಿ ಸ್ವರ್ಗ ಸೇರಿದನು. ಭರತನು ತಂದೆಯ ಔರ್ಧ್ವದೇಹಿಕ ಕ್ರಿಯೆಗಳನ್ನೆಲ್ಲ ಮಾಡಿ ಮುಗಿಸಿ ನಾನು ರಾಮನ ಬದಲು ರಾಜ್ಯಭಾರ ಮಾಡುವುದಿಲ್ಲ ಎಂದು ಪ್ರತಿಜ್ಞೆ ಮಾಡಿದ. ಜಗತ್ಪತಿಯೂ, ಅಯೋಧ್ಯೆಯ ಅರಸನೂ ಆದ ರಾಮನಿಗೆ ನಾನು ದಾಸನು. ನನಗೆ ತಂದೆ, ತಾಯಿ, ಗೆಳೆಯ, ಸ್ವಾಮಿ, ಎಲ್ಲವೂ ರಾಮಚಂದ್ರನೇ ಆಗಿರುವನು. ರಾಮನಲ್ಲದೇ ಮತ್ತೊಬ್ಬ ದೈವವನ್ನು ನಾನರಿಯೆ. ಹೀಗೆಂದು ನಿಶ್ಚಯಿಸಿ ಭರತನು ಚಿತ್ರಕೂಟಕ್ಕೆ ಬಂದನು.

ತನ್ನೆದುರು ಬರಿನೆಲದ ಮೇಲೆ ಸಾಷ್ಟಾಂಗ ನಮಸ್ಕರಿಸಿದ ಭರತನನ್ನು ನಲಿನನೇತ್ರನಾದ ರಾಮನು ಮೇಲೆತ್ತಿ ತನ್ನ ತೊಡೆಯ ಮೇಲೆ ಕೂರಿಸಿಕೊಂಡನು. ರಾಮನು ಭರತನಿಗೆ ನೀನೇ ರಾಜ್ಯವನ್ನಾಳಬೇಕು ಎನ್ನಲು ಭರತನು ವಿನಯದಿಂದ ಕೈಮುಗಿದು ರಾಜ್ಯವನ್ನು ತಿರಸ್ಕರಿಸಿದನು. ನಿನ್ನನ್ನು ಸೇವಿಸುತ್ತ ವನದಲ್ಲೇ ವಾಸ ಮಾಡುವೆನು ಎಂದ ಭರತನನ್ನು ರಾಮನು ಮತ್ತೆ ಮತ್ತೆ ಪ್ರಶಂಸೆ ಮಾಡಿದನು. ನಂತರ ಧರ್ಮಾತ್ಮನಾದ ರಾಮನು ಧರ್ಮವನ್ನು ಉಪದೇಶ ಮಾಡಿದನು. ನಾನು ತಂದೆಯ ಸನ್ನಿಧಿಯಲ್ಲಿ ರಾಜ್ಯದಲ್ಲಿ ವಾಸ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದೇನೆ. ಆದುದರಿಂದ ನನ್ನಂಥ ಕ್ಷತ್ರಿಯನು ಮಹಾಪತ್ತಿನಲ್ಲಿದ್ದರೂ ಅಯೋಧ್ಯೆಗೆ ಹೇಗೆ ಬರಲು ಸಾಧ್ಯ? ತಂದೆ-ತಾಯಿಗಳು ಜೀವಿಸಿರುವವರೆಗೆ ಅವರ ಆಜ್ಞೆಯಂತೆ ನಡೆದವನು, ಅವರ ಮರಣಾನಂತರ ಪ್ರತಿವರ್ಷ ಶ್ರಾದ್ಧ ಮಾಡಿ ಭೂರಿ ಭೋಜನ ಮಾಡಿಸಿದವನು ಹಾಗೂ ಗಯೆಯಲ್ಲಿ ಪಿಂಡಪ್ರದಾನ ಮಾಡಿದವನು, ಇವರು ಮಾತ್ರ ಮಕ್ಕಳೆನ್ನಿಸಲು ಯೋಗ್ಯರು. ತಂದೆಯನ್ನು ದ್ವೇಷಿಸುವ ಮಗನು ಬೇರೆ ಪುರುಷನಿಂದ ಜನಿಸಿದಂತೆಯೇ ಸರಿ. ನಾರಾಯಣನನ್ನು ದ್ವೇಷಿಸುವವನು ಅಂತ್ಯಜನ ಪುತ್ರನಂತೆಯೇ ಸರಿ. ಪತಿಯನ್ನು ದ್ವೇಷಿಸುವ ಹೆಂಡತಿಯು ವ್ಯಭಿಚಾರಿಣಿಯಂತೆಯೇ ಸರಿ. ಗುರುಗಳನ್ನು ದ್ವೇಷಿಸುವ ಶಿಷ್ಯನು ರಾಕ್ಷಸನೇ ಸರಿ. ಆದುದರಿಂದ ನನಗೂ ಹಾಗೂ ನಿನಗೂ ಕೂಡ ತಂದೆಯೇ ಶ್ರೇಷ್ಠದೇವರು. ಆದುದರಿಂದ ಮಹಾಜ್ಞಾನಿಯಾದ ಭರತನೇ! ಶೀಘ್ರವಾಗಿ ಅಯೋಧ್ಯೆಗೆ ಹೊರಡು. ಹದಿನಾಲ್ಕು ವರ್ಷಗಳವರೆಗೆ ನನ್ನ ಆಜ್ಞೆಯಿಂದ ರಾಜ್ಯಭಾರ ಮಾಡು.

ನಿನಗೆ ರಾಜನೀತಿಯನ್ನು ಉಪದೇಶ ಮಾಡುವೆನು ಕೇಳು. ಸ್ತ್ರೀಯರಲ್ಲಿ ಅತಿ ವಿಶ್ವಾಸಬೇಡ. ಸ್ತ್ರೀವಶನಾಗಬೇಡ. ಒಬ್ಬನೇ ಎಂದಿಗೂ ಭೋಜನ ಮಾಡಬೇಡ. ಧನದ ಆಶೆಗೊಳಗಾಗಬೇಡ. ಭಗವಂತನ ಚರಿತೆಗಳನ್ನು ನಿರಂತರ ಶ್ರವಣ ಮಾಡು. ನಾರಾಯಣಮಂತ್ರವನ್ನು ಜಪಿಸು. ಶ್ರೀಹರಿಯ ನೈವೇದ್ಯವನ್ನು ಸ್ವೀಕರಿಸು.

ನಿವೇದಿತವಲ್ಲದ್ದನ್ನು ಎಂದಿಗೂ ಸ್ವೀಕರಿಸದಿರು. ಅಣುವಿನಷ್ಟು ಬ್ರಾಹ್ಮಣರ ಸಂಪತ್ತು ಕೂಡ ವಿಷಕ್ಕಿಂತಲೂ ಘೋರವೆಂದು ತಿಳಿ. ವಿಷವು ಕುಡಿದ ಒಬ್ಬನನ್ನು ಕೊಂದರೆ, ಬ್ರಹ್ಮಸ್ವವು ಕುಲವನ್ನೇ ನಾಶ ಮಾಡುವುದು. ಪರಾನ್ನ, ಪರನಿಂದೆ, ಪರದ್ರವ್ಯಗಳನ್ನು ಇಚ್ಛಿಸಬೇಡ. ಗೋವುಗಳ, ಬ್ರಾಹ್ಮಣರ ಹಾಗೂ ಪರಹಿತಕ್ಕಾಗಿ ಪ್ರಾಣವನ್ನಾದರೂ ನೀಡು. ಸನ್ಮಾರ್ಗದಿಂದ ಸದಾ ಶುಚಿಯಾಗಿದ್ದು ತನ್ನಂತೆಯೇ ಪರರನ್ನು ಭಾವಿಸುವವನು ದೇವರನ್ನು ಕಾಣುವನು. ಏಕಾದಶಿಯಂದು ಭಗವಂತನಿಗೆ ಭಕ್ತಿಯಿಂದ ತುಲಸಿಯ ಅರ್ಚನೆಯನ್ನು ಮಾಡು. ನಿತ್ಯದಲ್ಲಿ ಶಾಸ್ತ್ರಶ್ರವಣ ಮಾಡು. ನಿನ್ನ ಶಕ್ತಿಗೆ ವಂಚನೆ ಮಾಡದಂತೆ ವರ್ಣಾಶ್ರಮಧರ್ಮಗಳನ್ನಾಚರಿಸು. ಧನುರ್ಮಾಸದ ಅರುಣೋದಯದಲ್ಲಿ ತುಪ್ಪ, ಸಕ್ಕರೆ ಹಣ್ಣುಗಳಿಂದ ಕೂಡಿದ ಮುದ್ಗಾನ್ನವನ್ನು ನಿವೇದಿಸು. ಅದರಿಂದ ನೀನು ಜೀವನ್ಮುಕ್ತನೆನಿಸುವೆ. ಮೊಸರನ್ನು ಮಥಿಸಿ ತೆಗೆದ ಬೆಣ್ಣೆಯಂತೆ ರಾಮನು ಹೇಳಿದ ಧರ್ಮಗಳನ್ನು ಕೇಳಿದ ಭರತನು ರಾಮನಿಗೆ ಕೈಮುಗಿದು ಪ್ರಶ್ನೆ ಮಾಡಿದನು.

ಚೈತ್ರವೇ ಮೊದಲಾದ ಹನ್ನೆರಡು ಮಾಸಗಳಲ್ಲಿ ಧನುರ್ಮಾಸವೇ ಏಕೆ ಶ್ರೇಷ್ಠವು? ಹರಿಪ್ರಿಯವೂ ಆಗಿದೆ ಎಂಬುದನ್ನು ಪೂಜ್ಯನಾದ ನೀನು ವಿಸ್ತಾರವಾಗಿ ಉಪದೇಶ ಮಾಡಬೇಕು. ಭರತನು ಹೀಗೆ ಪ್ರಾರ್ಥಿಸಲು ಶ್ರೀರಾಮನು ಹೇಳಲಾರಂಭಿಸಿದನು. ಧನುರ್ಮಾಸದ ಮುದ್ಗಾನ್ನಪೂಜೆಯ ಫಲವನ್ನು ಹೇಳಲು ಸ್ವಯಂ ನಾರಾಯಣನೇ ಶಕ್ತನು. ವೈಶಾಖಮಾಸವು ಅಥರ್ವಣಾಕಾರವಾದುದು. ಕಾರ್ತಿಕ ಮಾಸವು ಋಗ್ವೇದಾಕಾರವೆನಿಸಿದೆ. ಮಾರ್ಗಶೀರ್ಷವು ಸಾಮವೇದಾಕಾರವೆನಿಸಿದರೆ, ಮಾಘವು ಯಜುರ್ವೇದಾಕಾರವಾಗಿದೆ. ಮಾಸಗಳಲ್ಲಿ ಮಾರ್ಗಶೀರ್ಷವು, ದೇವತೆಗಳಲ್ಲಿ ಅಚ್ಯುತನು, ವೇದಗಳಲ್ಲಿ ಸಾಮವೇದವು, ಮಂತ್ರಗಳಲ್ಲಿ ಓಂಕಾರವು ಶ್ರೇಷ್ಠವಾಗಿವೆ. ಮನೋಹರ ಪದಾರ್ಥಗಳಲ್ಲಿ ಗಾನವೂ, ತಪಸ್ಸುಗಳಲ್ಲಿ ಧ್ಯಾನವೂ ಶ್ರೇಷ್ಠವಾಗಿವೆ. ಸಾಮವೇದವು ಗಾನರೂಪವಾದುದರಿಂದ ಶ್ರೀಹರಿಯು ಸಾಮಗಾನ ಪ್ರಿಯನಾಗಿದ್ದಾನೆ. ಆದುದರಿಂದ ಜಗದೊಡೆಯನಾದ ಶ್ರೀಹರಿಯು ಯೋಗನಿದ್ರೆಯಿಂದ ಏಳುವ ಸಮಯವಾದ ಮಾರ್ಗಶೀರ್ಷಮಾಸದ ಅರುಣೋದಯ ಕಾಲದಲ್ಲಿ ಸಾಮಗಾನವನ್ನು ಮಾಡಬೇಕು.

ಸಕ್ಕರೆ, ಏಲಕ್ಕಿ, ತುಪ್ಪ, ನೆಲ್ಲಿಕಾಯಿ ಮೊದಲಾದ ಪದಾರ್ಥಗಳಿಂದ ಯುಕ್ತವಾದ, ಹಿತವಾದ, ಬಿಸಿಯಾದ ಮುದ್ಗಾನ್ನವನ್ನು ಬಂಗಾರದ ಪಾತ್ರೆಯಲ್ಲಿ ಪರಮಾತ್ಮನ ಎದುರಿಗೆ ಇರಿಸಿ ಭಕ್ತಿಯಿಂದ ನಿವೇದಿಸು. ಸಂಕಲ್ಪಮಾತ್ರದಿಂದ ದೈತ್ಯರನ್ನು ಸಂಹಾರಮಾಡಲು ಸಮರ್ಥನಾದ ದೇವದೇವನು ದೊಡ್ಡದಾದ ಧನುಸ್ಸಿನಿಂದ ದೈತ್ಯರನ್ನು ಸಂಹರಿಸಿದ. ಆದುದರಿಂದ ಧನುರ್ಮಾಸದ ಪೂಜೆಯು

ಭಗವಂತನಿಗೆ ಕೋಟಿಗುಣ ಹೆಚ್ಚು ಪ್ರಿಯವಾಗಿದೆ. ದೇವತೆಗಳ ಉಪಾಸನೆಗೆ ಅನುಕೂಲ ಮಾಡಲು ಕೇಶವನು ಹೀಗೆ ಲೀಲೆಗೈಯುವನು. ಇಲ್ಲೊಂದು ಇತಿಹಾಸವನ್ನು ಸಂಕ್ಷೇಪವಾಗಿ ಹೇಳುವೆನು ಕೇಳು.

ಹಿಂದೊಮ್ಮೆ ಕೃತಯುಗದಲ್ಲಿ ದೈತ್ಯರು ದೇವತೆಗಳನ್ನು ತುಂಬಾ ಬಾಧಿಸಿದರು. ತ್ರಸ್ತರಾದ ದೇವತೆಗಳು ರಕ್ಷಿಸೆಂದು ಪ್ರಾರ್ಥಿಸುತ್ತ ಭಗವಂತನ ಪಾದಗಳನ್ನು ಶರಣು ಹೊಂದಿದರು. ಉದ್ಧಟರಾದ ದೈತ್ಯರ ಉಪದ್ರವವನ್ನು ಹೇಳಿಕೊಂಡರು. ಭಗವಂತನು ಹೆದರಬೇಡಿರೆಂದು ಅಭಯ ನೀಡಿದನು. ನಂತರ ಅನಂತ ಸೂರ್ಯರ ಕಾಂತಿಯುಳ್ಳ ಮಹಾವಿಷ್ಣುವು ಗರುಡನ ಮೇಲೇರಿ ಕ್ರೀಡಾ ಮಹೋತ್ಸವದಂತಿರುವ ಯುದ್ಧದಲ್ಲಿ ಲೀಲೆಯಿಂದ ಸೆಣಸಿ ದಾನವರನ್ನೆಲ್ಲ ರಣರಂಗದಿಂದ ಓಡಿಸಿದನು. ಆಗ ಮಹಾಭಾಗ್ಯವಂತೆಯೂ, ಪತಿಪರಾಯಣೆಯೂ ಆದ ಇಂದ್ರಪತ್ನಿ ಶಚೀದೇವಿಯು ಶ್ರೀಹರಿಯನ್ನು ಧನುರ್ಮಾಸದ ಉಷಃಕಾಲದಲ್ಲಿ ಮುದ್ಗಾನ್ನದಿಂದ ಪೂಜಿಸಿದಳು. ಶ್ರೀಹರಿಯು ಧನುರ್ಮಾಸದ ಕೊನೆಯಲ್ಲಿ ಸ್ವರ್ಣಮಯವಾದ ಬಾಣಗಳನ್ನು ಶಾರ್ಙ್ಗ ಧನುಸ್ಸಿಗೆ ಹೂಡಿ ಎಲ್ಲ ದೈತ್ಯರನ್ನು ಸಂಹಾರ ಮಾಡಿ ದೇವತೆಗಳಿಗೆ ಅಭಯ ನೀಡಿದನು. ಬಡವನಾಗಲಿ, ಅತಿದುಃಖಿತನಾಗಿರಲಿ, ಧನುರ್ಮಾಸದಲ್ಲಿ ಬೆಳಗಿನ ಜಾವ ಶ್ರೀಹರಿಯನ್ನು ಪೂಜಿಸಿ ಬ್ರಾಹ್ಮಣರನ್ನು ಭೋಜನ ಮಾಡಿಸಿದವನು ಶೀಘ್ರದಲ್ಲೇ ಧನವಂತನಾಗುವನು. ಆದುದರಿಂದ ಭರತನೇ ಸರ್ವದೇವತೆಗಳಿಂದಲೂ ಪೂಜಿತನಾದ ವಿಷ್ಣುವನ್ನು ಧನುರ್ಮಾಸದ ಉಷಃ- ಕಾಲದಲ್ಲಿ ಪೂಜಿಸು. ಆ ಪುಣ್ಯಪ್ರಭಾವದಿಂದ ನೀನು ಕೃತಕೃತ್ಯನೆನಿಸುವೆ.

**॥ ಇಲ್ಲಿಗೆ ಇಪ್ಪತ್ನಾಲ್ಕನೇ ಅಧ್ಯಾಯವು ಮುಗಿಯಿತು ॥**

★★★

## ಇಪ್ಪತ್ತೈದನೇ ಅಧ್ಯಾಯ

ರಾಮಚಂದ್ರನ ಉಪದೇಶವನ್ನು ಕೇಳಿದ ಭರತನು ಮತ್ತೆ ಪ್ರಶ್ನೆ ಮಾಡಿದನು. ವರ್ಣಗಳಲ್ಲಿ ಬ್ರಾಹ್ಮಣವರ್ಣವು ಏಕೆ ಶ್ರೇಷ್ಠವೆಂಬುದನ್ನು ಹೇಳಬೇಕು. ಬ್ರಾಹ್ಮಣನು ಹೇಗೆ ಪೂಜ್ಯನು ಮತ್ತು ವಿಶೇಷವಾಗಿ ದಾನಪಾತ್ರನೆಂಬುದನ್ನು ಹೇಳಬೇಕೆಂದು ಭರತನು ಪ್ರಾರ್ಥಿಸಲು ರಾಮಚಂದ್ರನು ಹೇಳತೊಡಗಿದನು.

ಈ ಜಗವೆಲ್ಲ ದೇವತೆಗಳ ಅಧೀನದಲ್ಲಿದೆ. ಆ ದೇವತೆಗಳು ಮಂತ್ರಗಳ ಅಧೀನರಾಗಿದ್ದಾರೆ. ಆ ಮಂತ್ರಗಳು ಬ್ರಾಹ್ಮಣರ ಅಧೀನದಲ್ಲಿವೆ. ಬ್ರಾಹ್ಮಣರು ನನ್ನ ದೇವತೆಗಳಾಗಿದ್ದಾರೆ. ಮೂರ್ಖನಾಗಲೀ, ಪತಿತನಾಗಲೀ, ಅಂತಹ ಬ್ರಾಹ್ಮಣನನ್ನು

ಅವಮಾನ ಮಾಡಿದ ಪಾಪಿಯು ತನ್ನ ಪಿತೃಗಳ ಸಹಿತನಾಗಿ ಪ್ರಸಿದ್ಧವಾಗಿರುವ ಇಪ್ಪತ್ತೊಂದು ನರಕಗಳನ್ನು ಹೊಂದುವನು. ಆದುದರಿಂದ ಮಾತಿನಿಂದಾಗಲೀ, ಕೃತಿಯಿಂದಾಗಲೀ, ಮನದಲ್ಲಾಗಲೀ, ಬ್ರಾಹ್ಮಣನ ಮೇಲೆ ಕೋಪ ತೋರಿಸಬಾರದು. ಗದರಿಕೊಳ್ಳುವಂತೆ ಮಾತನಾಡುವುದಾಗಲೀ, ಶಪಿಸುವುದಾಗಲೀ ಮಾಡಬಾರದು. ಮೂರ್ಲೋಕಗಳಿಗೂ ಗುರುವೆನಿಸಿದ ಬ್ರಾಹ್ಮಣನನ್ನು ನಿತ್ಯದಲ್ಲಿ ಪೂಜಿಸುವವರು ನಿಸ್ಸಂದೇಹವಾಗಿ ನನ್ನನ್ನೇ ಹೊಂದುವರು. ಬ್ರಾಹ್ಮಣನ ಮೇಲೆ ಕೋಪಗೊಂಡವನು ವಾಜಪೇಯವೇ ಮೊದಲಾದ ಯಾಗಗಳನ್ನು ಮಾಡಿದ ಪುಣ್ಯವಂತನಾಗಿದ್ದರೂ ನರಕವನ್ನು ಹೊಂದುವನು. ಹಸಿವೆಯಿಂದ ಬಳಲಿದ ಬ್ರಾಹ್ಮಣನಿಗೆ ಅನ್ನ, ತೊವ್ವೆಮುಂತಾದ ಪದಾರ್ಥಗಳಿಂದ ಭೋಜನ ಮಾಡಿಸಿದವನು ಪ್ರತಿ ತುತ್ತಿಗೂ ಹತ್ತು ಸಾವಿರ ಬಂಗಾರದ ಕಮಲಗಳಿಂದ ನನ್ನನ್ನು ಪೂಜಿಸಿದ ಫಲವನ್ನು ಪಡೆಯುವನು. ಬ್ರಾಹ್ಮಣರ ತೃಪ್ತಿಯೇ ನನ್ನ ತೃಪ್ತಿಯು. ಬ್ರಾಹ್ಮಣರ ಪೂಜೆಯೇ ನನ್ನ ಪೂಜೆಯು. ಬ್ರಾಹ್ಮಣನನ್ನು ನಿಂದಿಸಿದರೆ ನನ್ನನ್ನೇ ನಿಂದಿಸಿದಂತೆ. ಆದುದರಿಂದ ಯಾವಾಗಲೂ ಬ್ರಾಹ್ಮಣರನ್ನು ಪೂಜಿಸಬೇಕು. ಬ್ರಾಹ್ಮಣಪೂಜೆಯಿಂದ ಆಯುಷ್ಯ, ಆರೋಗ್ಯ, ಶಾಸ್ತ್ರಜ್ಞರಾದ ಪುತ್ರರು, ಕುಲದ ಅಭಿವೃದ್ಧಿ, ಧನಧಾನ್ಯಗಳ ಸಮೃದ್ಧಿಯನ್ನು ಹೊಂದುವನು. ನಾಲ್ಕು ವೇದಗಳನ್ನೋದಲಿ, ಸಾವಿರಾರು ಯಜ್ಞಗಳನ್ನಾಚರಿಸಲಿ, ದೇವತೆಗಳು ಮೆಚ್ಚುವಂತೆ ತಪವನ್ನಾಚರಿಸಲಿ, ಅಂತಹವನು ಬ್ರಾಹ್ಮಣ ಶತ್ರುವಾಗಿದ್ದರೆ ನಿಶ್ಚಿತವಾಗಿ ಅಧಃಪತನ ಹೊಂದುವನು. ಬ್ರಾಹ್ಮಣನು ಕೋಪದಿಂದ ಶಪಿಸಲಿ, ಮನೆಗೆ ಬೆಂಕಿ ಇಡಲಿ, ಕೋಲಿನಿಂದ ದಂಡಿಸಲಿ, ಬ್ರಾಹ್ಮಣನನ್ನು ಕ್ಷಮಿಸಿದ ಪುರುಷನೇ ಶ್ರೇಷ್ಠನು. ಮೊಸಳೆಯು ತನ್ನ ಬಾಯಲ್ಲಿ ಸಿಕ್ಕವನನ್ನು ಸಂಹರಿಸುವಂತೆ ಬ್ರಾಹ್ಮಣನು ಅಪಮಾನ ಮಾಡಿದವನನ್ನು ನಾಶಗೊಳಿಸುವನು. ತೀರ್ಥಯಾತ್ರೆಯಾಗಲೀ, ದೇವತೆಗಳ ಪೂಜೆಯಾಗಲೀ, ಅರ್ಧೋದಯ ಪರ್ವಕಾಲದಲ್ಲಿ ರಾಮಸೇತುವಿನಲ್ಲಿ ಸ್ನಾನವಾಗಲೀ, ಸೂರ್ಯನು ತುಲಾರಾಶಿಯಲ್ಲಿರುವಾಗ ಕಾವೇರಿಯ ಸ್ನಾನವಾಗಲೀ, ಬ್ರಾಹ್ಮಣ ಪಾದೋದಕ ದಂತೆ ಉದ್ಧರಿಸಲಾರವು. ಬ್ರಹ್ಮಹತ್ಯೆಯೇ ಮೊದಲಾದ ಪಾಪಗಳಿಗೆ ಎರಡು ಪ್ರಾಯಶ್ಚಿತ್ತಗಳು. ಮೊದಲನೆಯದು ಬ್ರಾಹ್ಮಣಪಾದತೀರ್ಥ, ಎರಡನೆಯದು ತುಲಾಸಂಕ್ರಮಣದಲ್ಲಿ ಕಾವೇರಿಯ ಸ್ನಾನ. ಆದುದರಿಂದ ಏಳು ಸಮುದ್ರಗಳ ಸ್ನಾನ, ದೇವತೆಗಳ ಪೂಜೆ, ಅಗ್ನಿಷ್ಟೋಮಾದಿ ಯಜ್ಞಗಳು, ಪಾವನವಾದ ಗಂಗಾದಿತೀರ್ಥಗಳು, ವಿಪ್ರಪಾದೋದಕದ ಹದಿನಾರನೆಯ ಒಂದಂಶಕ್ಕೂ ಸಾಟಿಯಾಗಲಾರವು. ಎಲ್ಲ ತೀರ್ಥಗಳ ಫಲಪ್ರಾಪ್ತಿಗಾಗಿ ಬ್ರಹ್ಮನಿಂದಲೇ ಬ್ರಾಹ್ಮಣ ಪಾದೋದಕವು ಕಲ್ಪಿತವಾಗಿದೆ. ಬ್ರಾಹ್ಮಣ ಪಾದ ಪೂಜೆಯಂತೆ ಬೇರಾವುದೂ ಸರ್ವಾರ್ಥಗಳನ್ನು ಸಿದ್ಧಿಸಲಾರದು. ಆದುದರಿಂದ ಭರತನೇ ಪೂಜ್ಯರಾದ ಬ್ರಾಹ್ಮಣರು ನನಗೆ ದೇವರೆನಿಸಿದ್ದಾರೆ. ಹಿಂದಿನ ಜನ್ಮದ ಪುಣ್ಯವುಳ್ಳವರಿಗೆ ಮಾತ್ರ

ಬ್ರಾಹ್ಮಣಪೂಜೆಯ ಸದವಕಾಶವು ದೊರೆಯುವುದು. ಈ ಎಲ್ಲ ಬ್ರಾಹ್ಮಣ ಪೂಜೆಯ ಮಹಿಮೆಯು ಹಿಂದೆ ಮಹಾತ್ಮರಾದ ರುದ್ರದೇವರಿಂದ ಬ್ರಹ್ಮದೇವರಿಗೆ ಹೇಳಲ್ಪಟ್ಟಿತ್ತು. ಅದೆಲ್ಲವನ್ನು ನಾನು ನಿನಗೆ ಹೇಳಿರುವೆನು.

ಹೀಗೆಂದ ರಾಮಚಂದ್ರನ ಧರ್ಮಯುಕ್ತವಾದ ಮಾತುಗಳನ್ನಾಲಿಸಿದ ಭರತನು ರಾಮನಿಗೆ ಕೈಜೋಡಿಸಿ ಹೇಳಿದ. ಮಹಾಪರಾಕ್ರಮಿ ರಾಮಚಂದ್ರನೇ! ನೀನೇ ನನಗೆ ದೇವನೂ, ಸಹೋದರನೂ ಆಗಿರುವೆ. ನಿನ್ನಿಂದ ಧನುರ್ಮಾಸದ ಪ್ರಭಾವವನ್ನು ಅರಿತು ನಾನು ಕೃತಕೃತ್ಯನಾಗಿರುವೆ. ನಂತರ ರಾಮನು ಭರತನನ್ನು ತೊಡೆಯ ಮೇಲೆ ಕೂರಿಸಿಕೊಂಡು ಅವನ ತಲೆಯನ್ನು ಪ್ರೀತಿಯಿಂದ ಆಘ್ರಾಣಿಸಿ ಅವನಿಗೆ ತನ್ನ ಸ್ವರ್ಣಮಯ ಪಾದುಕೆಗಳನ್ನು ನೀಡಿ ಅನುಗ್ರಹಿಸಿದನು. ರಾಮನ ಆಜ್ಞೆ ಪಡೆದ ಭರತನು ಅಯೋಧ್ಯೆಯತ್ತ ಪಯಣಿಸಿದ. ಸುಮಂತ್ರನೇ ಮೊದಲಾದ ಮಂತ್ರಿಗಳಿಂದೊಡಗೂಡಿ ರಾಜ್ಯವನ್ನಾಳತೊಡಗಿದನು. ರಾಮನ ಪಾದುಕೆಗಳನ್ನು ಸಿಂಹಾಸನದ ಮೇಲಿರಿಸಿ ಪ್ರತಿದಿನ ಭಕ್ತಿಪೂರ್ವಕವಾಗಿ ಕೋಟಿ ಕೋಟಿ ಸ್ವರ್ಣಕಮಲಗಳಿಂದ ಪೂಜಿಸಿದನು. ಪ್ರತಿ ವರುಷ ಧನುರ್ಮಾಸದಲ್ಲಿ ಅರುಣೋದಯದಲ್ಲಿ ಮುದ್ಗಾನ್ನವನ್ನು ದೇವರಿಗೆ ಅರ್ಪಿಸಿ ಬ್ರಾಹ್ಮಣ ಭೋಜನ ಮಾಡಿಸಿದನು. ಇತ್ತ ಕಡೆ ಮಹಾಪರಾಕ್ರಮಿ ರಾಮಚಂದ್ರನು ದಂಡಕಾರಣ್ಯವನ್ನು ಪ್ರವೇಶ ಮಾಡಿದನು. ಅಲ್ಲಿ ನೀರಿಲ್ಲದ ಅರಣ್ಯಪ್ರದೇಶದಲ್ಲಿ ವಾಸವಾಗಿರಲು ಒಳ್ಳೆಯ ಗಡ್ಡೆ, ಗೆಣಸು ದೊರೆಯದೇ ಲಕ್ಷ್ಮಣನು ದುಃಖಿತನಾದನು. ಆಗ ಕಮಲನೇತ್ರನಾದ ರಾಮನು ಲಕ್ಷ್ಮಣನಿಗೆ ಹೇಳಿದನು. ಪೃಥಿವಿಯು ಅನ್ನದಿಂದ ತುಂಬಿರುವಾಗ ನಾವು ಅನ್ನ ದೊರೆಯದೇ ಅನ್ನದ ಅಪೇಕ್ಷಿಗಳಾಗಿದ್ದೇವೆ. ಲಕ್ಷ್ಮಣನೇ! ನಾವು ಹಿಂದೆ ದಾನ ಮಾಡಿಲ್ಲ. ಬ್ರಾಹ್ಮಣರನ್ನು ಭೋಜನದಿಂದ ತೃಪ್ತಿ ಪಡಿಸಿಲ್ಲ. ಆದುದರಿಂದ ಅನ್ನ ದೊರೆಯದೇ ಇದ್ದೇವೆ ಎಂದು ಹೇಳಿದ.

(ಅನ್ನದಾನದ ಮಹಿಮೆಯನ್ನು ತಿಳಿಸುವುದಕ್ಕಾಗಿ ಈ ವಿಧವಾಗಿ ರಾಮಚಂದ್ರ ತಿಳಿಸಿದ. ಅನ್ನದಾನ ಮಾಡದಿದ್ದರೇ ಅನ್ನವು ದೊರೆಯದೆಂಬುದನ್ನು ಈ ವಿಧವಾಗಿ ಉಪದೇಶ ಮಾಡಿದ. ಇದರ ಹೊರತಾಗಿ ರಾಮ-ಲಕ್ಷ್ಮಣರು ಹಿಂದಿನ ಜನ್ಮದಲ್ಲಿ ಅನ್ನದಾನ ಮಾಡದೇ ಈಗ ಅನ್ನವನ್ನು ಪಡೆಯಲಾಗದೇ ದುಃಖಿಸಿದರು ಎಂದು ತಿಳಿಯಬಾರದು.)

ಮುಂದೊಮ್ಮೆ ಸೀತೆಯನ್ನು ಅಪಹರಿಸಲು ಬಂದ ರಾವಣನು ಸೀತೆಯಿಂದ ನಿರ್ಮಿತವಾದ ಸೀತಾಕೃತಿಯನ್ನು ಅಪಹರಿಸಿದ. ಸೀತೆಯೊಂದಿಗೆ ವಿಯೋಗವೇ ಇಲ್ಲದ ರಾಮನು ಪತ್ನೀವಿಯೋಗದಿಂದ ಅತ್ಯಂತ ದುಃಖಿತನಾದವನಂತೆ ವಿಲಪಿಸಿದ. ಆಗ ಲಕ್ಷ್ಮಣನು, ರಾಮನೇ! ಸಹಿಸಲಾಗದ ಈ ದುಃಖವನ್ನು ತ್ಯಾಗ ಮಾಡು. ಸೀತೆಯನ್ನು ಹುಡುಕೋಣ ಎಂದು ಹೇಳಿದನು. ಸೀತೆಯನ್ನು ಹುಡುಕುತ್ತ ಹೊರಟು

ದಾರಿಯಲ್ಲಿ ರಾವಣನು ಕೊಂದು ಹಾಕಿದ ಜಟಾಯುವನ್ನು ಕಂಡು ಅದರ ದೇಹಕ್ಕೆ ಅಗ್ನಿಸಂಸ್ಕಾರ ಮಾಡಿದರು. ಅನಂತರ ರಾಮನು ಲಕ್ಷ್ಮಣನಿಗೆ ಹೇಳಿದನು. ನಾನು ರಾಜ್ಯವನ್ನು ಕಳೆದುಕೊಂಡೆ, ವನದಲ್ಲಿ ವಾಸಿಸುತ್ತಿದ್ದೇನೆ. ಸೀತೆಯು ಕಾಣೆಯಾಗಿ-ದ್ದಾಳೆ. ಹಿತೈಷಿಯಾದ ಜಟಾಯುವು ಮೃತನಾದನು. ಈ ದುಃಖಪರಂಪರೆಯು ಅಗ್ನಿಯನ್ನೂ ಸುಡಬಲ್ಲುದು. ಹೀಗೆಂದು ಅಲ್ಲಿಂದ ಹೊರಟು ದಾರಿಯಲ್ಲಿ ಕಬಂಧನನ್ನು ಸಂಹರಿಸಿ ಶಬರಿಯನ್ನು ಕಂಡನು. ಕಿಷ್ಕಿಂಧೆಯ ಪಂಪಾತೀರದ ಅರಣ್ಯದಲ್ಲಿ ಹನುಮಂತನನ್ನು ನೋಡಿ ಹನುಮಂತನ ಪ್ರಾರ್ಥನೆಯಂತೆ ಸುಗ್ರೀವ ನೊಡನೆ ಸಖ್ಯ ಮಾಡಿಕೊಂಡನು. ವಾಲಿಯನ್ನು ಸಂಹರಿಸಿ ಸೀತಾನ್ವೇಷಣೆಯಲ್ಲಿ ತೊಡಗಿದರು. ಸಂಪಾತಿಯ ವಚನದಂತೆ ವಾಯುಪುತ್ರನಾದ ಹನುಮಂತನು ನೂರುಯೋಜನ ಸಾಗರವನ್ನು ನೆಗೆದು ಲಂಕೆಯನ್ನು ಸೇರಿ ಸೀತೆಗೆ ರಾಮನ ಮುದ್ರಿಕೆಯನ್ನಿತ್ತು, ಸೀತೆಯಿಂದ ಚೂಡಾಮಣಿಯನ್ನು ಪಡೆದುಕೊಂಡು, ಲಂಕೆಯನ್ನು ಸುಟ್ಟು ಹಾಕಿದನು. ರಾಮನಲ್ಲಿಗೆ ಬಂದು ಸೀತೆಯ ವಿಚಾರವನ್ನರುಹಿ ಚೂಡಾಮಣಿಯನ್ನರ್ಪಿಸಿದನು.

ಹನುಮಂತನ ಮಾತಿನಿಂದ ಅತ್ಯಂತಪ್ರೀತನಾದ ರಾಮಚಂದ್ರನು ಸುಗ್ರೀವನೊಡನೆ ಮಹೇಂದ್ರಪರ್ವತಕ್ಕೆ ಬಂದನು. ನಲನ ಮೇಲ್ವಿಚಾರಣೆಯಲ್ಲಿ ವಾನರರಿಂದ ಸಮುದ್ರದಲ್ಲಿ ನೂರು ಯೋಜನ ಉದ್ದ ಹಾಗೂ ಹತ್ತು ಯೋಜನ ಅಗಲದ ಸೇತುವೆಯನ್ನು ನಿರ್ಮಿಸಿದರು. ಸೇತುವೆಯ ಮೂಲಕ ಲಂಕೆಯನ್ನು ಸೇರಿ, ಲೋಕಕಂಟಕರಾದ ರಾಕ್ಷಸರನ್ನು ಹಾಗೂ ರಾವಣನನ್ನು ಸಂಹರಿಸಿದನು. ದೇವತೆಗಳೆಲ್ಲ ಆನಂದದಿಂದ ಹೂಮಳೆಗರೆದರು. ಮಹಾಬಲನಾದ ರಾಮನು ರಾಜ್ಯವನ್ನು ವಿಭೀಷಣನಿಗೆ ನೀಡಿ ಗಂಧಮಾದನಪರ್ವತಕ್ಕೆ ಬಂದು ಅಲ್ಲಿ ರಾಮೇಶ್ವರನೆಂಬ ಹೆಸರಿನಿಂದ ಈಶ್ವರನನ್ನು ಪ್ರತಿಷ್ಠಾಪಿಸಿದನು. ವಿಧ್ಯುಕ್ತವಾಗಿ ಈಶ್ವರನನ್ನು ಪೂಜಿಸಿ ಸಕಲಪಾಪನಾಶಕವಾದ ಧನುಷ್ಕೋಟಿತೀರ್ಥವನ್ನು ನಿರ್ಮಿಸಿದನು. ಲೋಕಹಿತಕ್ಕಾಗಿ ರಾಮೇಶ್ವರನನ್ನು ಸ್ಥಾಪಿಸಿ ಪುಷ್ಪಕವಿಮಾನವನ್ನೇರಿ ನಂದಿಗ್ರಾಮವನ್ನು ಸೇರಿದನು. ಭರತನಿಂದ ರಾಜ್ಯವನ್ನು ಸ್ವೀಕರಿಸಿ ಹನ್ನೊಂದು ಸಾವಿರ ವರುಷಗಳವರೆಗೆ ರಾಜ್ಯಭಾರ ಮಾಡಿದ ರಾಮಚಂದ್ರನು ತನ್ನದೇ ಆದ ವಿಷ್ಣುಲೋಕಕ್ಕೆ ತೆರಳಿದನು.

ದಿವ್ಯವಾದ ರಾಮಚರಿತೆ ಹಾಗೂ ಭರತನು ಮಾಡಿದ ಧನುರ್ಮಾಸದ ಪೂಜೆಯ ವಿಚಾರವನ್ನು ಸಂಕ್ಷೇಪದಲ್ಲಿ ಹೇಳಿರುವೆನು. ಶ್ರೀಕೃಷ್ಣನು ದಧಿಪಾಲನಿಗೆ ಹೇಳಿದ ಈ ದಿವ್ಯ ರಾಮಚರಿತೆಯನ್ನು ಒಮ್ಮೆಯಾದರೂ ಕೇಳಿದವನು ಎಲ್ಲ ಪಾಪಗಳಿಂದ ಮುಕ್ತನಾಗುವನು.

**॥ ಇಲ್ಲಿಗೆ ಇಪ್ಪತ್ತೈದನೇ ಅಧ್ಯಾಯವು ಮುಗಿಯಿತು ॥**

# ಇಪ್ಪತ್ತಾರನೇ ಅಧ್ಯಾಯ

ಋಷಿಗಳು ಕೇಳಿದರು. ಉತ್ತಮಕಥನಕಾರರಾದ ಸೂತರೇ! ನಿಮ್ಮ ಮುಖದಿಂದ ಧನುರ್ಮಾಸಮಹಿಮೆಯನ್ನು ಕೇಳಿದಷ್ಟೂ ನಮಗೆ ತೃಪ್ತಿಯೆನಿಸುತ್ತಿಲ್ಲ. ಯಾವ ಜಪದಿಂದ ಮಾನವನು ಪಾಪಮುಕ್ತನೆನಿಸಿ ಪರಮಗತಿಯನ್ನು ಹೊಂದುವನು. ಯಾವುದರ ಜಪದಿಂದ ಅಲಕ್ಷ್ಮಿಯನ್ನು ದೂರ ಮಾಡಿ ಲಕ್ಷ್ಮಿಯ ಕೃಪೆಗೆ ಪಾತ್ರನಾಗುವನು. ಎಂಬುದನ್ನು ಕೃಪೆ ಮಾಡಿ ತಿಳಿಸಿರಿ ಎಂದು ಪ್ರಾರ್ಥಿಸಲು ಸೂತರು ಹೇಳಿದರು.

ಹಿಂದೆ ಮಹಾತ್ಮರಾದ ಬ್ರಹ್ಮದೇವರು ಇದೇ ವಿಷಯವಾಗಿ ವಸಿಷ್ಠರಿಗೆ ಹೇಳಿದುದನ್ನೇ ಲೋಕಹಿತಕ್ಕಾಗಿ ನಿಮಗೆ ಹೇಳುವೆನು. ದೇವೋತ್ತಮನಾದ ಜನಾರ್ದನನನ್ನು ನಮಸ್ಕರಿಸಿ ನಿತ್ಯದಲ್ಲಿ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ಜಪಿಸಿದವನು ಪರಮಗತಿಯಾದ ಮೋಕ್ಷವನ್ನೇ ಹೊಂದುವನು. ಸಹಿಸಲು ಅಸಾಧ್ಯಳಾದ ಕಲಿಯ ಪತ್ನಿಯೆನಿಸಿದ ಅಲಕ್ಷ್ಮಿಯು ನಾರಾಯಣನೆಂಬ ಪದವನ್ನು ಕೇಳಿದ ಕೂಡಲೇ ಅಲ್ಲಿಂದ ತೊಲಗುವಳು. ದೇವದೇವನಾದ ಕೃಷ್ಣನ ಭಾಮೆಯಾದ ಸೌಭಾಗ್ಯದೇವತೆ ಲಕ್ಷ್ಮಿಯು ಈ ಮಂತ್ರವನ್ನು ಜಪಿಸಿದವನ ಮನೆಯಲ್ಲಿ ನೆಲೆಸುವಳು. ಎಲ್ಲ ಶಾಸ್ತ್ರಗಳ ವಿಮರ್ಶೆಯಿಂದ ನಿಶ್ಚಿತವಾದ ವಿಷಯವೊಂದೇ. ಅದೆಂದರೆ ನಾರಾಯಣನ ಧ್ಯಾನವನ್ನು ನಿರಂತರ ಮಾಡಬೇಕು. ಸರ್ವಾರ್ಥ ಸಾಧಕವಾದ ದ್ವಾದಶಾಕ್ಷರಮಂತ್ರವನ್ನು ಜಪಿಸುವ ಮನುಜನಿಗೆ ಬೇರೆ ವ್ರತಗಳೇಕೆ? ಬೇರೆಲ್ಲ ಮಂತ್ರಗಳೇಕೆ? ಈ ಮಂತ್ರವು ಹನ್ನೆರಡು ಅಕ್ಷರಗಳಿಂದ ಯುಕ್ತವಾದುದು. ಅದರಿಂದ ಪ್ರತಿಪಾದ್ಯವಾದವುಗಳು ಕೇಶವನಿಂದ ಆರಂಭಿಸಿ ದಾಮೋದರನವರೆಗೆ ಹನ್ನೆರಡು ಮೂರ್ತಿಗಳು. ವಿಷ್ಣುಭಕ್ತರಾದ ಅಂಬರೀಷ ಹಾಗೂ ಧ್ರುವ ಈ ಮಂತ್ರವನ್ನು ಜಪಿಸಿ ಶ್ರೇಷ್ಠಗತಿಯನ್ನು ಹೊಂದಿದರು.

ಹೀಗೆ ಹೇಳಲು ಋಷಿಗಳೆಲ್ಲ ಕೇಳಿದರು. ಇಕ್ಷ್ವಾಕುವಿನ ವಂಶದಲ್ಲಿ ಜನಿಸಿದ ಅಂಬರೀಷನು ವಾಸುದೇವಪರಾಯಣನು. ಅವನು ವಿಷ್ಣುವಿನ ಆಜ್ಞೆಯಿಂದ ಈ ಪೃಥ್ವಿಯನ್ನು ಪಾಲಿಸಿದನು. ಆತನ ರಕ್ಷಣೆಗಾಗಿ ಶ್ರೀಹರಿಯು ತನ್ನ ಸುದರ್ಶನ ಚಕ್ರವನ್ನೇ ನೀಡಿದ್ದನೆಂದು ನಾವು ಕೇಳಿದ್ದೇವೆ. ಆ ಮಹಾಮಹಿಮನ ಚರಿತೆಯನ್ನು ಹೇಳಬೇಕೆಂದು ಎಲ್ಲ ಋಷಿಗಳು ಪ್ರಾರ್ಥಿಸಲು ಸೂತರು ಹೇಳಲು ಉಪಕ್ರಮಿಸಿದರು.

ಹೇ ಋಷಿಗಳೇ! ಎಲ್ಲ ರೀತಿಯ ಪಾಪಗಳನ್ನು ಪರಿಹರಿಸುವುದು ಅಂಬರೀಷನ ಚರಿತೆ. ಅದನ್ನು ನಿಮಗೆ ಹೇಳುವೆ. ಚಿತ್ತವಿಟ್ಟು ಕೇಳಿರಿ. ನಾಭಾಗನ ಪತ್ನಿಯು ಸರ್ವಲಕ್ಷಣಗಳಿಂದ ಶೋಭಿತಳು. ನಿತ್ಯದಲ್ಲಿ ಶೌಚಾಚಾರಯುಕ್ತಳಾಗಿ ಪದ್ಮನಾಭ-

ನನ್ನು ಸಾವಿರ ತುಲಸಿಪತ್ರಗಳಿಂದ ಪೂಜಿಸುತ್ತಿದ್ದಳು. ದೇವಪೂಜೆಗಾಗಿ ನೆಲವನ್ನು ಗೋಮಯದಿಂದ ಶುದ್ಧಗೊಳಿಸುತ್ತಿದ್ದಳು. ಯಜ್ಞಕ್ಕೆ ಬೇಕಾದ ಹವಿಸ್ಸನ್ನು ತಯಾರಿಸಿ ಭಗವಂತನನ್ನು ಸೇವಿಸುತ್ತಿದ್ದಳು. ಧನುರ್ಮಾಸದಲ್ಲಿ ಪ್ರತಿದಿನ ದೇವೇಶನನ್ನು ಮುದ್ಗಾನ್ನದಿಂದ ಪೂಜಿಸುತ್ತಿದ್ದಳು. ದ್ವಾದಶಿಯಂದು ಶ್ರೀಹರಿಯ ಸನ್ನಿಧಾನದಲ್ಲಿ ಸುವಾಸಿನಿಯರನ್ನು ಪೂಜಿಸುತ್ತಿದ್ದಳು.

ಆ ಸಂದರ್ಭದಲ್ಲಿ ಲಕ್ಷ್ಮೀಪತಿಯು ಅಲ್ಲಿ ಪ್ರತ್ಯಕ್ಷನಾಗಿ ಹೇಳಿದ. ನಿನ್ನ ಮನದ ಇಚ್ಛೆಯನ್ನು ಕೇಳಿಕೋ. ಪೂರೈಸುವೆನು. ಎನ್ನಲು ಅತ್ಯಂತ ಸಂತುಷ್ಟಳಾದ ಅವಳು ನನಗೆ ವಿಷ್ಣುಭಕ್ತನಾದ ಸುತನು ಜನಿಸಬೇಕೆಂದು ಕೇಳಿಕೊಂಡಳು. ಆ ಪುತ್ರನು ಶುದ್ಧಚರಿತನೂ, ಸ್ವಕರ್ಮನಿರತನೂ, ಮಹಾತೇಜಸ್ವಿಯೂ, ಸಾರ್ವಭೌಮನೂ ಆಗಬೇಕೆಂದು ಪ್ರಾರ್ಥಿಸಲು ದೇವೇಶನು ಹಾಗೆಯೇ ಆಗಲೆಂದು ನುಡಿದು ಅವಳಿಗೊಂದು ಫಲವನ್ನು ನೀಡಿದನು. ಆ ಫಲವನ್ನು ಭಕ್ಷಿಸಿದ ಆ ಸಾಧ್ವಿಯು ಯೋಗ್ಯಕಾಲದಲ್ಲಿ ವಂಶೋದ್ಧಾರಕನೂ ಸದಾಚಾರಿಯೂ, ವಾಸುದೇವಭಕ್ತನೂ ಆದ ಪುತ್ರನಿಗೆ ಜನ್ಮ ನೀಡಿದಳು.

ಎಲ್ಲ ರೀತಿಯ ಶುಭಲಕ್ಷಣಗಳಿಂದ ಕೂಡಿದ ಮಗುವಿಗೆ ತಂದೆಯಾದ ನಾಭಾಗನು ಅಂಬರೀಷನೆಂದು ನಾಮಕರಣ ಮಾಡಿದನು. ತಂದೆಯ ಮರಣದ ನಂತರ ಪಟ್ಟಾಭಿಷಕ್ತನಾದ ಅಂಬರೀಷ ಮಹಾರಾಜನು ರಾಜ್ಯವಾಳುತ್ತ ಉಗ್ರ ತಪವನ್ನಾಚರಿಸಿದನು. ಆಗ ತನ್ನಲ್ಲಿಗೆ ಆಗಮಿಸಿದ ಮಾರ್ಕಂಡೇಯರನ್ನು ಪೂಜಿಸಿದ ಅಂಬರೀಷನು, ನಂತರ ಪ್ರಶ್ನೆ ಮಾಡಿದನು. ವಿಷ್ಣುಭಕ್ತರ ಲಕ್ಷಣಗಳೇನು ಎಂಬುದನ್ನು ಜ್ಞಾನಿವರೇಣ್ಯರಾದ ತಾವು ನನಗೆ ತಿಳಿಸಬೇಕು. ಜಗವ ಸೃಜಿಸುವ ಪ್ರಭುವಾದ ಮಹಾವಿಷ್ಣುವು ಅಂಥ ಭಕ್ತರಿಗೆ ಮಾಡುವ ಅನುಗ್ರಹವೆಂಥದು? ಎಂದು ಕೇಳಲು ಮಾರ್ಕಂಡೇಯರು ಹೇಳಿದರು.

ರಾಜನೇ! ವಿಷ್ಣುಭಕ್ತರ ಲಕ್ಷಣವನ್ನು ಹೇಳುವೆನು ಕೇಳು. ವಿಷ್ಣುಭಕ್ತರು ಇರುವೆಡೆಯಲ್ಲೇ ನಾರಾಯಣನು ಸನ್ನಿಹಿತನಾಗಿರುವನು. ಇವರಿಗೆ ದೇವನು ಎಲ್ಲೆಡೆ ವ್ಯಾಪಿಸಿರುವನೆಂಬ ದೃಢವಾದ ವಿಶ್ವಾಸವಿರುವುದು. ವೈಷ್ಣವರನ್ನು ಕಂಡೊಡನೆ ಭಕ್ತಿಯಿಂದ ನಮಸ್ಕರಿಸುವರು. ವಿಷ್ಣುಕಥೆಯನ್ನು ಕೇಳಿ ಯಾರ ಗಂಟಲು ತುಂಬಿ ಬರುವುದೋ, ಯಾರ ಕಂಗಳಲ್ಲಿ ಆನಂದಾಶ್ರುಗಳು ಸುರಿಯುವವೋ, ವೈಷ್ಣವರ ದರ್ಶನದಿಂದ ಸಂತೋಷಪಡುವನೋ ಅವನು ನಿಜವಾದ ಭಕ್ತನು. ಪವಿತ್ರವಾದ ವಿಷ್ಣುಕ್ಷೇತ್ರಗಳಲ್ಲಿ ಭಕ್ತಿಯಿಂದ ಪುಣ್ಯಕರ್ಮಗಳನ್ನು ಆಚರಿಸುವವನು ವೈಷ್ಣವನು. ನಿತ್ಯದಲ್ಲಿಯೂ ಹರಿಪ್ರತಿಮೆಗಳನ್ನು ದೃಢಭಕ್ತಿಯಿಂದ ಪೂಜಿಸುವವನು ವೈಷ್ಣವನೆನ್ನಿಸುವನು.

ಅನ್ಯದೇವತೆಗಳಲ್ಲಿ ಮಾಡಿದ ಭಕ್ತಿಗಿಂತ ವಿಷ್ಣುಭಕ್ತಿಯು ಅತಿಶ್ರೇಷ್ಠವಾದುದು. ಆದುದರಿಂದ ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಪಡೆಯಲು ವೈಷ್ಣವನಾದ ಬ್ರಾಹ್ಮಣನನ್ನು ಭಕ್ತಿಯಿಂದ ಪೂಜಿಸಬೇಕು. ಭಗವದ್ಭಕ್ತರು ವಿಷ್ಣುವಿನಲ್ಲೇ ಮನವಿರಿಸುವರು. ಇನ್ನೂ ಅನೇಕ ರೀತಿಯ ವಿಷ್ಣುಭಕ್ತರಿರುವರು. ಅವರನ್ನೆಲ್ಲ ಹೇಳಲು ನನ್ನಿಂದ ಸಾಧ್ಯವಿಲ್ಲ ಎಂದು ಮಾರ್ಕಂಡೇಯರು ಹೇಳಿದರು.

ಅಂಬರೀಷನು ಮತ್ತೆ ಪ್ರಶ್ನೆ ಮಾಡಿದನು. ಮುನಿವರ್ಯರೇ! ವಿಷ್ಣುವನ್ನು ಒಲಿಸುವ ಸುಲಭ ಉಪಾಯವಾವುದು? ಎಂದು ಕೇಳಲು ಮಾರ್ಕಂಡೇಯರು ಹೇಳಿದರು.

ಧನುರ್ಮಾಸ ಪೂಜೆಯು ವಿಷ್ಣುವನ್ನು ಒಲಿಸುವ ಅತಿ ಸುಲಭ ಉಪಾಯವಾಗಿದೆ. ಹೇಮಂತ ಋತುವಿನ ಧನುರ್ಮಾಸದಲ್ಲಿ ಹರಿಯನ್ನು ಪೂಜಿಸಿ ಮುದ್ಗಾನ್ನವನ್ನು ನಿವೇದಿಸು. ಹಾಗೂ ನಿರಂತರವಾಗಿ ದ್ವಾದಶಾಕ್ಷರ ಮಂತ್ರವನ್ನು ಜಪಿಸು. ಇದರಿಂದ ಶೀಘ್ರವೇ ಶ್ರೀಹರಿಯು ಒಲಿಯುವನು. ಮಾರ್ಕಂಡೇಯರ ಉಪದೇಶದಿಂದ ಕೃತಕೃತ್ಯನಾದ ರಾಜನು ಪ್ರತಿ ವರುಷ ಧನುರ್ಮಾಸದಲ್ಲಿ ಮುದ್ಗಾನ್ನದಿಂದ ಶ್ರೀಹರಿಯನ್ನು ಪೂಜಿಸಿದನು. ಹಾಗೂ ದ್ವಾದಶಾಕ್ಷರಮಂತ್ರವನ್ನು ಜಪಿಸುತ್ತ ಒಂದು ಸಾವಿರ ವರುಷಗಳವರೆಗೆ ನಾರಾಯಣನನ್ನು ಸ್ಮರಿಸುತ್ತ ಶ್ರೇಷ್ಠತಪವನ್ನಾಚರಿಸಿದನು. ಹೃದಯಕಮಲದಲ್ಲಿ ಹಾಗೂ ಸೂರ್ಯನಲ್ಲಿರುವ ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿದ, ಶ್ರೀವತ್ಸಧರನಾದ, ಪೀತಾಂಬರಧಾರಿಯಾದ ಹರಿಯನ್ನು ಭಕ್ತಿಯಿಂದ ಪೂಜಿಸಿದನು.

ಆಗ ಸಕಲದೇವತಾವಂದ್ಯನಾದ, ವಿಶ್ವವ್ಯಾಪಿಯಾದ ಹರಿಯು ಗರುಡನನ್ನೇರಿ ಅಂಬರೀಷನಲ್ಲಿಗೆ ಬಂದನು. ಗರುಡನನ್ನು ಐರಾವತದಂತಾಗಿಸಿ ತಾನದರ ಮೇಲೆ ಇಂದ್ರನಂತೆ ಕುಳಿತು ಬಂದು ಅಂಬರೀಷನಿಗೆ ಹೇಳಿದ. ನಾನು ಇಂದ್ರನು, ನಿನ್ನನ್ನು ಆಶೀರ್ವದಿಸಲು ಬಂದಿರುವೆ. ನಿನಗೇನು ಬೇಕು ಕೇಳಿಕೋ ಎನ್ನಲು ಅಂಬರೀಷನು ಹೇಳಿದನು. ನಾನು ನಿನ್ನನ್ನು ಉದ್ದೇಶಿಸಿ ತಪದಲ್ಲಿ ತೊಡಗಿದವನಲ್ಲ. ನೀನು ನೀಡುವ ವರಗಳ ಅಪೇಕ್ಷೆಯೂ ಎನಗಿಲ್ಲ. ನಾನು ನನ್ನ ಸ್ವಾಮಿಯಾದ ಜಗದೊಡೆಯನಾದ ನಾರಾಯಣನನ್ನು ನಿರೀಕ್ಷಿಸುತ್ತಿರುವೆ. ಇಂದ್ರನೇ! ನೀನು ಹೊರಟು ಹೋಗು. ನನ್ನ ಬುದ್ಧಿಯನ್ನು ಪ್ರಲೋಭನೆಗೊಳಿಸದಿರು. ಹೀಗೆ ಅಂಬರೀಷನು ನುಡಿಯಲು ಭಗವಂತನು ನಸುನಕ್ಕು ಶಾರ್ಙ್ಗ, ಚಕ್ರ, ಗದೆ, ಬಾಣ, ಖಡ್ಗಗಳನ್ನು ಧರಿಸಿ ವಿಷ್ಣುರೂಪಿಯಾಗಿ ಪ್ರತ್ಯಕ್ಷನಾದನು. ದೇವತೆಗಳು ಗಂಧರ್ವರು ಮುಂತಾದವರೆಲ್ಲ ಸುತ್ತುವರೆದು ಸ್ತುತಿಸುತ್ತಿರಲು ಗರುಡನ ಮೇಲೆ ಕುಳಿತ ಶ್ರೀಹರಿಯನ್ನು ಕಂಡು ಅಂಬರೀಷನು ನಮಸ್ಕರಿಸಿ ಸ್ತುತಿಸಿದನು.

ದೇವದೇವನೇ! ನೀನು ನನ್ನ ಸ್ವಾಮಿಯೂ, ಜಗದೊಡೆಯನೂ ಆಗಿರುವೆ. ನೀನು ಭಕ್ತರನ್ನು ನಿನ್ನೆಡೆ ಸೆಳೆಯುವವನು, ಎಲ್ಲೆಡೆ ವ್ಯಾಪ್ತನು, ಸರ್ವನಿಯಾಮಕನು, ಸರ್ವವಂದ್ಯನು, ಎಲ್ಲದಕ್ಕೂ ನೀನೇ ಆದಿಯು, ಜನನ ರಹಿತನು, ಸರ್ವಾಚಿಂತ್ಯನು, ಸರ್ವವೇದಪ್ರತಿಪಾದ್ಯನು, ನಾನು ನಿನಗೆ ಶರಣು ಬಂದಿದ್ದೇನೆ. ನನ್ನನ್ನು ರಕ್ಷಿಸು. ನಿನ್ನ ಹೊರತು ನನಗಾರೂ ಗತಿಯಿಲ್ಲ. ನೀನೇ ನನಗೆ ಶರಣ್ಯನು. ಹೀಗೆ ಸ್ತುತಿಸಲು ಭಗವಂತನು ಹೇಳಿದನು.

ಅಂಬರೀಷನೇ! ನಾನು ಪ್ರೀತನಾಗಿದ್ದೇನೆ. ಮುದ್ಗಾನ್ನಪೂಜೆಯಿಂದ ಸಂತುಷ್ಟನಾದ ನಾನು ನಿನ್ನ ಮನೋಕಾಮನೆಯನ್ನು ಪೂರೈಸಲು ಇಲ್ಲಿಗೆ ಆಗಮಿಸಿರುವೆ. ನಿನ್ನ ಇಚ್ಛೆಯನ್ನು ಹೇಳು ಎನ್ನಲು, ಪರಮಭಾಗವತನಾದ ಅಂಬರೀಷನು ಹೇ ಆನಂದಸ್ವರೂಪಿಯೇ ನನ್ನ ಮನವು ಯಾವಾಗಲೂ ನಿನ್ನಲ್ಲಿ ನೆಲೆಸಲಿ. ನನ್ನ ಮಾತು, ಮನಸ್ಸು, ಶರೀರಗಳೆಲ್ಲ ನಿನ್ನ ಸೇವೆಯಲ್ಲಿ ತೊಡಗಲಿ. ನಾನು ಈ ಜಗವನ್ನೆಲ್ಲ ವಿಷ್ಣುಪೂಜಾರತವಾಗುವಂತೆ ಮಾಡಲು ಇಚ್ಛಿಸಿದ್ದೇನೆ. ಅದಕ್ಕಾಗಿ ನನಗೆ ನೀನು ಬಲ ನೀಡು. ಯಜ್ಞ, ದಾನ, ಪೂಜೆಗಳಿಂದ ದೇವತೆಗಳನ್ನು ತೃಪ್ತಿಪಡಿಸಿ, ದುಷ್ಟರನ್ನು ಸದೆಬಡಿದು ವೈಷ್ಣವರನ್ನು ಪಾಲಿಸುವ ಸಾಮರ್ಥ್ಯ ನೀಡು. ಈ ಸಂಸಾರತಾಪದಿಂದ ಭೀತನಾದ ನಾನು ನಿನ್ನಲ್ಲೇ ರತನಾಗುವಂತೆ ಅನುಗ್ರಹಿಸು. ಈ ರೀತಿ ಪ್ರಾರ್ಥಿಸಿದ ಅಂಬರೀಷನಿಗೆ ದೇವೇಶನು ಹೇಳಿದನು. ನೀನು ಇಚ್ಛಿಸಿದಂತೆಯೇ ಆಗಲಿ. ಜ್ವಾಲೆಯ ಮಾಲೆಗಳಿಂದ ಸುತ್ತುವರೆದ, ಕೋಟಿಸೂರ್ಯರ ಕಾಂತಿಯಿಂದ ಹೊಳೆಯುವ ಈ ಸುದರ್ಶನಚಕ್ರವು ನಿನಗೆ ಬಂದೊದಗುವ ಋಷಿಶಾಪ, ಶತ್ರುಭಯ, ರೋಗಗಳು ಮುಂತಾದವುಗಳನ್ನು ಪರಿಹರಿಸುವುದು. ಇದನ್ನು ನಿನಗೆ ನೀಡುತ್ತಿದ್ದೇನೆ ಎಂದು ತನ್ನ ಆಯುಧವಾದ ಸುದರ್ಶನ ಚಕ್ರವನ್ನು ನೀಡಿದನು.

**॥ ಇಲ್ಲಿಗೆ ಇಪ್ಪತ್ತಾರನೇ ಅಧ್ಯಾಯವು ಮುಗಿಯಿತು ॥**

★★★

## ಇಪ್ಪತ್ತೇಳನೇ ಅಧ್ಯಾಯ

ಸೂತರು ಹೇಳುವರು. ಸುದರ್ಶನಚಕ್ರವನ್ನು ಪಡೆದ ಅಂಬರೀಷ ಮಹಾರಾಜನು ನಾರಾಯಣನನ್ನು ಭಕ್ತಿಯಿಂದ ನಮಸ್ಕರಿಸಲು ನಾರಾಯಣನು ಅಲ್ಲಿಯೇ ಅಂತರ್ಧಾನನಾದನು. ಅಂಬರೀಷನು ಅಯೋಧ್ಯೆಯನ್ನು ಪ್ರವೇಶಿಸಿ ರಾಜ್ಯವಾಳುತ್ತ ಬ್ರಾಹ್ಮಣರೇ ಮೊದಲಾದ ಎಲ್ಲ ವರ್ಣದವರನ್ನು ತಮ್ಮ ತಮ್ಮ ಸ್ವಕರ್ಮದಲ್ಲಿ ತೊಡಗಿಸಿದನು. ನಿತ್ಯದಲ್ಲೂ ನಾರಾಯಣಪರನಾಗಿ ದೋಷರಹಿತ-

ರಾದ ವಿಷ್ಣುಭಕ್ತರನ್ನು ವಿಶೇಷವಾಗಿ ಪಾಲಿಸಿದನು. ಅನೇಕರೀತಿಯ ದಾನಧರ್ಮ-ಗಳನ್ನು, ಯಜ್ಞಯಾಗಾದಿಗಳನ್ನು ಮಾಡಿದನು. ಚೈತ್ರಮಾಸದಲ್ಲಿ ಪಾನಕವನ್ನು, ವೈಶಾಖದಲ್ಲಿ ಮೊಸರು ಅನ್ನವನ್ನು ದಾನ ಮಾಡಿದನು. ಚಾತುರ್ಮಾಸ್ಯದಲ್ಲಿ ಕಾಯಿಪಲ್ಲೆ, ಮೊಸರು, ಹಾಲು, ಬೇಳೆಗಳನ್ನು ತ್ಯಜಿಸಿ ವ್ರತಗಳನ್ನಾಚರಿಸಿದನು. ಕಾರ್ತಿಕಮಾಸದಲ್ಲಿ ಕೋಟಿ ಕೋಟಿ ಸಂಖ್ಯೆಯಲ್ಲಿ ದೀಪಗಳನ್ನು ಹಚ್ಚಿದನು. ಮಾರ್ಗಶೀರ್ಷದ ಧನುರ್ಮಾಸದಲ್ಲಿ ಮುದ್ಗಾನ್ನದಿಂದ ಹರಿಪೂಜೆಯನ್ನು ಪ್ರಾತಃ ಕಾಲದಲ್ಲಿ ಪ್ರತಿವರುಷ ಮಾಡಿದನು. ಮಾಘಮಾಸದಲ್ಲಿ ಪ್ರಾತಃಕಾಲದಲ್ಲಿ ಸ್ನಾನಮಾಡಿ ಕಂಬಳಿಯನ್ನು ದಾನ ಮಾಡಿದನು. ಸಾವಿರಾರು ಬ್ರಾಹ್ಮಣರಿಗೆ ಭೋಜನ ಮಾಡಿಸಿ ನೂರಾರು ಅಶ್ವಮೇಧಗಳು ಹಾಗೂ ವಾಜಪೇಯ ಯಾಗಗಳನ್ನು ಮಾಡಿದನು.

ಅಂಬರೀಷನು ಆಳುತ್ತಿರಲು ಮನೆಮನೆಯಲ್ಲೂ ಅಗ್ನಿಹೋತ್ರಗಳು, ವೇದಘೋಷಗಳು, ಹರಿಯ ನಾಮಸ್ಮರಣೆಯೂ, ಯಜ್ಞಮಂತ್ರಗಳೂ ಕೇಳಿ ಬರುತ್ತಿದ್ದವು. ಅಂಬರೀಷನ ಆಳ್ವಿಕೆಯಲ್ಲಿ ದುರ್ಭಿಕ್ಷಗಳಿಲ್ಲದೇ ಭೂಮಿಯು ಸಸ್ಯಶ್ಯಾಮಲೆಯಾಗಿದ್ದಿತು. ಪ್ರಜೆಗಳೆಲ್ಲ ರೋಗಾದಿ ಉಪದ್ರವಗಳಿಲ್ಲದೇ ಸುಖವಾಗಿದ್ದರು. ಹೀಗೆ ರಾಜನಾದ ಅಂಬರೀಷನು ಧರ್ಮದಿಂದ ರಾಜ್ಯವನ್ನು ಪರಿಪಾಲಿಸಿದನು.

ಹೀಗಿರುತ್ತಿದ್ದ ಅಂಬರೀಷನಿಗೆ ಕಮಲನೇತ್ರೆಯಾದ, ಸರ್ವಲಕ್ಷಣ-ಸಂಪನ್ನಳಾದ ಶ್ರೀಮತಿ ಎಂಬ ಮಗಳಿದ್ದಳು. ದೇವಮಾಯೆಯಂತೆ ಶೋಭಿಸುತ್ತಿದ್ದ ಶ್ರೀಮತಿಯು ವಿವಾಹಕ್ಕೆ ಯೋಗ್ಯ ವಯಸ್ಸನ್ನು ಹೊಂದಿದಳು. ಆ ಸಮಯದಲ್ಲಿ ಮುನಿಶ್ರೇಷ್ಠರಾದ ನಾರದರು ಅಂಬರೀಷನ ಅರಮನೆಗೆ ಆಗಮಿಸಿದರು. ಹಾಗೆಯೇ ಜ್ಞಾನಿಶ್ರೇಷ್ಠರಾದ ಪರ್ವತ ಮುನಿಗಳೂ ಆಗಮಿಸಿದರು.

ತನ್ನ ಅರಮನೆಗೆ ಆಗಮಿಸಿದ ಆ ಮಹರ್ಷಿಗಳನ್ನು ರಾಜನು ಯಥೋಚಿತವಾಗಿ ಸತ್ಕರಿಸಿ ತನ್ನ ಕುವರಿಯಾದ ಶ್ರೀಮತಿಯಿಂದ ಅವರಿಗೆ ನಮಸ್ಕಾರ ಮಾಡಿಸಿದ. ದೇವಕನ್ಯೆಯಂತೆ ಶೋಭಿಸುತ್ತಿದ್ದ ಶ್ರೀಮತಿಯನ್ನು ಕಂಡು ಆಶ್ಚರ್ಯಚಕಿತರಾಗಿ ನಾರದರು ರಾಜನೇ! ಸರ್ವಲಕ್ಷಣ ಸಂಪನ್ನೆಯಾದ ಈ ಕನ್ಯೆ ಯಾರು? ಎಂದು ಪ್ರಶ್ನೆ ಮಾಡಿದರು. ಆಗ ರಾಜನು ಇವಳು ನನ್ನ ಕುವರಿ. ಇವಳ ಹೆಸರು ಶ್ರೀಮತಿ. ವಿವಾಹಕ್ಕೆ ಯೋಗ್ಯಳಾಗಿರುವಳು. ಇವಳಿಗೆ ಉತ್ತಮವಾದ ವರನ ಅನ್ವೇಷಣೆ ಯಲ್ಲಿದ್ದೇನೆ ಎಂದು ಹೇಳಲು ನಾರದರು ಆ ಕನ್ಯೆಯನ್ನು ವಿವಾಹವಾಗಲು ಇಚ್ಛಿಸಿದರು. ಮುನಿಶ್ರೇಷ್ಠರಾದ ಪರ್ವತರೂ ಕೂಡ ಅವಳನ್ನೇ ಅಪೇಕ್ಷಿಸಿದರು. ನಾರದರು ರಾಜನನ್ನು ಏಕಾಂತದಲ್ಲಿ ಕರೆದು ರಾಜನೇ! ನಿನ್ನ ಕುವರಿಯನ್ನು ನನಗೇ ನೀಡಬೇಕೆಂದರು. ಪರ್ವತರೂ ಸಹ ರಾಜನಿಗೆ ಏಕಾಂತದಲ್ಲಿ ಶ್ರೀಮತಿಯನ್ನು

ತನಗೇ ನೀಡುವಂತೆ ಆದೇಶಿಸಿದರು. ಇಬ್ಬರೂ ತನ್ನ ಮಗಳನ್ನು ಇಚ್ಛಿಸುವುದನ್ನು ಕಂಡು ಭೀತನಾದ ಅಂಬರೀಷನು ಹೇಳಿದನು. ಮುನಿಶ್ರೇಷ್ಠರೇ! ನೀವಿಬ್ಬರೂ ನನ್ನ ಮಗಳನ್ನು ಇಚ್ಛಿಸುತ್ತಿರುವಿರಿ. ನಾನೇನು ಮಾಡಲಿ? ನಿಮ್ಮಿಬ್ಬರಲ್ಲಿ ಶ್ರೀಮತಿಯು ಯಾರನ್ನು ಇಚ್ಛಿಸುವಳೋ ಅವರಿಗೆ ಅವಳನ್ನು ನೀಡಿ ವಿವಾಹ ಮಾಡುವೆನು. ಇಲ್ಲವಾದಲ್ಲಿ ನಾನೇನೂ ಮಾಡಲಾರೆ. ಹೀಗೆಂದ ರಾಜನ ಮಾತುಗಳಿಂದ ಪ್ರೀತರಾದ ಆ ಮುನಿಶ್ರೇಷ್ಠರು ಸಂತುಷ್ಟಚಿತ್ತರಾಗಿ ಅಲ್ಲಿಂದ ತೆರಳಿದರು.

ಅವರಿಬ್ಬರೂ ಮುನಿಶ್ರೇಷ್ಠರು, ನಿತ್ಯದಲ್ಲೂ ವಾಸುದೇವನನ್ನು ಭಜಿಸುವವರು. ನಂತರ ನಾರದರು ವೈಕುಂಠಕ್ಕೆ ತೆರಳಿ ಸರ್ವೇಂದ್ರಿಯ ನಿಯಾಮಕನಾದ ವಿಷ್ಣುವಿಗೆ ನಮಸ್ಕರಿಸಿ ನುಡಿದರು. ಭಗವಂತನೇ! ನಾನು ನಿನ್ನನ್ನು ಏಕಾಂತದಲ್ಲಿ ಏನನ್ನೋ ಬೇಡಲಿಚ್ಛಿಸುತ್ತಿರುವೆ. ಹೀಗೆನ್ನಲು ಗೋವಿಂದನು ತನ್ನ ಪೀಠದಿಂದೆದ್ದು ನಗುತ್ತ ನಾರದರ ಹತ್ತಿರ ಬಂದು ಅದೇನು ಹೇಳೆನ್ನಲು ನಾರದರು ಹೇಳಿದರು. ಲಕ್ಷ್ಮೀಪತಿಯೇ! ನಿನ್ನ ಭಕ್ತಶ್ರೇಷ್ಠನಾದ ಅಂಬರೀಷ ಮಹಾರಾಜನಿಗೆ ಶ್ರೀಮತಿ ಎಂಬ ಹೆಸರಿನ ಕುವರಿಯಿದ್ದಾಳೆ. ನಾನು ಅವಳನ್ನು ವಿವಾಹವಾಗಲು ಇಚ್ಛಿಸಿದ್ದೇನೆ. ತಪೋನಿಧಿಗಳಾದ ಪರ್ವತರೂ ಅವಳನ್ನೇ ಅಪೇಕ್ಷೆಪಡುತ್ತಿದ್ದಾರೆ. ನಮ್ಮಿಬ್ಬರಲ್ಲಿ ಶ್ರೀಮತಿಯು ಇಚ್ಛಿಸಿದ ಒಬ್ಬರಿಗೆ ಅವಳನ್ನು ನೀಡಿ ಕನ್ಯಾದಾನ ಮಾಡುವುದಾಗಿ ಅಂಬರೀಷನು ಹೇಳಿರುವನು. ನಾನು ನಾಳೆ ಪ್ರಾತಃಕಾಲದಲ್ಲಿ ಅರಮನೆಗೆ ಬರುವೆನೆಂದು ರಾಜನಿಗೆ ತಿಳಿಸಿದ್ದೇನೆ. ಲಕ್ಷ್ಮೀಪತಿಯೇ! ನಾಳೆ ನನಗೆ ಪ್ರಿಯವನ್ನುಂಟು ಮಾಡು. ನಾಳೆ ಮುಂಜಾನೆಯ ಸಮಯ ಪರ್ವತಋಷಿಯ ಮುಖವು ಶ್ರೀಮತಿಗೆ ಕೆಂಪುಕೋತಿಯ ಮುಖದಂತೆ ತೋರಬೇಕು ಎಂದು ಪ್ರಾರ್ಥಿಸಲು ಗೋವಿಂದನು ನಗುತ್ತ ಹಾಗೆಯೇ ಆಗಲೆಂದು ನುಡಿದನು. ತನ್ನ ಇಚ್ಛೆಯು ಈಡೇರಿತೆಂದು ಸಂತುಷ್ಟರಾದ ನಾರದರು ಗೋವಿಂದನನ್ನು ನಮಸ್ಕರಿಸಿ ಅಯೋಧ್ಯೆಗೆ ನಡೆದರು.

ನಾರದರು ಅತ್ತ ಹೋಗುತ್ತಿದ್ದ ಹಾಗೆಯೇ ಪರ್ವತ ಮುನಿಗಳು ವೈಕುಂಠಕ್ಕೆ ಆಗಮಿಸಿದರು. ಮಾಧವನನ್ನು ನಮಸ್ಕರಿಸಿ ಎಲ್ಲ ವೃತ್ತಾಂತವನ್ನು ಅರುಹಿ ನಾಳೆ ಮುಂಜಾನೆಯ ಸಮಯದಲ್ಲಿ ನಾರದರ ಮುಖವು ಕಪ್ಪು ಮುಖದ ವಾನರನಂತೆ ತೋರುವ ಹಾಗೆ ಮಾಡಬೇಕೆಂದು ನುಡಿದರು. ಭಗವಂತನು ನಸುನಗುತ್ತ ಹಾಗೆಯೇ ಮಾಡುವೆನೆಂದನು. ನಾರದರಿಗೆ ನೀನು ಇಲ್ಲಿಗೆ ಬಂದುದು ತಿಳಿಯುವ ಮುನ್ನವೇ ಅಯೋಧ್ಯೆಗೆ ನಡೆಯುವಂತೆ ಹೇಳಿದರು. ಪರ್ವತರು ಹಾಗೆಯೇ ಆಗಲೆಂದು ಅಯೋಧ್ಯೆಯತ್ತ ನಡೆದರು. ಇಬ್ಬರು ಮುನಿಗಳ ಆಗಮನವನ್ನರಿತ ರಾಜನು ವಿವಿಧ ಮಂಗಲದ್ರವ್ಯಗಳು ಹಾಗೂ ಧ್ವಜಮಾಲೆಗಳಿಂದ ಅಯೋಧ್ಯೆಯನ್ನು ಅಲಂಕರಿಸಿದನು. ಅಂಗಡಿಗಳನ್ನು ರಾಜಬೀದಿಗಳನ್ನು ಹಾಗೂ ಸುವಾಸಿನಿಯರು

ಮನೆಯ ಅಂಗಳವನ್ನು ಅಲಂಕರಿಸಿ, ಅಯೋಧ್ಯೆಯನ್ನು ಕಂಗೊಳಿಸುವಂತೆ ಮಾಡಿದರು. ಅತ್ಯುತ್ತಮವಾದ ಗಂಧಧೂಪಗಳಿಂದ, ಶ್ರೇಷ್ಠ ರತ್ನಗಂಬಳಿಗಳಿಂದ ಸಭೆಯನ್ನು ಅಲಂಕರಿಸಿ ಆ ಸಭೆಗೆ ರಾಜನು ಮಗಳ ಜತೆಯಲ್ಲಿ ಪ್ರವೇಶ ಮಾಡಿದನು.

ಸರ್ವಾಭರಣ ಭೂಷಿತೆಯಾಗಿ ಲಕ್ಷ್ಮಿಯಂತೆ ಕಂಗೊಳಿಸುತ್ತಿರುವ ಶ್ರೀಮತಿಯು ವಿಸ್ತಾರವಾದ ಸಭೆಯನ್ನು ಪ್ರವೇಶಿಸಿ ಆಸನದಲ್ಲಿ ಕೂರುತ್ತಿದ್ದಂತೆ ಅವಳನ್ನಪೇಕ್ಷಿಸಿ ಅನೇಕ ರಾಜರುಗಳು ಅಲ್ಲಿಗೆ ಆಗಮಿಸಿದರು. ಅನಂತರ ಬ್ರಹ್ಮದೇವರ ತೊಡೆಯಿಂದ ಜನಿಸಿದ ನಾರದರು ಹಾಗೂ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರೆನಿಸಿದ ಪರ್ವತರು ಅಲ್ಲಿಗೆ ಆಗಮಿಸಿದರು. ಅಲ್ಲಿಗೆ ಆಗಮಿಸಿದ ಅವರೀರ್ವರನ್ನು ಕಂಡು ದಿಗ್ಭ್ರಾಂತನಾದ ರಾಜನು ಉತ್ತಮ ಆಸನಗಳ ಮೇಲೆ ಕೂರಿಸಿ ಅವರನ್ನು ಪೂಜಿಸಿದನು. ಮಹಾತ್ಮರಾದ ಆ ಇಬ್ಬರು ಮುನಿಶ್ರೇಷ್ಠರು ಆ ಸಭೆಯಲ್ಲಿ ಕನ್ಯೆಗೋಸುಗ ಆಸೀನರಾದರು. ಅವರನ್ನು ಕೂರಿಸಿ ಎದುರಿಗೆ ಬಂದು ನಮಸ್ಕರಿಸಿ ರಾಜನು ಕಮಲಲೋಚನೆಯಾದ ಆ ಶ್ರೀಮತಿಗೆ ಹೇಳಿದನು. ಇವರೀರ್ವರು ಋಷಿಗಳಲ್ಲಿ ನೀನು ಯಾರನ್ನು ಮನಃಪೂರ್ವಕ ಬಯಸುವೆಯೋ ಅವರಿಗೆ ನಮಸ್ಕರಿಸಿ ಈ ಮಾಲೆಯನ್ನು ಅವರ ಕೊರಳಿಗೆ ಹಾಕು ಎಂದು ಹೇಳಿದನು. ರಾಜನು ಹೀಗೆ ನುಡಿಯಲು ಮಾಲೆಯನ್ನು ಕೈಯಲ್ಲಿ ಹಿಡಿದು ಸ್ತ್ರೀಯರಿಂದ ಸುತ್ತುವರೆದವಳಾಗಿ ಅವರೀರ್ವರು ಕುಳಿತ ಜಾಗಕ್ಕೆ ಬಂದು ಆ ಮುನಿಶ್ರೇಷ್ಠರನ್ನು ವೀಕ್ಷಿಸಿದಳು. ವಾನರರಂತಿರುವ ಆ ಮುನಿಗಳ ಮುಖವನ್ನು ಕಂಡ ಶ್ರೀಮತಿಯ ಮನವು ಬಿರುಗಾಳಿಗೆ ಸಿಕ್ಕ ಬಾಳೆಯ ಗಿಡದಂತೆ ಸಂಭ್ರಾಂತವಾಯಿತು. ತ್ರಸ್ತಳಾದ ಅವಳಿಗೆ ರಾಜ ಹೇಳಿದ. ಇವರೀರ್ವರಲ್ಲಿ ನೀನು ಯಾರನ್ನು ಪತಿಯಾಗಿ ಪಡೆಯಲು ಇಚ್ಛಿಸುವೆ? ಇವರೀರ್ವರಲ್ಲಿ ಒಬ್ಬರಿಗೆ ಈ ಮಾಲೆಯನ್ನು ಹಾಕು. ದುಃಖಿತಳಾದ ಅವಳು ತಂದೆಗೆ ಹೇಳಿದಳು. ಇಲ್ಲಿ ನಾರದರಾಗಲೀ, ಪರ್ವತರಾಗಲೀ ಕಾಣುತ್ತಿಲ್ಲ. ಇವರೀರ್ವರು ಮನುಷ್ಯ - ಶರೀರ ಹಾಗೂ ಕೋತಿಯ ಮುಖದ ನರವಾನರರು. ಇವರೀರ್ವರ ಮಧ್ಯದಲ್ಲಿ ಓರ್ವ ಹದಿನೈದು ವರುಷದ ಸರ್ವಾಭರಣ ಭೂಷಿತನಾದ ಅಗಸೆಯ ಹೂವಿನಂತೆ ನೀಲವರ್ಣದಿಂದ ಶೋಭಿಸುವ, ಉದ್ದನೆಯ ತೋಳುಗಳುಳ್ಳ, ಎತ್ತರದ ಎದೆಯ, ಬಾಗಿದ ಬಿಲ್ಲಿನಂತಹ ಹುಬ್ಬುಗಳ, ತ್ರಿವಳಿಯಿಂದ ಯುಕ್ತವಾದ ಸುಂದರ ತೆಳು ಹೊಟ್ಟೆಯ, ಪೀತಾಂಬರವನ್ನುಟ್ಟ, ಕಮಲದಂತಹ ಕೈಗಳು, ಕಮಲಮುಖ, ಕಮಲನೇತ್ರನಾದ ಓರ್ವ ಅತಿಸುಂದರನಾದ ಯುವಕನು ನನ್ನನ್ನು ಕೈಬೀಸಿ ಕರೆಯುತ್ತಿದ್ದಾನೆ ಎಂದಳು. ಶ್ರೀಮತಿಯ ಮಾತಿನಿಂದ ಸಂಶಯಗೊಂಡ ನಾರದರು ಅವನಿಗಿರುವ ಕೈಗಳೆಷ್ಟು? ಅವನ ಎದೆಯಲ್ಲೇನಿದೆ? ಅವನು ಕೈಗಳಲ್ಲಿ ಏನನ್ನು ಧರಿಸಿದ್ದಾನೆ? ಹೇಳು ಎನ್ನಲು, ಶ್ರೀಮತಿಯು ಹೇಳಿದಳು, ಅವನ ವಕ್ಷಃ- ಸ್ಥಳದಲ್ಲಿ ಪಂಚರೂಪದ ಮಾಲೆಯಿದೆ ಹಾಗೂ ಕೈಗಳಲ್ಲಿ ಬಿಲ್ಲು-ಬಾಣಗಳು ಕಾಣುತ್ತಿವೆ.

ಶ್ರೀಮತಿಯು ಹೀಗೆ ನುಡಿಯಲು ಆ ಮುನಿಶ್ರೇಷ್ಠರು ಇದಾವ ಮಾಯೆಯೆಂದು ವಿಸ್ಮಿತರಾದರು. ಸಾಕ್ಷಾತ್ ಜಗನ್ನಾಥನಾದ ಜನಾರ್ದನನೇ ಇಲ್ಲಿಗೆ ಆಗಮಿಸಿ ತನ್ನ ಮಾಯೆಯಿಂದ ಹೀಗೆ ಮಾಡಿರುವನು. ಇಲ್ಲವಾದರೆ ನಮ್ಮ ಮುಖಗಳು ಕೋತಿಯಂತೆ ಕಾಣಲು ಹೇಗೆ ಸಾಧ್ಯ? ಆಗ ರಾಜನು ಅವರಿಬ್ಬರಿಗೆ ನಮಸ್ಕರಿಸಿ ನುಡಿದನು. ಇದೇನು ಬುದ್ಧಿಮೋಹನಗೊಳಿಸಿದ್ದೀರಿ ಎನ್ನಲು ಕುಪಿತರಾದ ಆ ಮುನಿಗಳು ಇದು ನಮ್ಮ ಮಾಯೆಯಲ್ಲ. ನೀನೇ ಮೋಹವನ್ನು ಸೃಷ್ಟಿಸಿರುವೆ. ಈ ಶ್ರೀಮತಿಯು ಶೀಘ್ರದಲ್ಲೇ ನಮ್ಮಿಬ್ಬರಲ್ಲಿ ಒಬ್ಬರನ್ನು ವರಿಸಬೇಕೆಂದರು. ನಂತರ ಶ್ರೀಮತಿಯು ಮತ್ತೆ ಜನಾರ್ದನನಿಗೆ ನಮಸ್ಕರಿಸಿ ಮಾಲೆಯನ್ನು ಹಿಡಿದು ನಿಂತಳು. ಅವರ ಮಧ್ಯದಲ್ಲಿ ಮತ್ತೆ ಮೊದಲಿನಂತೆ ಆ ಪುರುಷನನ್ನು ನೋಡಿ ಅವನ ಕೊರಳಲ್ಲೇ ಮಾಲೆ ಹಾಕಿದಳು. ಆಗ ಎಲ್ಲೆಡೆ ಒಂದು ಮಂಗಲ ನಾದವು ಕೇಳಿ ಬಂದಿತು. ಪುರುಷೋತ್ತಮನಾದ ವಿಷ್ಣುವು ಶ್ರೀಮತಿಯನ್ನು ಕರೆದುಕೊಂಡು ತನ್ನ ಸ್ಥಾನವನ್ನು ಸೇರಿದನು.

**॥ ಇಲ್ಲಿಗೆ ಇಪ್ಪತ್ತೇಳನೇ ಅಧ್ಯಾಯವು ಮುಗಿಯಿತು ॥**

★★★

# ಇಪ್ಪತ್ತೆಂಟನೇ ಅಧ್ಯಾಯ

ಸೂತರು ಹೇಳುತ್ತಾರೆ. ಭಗವಂತನನ್ನು ವರಿಸಿದ ಆ ವರಾಂಗನೆಯು ಹಿಂದಿನ ಜನ್ಮದಲ್ಲಿ ಭಗವಂತನನ್ನು ಪಡೆಯಲು ನಿರಂತರ ತಪವನ್ನಾಚರಿಸಿ ಶ್ರೀಮತಿ ಎಂಬ ಹೆಸರಿನಿಂದ ಅವತರಿಸಿ ಶ್ರೀಹರಿಯನ್ನು ಹೊಂದಿದಳು.

ಅವರಿಬ್ಬರು ಮುನಿಶ್ರೇಷ್ಠರು ದುಃಖದಿಂದ ವಾಸುದೇವನ ಸದನಕ್ಕೆ ಹೊರಟರು. ತನ್ನೆಡೆಗೆ ಆಗಮಿಸುತ್ತಿದ್ದ ನಾರದರು ಹಾಗೂ ಪರ್ವತಮುನಿಗಳನ್ನು ಕಂಡ ಶ್ರೀಹರಿಯು ಶ್ರೀಮತಿಗೆ ಅದೃಶ್ಯಳಾಗುವಂತೆ ಹೇಳಿದ. ಹಾಗೆಯೇ ಆಗಲಿ ಎಂದು ಶ್ರೀಮತಿಯು ಅದೃಶ್ಯಳಾದಳು. ನಾರದರು ಹರಿಯ ಎದುರು ಬಂದು ನಮಸ್ಕರಿಸಿ ನುಡಿದರು. ಗೋವಿಂದನೇ! ಶ್ರೀಮತಿಯನ್ನು ನೀನೇ ಕರೆ ತರುವ ಮೂಲಕ ನನಗೂ ಮತ್ತು ಪರ್ವತರಿಗೂ ಕೂಡ ಅನ್ಯಾಯ ಮಾಡಿರುವೆ ಎಂದರು. ಹೀಗೆನ್ನಲು ಕ್ರುದ್ಧನಾದ ವಿಷ್ಣುವು ತನ್ನೆರಡು ಕೈಗಳಿಂದ ಕಿವಿಗಳನ್ನು ಮುಚ್ಚಿಕೊಂಡು ನೀವಿದೇನನ್ನು ಹೇಳುತ್ತಿದ್ದೀರಿ. ಮುನಿಗಳಾದ ತಮಗೆ ಈ ರೀತಿಯ ಭಾವನೆ ಅದು ಹೇಗೆ ಬಂದಿತು? ಇದು ಆಶ್ಚರ್ಯವಾಗಿದೆ ಎಂದು ನುಡಿದನು. ನಾನು ನಿಮ್ಮಿಬ್ಬರಿಗೂ ನೀವು ಹೇಳಿದ ರೀತಿಯಲ್ಲಿಯೇ ಮಾಡಿ ಪ್ರಿಯವನ್ನೇ ಮಾಡಿರುವೆನು ಎಂದನು. ಇದನ್ನು ಕೇಳಿ ಧರ್ಮಾತ್ಮರಾದ ನಾರದರು ಹಾಗಾದರೆ ನಮ್ಮಿಬ್ಬರ ಮಧ್ಯದಲ್ಲಿ ನಿಂತಿದ್ದ ಧನುರ್ಧಾರಿ

ಪುರುಷನಾರು? ಎಂದು ಕೇಳಿದರು. ಹೀಗೆನ್ನಲು ವಾಸುದೇವನು ಪ್ರಪಂಚದಲ್ಲಿ ಮಾಯಾವಿಗಳು ಹಾಗೂ ಮಹಾತ್ಮರು ಅನೇಕರಿದ್ದಾರೆ. ನಾನು ಯಾವಾಗಲೂ ನಾಲ್ಕು ಕೈಗಳುಳ್ಳವನು. ಚಕ್ರಧಾರಿಯು ಎಂದೇ ಹೇಳಲ್ಪಟ್ಟಿದ್ದೇನೆ. ಆದುದರಿಂದ ನಾನು ಶ್ರೀಮತಿಯನ್ನು ಅಪಹರಿಸಿಲ್ಲ ಎನ್ನಲು ಪ್ರೀತರಾದ ಆ ಋಷಿಗಳು ನಾರಾಯಣನಿಗೆ ನಮಸ್ಕರಿಸಿ ನುಡಿದರು. ಜಗತ್ಪತಿಯೇ! ಇದರಲ್ಲಿ ನಿನ್ನದೇನು ದೋಷ? ಇದು ಆ ದುರಾತ್ಮನಾದ ರಾಜನದೇ ದೋಷ. ಅವನು ನಮಗೆ ಮಾಯೆಯನ್ನು ಮಾಡಿರುವನು.

ಹೀಗೆ ನುಡಿದು ನಾರದರು ಹಾಗೂ ಪರ್ವತಮುನಿಗಳು ರಾಜನಲ್ಲಿಗೆ ಬಂದು ಹೇಳಿದರು. ಹೇ ರಾಜನೇ! ನಾವಿಬ್ಬರೂ ಇಲ್ಲಿಗೆ ಕನ್ಯಾಪೇಕ್ಷೆಯಿಂದ ಬಂದೆವು. ನೀನು ನಮ್ಮಿಬ್ಬರನ್ನು ಕನ್ಯೆಯನ್ನು ನೀಡುವುದಾಗಿ ಆಹ್ವಾನಿಸಿ ನಂತರ ಬೇರೊಬ್ಬರಿಗೆ ಕನ್ಯೆಯನ್ನು ನೀಡಿ ನಮ್ಮನ್ನು ಮೋಸಗೊಳಿಸಿರುವೆ. ಆದುದರಿಂದ ನಿನ್ನನ್ನು ಅಜ್ಞಾನವು ಆವರಿಸಲಿ. ಪರಮಾತ್ಮತತ್ವವನ್ನು ನೀನು ಚೆನ್ನಾಗಿ ಅರಿಯಲಾರೆ ಎಂದು ಶಪಿಸಿದರು. ಶಾಪದಿಂದ ಕ್ರುದ್ಧನಾದ ರಾಜನು ಅವರ ಮೇಲೆ ಸುದರ್ಶನ ಚಕ್ರವನ್ನು ಪ್ರಯೋಗಿಸಿದನು. ಘೋರ ಸುದರ್ಶನ ಚಕ್ರವು ಅವರನ್ನು ಬೆನ್ನಟ್ಟಿತು. ಚಕ್ರ ಪ್ರಭಾವದಿಂದ ಮೈಯೆಲ್ಲ ಉರಿಯುತ್ತಿರಲು ಭರಿಸಲಾಗದ ಸಾಮರ್ಥ್ಯವುಳ್ಳ ಚಕ್ರವನ್ನು ಸಹಿಸಲಾಗದೆ ಅವರಿಬ್ಬರು ಗೋವಿಂದನನ್ನು ಪ್ರಾರ್ಥಿಸುತ್ತ ವಿಷ್ಣುಲೋಕಕ್ಕೆ ಹೋಗಿ ನಾರಾಯಣ, ವಾಸುದೇವ, ಜಗತ್ಪತೇ, ಪದ್ಮನಾಭ, ಜನಾರ್ದನ, ಪುರುಷೋತ್ತಮ ನಮ್ಮನ್ನು ರಕ್ಷಿಸು ಎಂದು ಪ್ರಾರ್ಥಿಸಿದರು.

ಆಗ ಮನಸಾ ಅಗಮ್ಯನಾದ ಶ್ರೀಹರಿಯು ಈ ಇಬ್ಬರು ಮುನಿಗಳು ನನ್ನ ಭಕ್ತರಾಗಿರುವರು. ಹಾಗೆಯೇ ಅಂಬರೀಷನೂ ನನ್ನ ಶ್ರೇಷ್ಠ ಭಕ್ತನಾಗಿರುವನು. ಆದುದರಿಂದ ಋಷಿಗಳಿಗೆ ಹಾಗೂ ಅಂಬರೀಷನಿಗೂ ಹಿತವನ್ನುಂಟು ಮಾಡುವೆನು ಎಂದು ಯೋಚಿಸಿ ಚಕ್ರವನ್ನು ನಿವಾರಿಸಿದನು. ನಂತರ ನಸುನಗುತ್ತ ಚಕ್ರಕ್ಕೆ ಆಜ್ಞಾಪಿಸಿದನು. ಚಕ್ರವೇ! ನನ್ನ ಮಾತನ್ನಾಲಿಸು. ಋಷಿಶಾಪವು ವ್ಯರ್ಥವಾಗ-ಕೂಡದು. ಅದೇ ರೀತಿ ರಾಜನ ರಕ್ಷಣೆಗೆ ನಾನು ನೀಡಿದ ವರವೂ ವ್ಯರ್ಥವಾಗ-ಕೂಡದು. ಅಂಬರೀಷನ ವಂಶದಲ್ಲಿ ಕೀರ್ತಿವಂತನಾದ ದಶರಥನೆಂಬ ರಾಜನಾಗುವನು. ನಾನು ಶ್ರೀರಾಮಚಂದ್ರನೆಂಬ ಹೆಸರಿನಿಂದ ಆ ರಾಜನ ಹಿರಿಯ ಪುತ್ರನಾಗಿ ಜನಿಸುವೆ. ಆಗ ಚಕ್ರಾಭಿಮಾನಿಯು ನನ್ನ ತಮ್ಮ ಭರತನಾಗಿ, ಶಂಖಾಭಿಮಾನಿಯು ಶತ್ರುಘ್ನನಾಗಿ, ಶೇಷದೇವನು ಲಕ್ಷ್ಮಣನಾಗಿ ಜನಿಸುವರು. ಆಗ ನೀನು ನನ್ನನ್ನು ಕುರಿತು ಬಾ. ಈಗ ಮತ್ತೆ ಅಂಬರೀಷನಲ್ಲಿಗೆ ಹೋಗು ಎಂದು ನುಡಿದನು. ದೇವೇಶನು ಹೀಗೆ ನುಡಿಯಲು ಚಕ್ರವು ಆ ಋಷಿಗಳನ್ನು ಬಿಟ್ಟು ಅಂಬರೀಷನ ಬಳಿ ಸೇರಿತು. ಚಕ್ರದ ಭಯದಿಂದ ಮುಕ್ತರಾದ ಆ ಇಬ್ಬರು ಋಷಿಗಳು

ಭಯನಾಶಕನಾದ ಭಗವಂತನನ್ನು ನಮಿಸಿ ನಾವಿಬ್ಬರು ಇಂದಿನಿಂದ ಆಜೀವ ಬ್ರಹ್ಮಚಾರಿಗಳಾಗಿ ಉಳಿಯುವುದಾಗಿ ಪ್ರತಿಜ್ಞೆ ಮಾಡಿದರು. ಮತ್ತು ಮೊದಲಿನಂತೆ ಶುದ್ಧಮನದಿಂದ ಯೋಗ-ಧ್ಯಾನಗಳಲ್ಲಿ ನಿರತರಾದರು.

ಅಂಬರೀಷನ ಹಾಗೂ ಅವರಿಬ್ಬರು ಋಷಿಗಳ ಗೌರವ ರಕ್ಷಣೆಗಾಗಿ ಶ್ರೀಹರಿಯು ದಾಶರಥಿ ರಾಮನಾಗಿ ಜನಿಸಿ ಆತ್ಮಜ್ಞಾನಿಗಳಿಂದ ಸೇವ್ಯನಾದನು. ನಾರದರು ಹಾಗೂ ಪರ್ವತರು ನಡೆದುದೆಲ್ಲ ವಿಷ್ಣುಮಾಯೆಯೆಂದರಿತು ಮತ್ತಷ್ಟು ವಿಷ್ಣುಭಕ್ತರೆನಿಸಿದರು. ಜಿತೇಂದ್ರಿಯನೂ, ವಿಷ್ಣುಭಕ್ತನೂ ಆದ ಅಂಬರೀಷನು ಸ್ವೋಚಿತಕರ್ಮಗಳನ್ನಾಚರಿಸುತ್ತ ಹರಿಭಕ್ತಿ ಮಾಡುತ್ತಿದ್ದನು.

ಹೀಗೊಮ್ಮೆ ಏಕಾದಶೀ ಉಪವಾಸ ಮಾಡಿ ದ್ವಾದಶಿಯ ಪಾರಣೆಯನ್ನು ಮಾಡಲು ಉತ್ಸುಕನಾಗಿದ್ದಾಗ ಅಲ್ಲಿಗೆ ದುರ್ವಾಸರು ಆಗಮಿಸಿದರು. ರಾಜನು ಅವರಿಗೆ ನಮಸ್ಕರಿಸಿ ಮೃದುಮಾತುಗಳಿಂದ ಬಿನ್ನೈಸಿದ. ಋಷಿಶ್ರೇಷ್ಠರೇ! ಇಂದು ಸಾಧನೀ ದ್ವಾದಶಿ ಇದ್ದು ಸ್ವಲ್ಪ ಭಾಗ ಮಾತ್ರ ದ್ವಾದಶಿಯು ಉಳಿದಿದೆ. ಆದುದರಿಂದ ಸ್ನಾನಾದಿ ಕರ್ಮಗಳನ್ನು ಸಂಕೋಚದಲ್ಲಿ ಮುಗಿಸಿ ಪಾರಣೆಗೆ ಶೀಘ್ರ ಆಗಮಿಸಿರಿ ಎಂದು ಪ್ರಾರ್ಥಿಸಿದ.

ದುರ್ವಾಸರು ಸ್ನಾನಕ್ಕೆ ನದಿಗೆ ತೆರಳಿ ತಮ್ಮೆಲ್ಲ ಸಂಧ್ಯಾದಿ ಕರ್ಮಗಳನ್ನು ನಿಧಾನವಾಗಿ ಮಾಡತೊಡಗಿದರು. ಪಾರಣೆಯ ಸಮಯಕ್ಕೆ ದುರ್ವಾಸರು ಆಗಮಿಸದಿರಲು ರಾಜನು ಕೇವಲ ತೀರ್ಥವನ್ನು ಸ್ವೀಕರಿಸಿ ಪಾರಣವನ್ನಾಚರಿಸಿ ದ್ವಾದಶೀ ವ್ರತವನ್ನು ಪೂರ್ಣಗೊಳಿಸಿದನು. ಪಾರಣ ಪೂರೈಸಿದ ರಾಜನನ್ನು ಕಂಡು ಕ್ರುದ್ಧರಾದ ದುರ್ವಾಸರು ಶಾಪವನ್ನು ಕೊಡಲು ಉದ್ಯುಕ್ತರಾಗಲು ರಾಜನು ಚಕ್ರವನ್ನು ಪ್ರಾರ್ಥಿಸಿದನು. ಚಕ್ರವು ಬೆನ್ನಟ್ಟಲು ತ್ರಸ್ತರಾದ ದುರ್ವಾಸರು ವಿಷ್ಣುವನ್ನು ಶರಣು ಹೊಂದಿದರು. ಮಹಾವಿಷ್ಣುವು ಮತ್ತೆ ಅಂಬರೀಷನಲ್ಲಿಗೇ ಹೋಗುವಂತೆ ಹೇಳಿದನು. ದುರ್ವಾಸರು ಮತ್ತೆ ತಿರುಗಿ ಬಂದು ಅಂಬರೀಷನನ್ನು ಶರಣು ಹೋದರು. ಅಂಬರೀಷನಿಂದ ಶಾಂತವಾದ ಚಕ್ರವು ಸುಮ್ಮನೆ ನಿಂತುಕೊಂಡಿತು.

ಈ ರೀತಿಯ ಅನೇಕ ವಿಘ್ನಗಳು ರಾಜನನ್ನು ಬಾಧಿಸಿದರೂ ಅವನ ರಕ್ಷಣೆಗಾಗಿ ಸುದರ್ಶನಚಕ್ರವು ಯಾವಾಗಲೂ ಸಿದ್ಧವಿರುತ್ತಿತ್ತು. ವಿಷ್ಣುಭಕ್ತನಾದ ಅಂಬರೀಷನು ಪ್ರತಿದಿನವೂ ಅನೇಕ ಧರ್ಮಗಳನ್ನಾಚರಿಸುತ್ತಿದ್ದನು. ಹೇಮಂತ ಋತುವಿನ ಮಾರ್ಗಶೀರ್ಷದ ಧನುರ್ಮಾಸದಲ್ಲಿ ವಿಶೇಷವಾದ ಶ್ರದ್ಧೆ-ಭಕ್ತಿಗಳಿಂದ ಉಷಃ ಕಾಲದಲ್ಲಿ ಹರಿಪೂಜೆ ಮಾಡಿದನು. ವಿಶೇಷವಾಗಿ ಗೋವಿಂದನನ್ನು ಪೂಜಿಸಿ ಮುದ್ಗಾನ್ನವನ್ನು ಸಮರ್ಪಿಸಿದನು. ಪ್ರತಿನಿತ್ಯ ಬ್ರಾಹ್ಮಣರಿಗೆ ಭೋಜನ ಮಾಡಿಸಿ ವಸ್ತ್ರ-ಆಭರಣಗಳಿಂದ ಪೂಜಿಸಿದನು. ಆ ಪುಣ್ಯಪ್ರಭಾವದಿಂದ ವಿಷ್ಣುಲೋಕವನ್ನು

ಹೊಂದಿದನು. ಇಲ್ಲಿ ಹೇಳಲ್ಪಟ್ಟ ವೈಷ್ಣವನಾದ ಅಂಬರೀಷನ ಚರಿತೆಯನ್ನು, ವಿಶೇಷವಾಗಿ ಶ್ರೀಹರಿಯ ಮಾಯಾವಿಲಾಸವೈಭವವನ್ನು ಯಾರು ಹೇಳುವರೋ, ಕೇಳುವರೋ ಅಥವಾ ಹೇಳಿಸುವರೋ ಅವರು ಬಂಧಕವಾದ ಮಾಯೆಯನ್ನು ದಾಟಿ ವಿಷ್ಣುಲೋಕವನ್ನು ಹೊಂದುವರು.

**॥ ಇಲ್ಲಿಗೆ ಇಪ್ಪತ್ತೆಂಟನೇ ಅಧ್ಯಾಯವು ಮುಗಿಯಿತು ॥**

★★★

# ಇಪ್ಪತ್ತೊಂಭತ್ತನೇ ಅಧ್ಯಾಯ

ಋಷಿಗಳು ಕೇಳುತ್ತಾರೆ. ಧ್ರುವಮಹಾರಾಜನು ಕೇವಲ ಏಳು ವರ್ಷದ ಬಾಲಕನಾಗಿದ್ದು ಹೇಗೆ ವಿಷ್ಣುಭಕ್ತನಾಗಿ ವಿಷ್ಣುವನ್ನು ಪೂಜಿಸಿದನು? ಯಾವ ಪುಣ್ಯಪ್ರಭಾವದಿಂದ ಶಾಶ್ವತಸ್ಥಾನವನ್ನು ಹೊಂದಿದನು? ಈ ವಿಷಯವನ್ನು ಕೃಪೆ ಮಾಡಿ ನಮಗೆ ವಿಸ್ತಾರವಾಗಿ ತಿಳಿಸಿರಿ ಎಂದು ಪ್ರಾರ್ಥಿಸಲು ಸೂತರು ಹೇಳುತ್ತಾರೆ.

ಹಿಂದೆ ನಾನು ಇದೇ ವಿಷಯವಾಗಿ ಪ್ರಶ್ನೆ ಮಾಡಿದಾಗ ಸರ್ವಶಾಸ್ತ್ರ-ವಿಶಾರದರಾದ ಮಾರ್ಕಂಡೇಯರು ನನಗೆ ಹೇಳಿದುದನ್ನು ನಿಮಗೆ ಹೇಳುವೆನು.

ಮಹಾತೇಜಸ್ವಿಯೂ, ಸಾರ್ವಭೌಮನೂ ಆದ ಉತ್ತಾನಪಾದ ರಾಜನು ಭೂಮಿಯನ್ನು ಧರ್ಮದಿಂದ ಪರಿಪಾಲಿಸುತ್ತಿದ್ದನು. ಅವನಿಗೆ ಸುನೀತಿ ಮತ್ತು ಸುರುಚಿಯೆಂಬ ಇಬ್ಬರು ಪತ್ನಿಯರು. ಹಿರಿಯ ಪತ್ನಿ ಸುನೀತಿಯಲ್ಲಿ ಮಹಾ - ಕೀರ್ತಿವಂತನಾದ ಧ್ರುವನು ಜನಿಸಿದನು. ಮಹಾಜ್ಞಾನಿಯೂ, ಕುಲದೀಪಕನೂ ಆದ ಆ ಏಳು ವರುಷಗಳ ಧ್ರುವನು ಒಂದು ದಿನ ತಂದೆಯ ತೊಡೆಯನ್ನೇರಿದನು. ಮಲತಾಯಿಯಾದ ಸುರುಚಿಯು ಧ್ರುವನನ್ನು ನಿಂದಿಸಿ ಕೆಳಗಿಳಿಸಿ ತನ್ನ ಉದರದಲ್ಲಿ ಜನಿಸಿದ ಪುತ್ರನನ್ನು ರಾಜನ ತೊಡೆಯಲ್ಲಿ ಕುಳಿರಿಸಿದಳು.

ತಂದೆಯ ತೊಡೆಯಿಂದ ತಳ್ಳಲ್ಪಟ್ಟು ದುಃಖಿತನಾದ ಧ್ರುವನು ತಾಯಿಯ ಹತ್ತಿರ ಬಂದು ಮತ್ತೆ ಮತ್ತೆ ರೋದಿಸಿದನು. ಅಳುವ ಮಗನನ್ನು ಕಂಡು ಶೋಕಾಕುಲಳಾದ ಸುನೀತಿಯು ಮಗನಿಗೆ ಹೇಳಿದಳು. ಸುರುಚಿಯು ರಾಜನಿಗೆ ಪ್ರಿಯಳಾಗಿದ್ದಾಳೆ. ಅವಳ ಸುತನೂ ಹಾಗೆಯೇ ಪ್ರಿಯನಾಗಿರುವನು. ಅಲ್ಪಭಾಗ್ಯಳಾದ ನನ್ನಲ್ಲಿ ನೀನು ಜನಿಸಿರುವೆ. ದುಃಖಿಸದಿರು. ನಾನು ಹೇಳಿದಂತೆ ಕೇಳು. ಶಾಶ್ವತವಾದ ಉತ್ತಮಸ್ಥಾನವನ್ನು ನೀನು ನಿನ್ನ ಶಕ್ತಿಯಿಂದ ಸಂಪಾದಿಸು. ತಾಯಿಯು ಹೀಗೆ ಹೇಳಲು ಧ್ರುವನು ಅರಣ್ಯಕ್ಕೆ ನಡೆದನು.

(ಭಾಗವತದಲ್ಲಿ ನಾರದರಿಂದ ಧ್ರುವನು ಉಪದೇಶ ಪಡೆದನೆಂಬುದು ಸುಪ್ರಸಿದ್ಧವಾಗಿದೆ.)

ಅಲ್ಲಿ ವಿಶ್ವಾಮಿತ್ರಮುನಿಗಳನ್ನು ಕಂಡು ವಿಧ್ಯುಕ್ತವಾಗಿ ನಮಸ್ಕರಿಸಿದನು. ಮತ್ತೆ ಕೈಮುಗಿದು ಕೇಳಿದನು. ಮಹರ್ಷಿಗಳೇ! ನಾನು ಯಾವ ಉಪಾಯದಿಂದ ಎಲ್ಲಕ್ಕಿಂತ ಶ್ರೇಷ್ಠಸ್ಥಾನವನ್ನು ಪಡೆಯುವೆ ಎಂಬುದನ್ನು ತಿಳಿಸಬೇಕು. ತಂದೆಯ ತೊಡೆಯ ಮೇಲೆ ಕುಳಿತ ನನ್ನನ್ನು ಮಲತಾಯಿಯು ತಳ್ಳಿ ತಿರಸ್ಕರಿಸಿದಳು. ತಂದೆಯಾದ ರಾಜನು ಏನೂ ಹೇಳದೇ ಸುಮ್ಮನಿದ್ದನು. ದುಃಖಿತನಾದ ನನ್ನನ್ನು ತಾಯಿಯು ಸಮಾಧಾನಪಡಿಸಿ ಅರಣ್ಯಕ್ಕೆ ಕಳಿಸಿದ್ದಾಳೆ. ಇಲ್ಲಿಗೆ ಬಂದು ನಿಮ್ಮ ದರ್ಶನ ಭಾಗ್ಯ ಪಡೆದಿದ್ದೇನೆ. ನಿಮ್ಮ ಅನುಗ್ರಹದಿಂದ ಅದ್ಭುತವಾದ ಉತ್ತಮಸ್ಥಾನವನ್ನು ಪಡೆಯುವೆನು.

ಹೀಗೆಂದ ಧ್ರುವನ ಮಾತುಗಳನ್ನು ಕೇಳಿದ ವಿಶ್ವಾಮಿತ್ರರು ನೀನು ಉತ್ತಮ-ಸ್ಥಾನವನ್ನು ಪಡೆಯುವೆ. ಜಗದೊಡೆಯನೂ, ಕ್ಲೇಶನಾಶಕನೂ ಆದ ಕೇಶವನನ್ನು ಆರಾಧಿಸಿ ಪುಣ್ಯಗಳಿಸು. ನಿನಗೆ ಉತ್ತಮವಾದ ಧನುರ್ಮಾಸದ ಮಹಿಮೆಯನ್ನು ಹೇಳುವೆನು. ಧನುರ್ಮಾಸದಲ್ಲಿ ಮುದ್ಗಾನ್ನದಿಂದ ಹರಿಯ ಪೂಜೆ ಹಾಗೂ ವಾಸುದೇವದ್ವಾದಶಾಕ್ಷರಮಂತ್ರದ ಜಪ ಇವೆರಡು ಎಲ್ಲ ಪಾಪಗಳನ್ನು ನಾಶ ಮಾಡಿ ಮಂಗಲವನ್ನುಂಟು ಮಾಡುವುದು ಎಂದು ಹೇಳಿದರು. ಅವರ ಮಾತನ್ನು ಕೇಳಿದ ಧ್ರುವನು ಕೈಜೋಡಿಸಿ ಪ್ರಾರ್ಥಿಸಿದ. ಧರ್ಮಜ್ಞರೇ! ತಪೋಧನರೇ! ಧನುರ್ಮಾಸದಲ್ಲಿ ಹರಿಯ ಪೂಜೆಯನ್ನು ಹೇಗೆ ಮಾಡಬೇಕೆಂಬುದನ್ನು ತಿಳಿಸಿರಿ. ದ್ವಾದಶಾಕ್ಷರ ಮಂತ್ರದ ಜಪದ ವಿಧಾನವೇನೆಂಬುದನ್ನು ನನಗೆ ತಿಳಿಸಿರಿ ಎಂದು ಪ್ರಾರ್ಥಿಸಲು ವಿಶ್ವಾಮಿತ್ರರು ಹೇಳಿದರು. ಧ್ರುವನೇ! ಧನುರ್ಮಾಸದ ಉಷಃ-ಕಾಲದಲ್ಲಿ ಮುದ್ಗಾನ್ನದಿಂದ ಹರಿಯನ್ನು ಪೂಜಿಸು. ವಾಸುದೇವಮಂತ್ರವನ್ನು ಜಿತೇಂದ್ರಿಯನಾಗಿ ನಿತ್ಯದಲ್ಲೂ ಜಪಿಸು. ನಿತ್ಯದಲ್ಲೂ ಜಪ-ಹೋಮಾದಿಗಳನ್ನು ಆಚರಿಸುತ್ತ ಸನಾತನನಾದ ವಿಷ್ಣುವನ್ನು ಧ್ಯಾನಿಸು. ಹಣ್ಣು, ಗಡ್ಡೆ, ಗೆಣಸುಗಳನ್ನು ಸ್ವೀಕರಿಸಿ ಒಂದು ವರುಷದವರೆಗೆ ಆಲಸ್ಯರಹಿತನಾಗಿ ಈ ಶ್ರೇಷ್ಠಮಂತ್ರವನ್ನು ಜಪಿಸು. ಋಷಿಗಳ ಉಪದೇಶವನ್ನಾಲಿಸಿದ ರಾಜಪುತ್ರ ಧ್ರುವನು ನಿತ್ಯದಲ್ಲೂ ವಿಶೇಷವಾಗಿ ಧನುರ್ಮಾಸದ ಪೂಜೆಯನ್ನು ಭಕ್ತಿಯಿಂದ ಆಚರಿಸಿದನು. ಅದೆಲ್ಲದರ ಪುಣ್ಯಪ್ರಭಾವದಿಂದ ಧ್ರುವನಿಗೆ ಭವಮೋಚನಿಯಾದ ಶ್ರೇಷ್ಠವಾದ ಹರಿಭಕ್ತಿಯು ಪ್ರಾಪ್ತವಾಯಿತು.

ಆ ಕಾಲದಲ್ಲಿಯೇ ಅನೇಕ ಭಯಂಕರ ಉತ್ಪಾತಗಳು ತೋರಿದವು. ಧ್ರುವನ ತಪವನ್ನು ಕೆಡಿಸಲು ವೇತಾಲಗಳು, ರಾಕ್ಷಸರು, ಸಿಂಹವೇ ಮೊದಲಾದ ಕ್ರೂರ

ಮೃಗಗಳು ಬೆದರಿಸಿದವು. ವಾಸುದೇವಮಂತ್ರವನ್ನು ಜಪಿಸುತ್ತಿದ್ದ ಧ್ರುವನು ಅದಾವುದನ್ನೂ ಗಮನಿಸದೇ ತಪೋನಿರತನಾಗಿದ್ದನು. ಆಗ ಪಿಶಾಚವೊಂದು ಧ್ರುವನ ಮಾತೆಯಾದ ಸುನೀತಿಯ ವೇಷದಲ್ಲಿ ಅಲ್ಲಿಗೆ ಬಂದಿತು. ಆ ಪಿಶಾಚವು ಅತಿಯಾಗಿ ದುಃಖಿಸುತ್ತ ಹೇಳತೊಡಗಿತು. ನನಗೆ ನೀನೊರ್ವನೇ ಮಗನಾಗಿರುವೆ. ನೀನೇಕೆ ಇಲ್ಲಿ ಕಷ್ಟಪಡುತ್ತಿರುವೆ. ಅನಾಥಳಾದ ನನ್ನನ್ನು ತ್ಯಜಿಸಿ ಅರಣ್ಯಕ್ಕೇಕೆ ಬಂದಿರುವೆ ಎಂದು ರೋದಿಸುತ್ತ ತಪಸ್ಸಿಗೆ ವಿಘ್ನಪಡಿಸತೊಡಗಿತು. ಧ್ರುವನು ಆ ಪಿಶಾಚದತ್ತ ದೃಷ್ಟಿ ನೀಡದೇ ನಿರಂತರ ಹರಿನಾಮವನ್ನು ಜಪಿಸುತ್ತಿದ್ದನು. ಅವನ ನಿಷ್ಠೆಯಿಂದ ಪ್ರೀತನಾದ ಶ್ರೀಹರಿಯು ಆ ಎಲ್ಲ ವಿಘ್ನಗಳನ್ನು ನಿವಾರಿಸಿದನು. ಅನಂತರ ಪ್ರಳಯಕಾಲದ ಮೇಘದಂತೆ ಹೊಳೆಯುವ ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಹರಿಯು ಗರುಡನ ಮೇಲೇರಿ ಎಲ್ಲ ದೇವತೆಗಳು ಮಹರ್ಷಿಗಳು ಸ್ತುತಿಸುತ್ತಿರಲು ಅಲ್ಲಿಗೆ ಆಗಮಿಸಿದನು. ಅಲ್ಲಿಗೆ ಬಂದ ಹರಿಯನ್ನು ನೋಡಿ ಅವನನ್ನು ಕಂಗಳಿಂದಲೇ ಕುಡಿಯುವವನಂತೆ ನಿರೀಕ್ಷಿಸುತ್ತ ವಾಸುದೇವಮಂತ್ರವನ್ನು ಜಪಿಸುತ್ತಿದ್ದನು. ಗೋವಿಂದನು ತನ್ನ ಕೈಯಲ್ಲಿದ್ದ ಲಕ್ಷ್ಮೀಯಿಂದ ಅಭಿಮನ್ಯಮಾನ-ವಾದ ಶಂಖವನ್ನು ಅವನ ತಲೆಗೆ ಮುಟ್ಟಿಸಿದನು. ಅದರಿಂದ ಮಹಾಜ್ಞಾನವನ್ನು ಹೊಂದಿದ ಧ್ರುವನು ಪುರುಷೋತ್ತಮನಾದ ಶ್ರೀಹರಿಯನ್ನು ಕೈಜೋಡಿಸಿ ಸ್ತುತಿಸಿದನು.

ಹೇ ದೇವತೆಗಳ ಒಡೆಯನೇ! ಶಂಖ-ಚಕ್ರ-ಗದಾಧಾರಿಯೇ! ನೀನು ಸರ್ವವ್ಯಾಪಿಯಾಗಿ ಲೋಕಾತ್ಮನೆನಿಸಿರುವೆ. ಹಾಗೆಯೇ ಯಾರಿಗೂ ತೋರದಂತೆ ಹೃದಯಗುಹೆಗಳಲ್ಲಿ ನೆಲೆಸಿ ಗುಹ್ಯಾತ್ಮನೆನಿಸಿರುವೆ. ಕೇಶವನೇ! ನಾನು ನಿನ್ನನ್ನು ಶರಣು ಹೊಕ್ಕಿರುವೆ. ನಿನ್ನ ಮಹಿಮೆಯನ್ನು ಸನಕಾದಿ ಮಹರ್ಷಿಗಳೇ ತಿಳಿಯಲಾಗದೆಂದ ಮೇಲೆ ನನ್ನಂಥವನು ಹೇಗೆ ಅರಿಯಲು ಸಾಧ್ಯ ? ಜಗನ್ನಾಥನಾದ ನಿನಗೆ ನಮಸ್ಕಾರ. ಧ್ರುವನು ಹೀಗೆ ಸ್ತುತಿಸಲು ಪ್ರೀತನಾದ ಜನಾರ್ದನನು ಗಂಭೀರವಾಗಿ ಹೇಳಿದನು.

ಮಗುವೇ! ನಿನ್ನ ಭಕ್ತಿಯಿಂದ ನಾನು ಅತ್ಯಂತ ಪ್ರೀತನಾಗಿದ್ದೇನೆ. ಧನುರ್ಮಾಸದ ಮುದ್ಗಾನ್ನ ಪೂಜೆಯಿಂದ ಪ್ರೀತನಾದ ನಾನು ನಿನಗೆ ಶಾಶ್ವತವಾದ ಸ್ಥಾನವನ್ನು ನೀಡುವೆನು. ಶಾಶ್ವತವೂ ನಿತ್ಯಮಂಗಲವೂ ಆದ ಈ ನನ್ನ ಸ್ಥಾನವನ್ನು ದೇವತೆಗಳು ತಪಸ್ಸಿನಿಂದ ಪಡೆದುಕೊಂಡರು. ''ಓಂ ನಮೋ ಭಗವತೇ ವಾಸುದೇವಾಯ'' ಎಂಬ ಮಂತ್ರವನ್ನು ಭಕ್ತಿಯಿಂದ ಜಪಿಸುವವರು ಶಾಶ್ವತವಾದ ಸ್ಥಾನವನ್ನು ಪಡೆಯುವರು. ಹೀಗೆ ವಿಷ್ಣುವಿನ ಅನುಗ್ರಹದಿಂದ ಧ್ರುವನು ಜ್ಯೋತಿರ್ಮಂಡಲದಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆದನು. ಹೀಗೆ ಧನುರ್ಮಾಸಾಚರಣೆ ಮತ್ತು ವಾಸುದೇವದ್ವಾದಶಾಕ್ಷರಮಂತ್ರದ ಜಪದಿಂದ

ಧ್ರುವನು ಅತಿಶ್ರೇಷ್ಠವಾದ ಸಿದ್ಧಿಯನ್ನು ಪಡೆದನು. ಇದೆಲ್ಲವನ್ನು ನಾನು ನಿನಗೆ ಹೇಳಿದ್ದೇನೆ. ಆದುದರಿಂದ ಯಾವ ಮನುಜನು ವಾಸುದೇವನನ್ನು ಭಜಿಸುವನೋ ಮತ್ತು ಧನುರ್ಮಾಸದಲ್ಲಿ ಮುದ್ಗಾನ್ನದಿಂದ ಶ್ರೀಹರಿಯನ್ನು ಪೂಜಿಸುವನೋ ಅವನು ಧ್ರುವಸಾಯುಜ್ಯವನ್ನು ಹೊಂದಿ ಧ್ರುವನೊಂದಿಗೆ ಆನಂದಿಸುವನು.

ಆದುದರಿಂದ ಎಲ್ಲ ರೀತಿಯ ಪ್ರಯತ್ನಗಳಿಂದ ವಿಷ್ಣುಪೂಜೆಯಲ್ಲಿ ಆಸಕ್ತ-ನಾಗಿರಬೇಕು. ನಿತ್ಯದಲ್ಲಿಯೂ ವಿಷ್ಣುಪರನಾಗಿರಬೇಕು. ಸಕಲಪಾಪನಾಶಕವೂ, ಪುಣ್ಯಪ್ರದವೂ ಆದ ಧ್ರುವನ ಚರಿತೆಯನ್ನು ಹೇಳಿ, ಕೇಳಿದವರು ಉತ್ತಮ ಗತಿಯನ್ನು ಹೊಂದುವರು. ಈ ಧ್ರುವಚರಿತೆಯನ್ನು ಒಂದು ಬಾರಿಯಾದರೂ ಕೇಳಿದವನು ತನ್ನೆಲ್ಲ ಪಾಪಗಳಿಂದ ಮುಕ್ತನೆನಿಸುವನು.

ಅತಿಶ್ರೇಷ್ಠವಾದ ವಿಷ್ಣುಭಕ್ತಿಯನ್ನು ಆಚರಿಸುವ ಜನರು ಆ ವಿಷ್ಣುಭಕ್ತಿಯ ಪ್ರಭಾವದಿಂದಲೇ ತನ್ನೆಲ್ಲ ಇಚ್ಛೆಗಳನ್ನು ಪೂರೈಸಿಕೊಳ್ಳುವನು. ಇದರಲ್ಲೇನೂ ಸಂದೇಹವಿಲ್ಲ. ಭೂಮಿಯಲ್ಲಿರುವ ಧೂಳಿನ ಕಣಗಳನ್ನು ಎಣಿಸಬಹುದು. ಆಕಾಶದ ನಕ್ಷತ್ರಗಳನ್ನು ಎಣಿಸಬಹುದು. ಧನುರ್ಮಾಸದ ಮಹಿಮೆಯಿಂದೊದಗುವ ಪುಣ್ಯವನ್ನು ಸಾವಿರ ಮುಖಗಳ ಶೇಷದೇವರೂ ಎಣಿಸಲಾರರು. ಕೋಟಿ ಕನ್ಯಾದಾನವಾಗಲೀ, ಹತ್ತು ಸಾವಿರ ಯಜ್ಞಗಳಾಗಲೀ, ಬಹಳಷ್ಟು ಭೂದಾನವಾಗಲೀ ಅಸಂಖ್ಯ ವಿದ್ಯಾದಾನವಾಗಲೀ, ಧನುರ್ಮಾಸದ ಮುದ್ಗಾನ್ನ ದಾನದ ಹದಿನಾರನೆಯ ಒಂದಂಶಕ್ಕೂ ಸಾಟಿಯಾಗಲಾರವು.

**॥ ಇಲ್ಲಿಗೆ ಇಪ್ಪತ್ತೊಂಭತ್ತನೇ ಅಧ್ಯಾಯವು ಮುಗಿಯಿತು ॥**

★★★

# ಮೂವತ್ತನೇ ಅಧ್ಯಾಯ

ಋಷಿಗಳು ಕೇಳಿದರು. ಸೂತಾಚಾರ್ಯರೇ! ಯಾವ ಯಾವ ಯುಗದಲ್ಲಿ ದೇವರು ಯಾವ ರೂಪಗಳಿಂದ ಉಪಾಸ್ಯನಾಗಿದ್ದಾನೆ? ಪ್ರತಿಯುಗದಲ್ಲೂ ಯಾವ ಮಾಸಗಳು ಶ್ರೇಷ್ಠ. ಹಾಗೂ ಯಾವ ಯಾವ ಯುಗದಲ್ಲಿ ಯಾವುದಕ್ಕೆ ಪ್ರಾಮುಖ್ಯತೆ. ಇದನ್ನೆಲ್ಲ ದಯಮಾಡಿ ನಮಗೆ ಉಪದೇಶ ನೀಡಬೇಕು ಎಂದು ಪ್ರಾರ್ಥಿಸಲು ಸೂತರು ಹೇಳತೊಡಗಿದರು.

ಕೃತಯುಗದಲ್ಲಿ ವರದರಾಜನು, ತ್ರೇತಾಯುಗದಲ್ಲಿ ರಂಗನಾಥನು, ದ್ವಾಪರದಲ್ಲಿ ಜಗನ್ನಾಥ, ಕಲಿಯುಗದಲ್ಲಿ ವೆಂಕಟೇಶನು ಮುಖ್ಯೋಪಾಸ್ಯನಾಗಿದ್ದಾನೆ.

ಕೃತಯುಗದಲ್ಲಿ ಕಾರ್ತಿಕಮಾಸ, ತ್ರೇತಾಯುಗದಲ್ಲಿ ಮಾರ್ಗಶೀರ್ಷ- ಮಾಸ, ದ್ವಾಪರದಲ್ಲಿ ಮಾಘಮಾಸ, ಕಲಿಯುಗದಲ್ಲಿ ವೈಶಾಖಮಾಸಗಳು ಶ್ರೇಷ್ಠವೆನಿಸಿವೆ.

ಕೃತಯುಗದಲ್ಲಿ ತಪಸ್ಸು, ತ್ರೇತೆಯಲ್ಲಿ ಯಜ್ಞ, ದ್ವಾಪರದಲ್ಲಿ ಹರಿಯ ಪೂಜೆ, ಕಲಿಯುಗದಲ್ಲಿ ನಾಮ ಸಂಕೀರ್ತನೆ ಶ್ರೇಷ್ಠವಾಗಿವೆ.

ಕೃತಯುಗದಲ್ಲಿ ಪುಷ್ಕರವು ಶ್ರೇಷ್ಠವೆನಿಸುವುದು. ತ್ರೇತೆಯಲ್ಲಿ ರಾಮಸೇತು ಹಾಗೂ ಧನುಷ್ಕೋಟಿತೀರ್ಥಗಳು, ದ್ವಾಪರದಲ್ಲಿ ಸರ್ವತೀರ್ಥ ಉತ್ತಮವೆನಿಸಿದರೆ, ಕಲಿಯುಗದಲ್ಲಿ ಸ್ವಾಮಿ ಪುಷ್ಕರಣಿಯು ಶ್ರೇಷ್ಠವೆನಿಸಿದೆ.

ನದಿಗಳಲ್ಲಿ ಗೋದಾವರಿಯು ಕೃತಯುಗದಲ್ಲಿ ಉತ್ತಮವೆನಿಸಿದರೆ, ತ್ರೇತೆಯಲ್ಲಿ ಗಂಗೆ, ದ್ವಾಪರದಲ್ಲಿ ಯಮುನೆ, ಹಾಗೂ ಕಲಿಯುಗದಲ್ಲಿ ಕಾವೇರಿಯು ಶ್ರೇಷ್ಠವೆನಿಸುವುದು.

ಚೋಲ ರಾಜ್ಯದ ಮಾತೆಯೆನಿಸಿರುವ ಕಾವೇರಿಯು ಜಗವನ್ನು ರಕ್ಷಿಸಿ ಪಾವನಗೊಳಿಸುವಳು. ಈ ಕಾವೇರಿಯು ಮೂರು ಲೋಕಗಳಲ್ಲಿ ದಕ್ಷಿಣಗಂಗಾ ಎಂದು ಖ್ಯಾತಿ ಹೊಂದಿರುವಳು. ಸೂರ್ಯನು ತುಲಾರಾಶಿಯಲ್ಲಿರುವ ತುಲಾಮಾಸದಲ್ಲಿ ಕಾವೇರಿಯ ಸ್ನಾನವು, ಗಂಗಾದಿ ಸರ್ವ ತೀರ್ಥಗಳಿಗಿಂತಲೂ ಶ್ರೇಷ್ಠವಾದುದು. ವೈಶಾಖಮಾಸದಲ್ಲಿ ನರ್ಮದಾಸ್ನಾನ ಹಾಗೂ ಕಾರ್ತಿಕಮಾಸದಲ್ಲಿ ಗೋಮತೀ ಸ್ನಾನವು ಪ್ರಶಸ್ತವೆನಿಸುವವು. ಅದೇ ರೀತಿ ಕಾರ್ತಿಕಮಾಸದಲ್ಲಿ ಕಾಶಿಯಲ್ಲಿ ಗಂಗಾಸ್ನಾನವು ಅತ್ಯಂತ ಶ್ರೇಷ್ಠವಾದುದು. ಸೂರ್ಯನು ಮಕರ ರಾಶಿಯಲ್ಲಿರುವಾಗ ಪ್ರಯಾಗ ಹಾಗೂ ಧನುಷ್ಕೋಟಿ ತೀರ್ಥದ ಸ್ನಾನವು ವಿಶೇಷ ಪುಣ್ಯ ನೀಡುವುದು. ಧನುರ್ಮಾಸದಲ್ಲಿ ಹಾಗೂ ಚೈತ್ರಮಾಸದ ಹುಣ್ಣಿಮೆಯಂದು ಸ್ವಾಮಿಪುಷ್ಕರಣಿಯ ಸ್ನಾನವು ವಿಶೇಷ ಫಲದಾಯಕವೆನಿಸುವುದು.

ಕೃತಯುಗದಲ್ಲಿ ಕಂಚಿಯು, ತ್ರೇತೆಯಲ್ಲಿ ಕಾಶಿಯು, ದ್ವಾಪರದಲ್ಲಿ ದ್ವಾರಕೆಯು, ಕಲಿಯುಗದಲ್ಲಿ ಕುಂಭಕೋಣವು ಶ್ರೇಷ್ಠವೆನಿಸುವವು.

ಕೃತಯುಗದಲ್ಲಿ ಸುವರ್ಣದಾನವು, ತ್ರೇತೆಯಲ್ಲಿ ಬೆಳ್ಳಿ, ದ್ವಾಪರದಲ್ಲಿ ವಸ್ತ್ರ ಹಾಗೂ ಕಲಿಯುಗದಲ್ಲಿ ಅನ್ನದಾನವು ಶ್ರೇಷ್ಠವೆನಿಸುವವು.

ಎಲ್ಲ ದೇವತೆಗಳಿಗಿಂತ ನಾರಾಯಣನು ಸರ್ವೋತ್ತಮನೆನಿಸಿದರೆ ಎಲ್ಲ ನದಿಗಳಿಗಿಂತ ಗಂಗಾನದಿಯು ಉತ್ತಮವೆನಿಸುವುದು. ವೃಕ್ಷಗಳಲ್ಲಿ ಅಶ್ವತ್ಥವು, ಪತ್ರಗಳಲ್ಲಿ ತುಲಸಿಯು, ಪುಷ್ಪಗಳಲ್ಲಿ ಕಮಲವು, ದೇವರ್ಷಿಗಳಲ್ಲಿ ನಾರದರು ಉತ್ತಮರೆನಿಸುವರು. ಬ್ರಹ್ಮರ್ಷಿಗಳಲ್ಲಿ ವಸಿಷ್ಠರು, ಋಷಿಗಳಲ್ಲಿ ಗೌತಮರು, ರಾಜರ್ಷಿಗಳಲ್ಲಿ ಅಂಬರೀಷನು, ರಾಜರುಗಳಲ್ಲಿ ಭರತನು ಉತ್ತಮರಾಗಿರುವರು.

ಗೋವುಗಳಲ್ಲಿ ಕಾಮಧೇನುವೂ, ಚತುರ್ವರ್ಣಗಳಲ್ಲಿ ಬ್ರಾಹ್ಮಣವರ್ಣವೂ, ಮಂತ್ರಗಳಲ್ಲಿ ಗಾಯತ್ರಿ ಹಾಗೂ ಓಂಕಾರವು ಶ್ರೇಷ್ಠವೆನಿಸುವವು. ವೇದಗಳಲ್ಲಿ ಸಾಮವೇದವೂ, ಮಾಸಗಳಲ್ಲಿ ಮಾರ್ಗಶೀರ್ಷವೂ ಶ್ರೇಷ್ಠವೆನಿಸುವವು. ಇದೆಲ್ಲವನ್ನು ನಾನೀಗ ಸಂಕ್ಷೇಪದಲ್ಲಿ ಹೇಳಿರುವೆನು.

ಇನ್ನೂ ಅನೇಕ ಶ್ರೇಷ್ಠ ಪದಾರ್ಥಗಳುಂಟು. ಅವೆಲ್ಲವುಗಳನ್ನು ಹೇಳಲಾಗದು ಎಂದು ಹೇಳಲು ಋಷಿಗಳು ಪುರಾಣಗಳ ಗ್ರಂಥಸಂಖ್ಯೆಯನ್ನು ಹೇಳುವಂತೆ ಪ್ರಾರ್ಥಿಸಿದರು. ಸೂತರು ಎಲ್ಲ ಪುರಾಣಗಳ ಗ್ರಂಥ ಸಂಖ್ಯೆಯನ್ನು ಹೇಳಲಾರಂಭಿಸಿದರು. ಒಟ್ಟು ಪುರಾಣಗಳು ಹದಿನೆಂಟು.

| | | | | | |
|---|---|---|---|---|---|
| ೧ | ಬ್ರಹ್ಮಪುರಾಣ | ೨ | ಪದ್ಮಪುರಾಣ | ೩ | ವಿಷ್ಣುಪುರಾಣ |
| ೪ | ಶೈವಪುರಾಣ | ೫ | ಭಾಗವತಪುರಾಣ | ೬ | ನಾರದೀಯಪುರಾಣ |
| ೭ | ಮಾರ್ಕಂಡೇಯ | ೮ | ಆಗ್ನೇಯಪುರಾಣ | ೯ | ಭವಿಷ್ಯಪುರಾಣ |
| ೧೦ | ಬ್ರಹ್ಮವೈವರ್ತ | ೧೧ | ಲಿಂಗಪುರಾಣ | ೧೨ | ವಾಮನಪುರಾಣ |
| ೧೩ | ವರಾಹಪುರಾಣ | ೧೪ | ಮತ್ಸ್ಯಪುರಾಣ | ೧೫ | ಕೂರ್ಮಪುರಾಣ |
| ೧೬ | ಗರುಡಪುರಾಣ | ೧೭ | ಸ್ಕಂದಪುರಾಣ | ೧೮ | ಬ್ರಹ್ಮಾಂಡಪುರಾಣ. |

ಈ ಎಲ್ಲ ಪುರಾಣಗಳು ಒಟ್ಟಾಗಿ ನಾಲ್ಕುಲಕ್ಷಗ್ರಂಥಸಂಖ್ಯೆಯನ್ನು ಹೊಂದಿವೆ. (ಒಂದು ಗ್ರಂಥ ಎಂದರೆ ೩೨ ಅಕ್ಷರಗಳು)

| ತಾಮಸ ಪುರಾಣಗಳು | | | | | |
|---|---|---|---|---|---|
| ಮತ್ಸ್ಯ | ಕೂರ್ಮ | ಲಿಂಗ | ಶೈವ | ಸ್ಕಂದ | ಆಗ್ನೇಯ |

| ರಾಜಸ ಪುರಾಣಗಳು | | | | | |
|---|---|---|---|---|---|
| ಬ್ರಹ್ಮಾಂಡ | ಬ್ರಹ್ಮವೈವರ್ತ | ಮಾರ್ಕಂಡೇಯ | ಭವಿಷ್ಯ | ವಾಮನ | ಬ್ರಹ್ಮ |

| ಸಾತ್ವಿಕ ಪುರಾಣಗಳು | | | | | |
|---|---|---|---|---|---|
| ವಿಷ್ಣು | ನಾರದೀಯ | ಭಾಗವತ | ಗರುಡ | ಪದ್ಮ | ವರಾಹ |

ಇವುಗಳಲ್ಲಿ ಸಾತ್ವಿಕಪುರಾಣಗಳು ಮೋಕ್ಷಸಾಧನವೆನಿಸಿದರೆ, ರಾಜಸ ಪುರಾಣಗಳು ಸ್ವರ್ಗಸಾಧನವಾಗಿವೆ. ಹಾಗೆಯೇ ತಾಮಸಪುರಾಣಗಳು ನರಕ ಪ್ರಾಪ್ತಿಗೆ ಸಾಧನವೆನಿಸಿವೆ ಎಂದು ಮಹರ್ಷಿಗಳು ಹೇಳುವರು.

(ರಾಜಸ-ತಾಮಸಪುರಾಣಗಳಲ್ಲಿಯೂ ಮಹಾಭಾರತಾದಿ ಶಾಸ್ತ್ರಗಳಿಗೆ ಅನುಕೂಲವಾಗುವಂಥ ವಿಷಯಗಳಿದ್ದರೇ ಅವುಗಳು ಕೂಡಾ ಸಾತ್ವಿಕವೇ ಆಗುತ್ತವೆ.

ಅವುಗಳ ಶ್ರವಣವು ಪುಣ್ಯಹೇತುವಾಗಿವೆ. ಮಹಾಭಾರತಾದಿ ಶಾಸ್ತ್ರಗಳಿಗೆ ವಿರುದ್ಧವಾದ ವಿಷಯಗಳು ದುಷ್ಟಜನವ್ಯಾಮೋಹಕ ಎಂಬುದಾಗಿ ತಿಳಿಯಬೇಕು. ಆ ವಿಷಯಗಳಲ್ಲಿ ಯಾಥಾರ್ಥ್ಯ ಬುದ್ಧಿಯನ್ನು ಮಾಡಬಾರದು.)

ಈಗ ಪುಣ್ಯಕ್ಷೇತ್ರಗಳ ಮಹಿಮೆಯನ್ನು ಹೇಳುವೆನು. ಪ್ರಯತ್ನಪೂರ್ವಕ ಇದನ್ನು ಕೇಳಿದವನು ಎಲ್ಲ ಪಾಪಗಳಿಂದ ಮುಕ್ತನೆನಿಸುವನು. ಅಯೋಧ್ಯೆ, ಮಥುರಾ, ಮಾಯಾ (ಹರಿದ್ವಾರ), ಕಾಶಿ, ಕಂಚಿ, ಆವಂತಿ (ಉಜ್ಜೈನಿ), ಪುರಿ, ದ್ವಾರಕೆ ಈ ಏಳು ಕ್ಷೇತ್ರಗಳು ಮೋಕ್ಷ ಪ್ರಾಪ್ತಿಯ ಸ್ಥಾನಗಳು. ಇಲ್ಲಿ ಹೇಳಿದ ಕ್ಷೇತ್ರಗಳು ಪಾಪನಾಶಕಗಳೂ, ಪುಣ್ಯದಾಯಕವೂ ಆಗಿವೆ. ಆದುದರಿಂದ ವಿಶೇಷ ಪ್ರಯತ್ನಪೂರ್ವಕ ಈ ಕ್ಷೇತ್ರಗಳನ್ನು ಸೇವಿಸಬೇಕು.

ಈ ಇತಿಹಾಸವನ್ನು ಕೇಳಿದವನು ಶುದ್ಧನೆನಿಸುವನು. ಇದನ್ನು ಕೇಳಿ ಶೌನಕಾದಿ ಋಷಿಗಳು ಅತ್ಯಂತ ಹರ್ಷಿತರಾದರು. ಹಾಗೂ ಉಪದೇಶಕರಾದ ಸೂತರನ್ನು ಗಂಧ-ಪುಷ್ಪಗಳಿಂದ ಪೂಜಿಸಿದರು. ಇದೇ ರೀತಿ ಪುರಾಣಗಳನ್ನು ಕೇಳಿದ ಬೇರೆ ಮನುಜರು ಸಹ ಪುರಾಣ ಹೇಳಿದ ಬ್ರಾಹ್ಮಣ ಶ್ರೇಷ್ಠರನ್ನು ತಮ್ಮ ಶಕ್ತ್ಯನುಸಾರವಾಗಿ ಪೂಜಿಸಬೇಕು. ಶ್ರೇಷ್ಠವಾದ ಗಂಧ, ಹೂವುಗಳು, ತುಲಸಿಯ ಮಾಲೆ ಹಾಗೂ ವಸ್ತ್ರಗಳಿಂದ ಅಲಂಕರಿಸಿ ವಾಹನದ ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡಬೇಕು.

ತನ್ನ ಸಂಪತ್ತಿನ ಅಹಂಕಾರ ತೋರದೇ ಯೋಗ್ಯವಾದ ದಕ್ಷಿಣೆ ನೀಡಬೇಕು. ತನ್ನ ಕೈಗಳಿಂದ ಬರೆಯಲ್ಪಟ್ಟ ಧನುರ್ಮಾಸಮಹಿಮೆಯ ಪುಸ್ತಕವನ್ನು ವಿಷ್ಣುಭಕ್ತನಾದ ಜ್ಞಾನಿಯಾದ ಬ್ರಾಹ್ಮಣನಿಗೆ ನೀಡಲು ಆತನಿಗೆ ಮುಕ್ತಿಯೇ ಕೈವಶವೆಂದ ಮೇಲೆ ಬೇರೆ ಸಂಪತ್ತುಗಳು ಪ್ರಾಪ್ತವಾಗುತ್ತದೆಂದು ಪ್ರತ್ಯೇಕವಾಗಿ ಹೇಳುವುದೇನಿದೆ.

ಭುಕ್ತಿ-ಮುಕ್ತಿಗಳಿಗೆ ಸಾಧನವೆನಿಸಿದ ಧನುರ್ಮಾಸದ ಮಹಿಮೆಯನ್ನು ಯಾರು ಹೇಳುವರೋ, ಯಾರು ಕೇಳುವರೋ ಅವರು ಮೂಢರಾದರೂ ಜ್ಞಾನವಂತ ರಾಗುವರು. ಆಯುಷ್ಯ, ಆರೋಗ್ಯ, ಅಭೀಷ್ಟ, ಕುಲಾಭಿವೃದ್ಧಿ, ಧನಧಾನ್ಯಗಳ ವೃದ್ಧಿಯೂ ಆಗುವವು. ಒಳ್ಳೆಯ ದಾನಿಯೆನಿಸುವನು. ಅಪಾರ ಕೀರ್ತಿ ಪಡೆಯುವನು. ಪ್ರಾತಃಕಾಲದಲ್ಲಿ ನದೀತೀರದಲ್ಲಾಗಲೀ, ದೇವಾಲಯದಲ್ಲಾಗಲೀ ಇದನ್ನು ಪಠಿಸಿದವನು ಎಲ್ಲ ಬಂಧನಗಳಿಂದ ದೂರವಾಗಿ ಹರಿಯ ಜೊತೆಗೆ ಸುಖಿಸುವನು.

ಶ್ರಾದ್ಧಕಾಲದಲ್ಲಿ ಇದನ್ನು ಪಿತೃಗಳಿಗೆ ಕೇಳಿಸಿದರೆ ಅವನು ಹತ್ತುಸಾವಿರ ಗಯಾ ಶ್ರಾದ್ಧ ಮಾಡಿದಂತೆಯೇ ಸರಿ. ಬ್ರಹ್ಮಹತ್ಯೆಯೇ ಮೊದಲಾದ ಘೋರ ಪಾಪಗಳಿಗೆ ಪರಿಹಾರವು ಮೂರು ವಿಧವಾಗಿದೆ. ಈ ಧನುರ್ಮಾಸ ಮಾಹಾತ್ಮ್ಯ ಪಠಣ ಅಥವಾ

ರಾಮಸೇತುದರ್ಶನ ಅಥವಾ ಅಶ್ವಮೇಧಯಾಗ. ಕೋಟಿ ಬಾರಿ ಗಂಗಾಸ್ನಾನದಿಂದ, ನೂರಾರು ಯಾಗಗಳಿಂದ ಏನು ಪುಣ್ಯ ದೊರಕುವುದೋ ಅದು ಧನುರ್ಮಾಸದ ಮಹಿಮೆಯಿಂದ ದೊರಕುವುದು. ಸಕಲಪಾಪವಿನಾಶಕವಾದ ಈ ಇತಿಹಾಸವನ್ನು ಏಕಾದಶಿಯಂದು ಬೆಳಗಿನಲ್ಲಿ ಪಠಿಸಬೇಕು. ಅಥವಾ ಕೇಳಬೇಕು. ಶಾಶ್ವತವಾದ ಸಂಪತ್ತನ್ನು, ಅತಿ ದುರ್ಲಭವಾದ ಮುಕ್ತಿಯನ್ನು, ಸರ್ವಲೋಕಾಧಿಪತ್ಯವನ್ನು ಧನುರ್ಮಾಸದ ವೈಭವವು ನೀಡುವುದು. ಯಾವ ವಿಷ್ಣುಭಕ್ತನು ಜಿತೇಂದ್ರಿಯನಾಗಿ ಹೀಗೆ ಮಾಡುವನೋ ಅಂಥವನು ಆರು ತಿಂಗಳಿನಲ್ಲಿ ವಿಶೇಷವಾದ ಧನವನ್ನು ಹೊಂದುವನು. ಪುತ್ರಸಂತಾನವನ್ನು ಪಡೆಯುವನು. ಹೆಚ್ಚಿಗೆ ಹೇಳುವುದರಿಂದೇನು? ಅತ್ಯಂತರಹಸ್ಯವನ್ನು ಹೇಳುವೆನು ಕೇಳು. ಇದನ್ನಾರಿಗೂ ಹೇಳಕೂಡದು. ನಿನ್ನಲ್ಲಿ ಸ್ನೇಹದಿಂದ ನಾನು ಹೇಳಿರುವೆನು. ವಿಷ್ಣುಭಕ್ತಿ ಇಲ್ಲದವನಿಗೆ ಇದನ್ನು ಹೇಳಿದವನು ನಿಶ್ಚಿತವಾಗಿ ವಿಷ್ಣುದ್ರೋಹಿಯೆನಿಸುವನು. ಹಿಂದಿನ ಅನೇಕ ರಾಜರುಗಳೆಲ್ಲ ಈ ಇತಿಹಾಸವನ್ನು ಕೇಳಿ ಈ ಲೋಕದಲ್ಲಿ ಹಾಗೂ ಬೇರೆ ಲೋಕಗಳಲ್ಲಿ ಅನೇಕ ಇಷ್ಟಾರ್ಥಗಳನ್ನು ಹೊಂದಿರುವರು. ವಿಷ್ಣುಭಕ್ತನೂ ದೃಢವ್ರತನೂ ಆದ ಅಂಬರೀಷ ಮಹಾರಾಜನ ಹತ್ತಿರ ಧನುರ್ಮಾಸ ಪ್ರಭಾವದಿಂದ ಸುದರ್ಶನ ಚಕ್ರವು ಯಾವಾಗಲೂ ಇರುತ್ತಿತ್ತು. ಅದೇ ರೀತಿ ಧನುರ್ಮಾಸ ಪ್ರಭಾವದಿಂದ ದಶರಥನಿಗೆ ಶ್ರೀಹರಿಯೇ ಸುತನಾದನು. ದಶರಥಪುತ್ರನಾದ ಶ್ರೀರಾಮನು ಸಾಕ್ಷಾತ್ ವಿಷ್ಣುವಾಗಿದ್ದಾನೆ. ಇದರಲ್ಲೇನೂ ಸಂದೇಹವಿಲ್ಲ. ಧ್ರುವರಾಜನು ಕೂಡ ಇದನ್ನು ಕೇಳಿ ಶಾಶ್ವತವಾದ ಸ್ಥಾನವನ್ನು ಪಡೆದನು. ನಿಮಿರಾಜನ ಮಗನಾದ ಜನಕನು ಕೂಡ ಗೌತಮರ ಮಕ್ಕಳಿಂದ ಇದನ್ನು ಕೇಳಿ ಬಂಧುವರ್ಗದಲ್ಲೆಲ್ಲ ಅತಿ ಉತ್ತಮನೆನಿಸಿದನು. ಹಾಗೂ ತಪಸ್ವಿಗಳಿಗೂ ಪೂಜ್ಯನೆನಿಸಿದನು. ಹಿಂದೆ ಪಾಂಡುರಾಜನು ಮೃಗವೆಂದು ತಿಳಿದು ಕಿಂದಮ ಋಷಿಯನ್ನು ಸಂಹರಿಸಿದ್ದನು. ಈ ಆಖ್ಯಾನದ ಪಠನೆಯಿಂದ ಕೂಡಲೇ ಶುದ್ಧನಾದನು. ಧರ್ಮಸುತನಾದ ಯುಧಿಷ್ಠಿರನು ಕೂಡ ದುರ್ಯೋಧನಾದಿಗಳಿಂದ ದ್ಯೂತದಲ್ಲಿ ಸೋಲನ್ನು ಅನುಭವಿಸಿ ವನವಾಸಕ್ಕೆ ತೆರಳಿದನು. ವನದಲ್ಲಿ ದುಃಖದಿಂದ ವಿಷಣ್ಣನಾದವನು ಕೃಷ್ಣನ ಮುಖದಿಂದ ಧನುರ್ಮಾಸ ಮಹಿಮೆಯನ್ನು ಕೇಳಿ ಶತ್ರುಗಳನ್ನೆಲ್ಲ ಸಂಹರಿಸಿ ಮತ್ತೆ ಮಹದೈಶ್ವರ್ಯವನ್ನು ಪಡೆದನು.

ಇದೇ ರೀತಿಯಾಗಿ ಅನೇಕರು ಧನುರ್ಮಾಸದಲ್ಲಿ ಹರಿಯನ್ನು ಪೂಜಿಸಿ ಆ ಪುಣ್ಯದ ಪ್ರಭಾವದಿಂದ ವಿಷ್ಣುಪದವನ್ನು ಹೊಂದಿದರು. ಬಂಗಾರವನ್ನು ಕದ್ದವನಾಗಲಿ, ಮದ್ಯಪಾನ ಮಾಡಿದವನಾಗಲಿ, ಗುರುತಲ್ಪಗಮನ ಮುಂತಾದ ಮಹಾಪಾತಕಗಳನ್ನಾಚರಿಸಲಿ, ಪಿತೃಹಂತಕನಾಗಿರಲಿ, ವಿಶ್ವಾಸದ್ರೋಹಿ-ಯಾಗಿರಲಿ, ವೇದಬಾಹ್ಯನಾಗಿರಲಿ, ಲೋಭಿಯಾಗಿರಲಿ, ನಾಸ್ತಿಕನಾಗಿರಲಿ,

ಸಜ್ಜನದ್ವೇಷಿಯಾಗಿರಲಿ, ಅಗ್ನಿಪೂಜೆಯನ್ನು ಮಾಡಲು ಅಧಿಕಾರವಿಲ್ಲದವನಾಗಲಿ, ಅಂತ್ಯಜರೆಂದು ಹೇಳಲ್ಪಟ್ಟ ಇವರೆಲ್ಲ ಈ ಇತಿಹಾಸವನ್ನು ಕೇಳಿ ನಿಸ್ಸಂದೇಹವಾಗಿ ಶುದ್ಧರಾಗುವರು.

ಈ ಆಖ್ಯಾನದ ಪಠನದಿಂದ ಬ್ರಾಹ್ಮಣನು ವಿಷ್ಣುಭಕ್ತನಾಗುವನು. ಪ್ರತಿಕಲ್ಪದಲ್ಲೂ ಬ್ರಾಹ್ಮಣನಾಗಿ ಜನಿಸಿ ಸಿದ್ಧಪುರುಷನೆನಿಸುವನು. ಕ್ಷತ್ರಿಯನು ರಾಜ್ಯ ಪಡೆಯುವನು. ವೈಶ್ಯನು ಧನವಂತನಾಗುವನು. ಶೂದ್ರನು ಜ್ಞಾನವನ್ನು ಪಡೆಯುವನು. ಕನ್ಯಾಪೇಕ್ಷಿಯು ಗೃಹಸ್ಥನಾಗುವನು. ಇದನ್ನು ಕೇಳಿದ ಗರ್ಭಿಣಿಯು ತೇಜಸ್ವಿಯಾದ ಪುತ್ರನಿಗೆ ಜನ್ಮ ನೀಡುವಳು.

ಧನುರ್ಮಾಸಮಹಿಮೆಯು ದುಃಖ-ದಾರಿದ್ರ್ಯಗಳನ್ನು ಶಮನಗೊಳಿಸಿ ಪಾಪಗಳನ್ನು ನಾಶಗೊಳಿಸಿ ಸಕಲಯಜ್ಞಾಚರಣೆಯ ಫಲವನ್ನು ನೀಡುವುದು. ಶ್ರೇಷ್ಠವಾದ ಈ ಆಖ್ಯಾನವನ್ನು ಕೇಳಿದವನು ಎಲ್ಲೆಡೆ ವಿಜಯಿಯೆನಿಸುವನು.

**॥ ಇಲ್ಲಿಗೆ ಮೂವತ್ತನೇ ಅಧ್ಯಾಯವು ಮುಗಿಯಿತು ॥**

**॥ ಶ್ರೀಭಗವಾನ್ ವೇದವ್ಯಾಸ ಪ್ರಣೀತ ಆಗ್ನೇಯ ಪುರಾಣದಲ್ಲಿ**
**ಧನುರ್ಮಾಸ ಮಾಹಾತ್ಮ್ಯೆಯ**
**ಕಥಾರೂಪ ಕನ್ನಡ ಅನುವಾದವು ಸಮಾಪ್ತವಾಯಿತು ॥**

★★★